|| ಶ್ರೀ ||

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩

ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀ ಮತ್ಸ್ಯಮಹಾಪುರಾಣಂ

(ಕನ್ನಡ ಅನುವಾದಸಹಿತ)

ಸಂಪುಟ ೫

ಅಧ್ಯಾಯ ೧೩೭–೨೧೪

ಅನುವಾದಕ:

**ವಾಜಪೇಯಂ ಶ್ರೀರಂಗಾಚಾರ್**

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೪೮

॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩



ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀ ಮತ್ಸ್ಯಮಹಾಪುರಾಣಂ

(ಕನ್ನಡ ಅನುವಾದಸಹಿತ)

ಸಂಪುಟ ೫

ಅಧ್ಯಾಯ ೧೭೩–೨೧೪

ಅನುವಾದಕ :

ವಾಜಪೇಯಂ ಶ್ರೀರಂಗಾಚಾರ್

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ

ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೪೮

|| ಶ್ರೀ ||

## ಪೀಠಿಕೆ

ಮತ್ಸ್ಯಪುರಾಣದ ಮಂದಿರಕ್ಕೆ ಮತ್ತೊಂದು ಕಲಶವನ್ನು ಇಟ್ಟಿದಾಯಿತು. ಕನ್ನಡದೇವಿಯ ಗುಡಿಗೆ ಕಳಿಯೇರಿಸುವ ಅದೃಷ್ಟವು ಇದಕ್ಕೆ ದೊರೆಯಿತು.

ಇದು ಐದನೆಯ ಸಂಪುಟ. ಇದರಲ್ಲಿ ತಾರಕಾಮಯಸಂಗ್ರಾಮ, ವಾರಾಣಸೀ ಮಾಹಾತ್ಮ್ಯ, ನರ್ಮದಾಮಾಹಾತ್ಮ್ಯ, ಪ್ರವರಾನುಕೀರ್ತನ, ಪಿತೃಗೀತೆ, ಸಾವಿತ್ರೀ ಚರಿತ್ರೆ ಎಂಬ ಆರು ವಿಷಯಗಳು ಮುಖ್ಯವಾಗಿ ಪ್ರತಿಪಾದಿತವಾಗಿವೆ.

ತಾರಕಾಮಯಸಂಗ್ರಾಮವು ಸೃಷ್ಟಿಕಾಲದಿಂದಲೂ ನಡೆದು ಬರುತ್ತಿರುವ ದೈವೀ ಮತ್ತು ಆಸುರೀಶಕ್ತಿಗಳ ಹೋರಾಟದ ಒಂದು ಕವಲು. ಇದರಲ್ಲಿ ವ್ಯಕ್ತಿಗಳ ಪಾತ್ರವು ಅಷ್ಟೇನೂ ಮುಖ್ಯವಲ್ಲ. ಇರುವ ಪೈಪೋಟಿಯೆಲ್ಲ ಹಿನ್ನೆಲೆಯಲ್ಲಿ ಮರೆಯಾಗಿರುವ ಶಕ್ತಿಗಳಿಗೆ. ಈ ಶಕ್ತಿಗಳೆರಡೂ ಪ್ರಬಲವಾಗಿಯೇ ಇವೆ. ಎರಡಕ್ಕೂ ಸಹಾಯಸಂಪತ್ತುಗಳು ಬೇಕಾದಷ್ಟಿವೆ. ಸೋಲುಗೆಲವುಗಳು ಎಷ್ಟೋಸಾರಿ ಎರಡು ಕಡೆಗೂ ಆಗಿವೆ. ಆದರೆ ಮತ್ತೆ ತಲೆಯೆತ್ತದಂತೆ ಸಂಪೂರ್ಣವಾಗಿ ಯಾವುದೊಂದೂ ಅಡಗಿಹೋಗಲಿಲ್ಲ. ಇವೆರಡಕ್ಕೂ ಸಮಂಜಸವಾದ ಒಂದು ಒಪ್ಪಂದವೂ ಆಗು ವಂತಿಲ್ಲ. ಇವುಗಳ ಹುಟ್ಟು, ನಿಲವು, ಗುರಿ ಇವುಗಳಿಗೆ ಉತ್ತರ ದಕ್ಷಿಣಧ್ರುವಗಳಿ ಗಿರುವಷ್ಟು ಅಂತರವಿದೆ. ಒಂದರದು ನಿವೃತ್ತಿಮಾರ್ಗ ; ಇನ್ನೊಂದರದು ಪ್ರವೃತ್ತಿ ಮಾರ್ಗ. ಒಂದರ ಸಾಧನ ಶಮದಮಾದಿಗಳು ; ಇನ್ನೊಂದರ ಸಾಧನ ಕಾಮ ಕ್ರೋಧಾದಿಗಳು. ಒಂದು ಶಾಂತಿಯನ್ನು ಬೀರಬೇಕೆನ್ನುತ್ತದೆ ; ಮತ್ತೊಂದು ಜಗತ್ತನ್ನೇ ಅಶಾಂತಿಯಲ್ಲಿ ಮುಳುಗಿಸಬೇಕೆನ್ನುತ್ತದೆ. ಆದರೂ ಪ್ರಪಂಚದ ಹಿತದ ಸಲುವಾಗಿ ನಿಲ್ಲಬೇಕಾದುದು ಮತ್ತು ನಿಲ್ಲತಕ್ಕುದು ದೈವೀಶಕ್ತಿಯೊಂದೇ. ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಮಹಾತ್ಮರು ಮಾಡಿರುವ ತ್ಯಾಗವು ಈ ಶಕ್ತಿಯನ್ನು ಉಳಿಸುವುದಕ್ಕಾಗಿಯೇ ; ಇದನ್ನು ಬೆಳಸುವುದಕ್ಕಾಗಿಯೇ.

ವಾರಾಣಸಿಯು ಸುಪ್ರಸಿದ್ಧವಾದ ಪುಣ್ಯಭೂಮಿ. ಪಾರ್ವತೀಪರಮೇಶ್ವರರು ಗೃಹಸ್ಥಾಶ್ರಮಿಗಳಾಗಿ ವ್ಯಾಸಮಹರ್ಷಿಗಳಿಗೆ ಅತಿಥಿಸತ್ಕಾರವನ್ನು ಮಾಡಿದ ಪಾವನ ಸ್ಥಳ. ಪ್ರತಿಯೊಂದು ಜಂತುವಿನ ಕಿವಿಯಲ್ಲಿಯೂ ಮಹಾದೇವನು ತಾರಕಮಂತ್ರ

ವನ್ನು ಉಪದೇಶಿಸುವ ಸಿದ್ಧಿಕ್ಷೇತ್ರ. ಇದರ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ. ನರ್ಮದೆಯೂ ಹೀಗೆಯೇ. ಅಮರಕಂಟಕದಲ್ಲಿ ಹುಟ್ಟಿ ಮಹೋದಧಿಯನ್ನು ಸೇರುವವರೆಗೆ ಅಸಂಖ್ಯಾತವಾದ ಪುಣ್ಯತೀರ್ಥಗಳಿಂದ ಕಂಗೊಳಿಸುವ ಮಹಾನದಿಯದು. ಅಲ್ಲಿನ ಸ್ನಾನ, ಜಪ, ದಾನ ಇವೊಂದೊಂದೂ ಅನಂತವಾದ ಫಲವನ್ನು ಕೊಡುವುವು.

ಪ್ರವರಾನುಕೀರ್ತನವೆಂದರೆ ಋಷಿಗಳ ವಂಶವರ್ಣನೆ. ಪ್ರತಿಯೊಬ್ಬ ದ್ವಿಜನೂ ಋಷಿಗಳ ಸಂತತಿಗೆ ಸೇರಿದವನು. ತಾನು ಯಾರ ಮನೆತನದಲ್ಲಿ (ಗೋತ್ರದಲ್ಲಿ) ಹುಟ್ಟಿದವನೆಂದು ಹೇಳಿಕೊಳ್ಳುತ್ತಿರುವನೋ ಆ ಋಷಿಗೆ ಗೋತ್ರಋಷಿಯೆಂದೂ, ಆತನ ಪೂರ್ವಜರಲ್ಲಿ ಅತ್ಯಂತ ಪ್ರಸಿದ್ಧರಾದವರಿಗೆ ಪ್ರವರರ್ಷಿಗಳೆಂದೂ ಹೆಸರು. ಗೋತ್ರರ್ಷಿಗಳು ಅಸಂಖ್ಯಾತರಾಗಿದ್ದಾರೆ. ಪ್ರವರರ್ಷಿಗಳಾದರೋ ನಲವತ್ತೊಂಬತ್ತು ಮಂದಿ ಮಾತ್ರ. ತನ್ನ ಗೋತ್ರರ್ಷಿಯ ಮತ್ತು ತನಗೆ ಸಂಬಂಧಪಟ್ಟ ಪ್ರವರರ್ಷಿಗಳ ನಾಮಸಂಕೀರ್ತನವನ್ನು ಪ್ರತಿದಿನವೂ ಮಾಡಬೇಕೆಂಬ ಕಟ್ಟಳೆಯಿದೆ. ವಿವಾಹ ಸಂಬಂಧವನ್ನು ಮಾಡುವುದಕ್ಕೆ ಈ ಗೋತ್ರಪ್ರವರಗಳ ಜ್ಞಾನವು ಆವಶ್ಯಕ. ಸಮಾನಗೋತ್ರರೂ, ಸಮಾನಪ್ರರರೂ ತಮ್ಮತಮ್ಮಲ್ಲಿ ಹೆಣ್ಣುಕೊಟ್ಟು ತರಬಾರದು. ಈ ವಿವರವನ್ನು ತಿಳಿಸುವುದಕ್ಕಾಗಿಯೇ ಈ ಪ್ರಕರಣದಲ್ಲಿ ಅತ್ರಿ, ಭೃಗು ಮುಂತಾದ ಮಹರ್ಷಿಗಳ ವಂಶವನ್ನು ವರ್ಣಿಸಿದೆ. ಮತ್ತು ಪ್ರವರದಲ್ಲಿ ಸಮಾನತೆಯಿರುವ ಋಷಿಗಳ ಗಣಗಳನ್ನು ವಿವರಿಸಿದೆ.

ಮನುಷ್ಯನು ಹೊತ್ತಿರುವ ಋಣಗಳಲ್ಲಿ ಪಿತೃಋಣವು ಬಹುಮುಖ್ಯವಾದುದು. ಅದನ್ನು ತೀರಿಸುವ ಹಲವು ವಿಧಾನಗಳನ್ನೂ ಪಿತೃಗಳಿಗೆ ಪ್ರಿಯವಾದ ಅನೇಕ ವಿಷಯಗಳನ್ನೂ ಪಿತೃಗೀತೆಯೂ ಅದರ ಮುಂದಿನ ಎರಡು ಅಧ್ಯಾಯಗಳೂ ತಿಳಿಸುವುವು.

ಸಾವಿತ್ರಿಯ ಉಪಾಖ್ಯಾನದೊಡನೆ ಈ ಸಂಪುಟವು ಮುಗಿಯುತ್ತದೆ. ಸಾವಿತ್ರಿಯಂತಹ ಸಾಧ್ವೀಮಣಿಯು ಜನಿಸಿದುದು ಭರತಖಂಡದ ಭಾಗ್ಯ. ಆಕೆಯದು ಅನನ್ಯಸದೃಶವಾದ ವೀರವ್ರತ. ಸತ್ಯವಂತನು ಅಲ್ಪಾಯುವೆಂದು ತಿಳಿದೂ ಕೂಡ ಅವನನ್ನೇ ಪತಿಯನ್ನಾಗಿ ವರಿಸಿದ ಆಕೆಯ ಮನೋಧೈರ್ಯವನ್ನೂ ಪತಿಭಕ್ತಿಯನ್ನೂ ಏನೆಂದು ಹೇಳಬೇಕು! ಮೃತ್ಯುವನ್ನು ಗೆದ್ದು, ಪತಿಯ ಪ್ರಾಣವನ್ನು ಉಳಿಸಿ, ಹೊಕ್ಕ ಮತ್ತು ಹೆತ್ತ ಕುಲಗಳೆರಡನ್ನೂ ಬೆಳಗಿಸಿದ ಆ ಮಹಾದೇವಿಯ

## ಪೀಠಿಕೆ

ನಾಮಸ್ಮರಣದಿಂದಲೇ ಲೋಕವು ಪವಿತ್ರವಾಗುವುದು. “ಪತಿವ್ರತೆಯರನ್ನು ದೇವರಂತೆ ಪೂಜಿಸಬೇಕು. ಮೂರುಲೋಕವೂ ನಿಂತಿರುವುದು ಅವರ ಪ್ರಭಾವದಿಂದ. ಅವರ ಶಾಪಾನುಗ್ರಹಗಳು ಎಂದಿಗೂ ವ್ಯರ್ಥವಾಗವು” ಎಂದು ಮಹರ್ಷಿಗಳು ಸಾರಿದ್ದಾರೆ.

ಆಳುವ ಮಹಾಪ್ರಭುಗಳಾದ ಶ್ರೀಮಜ್ಜಯಚಾಮರಾಜೇಂದ್ರವೊಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಪರಮೌದಾರ್ಯದಿಂದ ದುರವಗಾಹವಾದ ಈ ವಿಷಯಗಳೆಲ್ಲವನ್ನೂ ಅರಿತು ಆನಂದಿಸುವ ಸುಯೋಗವು ಕನ್ನಡಿಗರಿಗೆ ಒದಗಿದೆ. ಇದಕ್ಕಾಗಿ ಕನ್ನಡನಾಡು ಅವರಿಗೆ ಕೃತಜ್ಞತೆಯ ಕಾಣಿಕೆಯನ್ನು ಸಲ್ಲಿಸುತ್ತದೆ. ಸಕಲ ಸನ್ಮಂಗಳಗಳನ್ನೂ ಅವರಿಗೆ ಕರುಣಿಸುವಂತೆ ಭಗವಂತನನ್ನು ಪ್ರಾರ್ಥಿಸುತ್ತದೆ. ಅವರ ಕೀರ್ತಿ ಧ್ವಜವು ಎಂದೆಂದಿಗೂ ಹಾರಾಡುತ್ತಿರಲಿ.

ಮಾರ್ಗಶಿರ ಬಹುಳ ಪಂಚಮಿ,<br>ಗುರುವಾರ, ೧-೧-೧೯೪೮,<br>ಮೈಸೂರು.

ವಾಜಪೇಯಂ ಶ್ರೀರಂಗಾಚಾರ್,<br>ಅನುವಾದಕ

# ವಿಷಯ ಸೂಚಿಕೆ

# ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

|| ಶ್ರೀ ||

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

---

## ಅಥ ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ವಿಷ್ಣುತ್ವಂ ಶೃಣು ವಿಷ್ಣೋಶ್ಚ ಹರಿತ್ವಂ ಚ ಕೃತೇ ಯುಗೇ ।
ವೈಕುಂಠತ್ವಂ ಚ ದೇವೇಷು ಕೃಷ್ಣತ್ವಂ ಮಾನುಷೇಷು ಚ || ೧ ||

ಈಶ್ವರಸ್ಯ ಹಿ ತಸ್ಯೈಷಾ ಕರ್ಮಣಾಂ ಗಹನಾ ಗತಿಃ ।
ಸಂಪ್ರತ್ಯತೀತಾನ್ ಭವ್ಯಾಂಶ್ಚ ಶೃಣು ರಾಜನ್ ಯಥಾತಥಂ || ೨ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವಿಷ್ಣು ಸರ್ವವ್ಯಾಪಕನೆಂಬುದನ್ನು ತಿಳಿಸುವೆನು ಕೇಳು. ಸಕಲ ದುಃಖಪರಿಹಾರಕನಾದುದರಿಂದ ಅವನನ್ನು ಕೃತಯುಗದಲ್ಲಿ ಹರಿಯೆಂದು ಕರೆಯುವರು. ದೇವತೆಗಳು ಅಪ್ರತಿಹತವಾದ ಜ್ಞಾನವುಳ್ಳವನು ಅಥವಾ ವೈಕುಂಠನೆನ್ನುವರು. ಮನುಷ್ಯರು ಐಹಿಕಾಮುಷ್ಮಿಕ ಫಲಭೋಗಗಳನ್ನು ಕೊಡತಕ್ಕವನು ಅಥವಾ ಕೃಷ್ಣ ಎನ್ನುವರು.

೨. ಆ ಸರ್ವೇಶ್ವರನ ವ್ಯಾಪಾರವು ಬುದ್ಧಿಗೆ ಅಗೋಚರವಾದುದು. ಈಗಿರುವ, ಹಿಂದೆ ವ್ಯಕ್ತವಾದ ಮತ್ತು ಮುಂದೆ ಗೋಚರವಾಗಲಿರುವ ಆತನ ಮಹಿಮೆಗಳನ್ನು ಯಥಾವತ್ತಾಗಿ ಕೇಳು.

ಅವ್ಯಕ್ತೋ ವ್ಯಕ್ತಲಿಂಗಸ್ಥೋ ಯ ಏಷ ಭಗವಾನ್ ಪ್ರಭುಃ ।
ನಾರಾಯಣೋ ಹ್ಯನಂತಾತ್ಮಾ ಪ್ರಭವೋಽವ್ಯಯ ಏವ ಚ ॥ ೩ ॥

ಏಷ ನಾರಾಯಣೋ ಭೂತ್ವಾ ಹರಿರಾಸೀತ್ಸನಾತನಃ ।
ಬ್ರಹ್ಮಾ ವಾಯುಂಶ್ಚ ಸೋಮಶ್ಚ ಧರ್ಮಃ ಶಕ್ರೋ ಬೃಹಸ್ಪತಿಃ ॥ ೪ ॥

ಅದಿತೇರಪಿ ಪುತ್ರತ್ವಂ ಸಮೇತ್ಯ ರವಿನಂದನ ।
ಏಷ ವಿಷ್ಣುರಿತಿ ಖ್ಯಾತ ಇಂದ್ರಸ್ಯಾವರಜೋ ವಿಭುಃ ॥ ೫ ॥

ಪ್ರಸಾದಜಂ ಹ್ಯಸ್ಯ ವಿಭೋರದಿತ್ಯಾಃ ಪುತ್ರಕಾರಣಂ ।
ವಧಾರ್ಥಂ ಸುರಶತ್ರೂಣಾಂ ದೈತ್ಯದಾನವರಕ್ಷಸಾಂ ॥ ೬ ॥

---

೩. ಅವನು ಇಂದ್ರಿಯಗಳಿಗೆ ಅಗೋಚರನಾದರೂ ಆತನ ಗುಣ ಮಹಿಮಾದಿಗಳು ಆತನ ಸೃಷ್ಟ್ಯಾದಿಕಾರ್ಯಗಳಿಂದ ವ್ಯಕ್ತವಾಗುತ್ತವೆ. ಅವನು ಷಡ್ಗುಣಪರಿಪೂರ್ಣ, ಸರ್ವೇಶ್ವರ, ನಾರಾಯಣ, ಅನಂತರೂಪ, ಸರ್ವಕಾರಣ ಮತ್ತು ನಿರ್ವಿಕಾರ.

೪. ಶಾಶ್ವತನಾದ ಈತನು ಸಕಲ ಜಗತ್ತುಗಳ ಒಳಗೂ ಹೊರಗೂ ವ್ಯಾಪಿಸಿರುವನು. ಸಕಲ ಪಾಪಪರಿಹಾರಕನು. ಆದುದರಿಂದ ಇವನನ್ನು ನಾರಾಯಣನೆಂದೂ ಹರಿಯೆಂದೂ ಕರೆದರು. ಬ್ರಹ್ಮ, ವಾಯು, ಸೋಮ, ಧರ್ಮ, ಇಂದ್ರ, ಬೃಹಸ್ಪತಿ ಇವರಲ್ಲಿ ಅಂತರ್ಯಾಮಿಯಾಗಿದ್ದು ಅದೇ ಹೆಸರಿನಿಂದ ಕರೆಯಿಸಿಕೊಳ್ಳುವನು.

೫. ಓ ವೈವಸ್ವತಮನೂ, ವಿಷ್ಣುವೆಂದು ಪ್ರಸಿದ್ಧನಾದ ಈ ಪ್ರಭುವು ಉಪೇಂದ್ರನೆಂಬ ಹೆಸರಿನಿಂದ ಅದಿತಿಗೆ ಪುತ್ರನಾಗಿ ಜನಿಸಿ ಇಂದ್ರನ ತಮ್ಮನೆನಿಸಿದನು.

೬. ಈ ಸ್ವಾಮಿ ಅದಿತಿಗೆ ಮಗನಾದುದು ಆಕೆಯನ್ನು ಅನುಗ್ರಹಿಸುವುದಕ್ಕಾಗಿ; ಮತ್ತು ದೇವಶತ್ರುಗಳಾದ ದೈತ್ಯರನ್ನೂ, ದಾನವರನ್ನೂ, ರಾಕ್ಷಸರನ್ನೂ ಸಂಹರಿಸುವುದಕ್ಕಾಗಿ.

ಪ್ರಧಾನಾತ್ಮಾ ಪುರಾ ಹ್ಯೇಷ ಬ್ರಹ್ಮಾಣಮಸೃಜತ್ಪ್ರಭುಃ ।
ಸೋಽಸೃಜತ್ಪೂರ್ವಪುರುಷಃ ಪುರಾ ಕಲ್ಪೇ ಪ್ರಜಾಪತೀನ್ ॥ ೭ ॥

ಅಸೃಜನ್ಮಾನವಾಂಸ್ತತ್ರ ಬ್ರಹ್ಮವಂಶಾನನುತ್ತಮಾನ್ ।
ತೇಭ್ಯೋಽಭವನ್ಮಹಾತ್ಮಭ್ಯೋ ಬಹುಧಾ ಬ್ರಹ್ಮ ಶಾಶ್ವತಂ ॥ ೮ ॥

ಏತದಾಶ್ಚರ್ಯಭೂತಸ್ಯ ವಿಷ್ಣೋಃ ಕರ್ಮಾನುಕೀರ್ತನಂ ।
ಕೀರ್ತನೀಯಸ್ಯ ಲೋಕೇಷು ಕೀರ್ತ್ಯಮಾನಂ ನಿಬೋಧ ಮೇ ॥ ೯ ॥

ವೃತ್ತೇ ವೃತ್ರವಧೇ ತತ್ರ ವರ್ತಮಾನೇ ಕೃತೇ ಯುಗೇ ।
ಆಸೀತ್ತ್ರೈಲೋಕ್ಯವಿಖ್ಯಾತಃ ಸಂಗ್ರಾಮಸ್ತಾರಕಾಮಯಃ ॥೧೦॥

ಯದಾ ತೇ ದಾನವಾ ಘೋರಾಃ ಸರ್ವೇ ಸಂಗ್ರಾಮದುರ್ಜಯಾಃ ।
ಘ್ನಂತಿ ದೇವಗಣಾನ್ ಸರ್ವಾನ್ ಸಯಕ್ಷೋರಗರಾಕ್ಷಸಾನ್ ॥೧೧॥

---

೭. ಸೃಷ್ಟಿಯ ಆದಿಯಲ್ಲಿ ಸರ್ವಾಂತರ್ಯಾಮಿಯಾದ ಈ ಜಗದೀಶ್ವರನು ಬ್ರಹ್ಮನನ್ನು ಸೃಷ್ಟಿಸಿದನು. ಆ ಬ್ರಹ್ಮದೇವನು ಹಿಂದಿನ ಕಲ್ಪದಲ್ಲಿ ಪ್ರಜಾಪತಿಗಳನ್ನು ಸೃಜಿಸಿದನು.

೮. ಬ್ರಹ್ಮನಿಂದ ಆ ಕಲ್ಪದಲ್ಲಿ ಮನುಷ್ಯರೂ ಅತಿಶ್ರೇಷ್ಠರಾದ ಬ್ರಹ್ಮರ್ಷಿಗಳೂ ಜನಿಸಿದರು. ಆ ಮಹಾತ್ಮರಿಂದ ಶಾಶ್ವತವಾದ ವೇದವು ಲೋಕದಲ್ಲಿ ಹಲವು ವಿಧವಾಗಿ ಪ್ರಚಾರಕ್ಕೆ ಬಂದಿತು.

೯. ವಿಸ್ಮಯಕಾರಿಯೂ ಕೀರ್ತಿಸಂತನೂ ಆದ ವಿಷ್ಣುವಿನ ವಿಚಿತ್ರ ಕರ್ಮವನ್ನು ಲೋಕಗಳಲ್ಲಿ ಹೊಗಳುತ್ತಿರುವರು. ಅದನ್ನು ಹೇಳುವೆನು ಕೇಳಿ.

೧೦. ವೃತ್ರಾಸುರನ ಸಂಹಾರವು ಆದ ಬಳಿಕ ಈಗ ನಡೆಯುತ್ತಿರುವ ಕೃತ ಯುಗದಲ್ಲಿ ದೇವತೆಗಳಿಗೆ ತಾರಕಾಸುರನೊಡನೆ ಜಗತ್ರಯವಿಖ್ಯಾತವಾದ ಯುದ್ಧವು ನಡೆಯಿತು.

೧೧-೧೨. ಘೋರರಾದ ದಾನವರನ್ನು ಯುದ್ಧದಲ್ಲಿ ಜಯಿಸುವುದು ಅಸಾಧ್ಯವಾಯಿತು. ಅವರು ಯಕ್ಷರು, ಉರಗರು, ರಾಕ್ಷಸರು ಮೊದಲಾಗಿ ದೇವ ಗಣಗಳನ್ನೆಲ್ಲ ಕೊಂದರು. ಆಗ ದೇವತೆಗಳಿಗೆ ಅಸ್ತ್ರಶಸ್ತ್ರಸಾಧನಗಳು ಕ್ಷೀಣ

**ತೇ ವಧ್ಯಮಾನಾ ವಿಮುಖಾಃ ಕ್ಷೀಣಪ್ರಹರಣಾ ರಣೇ ।**
**ತ್ರಾತಾರಂ ಮನಸಾ ಜಗ್ಮುರ್ದೇವಂ ನಾರಾಯಣಂ ಪ್ರಭುಂ ॥೧೨॥**

**ಏತಸ್ಮಿನ್ನಂತರೇ ಮೇಘಾ ನಿರ್ವಾಣಾಂಗಾರವರ್ಚಸಃ ।**
**ಸಾರ್ಕಚಂದ್ರಗ್ರಹಗಣಂ ಛಾದಯಂತೋ ನಭಸ್ಥಲಂ ॥೧೩॥**

**ಚಂಡವಿದ್ಯುದ್ಗಣೋಪೇತಾ ಘೋರನಿರ್ಹ್ರಾದಕಾರಿಣಃ ।**
**ಅನ್ಯೋನ್ಯವೇಗಾಭಿಹತಾಃ ಪ್ರವವುಃ ಸಪ್ತ ಮಾರುತಾಃ ॥೧೪॥**

**ದೀಪ್ತತೋಯಾಶನಿಘನೈರ್ವಜ್ರವೇಗಾನಲಾನಿಲೈಃ ।**
**ರವೈಃ ಸುಘೋರೈರುತ್ಪಾತೈರ್ದಹ್ಯಮಾನಮಿವಾಂಬರಂ ॥೧೫॥**

**ತತ ಉಲ್ಕಾಸಹಸ್ರಾಣಿ ನಿಪೇತುಃ ಖಗತಾನ್ಯಪಿ ।**
**ದಿವ್ಯಾನಿ ಚ ವಿಮಾನಾನಿ ಪ್ರಪತಂತ್ಯುತ್ಪತಂತಿ ಚ ॥೧೬॥**

---

ವಾದುವು. ಅವರು ಯುದ್ಧದಿಂದ ವಿಮುಖರಾಗಿ ತಮ್ಮನ್ನು ರಕ್ಷಿಸುವಂತೆ ಪ್ರಭುವಾದ ನಾರಾಯಣನನ್ನು ಮನಸ್ಸಿನಲ್ಲಿ ಪ್ರಾರ್ಥಿಸಿದರು.

೧೩. ಇಷ್ಟರೊಳಗೆ ಇದ್ದಿಲಿನಂತೆ ಕಪ್ಪಗಿರುವ ಮೋಡಗಳು ತಲೆದೋರಿ ಚಂದ್ರಸೂರ್ಯರನ್ನೂ ಗ್ರಹಗಳನ್ನೂ ಮರೆಮಾಡಿ ಆಕಾಶವನ್ನೆಲ್ಲ ಮುಚ್ಚಿದುವು.

೧೪. ಏಳು ಬಗೆಯ ವಾಯುಗಣಗಳು ಭಯಂಕರವಾದ ಮಿಂಚುಗಳಿಂದ ಕೂಡಿ, ಘೋರವಾಗಿ ಅಬ್ಬರಿಸುತ್ತ ವೇಗದಿಂದ ಒಂದು ಮತ್ತೊಂದನ್ನು ನೂಕುತ್ತಾ ಬೀಸಿದುವು.

೧೫. ಮೋಡಗಳು ಮಿಂಚಿನಿಂದ ಬೆಳಗುತ್ತ ಮಳೆಗರೆದು ಸಿಡಿಲಿನ ಅಬ್ಬರವನ್ನು ಮಾಡುತ್ತಿದ್ದುವು. ಗಾಳಿಯ ರಭಸವು ಅತಿಯಾಯಿತು. ದಳ್ಳುರಿಯು ಬೆಂಕಿ ಎದ್ದಿತು. ಬಹು ಭಯಂಕರವಾದ ಉತ್ಪಾತಗಳು ತಲೆದೋರಿದುವು. ಆಕಾಶವು ಸುಟ್ಟುಹೋಗುವುದೋ ಎನ್ನುವಂತೆ ಕಾಣುತ್ತಿತ್ತು.

೧೬. ಬಳಿಕ ಆಕಾಶದಿಂದ ಸಾವಿರಾರು ಕೆಂಡದ ಕೊಳ್ಳಿಗಳು ಬಿದ್ದುವು. ಸ್ವರ್ಗದಲ್ಲಿದ್ದ ವಿಮಾನಗಳು ಬೀಳುತ್ತಿದ್ದುವು ಮತ್ತು ಏಳುತ್ತಿದ್ದುವು.

**ಚತುರ್ಯುಗಾಂತೇ ಪರ್ಯಾಯೇ ಲೋಕಾನಾಂ ಯದ್ಭಯಂ ಭವೇತ್ ।**
**ಅರೂಪವಂತಿ ರೂಪಾಣಿ ತಸ್ಮಿನ್ನುತ್ಪಾತಲಕ್ಷಣೇ ॥೧೭॥**

**ಜಾತಂ ಚ ನಿಷ್ಪ್ರಭಂ ಸರ್ವಂ ನ ಪ್ರಾಜ್ಞಾಯತ ಕಿಂಚನ ।**
**ತಿಮಿರೌಘಪರಿಕ್ಷಿಪ್ತಾ ನ ರೇಜುಶ್ಚ ದಿಶೋ ದಶ ॥೧೮॥**

**ವಿವೇಶ ರೂಪಿಣೀ ಕಾಲೀ ಕಾಲಮೇಘಾವಗುಂಠಿತಾ ।**
**ದ್ಯೌರ್ನ ಭಾತ್ಯಭಿಭೂತಾರ್ಕಾ ಘೋರೇಣ ತಮಸಾವೃತಾ ॥೧೯॥**

**ತಾನ್ ಘನೌಘಾನ್ ಸತಿಮಿರಾನ್ ದೋರ್ಭ್ಯಾಮಾಕ್ಷಿಪ್ಯ ಸ ಪ್ರಭುಃ ।**
**ವಪುಃ ಸಂದರ್ಶಯಾಮಾಸ ದಿವ್ಯಂ ಕೃಷ್ಣವಪುರ್ಹರಿಃ ॥೨೦॥**

**ಬಲಾಹಕಾಂಜನನಿಭಂ ಬಲಾಹಕತನೂರುಹಂ ।**
**ತೇಜಸಾ ವಪುಷಾ ಚೈವ ಕೃಷ್ಣಂ ಕೃಷ್ಣಮಿವಾಚಲಂ ॥೨೧॥**

---

೧೭. ಆ ಉತ್ಪಾತವು ತಲೆದೋರಿದಾಗ ಚತುರ್ಯುಗಾವಸಾನದಲ್ಲಿನ ಪ್ರಳಯದಲ್ಲಿ ಲೋಕಗಳಿಗೆ ಎಷ್ಟು ಹೆದರಿಕೆ ಯಾಗುವುದೋ ಅಷ್ಟು ಹೆದರಿಕೆ ಯಾಯಿತು. ಪದಾರ್ಥಗಳ ಆಕೃತಿಗಳು ಅಂದಗೆಟ್ಟವು.

೧೮. ಎಲ್ಲವೂ ಕಾಂತಿಹೀನವಾಯಿತು. ಯಾವುದೂ ಕಾಣುತ್ತಿರಲಿಲ್ಲ. ಕಗ್ಗತ್ತಲೆ ಮುಚ್ಚಿಕೊಂಡು ಹತ್ತುದಿಕ್ಕುಗಳೂ ಪ್ರಕಾಶಶೂನ್ಯವಾದುವು.

೧೯. ಕರಿಮೋಡದ ತೆರೆಯನ್ನು ಹಾಕಿಕೊಂಡು ಉಗ್ರರೂಪದಿಂದ ಕಾಳಿಯು ಪ್ರವೇಶಿಸಿದಳು. ಸೂರ್ಯನು ಮೋಡದಲ್ಲಿ ಮರೆಯಾಗಿರಲು, ಕಗ್ಗತ್ತಲೆ ತುಂಬಿ ಕೊಂಡಿರಲು ಆಕಾಶವು ಪ್ರಕಾಶಶೂನ್ಯವಾಗಿತ್ತು.

೨೦. ಸರ್ವೇಶ್ವರನಾದ ಹರಿಯು ಕತ್ತಲೆಯನ್ನು ಬೀರುವ ಆ ಮೇಘರಾಶಿ ಗಳನ್ನು ತನ್ನ ತೋಳುಗಳಿಂದ ತಳ್ಳಿ ದಿವ್ಯವಾದ ತನ್ನ ಕೃಷ್ಣರೂಪವನ್ನು ತೋರಿಸಿದನು.

೨೧. ಆ ದೇವನು ತೇಜಸ್ಸಿನಿಂದಲೂ ಆಕೃತಿಯಿಂದಲೂ ಕೃಷ್ಣನೇ ಆಗಿ ನೀಲಿಯ ಬೆಟ್ಟವನ್ನು ಹೋಲುತ್ತಿದ್ದನು. ಅವನು ಮೋಡಗಳಂತೆಯೂ ಕಾಡಿಗೆ ಯಂತೆಯೂ ನೀಲವರ್ಣದವನಾಗಿದ್ದನು. ಅವನ ಕೂದಲು ಮೋಡದಂತೆ ಕಪ್ಪಾಗಿತ್ತು.

**ದೀಪ್ತಪೀತಾಂಬರಧರಂ ತಪ್ತಕಾಂಚನಭೂಷಣಂ ।**
**ಧೂಮಾಂಧಕಾರವಪುಷಂ ಯುಗಾಂತಾಗ್ನಿಮಿವೋತ್ಥಿತಂ ॥೨೨॥**

**ಚತುರ್ದ್ವಿಗುಣಪೀನಾಂಸಂ ಕಿರೀಟಚ್ಛನ್ನಮೂರ್ಧಜಂ ।**
**ಬಭೌ ಚಾಮೀಕರಪ್ರಖ್ಯೈರಾಯುಧೈರುಪಶೋಭಿತಂ ॥೨೩॥**

**ಚಂದ್ರಾರ್ಕಕಿರಣದ್ಯೋತಂ ಗಿರಿಕೂಟಮಿವೋಚ್ಛ್ರಿತಂ ।**
**ನಂದಕಾನಂದಿತಕರಂ ಶರಾಶೀವಿಷಧಾರಿಣಂ ॥೨೪॥**

**ಶಕ್ತಿಚಿತ್ರಫಲೋದಗ್ರಂ ಶಂಖಚಕ್ರಗದಾಧರಂ ।**
**ವಿಷ್ಣುಶೈಲಂ ಕ್ಷಮಾಮೂಲಂ ಶ್ರೀವೃಕ್ಷಂ ಶಾರ್ಙ್ಗಶೃಂಗಿಣಂ ॥೨೫॥**

---

೨೨. ಅವನು ಹೊಳೆಹೊಳೆವ ಪೀತಾಂಬರವನ್ನು ಧರಿಸಿದ್ದನು. ಪುಟವಿಕ್ಕಿದ ಶುದ್ಧವಾದ ಚಿನ್ನದ ಒಡವೆಗಳನ್ನು ತೊಟ್ಟಿದ್ದನು. ಅವನ ಶರೀರವು ಹೊಗೆಯನ್ನೂ ಕತ್ತಲೆಯನ್ನೂ ಬಣ್ಣದಲ್ಲಿ ಹೋಲುತ್ತಿದ್ದಿತು. ಪ್ರಳಯಾಗ್ನಿಯೇನಾದರೂ ಎದ್ದುಬಂದಿತೋ ಎನ್ನುವಂತೆ ತೇಜಸ್ವಿಯಾಗಿದ್ದನು.

೨೩. ಅವನ ನಾಲ್ಕು ಹೆಗಲುಗಳೂ ಚೆನ್ನಾಗಿ ಪುಷ್ಟವಾಗಿದ್ದುವು. ಕಿರೀಟವು ಕೂದಲುಗಳನ್ನು ಮರೆಮಾಡಿದ್ದಿತು. ಅವನು ಸುವರ್ಣಮಯವಾದ ಆಯುಧಗಳಿಂದ ಪ್ರಕಾಶಿಸುತ್ತಿದ್ದನು.

೨೪. ಅವನು ಚಂದ್ರಸೂರ್ಯರ ಹಾಗೆ ಕಾಂತಿಯ ಕಿರಣಗಳನ್ನು ಬೀರುತ್ತಿದ್ದನು. ಪರ್ವತದ ಶಿಖರದಂತೆ ಉನ್ನತನಾಗಿದ್ದನು. ಕೈಯಲ್ಲಿ ನಂದಕವೆಂಬ ಖಡ್ಗವನ್ನು ಹರ್ಷದಿಂದ ಹಿಡಿದಿದ್ದನು. ಸರ್ಪದಂತೆ ತೀಕ್ಷ್ಣವಾದ ಬಾಣಗಳನ್ನು ಧರಿಸಿದ್ದನು.

೨೫. ತನ್ನ ಶಕ್ತಿಯಿಂದ ಆಶ್ಚರ್ಯಕರವಾದ ಉತ್ತಮ ಫಲವನ್ನು ಕೊಡಬಲ್ಲವನಾಗಿದ್ದನು. ಶಂಖಚಕ್ರಗದೆಗಳನ್ನು ಧರಿಸಿದ್ದನು. ಹೀಗೆ ತಾಳ್ಮೆಯೆಂಬ ಮೂಲವೂ, ಲಕ್ಷ್ಮಿಯೆಂಬ ಮರವೂ, ಶಾರ್ಙ್ಗಧನುಸ್ಸೆಂಬ ಶಿಖರವೂ ಪ್ರಕಾಶಿಸುತ್ತಿರಲು ವಿಷ್ಣುವೆಂಬ ಪರ್ವತವು ಕಂಗೊಳಿಸಿತು.

ತ್ರಿದಶೋದಾರಫಲದಂ ಸ್ವರ್ಗಸ್ತ್ರೀಚಾರುಪಲ್ಲವಂ ।
ಸರ್ವಲೋಕಮನಃಕಾಂತಂ ಸರ್ವಸತ್ವಮನೋಹರಂ ॥೨೬॥

ನಾನಾವಿಮಾನವಿಟಪಂ ತೋಯದಾಂಬುಮಧುಸ್ರವಂ ।
ವಿದ್ಯಾಹಂಕಾರಸಾರಾಢ್ಯಂ ಮಹಾಭೂತಪ್ರರೋಹಣಂ ॥೨೭॥

ವಿಶೇಷಪತ್ರೈರ್ನಿಚಿತಂ ಗ್ರಹನಕ್ಷತ್ರಪುಷ್ಪಿತಂ ।
ದೈತ್ಯಲೋಕಮಹಾಸ್ಕಂಧಂ ಮರ್ತ್ಯಲೋಕೇ ಪ್ರಕಾಶಿತಂ ॥೨೮॥

ಸಾಗರಾಕಾರನಿಹ್ರಾದಂ ರಸಾತಲಮಹಾಶ್ರಯಂ ।
ನಾಗೇಂದ್ರಪಾಶೈರ್ವಿತತಂ ಪಕ್ಷಜಂತುನಿಷೇವಿತಂ ॥೨೯॥

---

೨೬. ಆ ಭಗವಂತನೆಂಬ ಮಹಾವೃಕ್ಷವು ದೇವತೆಗಳಿಗೆ ಶ್ರೇಷ್ಠವಾದ ಫಲವನ್ನು ಕೊಡತಕ್ಕುದಾಗಿತ್ತು. ಸ್ವರ್ಗಸ್ತ್ರೀಯರೆಂಬ ಸುಂದರವಾದ ಚಿಗುರುಗಳಿಂದ ಅಲಂಕೃತವಾಗಿತ್ತು. ಎಲ್ಲ ಜನಗಳ ಮನಸ್ಸನ್ನೂ ಆನಂದಗೊಳಿಸುತ್ತಿತ್ತು.

೨೭. ನಾನಾವಿಧವಾದ ವಿಮಾನಗಳೆಂಬ ಕೊಂಬೆಗಳಿಂದ ಕೂಡಿ ಮಳೆಯ ನೀರೆಂಬ ಮಕರಂದವನ್ನು ಸುರಿಸುತ್ತಿತ್ತು. ವಿದ್ಯೆ ಮತ್ತು ಅಹಂಕಾರಗಳೆಂಬ ಸಾರ ದ್ರವ್ಯಗಳಿಂದ ಪೂರ್ಣವಾಗಿತ್ತು. ಮಹಾಭೂತಗಳೆಂಬ ಮೊಗರುಗಳಿಂದ ತುಂಬಿದ್ದಿತು.

೨೮. ತಿಲಕವೆಂಬ ಎಲೆಗಳಿಂದಲೂ ಗ್ರಹನಕ್ಷತ್ರಗಳೆಂಬ ಪುಷ್ಪಗಳಿಂದಲೂ ಆವೃತವಾಗಿದ್ದಿತು. ದೈತ್ಯಲೋಕವೇ ಅದರ ಬೊಡ್ಡೆ. ಮನುಷ್ಯಲೋಕದಲ್ಲಿ ಅದು ಪ್ರಕಾಶಿತವಾಯಿತು.

೨೯. ಅದರ ಶಬ್ದವು ಸಮುದ್ರಘೋಷವನ್ನು ಹೋಲುತ್ತಿತ್ತು. ಅದು ಪಾತಾಲಲೋಕದವರೆಗೂ ವ್ಯಾಪಿಸಿತ್ತು. ಸರ್ಪರಾಜನೆಂಬ ಬಳ್ಳಿ ಅದಕ್ಕೆ ಬಿಗಿದು ಕೊಂಡಿತ್ತು. ದೇವತೆಗಳೆಂಬ ಪಕ್ಷಿಗಳು ಅದನ್ನು ಸೇವಿಸುತ್ತಿದ್ದುವು. ಹೀಗೆ ಒಳ್ಳೆಯ ಸ್ವಭಾವ ಮತ್ತು ಸರ್ವೋತ್ತಮವಾದ ಐಶ್ವರ್ಯಗಳೆಂಬ ಪರಿಮಳದಿಂದ ತುಂಬಿ ಪ್ರಕಾಶಿಸುತ್ತಿದ್ದ ಸಕಲ ಜಗನ್ಮಯನಾದ ಕೃಷ್ಣನೆಂಬ ಮಹಾವೃಕ್ಷವನ್ನು ವಿಷ್ಣುವು ಪ್ರಕಾಶಗೊಳಿಸಿದನು.

**ಶೀಲಾರ್ಥಚಾರುಗಂಧಾಢ್ಯಂ ಸರ್ವಲೋಕಮಹಾದ್ರುಮಂ ।**
**ಅವ್ಯಕ್ತಾನಂತಸಲಿಲಂ ವ್ಯಕ್ತಾಹಂಕಾರಫೇನಿಲಂ ॥೩೦॥**

**ಮಹಾಭೂತತರಂಗೌಘಂ ಗ್ರಹನಕ್ಷತ್ರಬುದ್ಬುದಂ ।**
**ವಿಮಾನವಿಹಗವ್ಯಾಪ್ತಂ ತೋಯದಾಡಂಬರಾಕುಲಂ ॥೩೧॥**

**ಜಂತುಮತ್ಸ್ಯಗಣಾಕೀರ್ಣಂ ಶೈಲಶಂಖಕುಲೈರ್ಯುತಂ ।**
**ತ್ರೈಗುಣ್ಯವಿಷಯಾವರ್ತಂ ಸರ್ವಲೋಕತಿಮಿಂಗಿಲಂ ॥೩೨॥**

**ವೀರವೃಕ್ಷಲತಾಗುಲ್ಮಂ ಭುಜಗೋತ್ಕೃಷ್ಟಶೈವಲಂ ।**
**ದ್ವಾದಶಾರ್ಕಮಹಾದ್ವೀಪಂ ರುದ್ರೈಕಾದಶಪತ್ತನಂ ॥೩೩॥**

**ವಸ್ವಷ್ಟಪರ್ವತೋಪೇತಂ ತ್ರೈಲೋಕ್ಯಾಂಭೋಮಹೋದಧಿಂ ।**
**ಸಂಧ್ಯಾಸಂಖ್ಯೋರ್ಮಿಸಲಿಲಂ ಸುಪರ್ಣಾನಿಲಸೇವಿತಂ ॥೩೪॥**

---

೩೦-೩೭. ದೇವತೆಗಳು ನಾರಾಯಣನೆಂಬ ಮಹಾಸಾಗರವನ್ನು ನೋಡಿದರು. ಅವ್ಯಕ್ತವೆಂಬ ಸೂಕ್ಷ್ಮಪ್ರಕೃತಿಯೇ ಆ ಸಾಗರದ ಜಲರಾಶಿ, ವ್ಯಕ್ತವಾದ ಸಾತ್ವಿಕಾದ್ಯಹಂಕಾರಗಳೇ ನೊರೆ, ಮಹಾಭೂತಗಳೇ ಅಲೆಗಳು, ಗ್ರಹನಕ್ಷತ್ರಗಳೇ ಗುಳ್ಳೆಗಳು, ವಿಮಾನಗಳೇ ಪಕ್ಷಿಗಳು, ಗುಡುಗೇ ಅಬ್ಬರ, ನಾನಾವಿಧವಾದ ಜೀವಜಂತುಗಳೇ ಮೀನುಗಳು, ಶಂಖವೇ ಪರ್ವತಸ್ತೋಮ, ಸತ್ವರಜಸ್ತಮಸ್ಸುಗಳೆಂಬ ಮೂರು ಗುಣಗಳೇ ನೀರಿನ ಸುಳಿ, ಸಕಲ ಲೋಕಗಳೇ ತಿಮಿಂಗಿಲ, ಸಾಹಸವೇ ಮರಗಿಡ ಬಳ್ಳಿಗಳು, ಸರ್ಪವೇ ಪಾಚಿ, ದ್ವಾದಶಾದಿತ್ಯರೇ ಮಹಾದ್ವೀಪಗಳು, ಏಕಾದಶರುದ್ರರೇ ಪಟ್ಟಣಗಳು, ಎಂಟು ಜನ ವಸುಗಳೇ ಪರ್ವತಗಳು, ಮೂರು ಲೋಕಗಳೆಂಬ ನೀರಿಗೆಲ್ಲ ಅದೇ ಆಶ್ರಯಸ್ಥಳ, ಯುಗಸಂಧ್ಯೆಗಳೇ ಅಸಂಖ್ಯಾಕವಾದ ಅಲೆಗಳು, ಗರುಡನ ರೆಕ್ಕೆಯ ಗಾಳಿಯೇ ವಾಯು, ದೈತ್ಯರು ಮತ್ತು ರಾಕ್ಷಸರೇ ಮೊಸಳೆಗಳು, ಯಕ್ಷರು ಮತ್ತು ಸರ್ಪಗಳೇ ಮತ್ಸ್ಯವಿಶೇಷಗಳು, ಪಿತಾಮಹನ ಸೃಷ್ಟಿಸಾಮರ್ಥ್ಯವೇ ಮಹಾಶಕ್ತಿ, ಸ್ವರ್ಗಸ್ತ್ರೀಯರೇ ರತ್ನಗಳು, ಶ್ರೀ,

ದೈತ್ಯರಕ್ಷೋಗಣಗ್ರಾಹಂ ಯಕ್ಷೋರಗರ್ಝಷಾಕುಲಂ ।
ಪಿತಾಮಹಮಹಾವೀರ್ಯಂ ಸ್ವರ್ಗಸ್ತ್ರೀರತ್ನಶೋಭಿತಂ ॥೩೫॥

ತ್ರೀಕೀರ್ತಿಕಾಂತಿಲಕ್ಷ್ಮೀಭಿರ್ನದೀಭಿರುಪಶೋಭಿತಂ ।
ಕಾಲಯೋಗಮಹಾಪರ್ವಪ್ರಲಯೋತ್ಪತ್ತಿವೇಗಿನಂ ॥೩೬॥

ತಂ ತು ಯೋಗಮಹಾಪಾರಂ ನಾರಾಯಣಮಹಾರ್ಣವಂ ।
ದೇವಾಧಿದೇವಂ ವರದಂ ಭಕ್ತಾನಾಂ ಭಕ್ತವತ್ಸಲಂ ॥೩೭॥

ಅನುಗ್ರಹಕರಂ ದೇವಂ ಪ್ರಶಾಂತಿಕರಣಂ ಶುಭಂ ।
ಹರ್ಯಶ್ವರಥಸಂಯುಕ್ತೇ ಸುಪರ್ಣಧ್ವಜಸೇವಿತೇ ॥೩೮॥

ಗ್ರಹಚಂದ್ರಾರ್ಕರಚಿತೇ ಮಂದರಾಕ್ಷವರಾವೃತೇ ।
ಅನಂತರಶ್ಮಿಭಿರ್ಯುಕ್ತೇ ವಿಸ್ತೀರ್ಣೇ ಮೇರುಗಹ್ವರೇ । ॥೩೯॥

ತಾರಕಾಚಿತ್ರಕುಸುಮೇ ಗ್ರಹನಕ್ಷತ್ರಬಂಧುರೇ ।
ಭಯೇಷ್ವಭಯದಂ ವ್ಯೋಮ್ನಿ ದೇವಾ ದೈತ್ಯಪರಾಜಿತಾಃ ॥೪೦॥

---

ಕೀರ್ತಿ, ಕಾಂತಿ ಮತ್ತು ಲಕ್ಷ್ಮಿಗಳೇ ನದಿಗಳು, ಭಗವಂತನ ಸಂಕಲ್ಪಕಾಲವೇ ಪರ್ವ, ಪ್ರಳಯ ಮತ್ತು ಸೃಷ್ಟಿಗಳೇ ವೇಗ, ಯೋಗವೇ ದಡ.

೩೭-೪೦. ದೈತ್ಯರೊಡನೆ ಯುದ್ಧಮಾಡಿ ಸೋತುಹೋಗಿದ್ದ ದೇವತೆಗಳು ದೇವಾಧಿದೇವನೂ, ಭಕ್ತರ ಇಷ್ಟಾರ್ಥವನ್ನು ಕರುಣಿಸುವವನೂ, ಭಕ್ತವತ್ಸಲನೂ, ಅನುಗ್ರಹಪರನೂ, ಶಾಂತಾತ್ಮನೂ, ಮಂಗಲಮಯನೂ, ಭಯವೊದಗಿದಾಗ ಅಭಯವನ್ನು ಕೊಡುವಾತನೂ ಆದ ನಾರಾಯಣನನ್ನು ಅಂತರಿಕ್ಷದಲ್ಲಿ ಕಂಡರು. ಆತನು ಲೋಕಮಯವಾದ ದಿವ್ಯರಥದಲ್ಲಿ ಕುಳಿತಿದ್ದನು. ಅದಕ್ಕೆ ಸೂರ್ಯಾಶ್ವಗಳನ್ನು ಹೂಡಿದ್ದರು. ಗರುಡಧ್ವಜವನ್ನು ಎತ್ತಿ ಕಟ್ಟಿದ್ದರು. ಗ್ರಹಗಳು ಚಂದ್ರಸೂರ್ಯರು ಇವರಿಂದ ಅದು ನಿರ್ಮಿತವಾಗಿತ್ತು. ಮಂದರ ಪರ್ವತವೇ ಅದರ ಅಚ್ಚುಮರ. ಅನಂತನೇ ಕಡಿವಾಣ. ಮೇರುಪರ್ವತದ ಗುಹೆಯಂತೆ ಅದು ವಿಸ್ತಾರವಾಗಿತ್ತು. ನಕ್ಷತ್ರಗಳೆಂಬ ಹೂಗೊಂಚಲುಗಳಿಂದ ಅಲಂಕೃತವಾಗಿ ಗ್ರಹಗಳಿಂದಲೂ ನಕ್ಷತ್ರಗಳಿಂದಲೂ ಸುಂದರವಾಗಿ ಕಾಣುತ್ತಿತ್ತು.

**ದದೃಶುಸ್ತೇ ಸ್ಥಿತಂ ದೇವಂ ದಿವ್ಯೇ ಲೋಕಮಯೇ ರಥೇ ।**
**ತೇ ಕೃತಾಂಜಲಯಃ ಸರ್ವೇ ದೇವಾಃ ಶಕ್ರಪುರೋಗಮಾಃ ॥೪೧॥**

**ಜಯಶಬ್ದಂ ಪುರಸ್ಕೃತ್ಯ ಶರಣ್ಯಂ ಶರಣಂ ಗತಾಃ ।**
**ಸ ತೇಷಾಂ ತಾಂ ಗಿರಂ ಶ್ರುತ್ವಾ ವಿಷ್ಣುರ್ದೈವತದೈವತಂ ॥೪೨॥**

**ಮನಶ್ಚಕ್ರೇ ವಿನಾಶಾಯ ದಾನವನಾಂ ಮಹಾಮೃಥೇ ।**
**ಆಕಾಶೇ ತು ಸ್ಥಿತೋ ವಿಷ್ಣುರುತ್ತಮಂ ವಪುರಾಸ್ಥಿತಃ ॥೪೩॥**

**ಉವಾಚ ದೇವತಾಃ ಸರ್ವಾಃ ಸಪ್ರತಿಜ್ಞಮಿದಂ ವಚಃ ।**
**ಶಾಂತಿಂ ವ್ರಜತ ಭದ್ರಂ ವೋ ಮಾ ಭೈಷ್ಟ ಮರುತಾಂ ಗಣಾಃ ॥೪೪॥**

**ಜಿತಾ ಮೇ ದಾನವಾಃ ಸರ್ವೇ ತ್ರೈಲೋಕ್ಯಂ ಪರಿಗೃಹ್ಯತಾಂ ।**
**ತೇ ತಸ್ಯ ಸತ್ಯಸಂಧಸ್ಯ ವಿಷ್ಣೋರ್ವಾಕ್ಯೇನ ತೋಷಿತಾಃ ॥೪೫॥**

---

೪೧. ಇಂದ್ರಾದಿ ದೇವತೆಗಳೆಲ್ಲರೂ ಕೈಮುಗಿದುಕೊಂಡು ಜಯಶಬ್ದವನ್ನು ಮಾಡುತ್ತ ರಕ್ಷಕನಾದ ಆ ಭಗವಂತನನ್ನು ಮರೆಹೊಕ್ಕರು.

೪೨. ದೇವಾಧಿದೇವನಾದ ವಿಷ್ಣುವು ಅವರ ಆ ಮಾತನ್ನು ಕೇಳಿ ಮಹಾ ಸಂಗ್ರಾಮದಲ್ಲಿ ದಾನವರನ್ನು ವಿನಾಶಗೊಳಿಸಬೇಕೆಂದು ಮನಸ್ಸುಮಾಡಿದನು.

೪೩. ವಿಷ್ಣುವು ದಿವ್ಯ ಶರೀರವನ್ನು ಧರಿಸಿ ಆಕಾಶದಲ್ಲಿ ನಿಂತು ಪ್ರತಿಜ್ಞಾ ಪೂರ್ವಕವಾಗಿ ದೇವತೆಗಳಿಗಿಂತೆಂದನು.

೪೪. ಓ ದೇವತೆಗಳಿರಾ, ಶಾಂತರಾಗಿ ; ನಿಮಗೆ ಮಂಗಳವಾಗಲಿ. ಹೆದರ ಬೇಡಿ ; ಇಗೋ ದಾನವರೆಲ್ಲರನ್ನೂ ಗೆದ್ದೆನೆಂದು ತಿಳಿಯಿರಿ. ಮೂರು ಲೋಕವನ್ನೂ ವಶಪಡಿಸಿಕೊಳ್ಳಿರಿ.

೪೫. ಸತ್ಯಸಂಧನಾದ ವಿಷ್ಣುವಿನ ವಾಕ್ಯವನ್ನು ಕೇಳಿ ದೇವತೆಗಳು ಸಂತುಷ್ಟ ರಾದರು. ಅಮೃತಪಾನನದಿಂದ ಆದಷ್ಟು ಆನಂದವು ಅವರಿಗುಂಟಾಯಿತು.

ದೇವಾಃ ಪ್ರೀತಿಂ ಸಮಾಜಗ್ಮುಃ ಪ್ರಾಶ್ಯಾಮೃತಮಿವೋತ್ತಮಂ।
ತತಸ್ತಮಃ ಸಂಹೃತಂ ತದ್ವಿನೇಶುಶ್ಚ ಬಲಾಹಕಾಃ ॥೪೬॥

ಪ್ರವವುಶ್ಚ ಶಿವಾ ವಾತಾ ಪ್ರಶಾಂತಾಶ್ಚ ದಿಶೋ ದಶ।
ಶುದ್ಧಪ್ರಭಾಣಿ ಜ್ಯೋತೀಂಷಿ ಸೋಮಂ ಚಕ್ರುಃ ಪ್ರದಕ್ಷಿಣಂ ॥೪೭॥

ನ ವಿಗ್ರಹಂ ಗ್ರಹಾಶ್ಚಕ್ರುಃ ಪ್ರಶಾಂತಾಶ್ಚಾಪಿ ಸಿಂಧವಃ।
ವಿರಜಸ್ಕಾಭವನ್ಮಾರ್ಗಾ ನಾಕವರ್ಗಾದಯಸ್ತ್ರಯಃ ॥೪೮॥

ಯಥಾರ್ಥಮೂಹುಃ ಸರಿತೋ ನಾಪಿ ಚುಕ್ಷುಭಿರೇಽರ್ಣವಾಃ।
ಆಸಞ್ಛುಭಾನೀಂದ್ರಿಯಾಣಿ ನರಾಣಾಮಂತರಾತ್ಮಸು ॥೪೯॥

ಮಹರ್ಷಯೋ ವೀತಶೋಕಾ ವೇದಾನುಚ್ಚೈರಧೀಯತ।
ಯಜ್ಞೇಷು ಚ ಹವಿಃಪಾಕಂ ಶಿವಮಾಪ ಚ ಪಾವಕಃ ॥೫೦॥

---

೪೬-೪೭. ಬಳಿಕ ಆ ಕತ್ತಲೆ ತೊಲಗಿತು. ಮೋಡಗಳು ಮರೆಯಾದುವು. ಗಾಳಿ ಸುಖವಾಗಿ ಬೀಸಿತು. ಹತ್ತು ದಿಕ್ಕುಗಳೂ ಪ್ರಸನ್ನವಾದುವು. ನಕ್ಷತ್ರಗಳು ನಿರ್ಮಲವಾದ ಕಾಂತಿಯಿಂದ ಕೂಡಿ ಚಂದ್ರನನ್ನು ಪ್ರದಕ್ಷಿಣಮಾಡಿದುವು.

೪೮. ಗ್ರಹಗಳಿಗೆ ಪರಸ್ಪರ ಯುದ್ಧವು ನಿಂತಿತು. ಹೊಳೆಗಳು ತಿಳಿಯಾದುವು. ಸ್ವರ್ಗ, ಮರ್ತ್ಯ ಮತ್ತು ಪಾತಾಳಗಳೆಂಬ ಮೂರು ಲೋಕದಲ್ಲೂ ಮಾರ್ಗಗಳು ಧೂಳಿಲ್ಲದಂತಾದುವು.

೪೯. ನದಿಗಳು ಸ್ವಭಾವಸ್ಥಿತಿಯಲ್ಲಿ ಹರಿಯತೊಡಗಿದುವು. ಸಮುದ್ರಗಳು ಶಾಂತವಾದುವು. ಮನುಷ್ಯರ ಇಂದ್ರಿಯಗಳು ಶುಭಮಾರ್ಗದಲ್ಲಿ ಪ್ರವರ್ತಿಸಿದುವು. ಮನಸ್ಸುಗಳಲ್ಲಿ ಒಳ್ಳೆಯ ಭಾವನೆ ಮೂಡಿತು.

೫೦. ಮಹರ್ಷಿಗಳು ನಿಶ್ಚಿಂತರಾಗಿ ಉಚ್ಚಸ್ವರದಿಂದ ವೇದಗಳನ್ನು ಹೇಳತೊಡಗಿದರು. ಯಜ್ಞಗಳಲ್ಲಿ ಅಗ್ನಿಯು ಮಂಗಲಮಯವಾದ ಹವಿಸ್ಸನ್ನು ಸ್ವೀಕರಿಸಿದನು.

**ಪ್ರವೃತ್ತಧರ್ಮಾಃ ಸಂವೃತ್ತಾ ಲೋಕಾ ಮುದಿತಮಾನಸಾಃ ।**
**ವಿಷ್ಣೋರ್ದತ್ತಪ್ರತಿಜ್ಞಸ್ಯ ಶ್ರುತ್ವಾರಿನಿಧನೇ ಗಿರಂ ॥೫೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಸಂಗ್ರಾಮೇ**
**ದ್ವಿಸಪ್ತತ್ಯಧಿಕಶತತಮೋಽಧ್ಯಾಯಃ**

---

೫೧. ಶತ್ರುಸಂಹಾರಕ್ಕೋಸ್ಕರ ವಿಷ್ಣು ಪ್ರತಿಜ್ಞೆಮಾಡಿದನೆಂಬ ಮಾತನ್ನು ಕೇಳಿ ಜನರೆಲ್ಲರೂ ಹರ್ಷಪೂರ್ಣವಾದ ಮನಸ್ಸಿನಿಂದ ಧರ್ಮದಲ್ಲಿ ತೊಡಗಿದರು.

## ಅಧ್ಯಾಯದ ಸಾರಾಂಶ

ವಿಷ್ಣುವಿನ ಮಹಿಮೆಯನ್ನು ವರ್ಣಿಸುವುದಕ್ಕೆ ಪ್ರಾರಂಭಿಸಿ ತಾರಕಾಸುರನ ಯುದ್ಧದಲ್ಲಿ ಆತನು ಮಾಡಿದ ಅದ್ಭುತಕಾರ್ಯವನ್ನು ಈ ಅಧ್ಯಾಯವು ತಿಳಿಸುತ್ತದೆ.

ದೇವತೆಗಳು ದಾನವರೊಡನೆ ಹೋರಾಡಲಾರದೆ ಸೋತುಹೋಗಿ, ದಿಕ್ಕು ತೋರದೆ ಮನಸ್ಸಿನಲ್ಲೇ ನಾರಾಯಣನನ್ನು ಪ್ರಾರ್ಥಿಸಿ ತಮ್ಮನ್ನು ಸಲಹುವಂತೆ ಬೇಡಿಕೊಂಡರು. ಕೂಡಲೇ ಕಗ್ಗತ್ತಲೆ ಕವಿದು ಲೋಕದಲ್ಲೆಲ್ಲ ಉತ್ಪಾತಗಳು ಆದುವು. ಕಾರ್ಮೋಡವು ಕವಿಯಿತು. ಆ ಮೇಘಮಾಲೆಯ ನಡುವೆ ಭಗವಂತನು ದೇವತೆಗಳಿಗೆ ದರ್ಶನವಿತ್ತನು. ಅವರು ಅವನನ್ನು ಮರೆಹೊಕ್ಕು ತಮ್ಮನ್ನು ರಕ್ಷಿಸುವಂತೆ ಬೇಡಿದರು. ವಿಷ್ಣುವು ಲೋಕಕಂಟಕರಾದ ದೈತ್ಯರನ್ನು ಸಂಹರಿಸುವುದಾಗಿ ಮಾತುಕೊಟ್ಟು ಅವರಿಗೆ ಅಭಯವನ್ನು ನೀಡಿದನು. ದೇವತೆಗಳು ಸಂತುಷ್ಟರಾದರು. ಉತ್ಪಾತವು ಅಡಗಿ ಲೋಕವೆಲ್ಲ ಶಾಂತವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯಸಂಗ್ರಾಮದಲ್ಲಿ
ನೂರ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ತ್ರಿಸಪ್ತತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ತತೋಽಭಯಂ ವಿಷ್ಣುವಚಃ ಶ್ರುತ್ವಾ ದೈತ್ಯಾಶ್ಚ ದಾನವಾಃ ।
ಉದ್ಯೋಗಂ ವಿಪುಲಂ ಚಕ್ರುರ್ಯುದ್ಧಾಯ ವಿಜಯಾಯ ಚ || ೧ ||

ಮಯಸ್ತು ಕಾಂಚನಮಯಂ ತ್ರಿನಲ್ವಾಯತಮಕ್ಷಯಂ ।
ಚತುಶ್ಚಕ್ರಂ ಸುವಿಪುಲಂ ಸುಕಲ್ಪಿತಮಹಾಯುಗಂ || ೨ ||

ಕಿಂಕಿಣೀಜಾಲನಿರ್ಘೋಷಂ ದ್ವೀಪಿಚರ್ಮಪರಿಷ್ಕೃತಂ ।
ರುಚಿರಂ ರತ್ನಜಾಲೈಶ್ಚ ಹೇಮಜಾಲೈಶ್ಚ ಶೋಭಿತಂ || ೩ ||

ಈಹಾಮೃಗಗಣಾಕೀರ್ಣಂ ಪಕ್ಷಿಪಙ್ಕ್ತಿವಿರಾಜಿತಂ ।
ದಿವ್ಯಾಸ್ತ್ರತೂಣೀರಧರಂ ಪಯೋಧರವಿನಾದಿತಂ || ೪ ||

ಸ್ವಕ್ಷಂ ರಥವರೋದಾರಂ ಸೂಪಸ್ಥಂ ಗಗನೋಪಮಂ ।
ಗದಾಪರಿಘಸಂಪೂರ್ಣಂ ಮೂರ್ತಿಮಂತಮಿವಾರ್ಣವಂ || ೫ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬಳಿಕ ದೈತ್ಯರೂ ದಾನವರೂ ದೇವತೆಗಳಿಗೆ ವಿಷ್ಣುವು ಕೊಟ್ಟ ಅಭಯವಾಕ್ಯವನ್ನು ಕೇಳಿ ಯುದ್ಧದಲ್ಲಿ ಜಯವನ್ನು ಪಡೆಯುವುದಕ್ಕಾಗಿ ಬಹು ಪ್ರಯತ್ನವನ್ನು ಮಾಡಿದರು.

೨-೮. ಯುದ್ಧಾಭಿಲಾಷಿಯಾದ ಮಯನು ತೇಜೋಯುಕ್ತನಾದ ಸೂರ್ಯನು ಮೇರುಪರ್ವತವನ್ನೇರುವಂತೆ ಶತ್ರುಗಳ ರಥವನ್ನು ಭಂಗಪಡಿಸುವ ಸುವರ್ಣಮಯವಾದ ದಿವ್ಯರಥವನ್ನೇರಿದನು. ಅದು ಮೂರು ನಲ್ವಗಳಷ್ಟು ಎಂದರೆ ಸಾವಿರದ ಇನ್ನೂರು ಮೊಳಗಳಷ್ಟು ವಿಸ್ತಾರವಾಗಿ ಅಕ್ಷಯವಾಗಿತ್ತು. ಅದಕ್ಕೆ ನಾಲ್ಕು ಚಕ್ರಗಳಿದ್ದುವು. ಅದು ಅತಿವಿಶಾಲವಾಗಿ ದೊಡ್ಡ ನೊಗದಿಂದ ಕೂಡಿದ್ದಿತು. ಕಿರುಗೆಜ್ಜೆಗಳ ಸಾಲು ಇಂಪಾಗಿ ಧ್ವನಿಮಾಡುತ್ತಿತ್ತು. ಹುಲಿಯ ಚರ್ಮದಿಂದ ಅದು ಅಲಂಕೃತವಾಗಿತ್ತು. ರತ್ನಗಳಿಂದಲೂ ಚಿನ್ನದಿಂದಲೂ ಅದನ್ನು ಶೃಂಗರಿಸಿದ್ದರು.

**ಹೇಮಕೇಯೂರವಲಯಂ ಸ್ವರ್ಣಮಂಡಲಕೂಬರಂ ।**
**ಸಪತಾಕಧ್ವಜೋಪೇತಂ ಸಾದಿತ್ಯಮಿವ ಮಂದರಂ ॥ ೬ ॥**

**ಗಜೇಂದ್ರಾಭೋಗವಪುಷಂ ಕ್ವಚಿತ್ಕೇಸರಿವರ್ಚಸಂ ।**
**ಯುಕ್ತಮೃಕ್ಷಸಹಸ್ರೇಣ ಸಮೃದ್ಧಾಂಬುದನಾದಿತಂ ॥ ೭ ॥**

**ದೀಪ್ತಮಾಕಾಶಗಂ ದಿವ್ಯಂ ರಥಂ ಪರರಥಾರುಜಂ ।**
**ಅಧ್ಯತಿಷ್ಠದ್ರಣಾಕಾಂಕ್ಷೀ ಮೇರುಂ ದೀಪ್ತ ಇವಾಂಶುಮಾನ್ ॥ ೮ ॥**

**ತಾರಮುತ್ಕ್ರೋಶವಿಸ್ತಾರಂ ಸರ್ವಂ ಹೇಮಮಯಂ ರಥಂ ।**
**ಶೈಲಾಕಾರಮಸಂಬಾಧಂ ನೀಲಾಂಜನಚಯೋಪಮಂ ॥ ೯ ॥**

**ಕಾರ್ಷ್ಣಾಯಸಮಯಂ ದಿವ್ಯಂ ಲೋಹೇಷಾಬದ್ಧಕೂಬರಂ ।**
**ತಿಮಿರೋದ್ಗಾರಿಕಿರಣಂ ಗರ್ಜಂತಮಿವ ತೋಯದಂ ॥೧೦॥**

---

ತೋಳಗಳ ಹಿಂಡೂ ಪಕ್ಷಿಗಳ ಸಾಲೂ ಮುಂಭಾಗದಲ್ಲಿ ಕಂಗೊಳಿಸುತ್ತಿದ್ದುವು. ದಿವ್ಯಾಸ್ತ್ರಗಳಿಂದ ತುಂಬಿದ ಬತ್ತಳಿಕೆಗಳು ಅದರಲ್ಲಿದ್ದುವು. ಅದು ಗುಡುಗಿನಂತೆ ಧ್ವನಿಮಾಡುತ್ತಿತ್ತು. ಒಳ್ಳೆಯ ಅಚ್ಚಿನಿಂದ ಕೂಡಿ ಅದು ರಥಗಳಲ್ಲೆಲ್ಲ ಮೇಲೆನಿಸಿದ್ದಿತು. ಅದರ ಒಳಭಾಗವು ಗಗನದಂತೆ ವಿಶಾಲವಾಗಿದ್ದಿತು. ಗದೆಗಳಿಂದಲೂ ಪರಿಘಗಳಿಂದಲೂ ಪೂರ್ಣವಾಗಿ ಬೇರೆ ಆಕಾರವನ್ನು ಧರಿಸಿದ ಸಮುದ್ರವೋ ಎನ್ನುವಂತಿದ್ದಿತು. ಅಲ್ಲಲ್ಲಿ ಚಿನ್ನದ ಬಳೆಗಳನ್ನು ಕಟ್ಟಿ ನೊಗಕ್ಕೆ ಚಿನ್ನದ ಸುತ್ತುಪಟ್ಟಿಯನ್ನು ಹಾಕಿದ್ದರು. ಧ್ವಜ ಪತಾಕೆಗಳಿಂದಲಂಕೃತವಾಗಿ ಸೂರ್ಯನೊಡಗೂಡಿದ ಮಂದರದಂತೆ ಅದು ಶೋಭಿಸುತ್ತಿದ್ದಿತು. ಅದರ ಮೈಕಟ್ಟು ಮದ್ದಾನೆಯ ದೇಹದಂತೆ ಬಲವಾಗಿದ್ದಿತು. ಅಲ್ಲಲ್ಲಿ ಸಿಂಹದ ಮೈಬಣ್ಣವೂ ಕಾಣುತ್ತಿದ್ದಿತು. ಸಾವಿರಾರು ಕರಡಿಗಳನ್ನು ಅದಕ್ಕೆ ಹೂಡಿದ್ದರು. ಜಲಪೂರ್ಣವಾದ ಮೇಘದಂತೆ ಅದು ಧ್ವನಿಮಾಡುತ್ತಿದ್ದಿತು. ಬರಿಯ ಚಿನ್ನದಿಂದಲೇ ಆದ ಆ ರಥವು ಒಂದು ಹರಿದಾರಿಗಿಂತಲೂ ಹೆಚ್ಚು ವಿಸ್ತೃತವಾಗಿತ್ತು.

೯–೧೪. ವಿರೋಚನನು ಬಹು ಕೋಪಿಷ್ಠನಾಗಿ ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಆ ಸೈನ್ಯದ ಮುಂಗುಡಿಯಲ್ಲಿ ಹೊಳೆಹೊಳೆವ ಶಿಖರದಿಂದ ಕೂಡಿದ

ಲೋಹಜಾಲೇನ ಮಹತಾ ಸುಗವಾಕ್ಷೇಣ ದಂಶಿತಂ ।
ಆಯಸೈಃ ಪರಿಘೈಃ ಪೂರ್ಣಂ ಕ್ಷೇಪಣೀಯೈಶ್ಚ ಮುದ್ಗರೈಃ ॥೧೧॥

ಪ್ರಾಸೈಃ ಪಾಶೈಶ್ಚ ವಿತತೈರಸಂಯುಕ್ತೈಶ್ಚ ಕಂಟಕೈಃ ।
ಶೋಭಿತಂ ತ್ರಾಸನೀಯೈಶ್ಚ ತೋಮರೈಶ್ಚ ಪರಶ್ವಧೈಃ ॥೧೨॥

ಉದ್ಯಂತಂ ದ್ವಿಷತಾಂ ಹೇತೋರ್ದ್ವಿತೀಯಮಿವ ಮಂದರಂ ।
ಯುಕ್ತಂ ಖರಸಹಸ್ರೇಣ ಸೋಽಧ್ಯಾರೋಹದ್ರಥೋತ್ತಮಂ ॥೧೩॥

ವಿರೋಚನಸ್ತು ಸಂಕ್ರುದ್ಧೋ ಗದಾಪಾಣಿರವಸ್ಥಿತಃ ।
ಪ್ರಮುಖೇ ತಸ್ಯ ಸೈನ್ಯಸ್ಯ ದೀಪ್ತಶೃಂಗ ಇವಾಚಲಃ ॥೧೪॥

ಯುಕ್ತಂ ರಥಸಹಸ್ರೇಣ ಹಯಗ್ರೀವಸ್ತು ದಾನವಃ ।
ಸ್ಯಂದನಂ ವಾಹಯಾಮಾಸ ಸಪತ್ನಾನೀಕಮರ್ದನಃ ॥೧೫॥

---

ಪರ್ವತದಂತೆ ಉತ್ತಮವಾದ ರಥವನ್ನೇರಿ ಕುಳಿತನು. ಅದು ಪರ್ವತಾಕಾರವಾಗಿ ವಿಸ್ತಾರವಾಗಿತ್ತು. ಕರಿಯ ಕಾಡಿಗೆಯ ರಾಶಿಯನ್ನು ಹೋಲುತ್ತಿತ್ತು. ಉಕ್ಕಿನಿಂದ ರಚಿತವಾಗಿತ್ತು. ಅದರ ಕಬ್ಬಿಣದ ಮೂಕಿಗೆ ಸೊಗವನ್ನು ಬಿಗಿದಿದ್ದರು. ಅದರ ಕಿರಣಗಳು ಕತ್ತಲೆಯನ್ನು ಕಾರುತ್ತಿದ್ದುವು. ಮೋಡದಂತೆ ಅದು ಗುಡುಗುಡಿಸುತ್ತಿತ್ತು. ಅದರಲ್ಲಿ ಅಂದವಾದ ಗವಾಕ್ಷವಿದ್ದಿತು. ಕಬ್ಬಿಣದ ದೊಡ್ಡ ಕವಚ, ಪರಿಘಗಳು, ಶಸ್ತ್ರಗಳನ್ನೆಸೆಯುವ ಸಾಧನಗಳು, ಮುದ್ಗರಗಳು, ಪ್ರಾಸಗಳು, ಪಾಶಗಳು, ಬಿಡಿಬಿಡಿಯಾದ ಉಕ್ಕಿನ ಮುಳ್ಳುಗಳು, ಭಯಂಕರವಾದ ತೋಮರಗಳು, ಮತ್ತು ಕೊಡಲಿಗಳು ಇವುಗಳಿಂದ ಅದು ಪೂರ್ಣವಾಗಿತ್ತು. ಅದು ಎರಡನೆಯ ಮಂದರಪರ್ವತವೋ ಎನ್ನುವಂತೆ ಉನ್ನತವಾಗಿದ್ದು ಶತ್ರುಗಳ ನಾಶಕ್ಕೆ ಪ್ರಯತ್ನಪಡುತ್ತಿದ್ದಿತು. ಅದಕ್ಕೆ ಸಾವಿರ ಹೇಸರಕತ್ತೆಗಳನ್ನು ಹೂಡಿದ್ದರು.

೧೫. ಶತ್ರುಸೈನ್ಯನಾಶಕನಾದ ಹಯಗ್ರೀವನೆಂಬ ದಾನವನು ಸಾವಿರಾರು ರಥಗಳಿಂದ ಸುತ್ತುವರಿದ ತನ್ನ ದಿವ್ಯರಥವನ್ನೇರಿದನು.

ವ್ಯಾಯತಂ ಕಿಷ್ಕುಸಾಹಸ್ರಂ ಧನುರ್ವಿಸ್ಫಾರಯನ್ಮಹತ್ ।
ವಾರಾಹಃ ಪ್ರಮುಖೇ ತಸ್ಥೌ ಸಪ್ರರೋಹ ಇವಾಚಲಃ ॥೧೬॥

ಖರಸ್ತು ವಿಕ್ಷರನ್ದರ್ಪಾನ್ನೇತ್ರಾಭ್ಯಾಂ ರೋಷಜಂ ಜಲಂ ।
ಸ್ಫುರದ್ದಂತೋಷ್ಠನಯನಂ ಸಂಗ್ರಾಮಂ ಸೋಽಭ್ಯಕಾಂಕ್ಷತ ॥೧೭॥

ತ್ವಷ್ಟಾ ತ್ವಷ್ಟಗಜಂ ಘೋರಂ ಯಾನಮಾಸ್ಥಾಯ ದಾನವಃ ।
ವ್ಯೂಹಿತುಂ ದಾನವವ್ಯೂಹಂ ಪರಿಚಕ್ರಾಮ ವೀರ್ಯವಾನ್ ॥೧೮॥

ವಿಪ್ರಚಿತ್ತಿಸುತಃ ಶ್ವೇತಃ ಶ್ವೇತಕುಂಡಲಭೂಷಣಃ ।
ಶ್ವೇತಶೈಲಪ್ರತೀಕಾಶೋ ಯುದ್ಧಾಯಾಭಿಮುಖೇ ಸ್ಥಿತಃ ॥೧೯॥

ಅರಿಷ್ಟೋ ಬಲಿಪುತ್ರಶ್ಚ ವರಿಷ್ಠೋಽದ್ರಿಶಿಲಾಯುಧಃ ।
ಯುದ್ಧಾಯಾಭಿಮುಖಸ್ತಸ್ಥೌ ಧರಾಧರವಿಕಂಪನಃ ॥೨೦॥

---

೧೬. ಸಾವಿರಮೊಳದುದ್ದದ ತನ್ನ ದೊಡ್ಡ ಬಿಲ್ಲನ್ನು ಮಿಡಿಯುತ್ತ ವಾರಾಹನು ಚಿಗುರುಗಳಿಂದ ತುಂಬಿದ ಪರ್ವತದಂತೆ ಮುಂದೆ ನಿಂತನು.

೧೭. ಖರನ ಕಣ್ಣುಗಳಲ್ಲಿ ಕೋಪದಿಂದ ನೀರು ಸುರಿಯುತ್ತಿತ್ತು. ಅವನ ಹಲ್ಲು, ತುಟಿ ಮತ್ತು ಕಣ್ಣುಗಳು ಅದುರುತ್ತಿದ್ದುವು. ಅವನು ದರ್ಪದಿಂದ ಯುದ್ಧಾಭಿಲಾಷಿಯಾಗಿ ಬಂದನು.

೧೮. ವೀರ್ಯವಂತನಾದ ತ್ವಷ್ಟನೆಂಬ ದಾನವನು ಎಂಟು ಆನೆಗಳನ್ನು ಕಟ್ಟಿದ ಭಯಂಕರವಾದ ತೇರನ್ನೇರಿ ದಾನವರೆಲ್ಲರನ್ನೂ ಗುಂಪು ಕೂಡಿಸುವುದಕ್ಕಾಗಿ ಸುತ್ತಲೂ ಓಡಾಡಿದನು.

೧೯. ವಿಪ್ರಚಿತ್ತಿಯ ಪುತ್ರನಾದ ಶ್ವೇತನು ಬಿಳಿಯಕುಂಡಲಗಳನ್ನು ಹಾಕಿಕೊಂಡು ಬಿಳಿಯ ಬೆಟ್ಟವನ್ನು ಹೋಲುತ್ತ ಯುದ್ಧಕ್ಕಾಗಿ ಮುಂದೆ ಬಂದನು.

೨೦. ಬಲಿಯ ಪುತ್ರನೂ ದಾನವರಲ್ಲಿ ಶ್ರೇಷ್ಠನೂ ಆದ ಅರಿಷ್ಟನು ಬೆಟ್ಟವನ್ನೂ ಬಂಡೆಗಳನ್ನೂ ಆಯುಧವನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಸಿದ್ಧನಾಗಿ ಬಂದನು. ಅವನು ಬೆಟ್ಟಗಳನ್ನು ಕೂಡ ನಡುಗಿಸಬಲ್ಲವನಾಗಿದ್ದನು.

**ಕಿಶೋರಸ್ತ್ವಭಿಸಂಹರ್ಷಾತ್ಕಿಶೋರ ಇವ ಚೋದಿತಃ ।**
**ಸಬಲಾ ದಾನವಾಶ್ಚೈವ ಸನ್ನಹ್ಯಂತೇ ಯಥಾಕ್ರಮಂ ॥೨೧॥**

**ಅಭವದ್ದೈತ್ಯಸೈನ್ಯಸ್ಯ ಮಧ್ಯೇ ರವಿರಿವೋದಿತಃ ।**
**ಲಂಬಸ್ತು ನವಮೇಘಾಭಃ ಪ್ರಲಂಬಾಂಬರಭೂಷಣಃ ॥೨೨॥**

**ದೈತ್ಯವ್ಯೂಹಗತೋ ಭಾತಿ ಸನೀಹಾರ ಇವಾಂಶುಮಾನ್ ।**
**ಸ್ವರ್ಭಾನುರಾಸ್ಯಯೋಧೀ ತು ದಶನೋಷ್ಠೇಕ್ಷಣಾಯುಧಃ ॥೨೩॥**

**ಹಂಸಸ್ತಿಷ್ಠತಿ ದೈತ್ಯಾನಾಂ ಪ್ರಮುಖೇ ಸ ಮಹಾಗ್ರಹಃ ।**
**ಅನ್ಯೇ ಹಯಗತಾಸ್ತತ್ರ ಗಜಸ್ಕಂಧಗತಾಃ ಪರೇ ॥೨೪॥**

**ಸಿಂಹವ್ಯಾಘ್ರಗತಾಶ್ಚಾನ್ಯೇ ವರಾಹರ್ಕ್ಷೇಷು ಚಾಪರೇ ।**
**ಕೇಚಿತ್ಖರೋಷ್ಟ್ರಯಾತಾರಃ ಕೇಚಿಚ್ಛ್ವಾಪದವಾಹನಾಃ ॥೨೫॥**

---

೨೧. ಕಿಶೋರನಾದರೋ ಹುರಿದುಂಬಿಸಿದ ಬಾಲಕನಂತೆ ಬಹು ಸಂತೋಷಗೊಂಡನು. ಬಲಶಾಲಿಗಳಾದ ಮಿಕ್ಕ ದಾನವರೂ ಸಹ ಕ್ರಮವಾಗಿ ಯುದ್ಧ ಸನ್ನದ್ಧರಾದರು.

೨೨. ಕಾರ್ಮೋಡವನ್ನು ಹೋಲುವ ಲಂಬನು ದೈತ್ಯಸೈನ್ಯದ ಮಧ್ಯದಲ್ಲಿ ಬಾಲಸೂರ್ಯನಂತೆ ಪ್ರಕಾಶಿಸಿದನು. ಅವನ ಒಡವೆಗಳೂ ವಸ್ತ್ರಗಳೂ ಜೋಲಾಡುತ್ತಿದ್ದುವು.

೨೩. ದೈತ್ಯಸೈನ್ಯದಲ್ಲಿದ್ದ ಸ್ವರ್ಭಾನುವು ಮಂಜು ಮುಚ್ಚಿದ ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಅವನು ಬಾಯಿಂದಲೇ ಯುದ್ಧಮಾಡುತ್ತಿದ್ದನು. ಹಲ್ಲು, ತುಟಿ ಮತ್ತು ಕಣ್ಣುಗಳೇ ಆತನ ಆಯುಧಗಳಾಗಿದ್ದುವು.

೨೪. ಬಹು ಛಲವುಳ್ಳ ಹಂಸನು ದೈತ್ಯರ ಮುಂದಾಳಾಗಿ ನಿಂತನು. ಇನ್ನೂ ಉಳಿದವರಲ್ಲಿ ಕೆಲವರು ಕುದುರೆಗಳನ್ನೂ ಕೆಲವರು ಆನೆಗಳನ್ನೂ ಏರಿ ಕುಳಿತರು.

೨೫. ಉಳಿದವರು ಸಿಂಹಗಳನ್ನೂ ಹುಲಿಗಳನ್ನೂ ಹತ್ತಿದರು. ಕೆಲವರು ಹಂದಿಗಳ ಮೇಲೂ ಕರಡಿಗಳ ಮೇಲೂ ಕುಳಿತರು. ಕತ್ತೆಗಳನ್ನೂ ಒಂಟೆಗಳನ್ನೂ ಹತ್ತಿಕೊಂಡು ಕೆಲವರು ನಡೆದರು. ಕೆಲವರಿಗೆ ಘಾತುಕ ಮೃಗಗಳು ವಾಹನವಾದುವು.

ಪತ್ತಿನಸ್ತ್ವಪರೇ ದೈತ್ಯಾ ಭೀಷಣಾ ವಿಕೃತಾನನಾಃ ।
ಏಕಪಾದಾರ್ಧಪಾದಾಶ್ಚ ನನೃತುರ್ಯುದ್ಧಕಾಂಕ್ಷಿಣಃ ॥೨೬॥

ಆಸ್ಫೋಟಯಂತೋ ಬಹವಃ ಕ್ಷ್ವೇಡಂತಶ್ಚ ತಥಾಪರೇ ।
ಹೃಷ್ಟಶಾರ್ದೂಲನಿರ್ಘೋಷಾ ನೇದುರ್ದಾನವಪುಂಗವಾಃ ॥೨೭॥

ತೇ ಗದಾಪರಿಘೈರುಗ್ರೈಃ ಶಿಲಾಮುಸಲಪಾಣಯಃ ।
ಬಾಹುಭಿಃ ಪರಿಘಾಕಾರೈಸ್ತರ್ಜಯಂತಿ ಸ್ಮ ದೇವತಾಃ ॥೨೮॥

ಪಾಶೈಃ ಪ್ರಾಸೈಶ್ಚ ಪರಿಘೈಸ್ತೋಮರಾಂಕುಶಪಟ್ಟಿಶೈಃ ।
ಚಿಕ್ರೀಡುಸ್ತೇ ಶತಘ್ನೀಭಿಃ ಶತಧಾರೈಶ್ಚ ಮುದ್ಗರೈಃ ॥೨೯॥

ಗಂಡಶೈಲೈಶ್ಚ ಶೈಲೈಶ್ಚ ಪರಿಘೈಶ್ಚೋತ್ತಮಾಯಸೈಃ ।
ಚಕ್ರೈಶ್ಚ ದೈತ್ಯಪ್ರವರಾಶ್ಚಕ್ರುರಾನಂದಿತಂ ಬಲಂ ॥೩೦॥

---

೨೬. ಭಯಂಕರಾಕಾರರೂ ವಿಕಾರವಾದ ಮುಖವುಳ್ಳವರೂ ಆದ ಇನ್ನೂ ಎಷ್ಟೋ ಜನ ದೈತ್ಯರು ಕಾಲುನಡಗೆಯಲ್ಲಿ ನಡೆದರು. ಕೆಲವರಿಗೆ ಒಂದೇ ಕಾಲು. ಇನ್ನು ಕೆಲವರು ಅರೆನಡಿಗೆಯವರು. ಎಲ್ಲರೂ ಯುದ್ಧೋತ್ಸಾಹಿಗಳಾಗಿದ್ದರು.

೨೭. ಹಲವರು ಭುಜ ತಟ್ಟುತ್ತಿದ್ದರು. ಕೆಲವರು ಸಿಂಹನಾದ ಮಾಡುತ್ತಿದ್ದರು. ಇನ್ನೂ ಮಿಕ್ಕ ದಾನವಶ್ರೇಷ್ಠರು ಹರ್ಷದಿಂದ ಹುಲಿಗಳಂತೆ ಆರ್ಭಟಿಸುತ್ತ ಅಟ್ಟಹಾಸಮಾಡಿದರು.

೨೮. ಕೈಗಳಲ್ಲಿ ಬಂಡೆಗಳನ್ನೂ ಮುಸಲಗಳನ್ನೂ ಹಿಡಿದುಕೊಂಡು ಅವರು ಭಯಂಕರಗಳಾದ ಗದೆಗಳಿಂದಲೂ, ಪರಿಘಗಳಿಂದಲೂ, ಪರಿಘಾಕಾರವಾದ ಬಾಹುಗಳಿಂದಲೂ ದೇವತೆಗಳನ್ನು ಹೆದರಿಸಿದರು.

೨೯. ಅವರು ಪಾಶ, ಪ್ರಾಸ, ಪರಿಘ, ತೋಮರ, ಅಂಕುಶ, ಪಟ್ಟಿಶ, ಶತಘ್ನಿ, ಹರಿತವಾದ ಅಲಗುಗಳಿಂದ ಕೂಡಿದ ಮುದ್ಗರ ಮೊದಲಾದ ಆಯುಧಗಳಿಂದ ಕ್ರೀಡಿಸುತ್ತಿದ್ದರು.

೩೦. ಆ ದೈತ್ಯೋತ್ತಮರು ಬಂಡೆಗಳಿಂದಲೂ, ಬೆಟ್ಟಗಳಿಂದಲೂ, ಪರಿಘಗಳಿಂದಲೂ ತಮ್ಮ ಸೈನ್ಯವನ್ನು ಆನಂದಗೊಳಿಸುತ್ತಿದ್ದರು.

ಏತದ್ದಾನವಸೈನ್ಯಂ ತತ್ಸರ್ವಂ ಯುದ್ಧಮದೋತ್ಕಟಂ ।
ದೇವಾನಭಿಮುಖೇ ತಸ್ಥೌ ಮೇಘಾನೀಕಮಿವೋದ್ಧತಂ ॥೩೧॥

ತದದ್ಭುತಂ ದೈತ್ಯಸಹಸ್ರಗಾಢಂ
ವಾಯ್ವಗ್ನಿಶೈಲಾಂಬುದತೋಯಕಲ್ಪಂ ।
ಬಲಂ ರಣೌಘಾಭ್ಯುದಯೇಽಭ್ಯುದೀರ್ಣಂ
ಯುಯುತ್ಸಯೋನ್ಮತ್ತಮಿವಾಬಭಾಸೇ ॥೩೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಸಂಗ್ರಾಮೇ
ತ್ರಿಸಪ್ತತ್ಯಧಿಕ ಶತತಮೋಽಧ್ಯಾಯಃ

---

೩೧. ಯುದ್ಧದ ಮದದಿಂದ ಕೂಡಿದ ಈ ದಾನವ ಸೈನ್ಯವೆಲ್ಲವೂ ಅಬ್ಬರಿಸುವ ಮೋಡಗಳ ಗಡಣದಂತೆ ದೇವತೆಗಳಿಗೆ ಎದುರಾಗಿ ನಿಂತಿತು.

೩೨. ಸಾವಿರಾರು ಜನ ದೈತ್ಯರಿಂದ ತುಂಬಿ ವಾಯು, ಅಗ್ನಿ, ಪರ್ವತ, ಮೇಘ, ಜಲ ಇವುಗಳಂತೆ ಅಪಾರವಾಗಿರುವ ಆ ಅದ್ಭುತವಾದ ಸೈನ್ಯವು ಯುದ್ಧದಲ್ಲಿ ಜಯ ಪಡೆಯಬೇಕೆಂದು ಹೊರಟಿತು. ಯುದ್ಧಾಭಿಲಾಷೆಯಿಂದ ಅದು ಉನ್ಮತ್ತವಾದಂತೆ ಕಂಡಿತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದೈತ್ಯಸೈನ್ಯದ ಯುದ್ಧಪ್ರಯಾಣವನ್ನು ವರ್ಣಿಸಿದೆ.

ವಿಷ್ಣು ದೇವತೆಗಳಿಗೆ ಅಭಯವಿತ್ತುದನ್ನು ಕೇಳಿ ದೈತ್ಯರೆಲ್ಲರೂ ಯುದ್ಧ ಪ್ರಯತ್ನವನ್ನು ಬಲಗೊಳಿಸಿದರು. ಮಯ, ವಿರೋಚನ, ವಾರಾಹ ಮುಂತಾದ ದೈತ್ಯವೀರರು ತಮ್ಮ ತಮ್ಮ ರಥಗಳನ್ನೇರಿದರು. ಮಿಕ್ಕವರನೇಕರು ಆನೆಗಳನ್ನೂ, ಕುದುರೆಗಳನ್ನೂ, ಒಂಟೆಗಳನ್ನೂ ಹತ್ತಿ ನಡೆದರು. ಇಂತಹ ಅದ್ಭುತಸೈನ್ಯವು ಯುದ್ಧಾಭಿಲಾಷೆಯಿಂದ ದೇವತೆಗಳಿಗೆ ಅಭಿಮುಖವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯಸಂಗ್ರಾಮದಲ್ಲಿ
ನೂರೆಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುಃಸಪ್ತತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಶ್ರುತಸ್ತೇ ದೈತ್ಯಸೈನ್ಯಸ್ಯ ವಿಸ್ತರೋ ರವಿನಂದನ ।
ಸುರಾಣಾಮಪಿ ಸೈನ್ಯಸ್ಯ ವಿಸ್ತರಂ ವೈಷ್ಣವಂ ಶೃಣು || ೧ ||

ಆದಿತ್ಯಾ ವಸವೋ ರುದ್ರಾ ಅಶ್ವಿನೌ ಚ ಮಹಾಬಲೌ ।
ಸಬಲಾಃ ಸಾನುಗಾಶ್ಚೈವ ಸನ್ನಹ್ಯಂತ ಯಥಾಕ್ರಮಂ || ೨ ||

ಪುರುಹೂತಸ್ತು ಪುರತೋ ಲೋಕಪಾಲಃ ಸಹಸ್ರದೃಕ್ ।
ಗ್ರಾಮಣೀಃ ಸರ್ವದೇವಾನಾಮಾರುರೋಹ ಸುರದ್ವಿಪಂ || ೩ ||

ಮಧ್ಯೇ ಚಾಸ್ಯ ರಥಃ ಸರ್ವಪಕ್ಷಿಪ್ರವರರಂಹಸಃ ।
ಸುಚಾರುಚಕ್ರಚರಣೋ ಹೇಮವಜ್ರಪರಿಷ್ಕೃತಃ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸೂರ್ಯಪುತ್ರನಾದ ಎಲೈ ವೈವಸ್ವತಮನೂ, ದೈತ್ಯಸೈನ್ಯದ ವಿವರವನ್ನು ನೀನು ತಿಳಿದೆ. ಇನ್ನು ದೇವತೆಗಳ ಸೈನ್ಯದ ವಿಸ್ತಾರವನ್ನೂ ಕೇಳು.

೨. ಆದಿತ್ಯರು, ವಸುಗಳು, ರುದ್ರರು, ಮಹಾಬಲರಾದ ಅಶ್ವಿನೀದೇವತೆಗಳು ಇವರು ತಮ್ಮ ತಮ್ಮ ಬಲಗಳೊಡನೆಯೂ ಅನುಚರರೊಡನೆಯೂ ಕ್ರಮವಾಗಿ ಯುದ್ಧಸನ್ನದ್ಧರಾದರು.

೩. ಲೋಕಪಾಲಕನೂ, ಸಹಸ್ರಾಕ್ಷನೂ, ಸಕಲ ದೇವತೆಗಳ ನಾಯಕನೂ ಆದ ಇಂದ್ರನು ಎಲ್ಲರಿಗಿಂತಲೂ ಮುಂದೆ ಐರಾವತವನ್ನು ಏರಿ ನಡೆದನು.

೪-೫. ಗರುತ್ಮಂತನಂತೆ ವೇಗಶಾಲಿಯಾದ ಈ ಇಂದ್ರನ ರಥವು ದೇವತೆಗಳ ಸೈನ್ಯದ ನಡುವೆ ಇದ್ದಿತು. ಅದು ಚಿನ್ನದಿಂದಲೂ ವಜ್ರದಿಂದಲೂ ಅಲಂಕೃತವಾಗಿ ಸುಂದರವಾದ ಚಕ್ರಗಳಿಂದಲೂ ಅಡಿಯ ಮರಗಳಿಂದಲೂ ಕೂಡಿದ್ದಿತು.

ದೇವಗಂಧರ್ವಯಕ್ಷೈಶ್ಚೈರನುಯಾತಃ ಸಹಸ್ರಶಃ ।
ದೀಪ್ತಿಮದ್ಭಿಃ ಸದಸ್ಯೈಶ್ಚ ಬ್ರಹ್ಮರ್ಷಿಭಿರಭಿಷ್ಟುತಃ ॥ ೫ ॥

ವಜ್ರನಿಸ್ಫೂರ್ಜಿತೋದ್ಧೂತೈರ್ವಿದ್ಯುದಿಂದ್ರಾಯುಧೋದಿತೈಃ ।
ಯುಕ್ತೋ ಬಲಾಹಕಗಣೈಃ ಪರ್ವತೈರಿವ ಕಾಮಗೈಃ ॥ ೬ ॥

ಯಮಾರೂಢಃ ಸ ಭಗವಾನ್ ಪರ್ಯೇತಿ ಸಕಲಂ ಜಗತ್ ।
ಹವಿರ್ಧಾನೇಷು ಗಾಯಂತಿ ವಿಪ್ರಾ ಮಖಮುಖೇ ಸ್ಥಿತಾಃ ॥ ೭ ॥

ಸ್ವರ್ಗೇ ಶಕ್ರಾನುಯಾತೇಷು ದೇವತೂರ್ಯನಿನಾದಿಷು ।
ಸುಂದರ್ಯಃ ಪರಿನೃತ್ಯಂತಿ ಶತಶೋಽಪ್ಸರಸಾಂ ಗಣಾಃ ॥ ೮ ॥

ಕೇತುನಾ ನಾಗರಾಜೇನ ರಾಜಮಾನೋ ಯಥಾ ರವಿಃ ।
ಯುಕ್ತೋ ಹಯಸಹಸ್ರೇಣ ಮನೋಮಾರುತರಂಹಸಾ ॥ ೯ ॥

---

ದೇವತೆಗಳೂ, ಗಂಧರ್ವರೂ, ಯಕ್ಷರೂ ಸಾವಿರಗಟ್ಟಲೆಯಾಗಿ ಅದರ ಹಿಂದೆ ನಡೆಯುತ್ತಿದ್ದರು. ತೇಜಸ್ವಿಗಳಾದ ಸಭಾಸದರೂ ಬ್ರಹ್ಮರ್ಷಿಗಳೂ ವಿಶೇಷವಾಗಿ ಹೊಗಳಿದರು.

೬. ಸಿಡಿಲುಗಳ ಅಬ್ಬರದಿಂದಲೂ, ಮಿಂಚುಗಳಿಂದಲೂ, ಕಾಮನಬಿಲ್ಲು ಗಳಿಂದಲೂ ಕೂಡಿದ ಮೋಡಗಳು ಅದನ್ನು ಸುತ್ತುವರಿದಿದ್ದುವು. ಅವು ಸ್ವೇಚ್ಛೆ ಯಿಂದ ಸಂಚರಿಸಬಲ್ಲ ಪರ್ವತಗಳನ್ನು ಹೋಲುತ್ತಿದ್ದುವು.

೭. ಪೂಜ್ಯನಾದ ಇಂದ್ರನು ಆ ತೇರನ್ನೇರಿಯೇ ಸಕಲ ಜಗತ್ತುಗಳಲ್ಲಿಯೂ ಸಂಚರಿಸುತ್ತಿದ್ದನು. ಆ ಕಾಲದಲ್ಲಿ ಬ್ರಾಹ್ಮಣರು ಯಜ್ಞಶಾಲೆಗಳಲ್ಲಿ ಯಜ್ಞಗಳನು ಪ್ರಾರಂಭಿಸಿ ಗಾನಮಾಡುತ್ತಿದ್ದರು.

೮. ಮಂಗಳವಾದ್ಯಗಳನ್ನು ಬಾರಿಸುತ್ತ ದೇವಗಾಯಕರು ಇಂದ್ರನನ್ನು ಅನುಸರಿಸಿ ಹೋದರು. ಸುಂದರಿಯರಾದ ಅಪ್ಸರಸ್ತ್ರೀಯರು ನೂರಾರು ಮಂದಿ ನರ್ತನಮಾಡಿದರು.

೯-೧೦. ಇಂದ್ರನ ಆ ರಥವು ಐರಾವತದ ಧ್ವಜದಿಂದ ಕೂಡಿ ಸೂರ್ಯ ನಂತೆ ಪ್ರಕಾಶಿಸುತ್ತಿತ್ತು. ಮನಸ್ಸಿನಂತೆ, ವಾಯುವಿನಂತೆ ವೇಗಶಾಲಿಗಳಾದ ಸಾವಿರ

**ಸ ಸ್ಯಂದನವರೋ ಭಾತಿ ಗುಪ್ತೋ ಮಾತಲಿನಾ ತದಾ ।**
**ಕೃತ್ಸ್ನಃ ಪರಿವೃತೋ ಮೇರುರ್ಭಾಸ್ಕರಸ್ಯೇವ ತೇಜಸಾ ॥೧೦॥**

**ಯಮಸ್ತು ದಂಡಮುದ್ಯಮ್ಯ ಕಾಲಯುಕ್ತಂ ಚ ಮುದ್ಗರಂ ।**
**ತಸ್ಥೌ ಸುರಗಣಾನೀಕೇ ದೈತ್ಯಾನ್ ನಾದೇನ ಭೀಷಯನ್ ॥೧೧॥**

**ಚತುರ್ಭಿಃ ಸಾಗರೈರ್ಯುಕ್ತೋ ಲೇಲಿಹಾನೈಶ್ಚ ಪನ್ನಗೈಃ ।**
**ಶಂಖಮುಕ್ತಾಂಗದಧರೋ ಬಿಭ್ರತ್ತೋಯಮಯಂ ವಪುಃ ॥೧೨॥**

**ಕಾಲಪಾಶಾನ್ಸಮಾವಿಧ್ಯನ್ಹಯೈಃ ಶಶಿಕರೋಪಮೈಃ ।**
**ವಾಯ್ವೀರಿತಜಲಾಕಾರೈಃ ಕುರ್ವಂಲ್ಲೀಲಾಃ ಸಹಸ್ರಶಃ ॥೧೩॥**

**ಪಾಂಡುರೋದ್ಧೂತವಸನಃ ಪ್ರವಾಲರುಚಿರಾಂಗದಃ ।**
**ಮಣಿಶ್ಯಾಮೋತ್ತಮವಪುರ್ಹಾರಭಾರಾರ್ಪಿತೋದರಃ ॥೧೪॥**

---

ಕುದುರೆಗಳನ್ನು ಅದಕ್ಕೆ ಹೂಡಿದ್ದರು. ಸಾರಥಿಯಾದ ಮಾತಲಿಯ ರಕ್ಷಣೆಗೊಳ ಪಟ್ಟು ಅದು ಸೂರ್ಯನ ತೇಜಸ್ಸಿನಿಂದ ಆವೃತವಾದ ಮೇರುಪರ್ವತದಂತೆ ಕಂಗೊಳಿಸಿತು.

೧೧. ಯಮನಾದರೋ ದಂಡ, ಕಾಲಪಾಶ ಮತ್ತು ಮುದ್ಗರಾಯುಧ ಗಳನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಸಿಂಹನಾದದಿಂದ ದೈತ್ಯರನ್ನು ಹೆದರಿಸುತ ದೇವಸೈನ್ಯದ ನಡುವೆ ಪ್ರಕಾಶಿಸುತ್ತಿದ್ದನು.

೧೨-೧೫. ನೀಲಮಣಿಯಂತೆ ಶರೀರವೊಪ್ಪುತ್ತಿರಲು, ಉತ್ತಮವಾದ ಹಾರವು ಎದೆಯಲ್ಲಿ ಪ್ರಕಾಶಿಸುತ್ತಿರಲು, ಪಾಶಾಯುಧವನ್ನು ಹಿಡಿದು ವರುಣನು ಯುದ್ಧದ ಸಮಯವನ್ನು ಇದಿರು ನೋಡುತ್ತ, ದಡವನ್ನು ಮೀರಿದ ಸಮುದ್ರದಂತೆ ದೇವಸೈನ್ಯದ ಮಧ್ಯದಲ್ಲಿ ವಿರಾಜಿಸುತ್ತಿದ್ದನು. ಅವನೊಡನೆ ಚತುಸ್ಸಾಗರಗಳೂ, ಸರ್ಪಗಳೂ, ನಾಗಗಳೂ ಇದ್ದುವು. ಅವನು ಜಲಮಯವಾದ ದೇಹವುಳ್ಳವನಾಗಿ ಶಂಖವನ್ನೂ ಮುತ್ತಿನ ತೋಳುಬಳೆಯನ್ನೂ ಧರಿಸಿದ್ದನು. ಕಾಲಪಾಶಗಳನ್ನು ಬೀಸುತ್ತಿದ್ದನು. ಚಂದ್ರನ ಕಿರಣಗಳಂತೆ ಬೆಳ್ಳಗಿರುವ ಮತ್ತು ಗಾಳಿಯ ಹೊಡೆತ

ವರುಣಃ ಪಾಶಧೃನ್ಮಧ್ಯೇ ದೇವಾನೀಕಸ್ಯ ತಸ್ಥಿವಾನ್ ।
ಯುದ್ಧವೇಲಾಮಭಿಲಷನ್ಭಿನ್ನವೇಲ ಇವಾರ್ಣವಃ ॥೧೫॥

ಯಕ್ಷರಾಕ್ಷಸಸೈನ್ಯೇನ ಗುಹ್ಯಕಾನಾಂ ಗಣೈರಪಿ ।
ಯುಕ್ತಶ್ಚ ಶಂಖಪದ್ಮಾಭ್ಯಾಂ ನಿಧೀನಾಮಧಿಪಃ ಪ್ರಭುಃ ॥೧೬॥

ರಾಜರಾಜೇಶ್ವರಃ ಶ್ರೀಮಾನ್ ಗದಾಪಾಣಿರದೃಶ್ಯತ ।
ವಿಮಾನಯೋಧೀ ಧನದೋ ವಿಮಾನೇ ಪುಷ್ಪಕೇ ಸ್ಥಿತಃ ॥೧೭॥

ಸ ರಾಜರಾಜಃ ಶುಶುಭೇ ಯುದ್ಧಾರ್ಥೀ ನರವಾಹನಃ ।
ಉಕ್ಷಾಣಮಾಸ್ಥಿತಃ ಸಂಖ್ಯೇ ಸಾಕ್ಷಾದಿವ ಶಿವಃ ಸ್ವಯಂ ॥೧೮॥

ಪೂರ್ವಪಕ್ಷಂ ಸಹಸ್ರಾಕ್ಷಃ ಪಿತೃರಾಜಸ್ತು ದಕ್ಷಿಣಂ ।
ವರುಣಃ ಪಶ್ಚಿಮಂ ಪಕ್ಷಮುತ್ತರಂ ನರವಾಹನಃ ॥೧೯॥

---

ದಿಂದ ಅಲೆಗಳೆದ್ದ ಜಲಾಶಯದ ನೀರಿನಂತೆ ಚಂಚಲವಾದ ಅವನ ಕುದುರೆಗಳು ಸಾವಿರಾರು ತೆರನಾಗಿ ಕ್ರಿಡಿಸುತ್ತಿದ್ದುವು. ಅವನುಟ್ಟಿದ್ದ ಶುಭ್ರವಸ್ತ್ರವು ಓಲಾಡುತ್ತಿತ್ತು. ಸುಂದರವಾದ ಹವಳದ ತೋಳು ಬಳೆಯನ್ನು ಅವನು ತೊಟ್ಟಿದ್ದನು.

೧೬-೧೭. ನಿಧಿಗಳ ಅಧಿಪತಿಯೂ, ರಾಜರಾಜೇಶ್ವರನೂ, ಕಾಂತಿ ಸಂಪನ್ನನೂ, ವಿಮಾನ ಯುದ್ಧದಲ್ಲಿ ಶೂರನೂ ಆದ ಕುಬೇರನು ಗದಾಹಸ್ತನಾಗಿ ಪುಷ್ಪಕವಿಮಾನದಲ್ಲಿ ಕುಳಿತಿದ್ದನು. ಅವನೊಡನೆ ಯಕ್ಷರಾಕ್ಷಸರ ಸೈನ್ಯವೂ ಗುಹ್ಯಕರ ಗಣಗಳೂ ಇದ್ದುವು. ಶಂಖ ಪದ್ಮಗಳೆಂಬ ನಿಧಿಗಳು ಅವನನ್ನು ಓಲೈಸುತ್ತಿದ್ದುವು.

೧೮. ಯುದ್ಧಾಸಕ್ತನಾದ ಆ ಕುಬೇರನು ವೃಷಭಾರೂಢನಾಗಿ ಯುದ್ಧಕ್ಕೆ ತೊಡಗಿದ ಸಾಕ್ಷಾತ್ಪರಮೇಶ್ವರನಂತೆ ಪ್ರಕಾಶಿಸುತ್ತಿದ್ದನು.

೧೯-೨೦. ಬಹು ಬಲಿಷ್ಠರಾದ ನಾಲ್ವರು ಲೋಕಪಾಲಕರು ಆ ದೇವ ಸೈನ್ಯದ ನಾಲ್ಕು ದಿಕ್ಕುಗಳಲ್ಲಿಯೂ ಅಧಿಕೃತರಾಗಿ ಅದನ್ನು ರಕ್ಷಿಸಿದರು. ಇಂದ್ರನು

**ಚತುರ್ಷು ಯುಕ್ತಾಶ್ಚತ್ವಾರೋ ಲೋಕಪಾಲಾ ಮಹಾಬಲಾಃ ।**
**ಸ್ವಾಸು ದಿಕ್ಷು ಸ್ವರಕ್ಷಂತ ತಸ್ಯ ದೇವಬಲಸ್ಯ ತೇ ॥೨೦॥**

**ಸೂರ್ಯಃ ಸಪ್ತಾಶ್ವಯುಕ್ತೇನ ರಥೇನಾಮಿತಗಾಮಿನಾ ।**
**ಶ್ರಿಯಾ ಜಾಜ್ವಲ್ಯಮಾನೇನ ದೀಪ್ಯಮಾನೈಶ್ಚ ರಶ್ಮಿಭಿಃ ॥೨೧॥**

**ಉದಯಾಸ್ತಗಚಕ್ರೇಣ ಮೇರುಪರ್ವತಗಾಮಿನಾ ।**
**ತ್ರಿದಿವದ್ವಾರಚಕ್ರೇಣ ತಪತಾ ಲೋಕಮವ್ಯಯಂ ॥೨೨॥**

**ಸಹಸ್ರರಶ್ಮಿಯುಕ್ತೇನ ಭ್ರಾಜಮಾನೇನ ತೇಜಸಾ ।**
**ಚಚಾರ ಮಧ್ಯೇ ಲೋಕಾನಾಂ ದ್ವಾದಶಾತ್ಮಾ ದಿನೇಶ್ವರಃ ॥೨೩॥**

**ಸೋಮಃ ಶ್ವೇತಹಯೋ ಭಾತಿ ಸ್ಯಂದನೇ ಶೀತರಶ್ಮಿರ್ವಾ ।**
**ಹಿಮವತ್ತೋಯಪೂರ್ಣಾಭಿರ್ಭಾಭಿರಾಹ್ಲಾದಯಜ್ಜಗತ್ ॥೨೪॥**

---

ಪೂರ್ವಪಾರ್ಶ್ವವನ್ನೂ, ಯಮನು ದಕ್ಷಿಣಭಾಗವನ್ನೂ, ವರುಣನು ಪಶ್ಚಿಮ ಪಕ್ಷವನ್ನೂ ಕುಬೇರನು ಉತ್ತರ ಪಾರ್ಶ್ವವನ್ನೂ ನೋಡಿಕೊಳ್ಳುತ್ತಿದ್ದರು.

೨೧-೨೩ ದ್ವಾದಶಾದಿತ್ಯರೂಪನೂ, ದಿನಾಧಿಪತಿಯೂ ಆದ ಸೂರ್ಯದೇವನು ಸಾವಿರಾರು ಕಿರಣಗಳ ತೇಜಸ್ಸಿನಿಂದ ಕೂಡಿ ಲೋಕಗಳ ಮಧ್ಯದಲ್ಲಿ ಸಂಚರಿಸುತ್ತಿದ್ದನು. ಆತನು ಎಷ್ಟು ದೂರವಾದರೂ ಹೋಗಬಲ್ಲ ಏಳು ಕುದುರೆಗಳನ್ನು ಹೂಡಿದ ತೇರನ್ನೇರಿದ್ದನು. ಅದು ಕಾಂತಿಯಿಂದ ಬೆಳಗುತ್ತ ಪ್ರಕಾಶಯುಕ್ತವಾದ ಕಿರಣಗಳನ್ನು ಬೀರುತ್ತಿತ್ತು. ಉದಯ ಪರ್ವತದ ಮೇಲೂ ಅಸ್ತಪರ್ವತದ ಮೇಲೂ ಅದರ ಚಕ್ರವು ಹರಿಯುತ್ತಿತ್ತು. ಅದು ಮೇರು ಪರ್ವತದ ಸುತ್ತಲೂ ಸಂಚರಿಸುತ್ತಿತ್ತು. ಸ್ವರ್ಗದ ಬಾಗಿಲಿನ ಚಕ್ರದಂತಿದ್ದು ಲೋಕವೆಲ್ಲವನ್ನೂ ಬೆಳಗುತ್ತಿತ್ತು.

೨೪. ತಂಪಾದ ಕಿರಣಗಳಿಂದ ಕೂಡಿದ ಚಂದ್ರನು ಬಿಳಿಯ ಕುದುರೆಗಳನ್ನು ಕಟ್ಟಿದ್ದ ತೇರಿನಲ್ಲಿ ವಿರಾಜಿಸಿದನು. ಹಿಮಜಲದಿಂದ ತುಂಬಿದ ಅವನ ಕಿರಣಗಳು ಜಗತ್ತನ್ನು ಆನಂದಗೊಳಿಸುತ್ತಿದ್ದುವು.

ತಮೃಕ್ಷಪೂಗಾನುಗತಂ ಶಿಶಿರಾಂಶುಂ ದ್ವಿಜೇಶ್ವರಂ |
ಶಶಚ್ಛಾಯಾಂಕಿತತನುಂ ನೈಶಸ್ಯ ತಮಸಃ ಕ್ಷಯಂ ||೨೫||

ಜ್ಯೋತಿಷಾಮೀಶ್ವರಂ ವ್ಯೋಮ್ನಿ ರಸಾನಾಂ ರಸದಂ ಪ್ರಭುಂ |
ಓಷಧೀನಾಂ ಸಹಸ್ರಾಣಾಂ ನಿಧಾನಮಮೃತಸ್ಯ ಚ ||೨೬||

ಜಗತಃ ಪ್ರಥಮಂ ಭಾಗಂ ಸೌಮ್ಯಂ ಸತ್ಯಮಯಂ ರಥಂ |
ದದೃಶುರ್ದಾನವಾಃ ಸೋಮಂ ಹಿಮಪ್ರಹರಣಂ ಸ್ಥಿತಂ ||೨೭||

ಯಃ ಪ್ರಾಣಃ ಸರ್ವಭೂತಾನಾಂ ಪಂಚಧಾ ಭಿದ್ಯತೇ ನೃಷು |
ಸಪ್ತಧಾತುಗತೋ ಲೋಕಾಂಸ್ತ್ರೀನ್ ದಧಾರ ಚಚಾರ ಚ ||೨೮||

ಯಮಾಹುರಗ್ನಿಕರ್ತಾರಂ ಸರ್ವಪ್ರಭವಮೀಶ್ವರಂ |
ಸಪ್ತಸ್ವರಗತೋ ಯಶ್ಚ ನಿತ್ಯಂ ಗೀರ್ಭಿರುದೀರ್ಯತೇ ||೨೯||

ಯಂ ವದಂತ್ಯುತ್ತಮಂ ಭೂತಂ ಯಂ ವದಂತ್ಯಶರೀರಿಣಂ |
ಯಮಾಹುರಾಕಾಶಗಮಾ ಶ್ರೀಘ್ರಗಂ ಶಬ್ದಯೋನಿಜಂ ||೩೦||

---

೨೫-೨೭. ಲೋಕಕ್ಕೆ ಅತಿಮುಖ್ಯನೆನಿಸಿದ ಸೌಮ್ಯರೂಪನಾದ ಚಂದ್ರನು ಸತ್ಯಮಯವಾದ ರಥದಲ್ಲಿ ಕುಳಿತಿದ್ದುದನ್ನು ದಾನವರು ಕಂಡರು. ಅವನನ್ನು ನಕ್ಷತ್ರ ಮಂಡಲಗಳು ಅನುಸರಿಸುತ್ತಿದ್ದುವು. ದ್ವಿಜೇಶ್ವರನಾದ ಅವನ ಕಿರಣಗಳು ಹಿಮ ಮಯವಾಗಿದ್ದುವು. ಮೊಲದ ಮಚ್ಚೆಯ ಗುರುತು ಅವನ ದೇಹದಲ್ಲಿತ್ತು. ರಾತ್ರಿಯ ಅಂಧಕಾರವನ್ನು ತೊಲಗಿಸಬಲ್ಲವನು ಅವನೇ. ಗ್ರಹನಕ್ಷತ್ರಗಳ ಅಧಿಪತಿಯೂ, ರಸದ್ರವ್ಯಗಳಿಗೆ ರಸವನ್ನು ಕೊಡತಕ್ಕವನೂ, ಸಾವಿರಾರು ಬಗೆಯ ಓಷಧಿಗಳಿಗೂ ಅಮೃತಕ್ಕೂ ಆಶ್ರಯನೂ ಆತನೇ.

೨೮-೩೧. ಸಕಲ ಜೀವಜಂತುಗಳ ಆಯುಸ್ಸ್ವರೂಪನಾದ ವಾಯುವು ತನ್ನ ತೇಜಸ್ಸಿನಿಂದ ರೌದ್ರನಾಗಿ, ದೈತ್ಯರಿಗೆ ವ್ಯಥೆಯನ್ನು ಹುಟ್ಟಿಸುತ್ತ, ಮೋಡಗಳೊಡ ಗೂಡಿ ಪ್ರತಿಕೂಲನಾಗಿ ಬೀಸುತ್ತಿದ್ದನು. ಅವನು ಎಲ್ಲ ಜೀವರಾಶಿಗಳಿಗೂ ಪ್ರಾಣ ವೆನಿಸಿರುವನು. ಪ್ರಾಣಾಪಾನಾದಿ ಪಂಚವಿಧವಾಗಿ ಮನುಷ್ಯರ ದೇಹದಲ್ಲಿ ಸಂಚರಿಸು ವನು. ಚರ್ಮ, ರಕ್ತ, ಮಾಂಸ ಮೊದಲಾದ ಸಪ್ತಧಾತುಗಳಲ್ಲಿ ಸೇರಿ ಮೂರು

ಸ ವಾಯುಃ ಸರ್ವಭೂತಾಯುರುದ್ಧತಃ ಸ್ವೇನ ತೇಜಸಾ ।
ವವೌ ಪ್ರವ್ಯಥಯರ್ನ ದೈತ್ಯಾನ್ಪ್ರತಿಲೋಮಂ ಸತೋಯದಃ ॥೩೧॥

ಮರುತೋ ದೇವಗಂಧರ್ವೈರ್ವಿದ್ಯಾಧರಗಣೈಃ ಸಹ ।
ಚಿಕ್ರೀಡುರಸಿಭಿಃ ಶುಭ್ರೈರ್ನಿರ್ಮುಕ್ತೈರಿವ ಪನ್ನಗೈಃ ॥೩೨॥

ಸೃಜಂತಃ ಸರ್ಪಪತಯಸ್ತೀವ್ರತೋಯಮಯಂ ವಿಷಂ ।
ಶರಭೂತಾ ದಿವೀಂದ್ರಾಣಾಂ ಚೇರುರ್ವ್ಯಾತ್ತಾನನಾ ದಿವಿ ॥೩೩॥

ಪರ್ವತೈಶ್ಚ ಶಿಲಾಶೃಂಗೈಃ ಶತಶಶ್ಚೈವ ಪಾದಪೈಃ ।
ಉಪತಸ್ಥುಃ ಸುರಗಣಾಃ ಪ್ರಹರ್ತುಂ ದಾನವಂ ಬಲಂ ॥೩೪॥

ಯಃ ಸ ದೇವೋ ಹೃಷೀಕೇಶಃ ಪದ್ಮನಾಭಸ್ತ್ರಿವಿಕ್ರಮಃ ।
ಯುಗಾಂತೇ ಕೃಷ್ಣವರ್ಣಾಭೋ ವಿಶ್ವಸ್ಯ ಜಗತಃ ಪ್ರಭುಃ ॥೩೫॥

ಸರ್ವಯೋನಿಃ ಸ ಮಧುಹಾ ಹವ್ಯಭುಕ್ ಕ್ರತುಸಂಸ್ಥಿತಃ ।
ಭೂಮ್ಯಾಪೋವ್ಯೋಮಭೂತಾತ್ಮಾ ಶ್ಯಾಮಃ ಶಾಂತಿಕರೋಽರಿಹಾ ॥೩೬॥

---

ಲೋಕಗಳನ್ನೂ ರಕ್ಷಿಸುವನು ; ಸಂಚರಿಸುವನು. ಆತನನ್ನು ಅಗ್ನಿಯ ಉತ್ಪಾದಕನೆಂದೂ, ಸರ್ವಕಾರಣನೆಂದೂ ಈಶ್ವರನೆಂದೂ ಹೇಳುವರು. ನಿಷಾದ, ಋಷಭ, ಮುಂತಾದ ಸಪ್ತಸ್ವರಗಳ ಮೂಲಕವಾಗಿ ನಿತ್ಯವೂ ವಿಧವಿಧವಾದ ವಾಗ್ರೂಪದಿಂದ ಉಚ್ಚರಿಸಲ್ಪಡುತ್ತಿರುವನು. ಅವನು ಪಂಚಭೂತಗಳಲ್ಲಿ ಉತ್ತಮ, ಅಶರೀರ, ಆಕಾಶ ಸಂಚಾರಿ, ಶೀಘ್ರಗಾಮಿ, ಆಕಾಶದಿಂದ ಉತ್ಪನ್ನನಾದವನು.

೩೩. ಶ್ರೇಷ್ಠವಾದ ಸರ್ಪಗಳು ದೇವತೆಗಳ ಬಾಣಗಳಾಗಿ ಜಲಮಯವಾದ ಉಗ್ರವಿಷವನ್ನು ಕಾರುತ್ತ, ಬಾಯನ್ನು ತೆರೆದುಕೊಂಡು ಆಕಾಶದಲ್ಲಿ ಓಡಾಡಿದುವು.

೩೪. ದೇವತೆಗಳು ದಾನವರ ಸೈನ್ಯವನ್ನು ಪ್ರಹರಿಸುವುದಕ್ಕಾಗಿ ಪರ್ವತಗಳು ಗಿರಿಶಿಖರಗಳು, ಮರಗಳು, ಇವುಗಳನ್ನು ಅಪರಿಮಿತವಾಗಿ ತೆಗೆದುಕೊಂಡು ಬಂದರು.

೩೫-೩೯. ಹೃಷೀಕೇಶನೂ, ಪದ್ಮನಾಭನೂ ತ್ರಿವಿಕ್ರಮನೂ, ಯುಗಾಂತದಲ್ಲಿ ಕೃಷ್ಣವರ್ಣನೂ, ಸಕಲ ಜಗದಧೀಶ್ವರನೂ, ಸಕಲಕಾರಣನೂ, ಮಧುವೈರಿಯೂ,

ಅರಿಷ್ಟಮಮುರಾದೀನಾಂ ಚಕ್ರಂ ಗೃಹ್ಯ ಗದಾಧರಃ ।
ಅರ್ಕಂ ನಗಾದಿವೋದ್ಯಂತಮುದ್ಯನ್ಯೋತ್ತಮತೇಜಸಾ ॥೩೭॥

ಸವ್ಯೇನಾಲಂಬ್ಯ ಮಹತೀಂ ಸರ್ವಾಸುರವಿನಾಶಿನೀಂ ।
ಕರೇಣ ಕಾಲೀಂ ವಪುಷಾ ಶತ್ರುಕಾಲಪ್ರದಾಂ ಗದಾಂ ॥೩೮॥

ಅನ್ಯೈರ್ಭುಜೈಃ ಪ್ರದೀಪ್ತಾಭೈರ್ಭುಜಗಾರಿಧ್ವಜಃ ಪ್ರಭುಃ ।
ದಧಾರಾಯುಧಜಾತಾನಿ ಶಾರ್ಙ್ಗಾದೀನಿ ಮಹಾಬಲಃ ॥೩೯॥

ಸ ಕಶ್ಯಪಸ್ಯಾತ್ಮಭುವಂ ದ್ವಿಜಂ ಭುಜಗಭೋಜನಂ ।
ಪವನಾಧಿಕಸಂಪಾತಂ ಗಗನಕ್ಷೋಭಣಂ ಖಗಂ ॥೪೦॥

ಭುಜಗೇಂದ್ರೇಣ ವದನೇ ನಿವಿಷ್ಟೇನ ವಿರಾಜಿತಂ ।
ಅಮೃತಾರಂಭನಿರ್ಮುಕ್ತಂ ಮಂದರಾದ್ರಿಮಿವೋಚ್ಛ್ರಿತಂ ॥೪೧॥

ದೇವಾಸುರವಿಮರ್ದೇಷು ಬಹುಶೋ ದೃಷ್ಟವಿಕ್ರಮಂ ।
ಮಹೇಂದ್ರೇಣಾಮೃತಸ್ಯಾರ್ಥೇ ವಜ್ರೇಣ ಕೃತಲಕ್ಷಣಂ ॥೪೨॥

---

ಯಜ್ಞದ ಅಧಿದೇವತೆಯಾಗಿ ಹವ್ಯವನ್ನು ಭುಂಜಿಸತಕ್ಕವನೂ, ಪಂಚಭೂತಾತ್ಮಕನೂ, ಶ್ಯಾಮವರ್ಣನೂ, ಶಾಂತಿಕಾರಿಯೂ, ಶತ್ರುನಾಶಕನೂ ಆದ ಮಹಾವಿಷ್ಣುವು ದೇವತೆಗಳೇ ಮೊದಲಾದ ಸಾತ್ವಿಕರ ಅರಿಗಳನ್ನು ಸಂಹರಿಸುವ, ಉದಯ ಪರ್ವತದಿಂದ ಹುಟ್ಟಿಬರುತ್ತಿರುವ ಸೂರ್ಯನಂತೆ ಜಾಜ್ವಲ್ಯಮಾನವಾಗಿರುವ ಚಕ್ರವನ್ನು ಎತ್ತಿಕೊಂಡನು. ಅಸುರರೆಲ್ಲರನ್ನೂ ಧ್ವಂಸಮಾಡುವ, ಶತ್ರುಗಳಿಗೆ ಕೊನೆಗಾಲವನ್ನು ತಂದುಕೊಡುವ ಕೃಷ್ಣವರ್ಣದ ದೊಡ್ಡಗದೆಯನ್ನು ಎಡಗೈಯಲ್ಲಿ ಹಿಡಿದುಕೊಂಡನು. ಗರುಡಧ್ವಜನಾದ ಆ ಭಗವಂತನು ದಿವ್ಯಾಭರಣಗಳಿಂದ ಪ್ರಕಾಶಮಾನವಾದ ಮಿಕ್ಕ ಕೈಗಳಲ್ಲಿ ಶಾರ್ಙ್ಗ ಮುಂತಾದ ಆಯುಧಗಳನ್ನು ಧರಿಸಿದನು.

೪೦–೪೭. ಮಹಾ ವಿಷ್ಣುವು ಕಶ್ಯಪನ ಪುತ್ರನೂ, ಸರ್ಪಾಹಾರನೂ, ವೇಗದಲ್ಲಿ ವಾಯುವನ್ನು ಮೀರಿಸಿದವನೂ, ಆಕಾಶವನ್ನು ಕ್ಷುಬ್ಧಗೊಳಿಸುವವನೂ, ಅರುಣನ ತಮ್ಮನೂ ಸುವರ್ಣಶರೀರಕನೂ, ಪಕ್ಷಿರಾಜನೂ ಆದ ಗರುತ್ಮಂತನನ್ನು ಏರಿದನು.

**ಶಿಖಿನಂ ಬಲಿನಂ ಚೈವ ತಪ್ತಕುಂಡಲಭೂಷಣಂ ।**
**ವಿಚಿತ್ರಪತ್ರವಸನಂ ಧಾತುಮಂತಮಿವಾಚಲಂ ॥೪೩॥**

**ಸ್ಫೀತಕ್ರೋಡಾವಲಂಬೇನ ಶೀತಾಂಶುಸಮತೇಜಸಾ ।**
**ಭೋಗಿಭೋಗಾವಸಕ್ತೇನ ಮಣಿರತ್ನೇನ ಭಾಸ್ವತಾ ॥೪೪॥**

**ಪಕ್ಷಾಭ್ಯಾಂ ಚಾರುಪತ್ರಾಭ್ಯಾಮಾವೃತ್ಯ ದಿವಿ ಲೀಲಯಾ ।**
**ಯುಗಾಂತೇ ಸೇಂದ್ರಚಾಪಾಭ್ಯಾಂ ತೋಯದಾಭ್ಯಾಮಿವಾಂಬರಂ ॥೪೫॥**

**ನೀಲಲೋಹಿತಪೀತಾಭಿಃ ಪತಾಕಾಭಿರಲಂಕೃತಂ ।**
**ಕೇತುವೇಷಪ್ರತಿಚ್ಛನ್ನಂ ಮಹಾಕಾಯನಿಕೇತನಂ ॥೪೬॥**

**ಅರುಣಾವರಜಂ ಶ್ರೀಮಾನಾರುಹ್ಯ ಸಮರೇ ವಿಭುಃ ।**
**ಸುವರ್ಣಸ್ವರ್ಣವಪುಷಾ ಸುವರ್ಣಂ ಖೇಚರೋತ್ತಮಂ ॥೪೭॥**

---

ಅವನು ಬಾಯಿಯಲ್ಲಿ ಮಹಾ ಸರ್ಪವನ್ನು ಕಚ್ಚಿಕೊಂಡಿದ್ದನು. ಅಮೃತಮಂಥನವಾದ ಬಳಿಕ ಬಿಡುಗಡೆಹೊಂದಿ ಮೇಲಕ್ಕೆದ್ದು ಬಂದ ಮಂದರಪರ್ವತವೋ ಎನ್ನುವ ಹಾಗಿದ್ದನು· ದೇವಾಸುರರ ಸಂಗ್ರಾಮಗಳಲ್ಲಿ ಎಷ್ಟೋಸಾರಿ ತನ್ನ ದೃಢವಾದ ಪರಾಕ್ರಮವನ್ನು ತೋರಿಸಿದ್ದನು. ಅಮೃತಕ್ಕೋಸ್ಕರವಾಗಿ ಇಂದ್ರನೊಡನೆ ಹೋರಾಡಿ ಅವನ ವಜ್ರಾಯುಧದ ಪೆಟ್ಟುತಿಂದು ಅದರ ಗುರುತನ್ನು ಶರೀರದಲ್ಲಿ ಪಡೆದಿದ್ದನು. ತಲೆಯಲ್ಲಿ ಜುಟ್ಟು, ಕಿವಿಯಲ್ಲಿ ಹೊಳೆವ ಕುಂಡಲಗಳೂ ಸೊಗಯಿಸುತ್ತಿರಲು, ಚಿತ್ರವಿಚಿತ್ರವಾದ ಎಲೆಗಳಂತಿರುವ ವಸ್ತ್ರವನ್ನುಟ್ಟು ಗೈರಿಕಾದಿ ಧಾತುಗಳಿಂದ ಕೂಡಿದ ಪರ್ವತದಂತೆ ವಿರಾಜಿಸುತ್ತಿದ್ದನು. ಅವನ ವಿಸ್ತಾರವಾದ ಎದೆಯಲ್ಲಿ ಚಂದ್ರನಂತೆ ಶುಭ್ರವಾಗಿ ಪ್ರಕಾಶಿಸುವ ಮುಕ್ತಾಮಣಿಹಾರವು ಸರ್ಪಮಾಲಿಕೆಯೊಡಗೂಡಿ ಶೋಭಿಸುತ್ತಿತ್ತು. ಅಂದವಾದ ಗರಿಗಳಿಂದ ತುಂಬಿದ ರೆಕ್ಕೆಗಳೆರಡೂ ಆಕಾಶವನ್ನು ವ್ಯಾಪಿಸಿರಲು, ಪ್ರಳಯಕಾಲದಲ್ಲಿ ಕಾಮನ ಬಿಲ್ಲುಗಳಿಂದ ಸಹಿತವಾದ ಎರಡು ಮೋಡಗಳಿಂದ ಕೂಡಿದ ಗಗನತಲದಂತೆ ಕಂಗೊಳಿಸುತ್ತಿದ್ದನು. ನೀಲಿ, ಕೆಂಪು ಮತ್ತು ಹಳದಿ ಬಣ್ಣದ ಪತಾಕೆಗಳಿಂದ ಅಲಂಕೃತನಾಗಿದ್ದನು. ವಿಧವಿಧವಾದ ಬಾವುಟಗಳ ಆಕಾರದಿಂದ ಅವನ ಮಹಾಶರೀರವು ಆವೃತವಾಗಿದ್ದಿತು.

ತಮನ್ವಯುರ್ದೇವಗಣಾ ಮುನಯಶ್ಚ ಸಮಾಹಿತಾಃ ।
ಗೀರ್ಭಿಃ ಪರಮಮಂತ್ರಾಭಿಸ್ತುಷ್ಟುವುಶ್ಚ ಜನಾರ್ದನಂ ||೪೮||

ತದ್ವೈಶ್ರವಣಸಂಶ್ಲಿಷ್ಟಂ ವೈವಸ್ವತಪುರಸ್ಸರಂ ।
ದ್ವಿಜರಾಜಪರಿಕ್ಷಿಪ್ತಂ ದೇವರಾಜವಿರಾಜಿತಂ ||೪೯||

ಚಂದ್ರಪ್ರಭಾಭಿರ್ವಿಪುಲಂ ಯುದ್ಧಾಯ ಸಮವರ್ತತ ।
ಪವನಾವಿದ್ಧನಿರ್ಘೋಷಂ ಸಂಪ್ರದೀಪ್ತಹುತಾಶನಂ ||೫೦||

ವಿಷ್ಣೋರ್ಜಿಷ್ಣೋಶ್ಚ ಭ್ರಾಜಿಷ್ಣೋಸ್ತೇಜಸಾ ತಮಸಾವೃತಂ ।
ಬಲಂ ಬಲವದುದ್ವೃತ್ತಂ ಯುದ್ಧಾಯ ಸಮವರ್ತತ ||೫೧||

ಸ್ವಸ್ತ್ಯಸ್ತು ದೇವೇಭ್ಯ ಇತಿ ಬೃಹಸ್ಪತಿರಭಾಷತ ।
ಸ್ವಸ್ತ್ಯಸ್ತು ದಾನವಾನೀಕ ಉಶನಾ ವಾಕ್ಯಮಾದದೇ ||೫೨||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಸಂಗ್ರಾಮೇ
ಚತುಃಸಪ್ತತ್ಯಧಿಕಶತತಮೋಽಧ್ಯಾಯಃ

---

೪೮. ದೇವಗಣಗಳೂ ಮುನಿಗಳೂ ಆ ಜನಾರ್ದನನನ್ನು ಅನುಸರಿಸಿ ನಡೆದರು. ಪಾವನವೂ ಮಂತ್ರಮಯವೂ ಆದ ವಚನಗಳಿಂದ ಅವನನ್ನು ಏಕಾಗ್ರ ಚಿತ್ತರಾಗಿ ಸ್ತುತಿಸಿದರು.

೪೯. ಕುಬೇರನು ಒಡನೆ ಬರುತ್ತಿರಲು, ಯಮನು ಮುಂದೆ ನಡೆಯುತ್ತಿರಲು ಗರುತ್ಮಂತನು ಸುತ್ತಲೂ ಸಂಚರಿಸುತ್ತಿರಲು, ದೇವೇಂದ್ರನು ವಿರಾಜಿಸುತ್ತಿರಲು, ಚಂದ್ರನ ಕಾಂತಿಯು ಪ್ರಸರಿಸುತ್ತಿರಲು ಆ ದೊಡ್ಡ ಸೈನ್ಯವು ಯುದ್ಧಕ್ಕಾಗಿ ಸಿದ್ಧವಾಗಿತ್ತು.

೫೦-೫೧. ವಾಯುವು ಮಹಾಶಬ್ದವನ್ನು ಮಾಡುತ್ತಿದ್ದನು. ಅಗ್ನಿಯು ವಿಶೇಷವಾಗಿ ಜ್ವಲಿಸುತ್ತಿದ್ದನು. ಜಯಶೀಲನೂ ಪ್ರಕಾಶಯುಕ್ತನೂ ಆದ ವಿಷ್ಣುವಿನ ತೇಜಸ್ಸು ಎಲ್ಲೆಲ್ಲೂ ವ್ಯಾಪಿಸಿತ್ತು. ಧೂಳು ಮೇಲಕ್ಕೆದ್ದು ಕತ್ತಲೆಯನ್ನು ಕವಿಸಿದ್ದಿತು. ಹೀಗೆ ಮದೋನ್ಮತ್ತವಾದ ಆ ದೇವಸೈನ್ಯವು ಯುದ್ಧಕ್ಕೋಸ್ಕರ ಸಿದ್ಧವಾಗಿತ್ತು.

೫೨. ದೇವತೆಗಳಿಗೆ ಮಂಗಳವಾಗಲೆಂದು ಬೃಹಸ್ಪತಿ ಹಾರೈಸಿದನು. ದಾನವರಿಗೆ ಮಂಗಳವಾಗಲೆಂದು ಶುಕ್ರಾಚಾರ್ಯನೂ ಸಹ ಕೋರಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದೇವತೆಗಳ ಯುದ್ಧೋದ್ಯೋಗವನ್ನು ವರ್ಣಿಸಿದೆ.

ಅತ್ತ ಅಸುರರು ಯುದ್ಧಕ್ಕೆ ಸನ್ನದ್ಧರಾಗಿರಲು, ಈ ಕಡೆ ದೇವತೆಗಳೂ ಯುದ್ಧೋದ್ಯೋಗವನ್ನು ಪೂರ್ಣವಾಗಿ ಮಾಡಿದರು. ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು ಮುಂತಾದವರೆಲ್ಲರೂ ತಮ್ಮ ತಮ್ಮ ಪರಿವಾರಗಳೊಡನೆ ಯುದ್ಧೋನ್ಮುಖರಾದರು. ಇಂದ್ರ, ಯಮ, ವರುಣ, ಕುಬೇರ, ಮುಂತಾದ ದಿಕ್ಪಾಲಕರು ತಮ್ಮತಮ್ಮ ವಾಹನಗಳನ್ನೇರಿ ನಡೆದರು. ವಿಷ್ಣುವು ಗರುಡನ ಮೇಲೆ ಕುಳಿತು ಹೊರಟನು. ದೇವಗಣಗಳೂ ಮುನಿಗಳೂ ಅವನ ಹಿಂದೆ ಪ್ರಯಾಣಮಾಡಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯಸಂಗ್ರಾಮದಲ್ಲಿ
ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚಸಪ್ತತ್ಯಧಿಕಶತತಮೋऽಧ್ಯಾಯಃ

॥ ಮತ್ಸ್ಯ ಉವಾಚ ॥

ತಾಭ್ಯಾಂ ಬಲಾಭ್ಯಾಂ ಸಂಜಜ್ಞೇ ತುಮುಲೋ ವಿಗ್ರಹಸ್ತದಾ ।
ಸುರಾಣಾಮಸುರಾಣಾಂ ಚ ಪರಸ್ಪರಜಯೈಷಿಣಾಂ ॥ ೧ ॥

ದಾನವಾ ದೈವತೈಃ ಸಾರ್ಧಂ ನಾನಾಪ್ರಹರಣೋದ್ಯತಾಃ ।
ಸಮೀಯುರ್ಯುಧ್ಯಮಾನಾ ವೈ ಪರ್ವತಾ ಇವ ಪರ್ವತೈಃ ॥ ೨ ॥

ತತ್ಸುರಾಸುರಸಂಯುಕ್ತಂ ಯುದ್ಧಮತ್ಯದ್ಭುತಂ ಬಭೌ ।
ಧರ್ಮಾಧರ್ಮಸಮಾಯುಕ್ತಂ ದರ್ಪೇಣ ವಿನಯೇನ ಚ ॥ ೩ ॥

ತತೋ ರಥೈರ್ವಿಪ್ರಯುಕ್ತೈರ್ವಾರಣೈಶ್ಚ ಪ್ರಚೋದಿತೈಃ ।
ಉತ್ಪತದ್ಭಿಶ್ಚ ಗಗನಮಸಿಹಸ್ತೈಃ ಸಮಂತತಃ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸುರರೂ ಅಸುರರೂ ಒಬ್ಬರನ್ನೊಬ್ಬರು ಗೆಲ್ಲಬೇಕೆಂದು ಬಯಸಿದರು. ಆಗ ಅವರಿಬ್ಬರ ಸೈನ್ಯಗಳಿಗೂ ಕೈ ಕೈ ಕಾಳಗವು ನಡೆಯಿತು.

೨. ದಾನವರು ನಾನಾವಿಧವಾದ ಆಯುಧಗಳೊಡನೆ ಸಿದ್ಧರಾಗಿ ಬಂದು ಪರ್ವತಗಳು ಪರ್ವತಗಳೊಡನೆ ಹೋರಾಡುವಂತೆ ದೇವತೆಗಳೊಡನೆ ಯುದ್ಧ ಮಾಡಿದರು.

೩. ಸುರಾಸುರರಿಗೆ ನಡೆದ ಆ ಯುದ್ಧವು ಅತ್ಯದ್ಭುತವಾಗಿತ್ತು. ಧರ್ಮ, ವಿನಯ, ಇವು ಒಂದು ಕಡೆಯೂ ಅಧರ್ಮ, ದರ್ಪ ಇವು ಮತ್ತೊಂದು ಕಡೆಯೂ ನೆಲಸಿದ್ದುವು.

೪-೬. ಬಳಿಕ ಶತ್ರುಗಳ ಮೇಲೇರಿ ಹೋಗುವ ರಥಗಳು, ಮಾವಟಿಗರು ಸನ್ನೆಮಾಡಿದಂತೆ ನುಗ್ಗುವ ಆನೆಗಳು, ಕೈಯಲ್ಲಿ ಕತ್ತಿಯನ್ನು ಹಿಡಿದು ಆಕಾಶಕ್ಕೆ

ಕ್ಷಿಪ್ಯಮಾಣೈಶ್ಚ ಮುಸಲೈಃ ಸಂಪತದ್ಭಿಶ್ಚ ಸಾಯಕೈಃ ।
ಚಾಪೈರ್ವಿಸ್ಫಾರ್ಯಮಾಣೈಶ್ಚ ಪಾತ್ಯಮಾನೈಶ್ಚ ಮುದ್ಗರೈಃ ॥ ೫ ॥

ತದ್ಯುದ್ಧಮಭವದ್ಘೋರಂ ದೇವದಾನವಸಂಕುಲಂ ।
ಜಗತಸ್ತ್ರಾಸಜನನಂ ಯುಗಸಂವರ್ತಕೋಪಮಂ ॥ ೬ ॥

ಹಸ್ತಮುಕ್ತೈಶ್ಚ ಪರಿಘೈರ್ವಿಪ್ರಯುಕ್ತೈಶ್ಚ ಪರ್ವತೈಃ ।
ದಾನವಾಃ ಸಮರೇ ಜಘ್ನುರ್ದೇವಾನಿಂದ್ರಪುರೋಗಮಾ ॥ ೭ ॥

ತೇ ವಧ್ಯಮಾನಾ ಬಲಿಭಿರ್ದಾನವೈರ್ಜಯಕಾಂಕ್ಷಿಭಿಃ ।
ವಿಷಣ್ಣವದನಾ ದೇವಾ ಜಗ್ಮುರಾರ್ತಿಂ ಪರಾಂ ಮೃಧೇ ॥ ೮ ॥

ತೇಽಸ್ತ್ರಶೂಲಪ್ರಮಥಿತಾಃ ಪರಿಘೈರ್ಭಿನ್ನಮಸ್ತಕಾಃ ।
ಭಿನ್ನೋರಸ್ಕಾ ದಿತಿಸುತೈರ್ವೇಮೂ ರಕ್ತಂ ವ್ರಣೈರ್ಬಹು ॥ ೯ ॥

---

ನೆಗೆಯುವ ವೀರಯೋಧರು, ಹಾರಾಡುವ ಮುಸಲಗಳು, ಎಡೆಬಿಡದೆ ಬೀಳುತ್ತಿರುವ ಬಾಣಗಳು ವಿಶೇಷವಾಗಿ ಮಿಡಿಯುತ್ತಿರುವ ಬಿಲ್ಲುಗಳು, ಎಸೆಯುತ್ತಿರುವ ಮುದ್ಗರಗಳು ಇವುಗಳಿಂದ ದೈತ್ಯ ದಾನವರಿಗೆ ನಡೆದ ಆ ತುಮುಲ ಯುದ್ಧವು ಭಯಂಕರವಾಗಿತ್ತು. ಪ್ರಳಯಕಾಲದಂತೆ ಜಗತ್ತಿಗೆ ಭೀತಿಯನ್ನು ಹುಟ್ಟಿಸುತ್ತಿತ್ತು.

೭. ದೈತ್ಯರು ಪರಿಘಗಳನ್ನೂ ಪರ್ವತಗಳನ್ನೂ ಇಂದ್ರಾದಿ ದೇವತೆಗಳ ಮೇಲೆಸೆದು ಅವರನ್ನು ಪ್ರಹರಿಸಿದರು.

೮. ಜಯಾಭಿಲಾಷಿಗಳೂ ಬಲಿಷ್ಠರೂ ಆದ ದಾನವರಿಂದ ಯುದ್ಧದಲ್ಲಿ ಹತರಾಗುತ್ತಿದ್ದ ದೇವತೆಗಳು ವಿಷಣ್ಣವದನರಾಗಿ ಬಹು ದುಃಖಪಟ್ಟರು.

೯. ದೈತ್ಯರು ಅಸ್ತ್ರಗಳಿಂದಲೂ ಶೂಲಗಳಿಂದಲೂ ಬಲವಾಗಿ ಹೊಡೆದರು. ಪರಿಘಗಳಿಂದ ತಲೆಯನ್ನೊಡೆದರು. ಎದೆಯನ್ನು ಸೀಳಿದರು. ಇದರಿಂದ ದೇವತೆಗಳಿಗೆ ಗಾಯಗಳಾಗಿ ತಡೆಯಿಲ್ಲದೆ ರಕ್ತವು ಹರಿಯಿತು.

ವೇಷ್ಟಿತಾಃ ಶರಜಾಲೈಶ್ಚ ನಿರ್ಯತ್ನಾಶ್ಚಾಸುರೈಃ ಕೃತಾಃ ।
ಪ್ರವಿಷ್ಟಾ ದಾನವೀಂ ಮಾಯಾಂ ನ ಶೇಕುಸ್ತೇ ವಿಚೇಷ್ಟಿತುಂ ॥೧೦॥

ಅಸ್ತಂ ಗತಮಿವಾಭಾತಿ ನಿಷ್ಪ್ರಾಣಸದೃಶಾಕೃತಿ ।
ಬಲಂ ಸುರಾಣಾಮಸುರೈರ್ನಿಷ್ಪ್ರಯತ್ನಾಯುಧಂ ಕೃತಂ ॥೧೧॥

ದೈತ್ಯಚಾಪಚ್ಯುತಾನ್ ಘೋರಾಂಶ್ಛಿತ್ವಾ ವಜ್ರೇಣ ತಾಞ್ಶರಾನ್ ।
ಶಕ್ರೋ ದೈತ್ಯಬಲಂ ಘೋರಂ ವಿವೇಶ ಬಹುಲೋಚನಃ ॥೧೨॥

ಸ ದೈತ್ಯಪ್ರಮುಖಾನ್ ಹತ್ವಾ ತದ್ದಾನವಬಲಂ ಮಹತ್ ।
ತಾಮಸೇನಾಸ್ತ್ರಜಾಲೇನ ತಮೋಭೂತಮಥಾಕರೋತ್ ॥೧೩॥

ತೇಽನ್ಯೋಽನ್ಯಂ ನಾವಬುಧ್ಯಂತ ದೇವಾನಾಂ ವಾಹನಾನಿ ಚ ।
ಘೋರೇಣ ತಮಸಾವಿಷ್ಟಾಃ ಪುರುಹೂತಸ್ಯ ತೇಜಸಾ ॥೧೪॥

---

೧೦. ಅಸುರರು ದೇವತೆಗಳನ್ನು ತಮ್ಮ ಬಾಣರಾಶಿಗಳಿಂದ ಸುತ್ತುಗಟ್ಟಿದರು. ಅವರ ಯತ್ನಗಳನ್ನು ವ್ಯರ್ಥಗೊಳಿಸಿದರು. ದೇವತೆಗಳು ಅವರ ಮಾಯೆಗೆ ಸಿಕ್ಕಿ ಏನುಮಾಡುವುದಕ್ಕೂ ತೋಚದವರಾದರು.

೧೧. ದೇವತೆಗಳ ಸೈನ್ಯವು ಅಸ್ತಮಿತವಾದಂತೆ ಕಂಡಿತು. ಅದರ ಆಕಾರವನ್ನು ನೋಡಿದರೆ ಪ್ರಾಣವೇ ಇಲ್ಲವೆಂಬಂತಿತ್ತು. ದಾನವರಿಂದ ಅದರ ಪ್ರಯತ್ನಗಳೂ ಆಯುಧಗಳೂ ವ್ಯರ್ಥವಾದುವು.

೧೨. ಸಹಸ್ರಾಕ್ಷನೆನಿಸಿದ ದೇವೇಂದ್ರನು ದೈತ್ಯರ ಬಿಲ್ಲುಗಳಿಂದ ಹೊರಟು ಬಂದ ಆ ಬಾಣಗಳನ್ನು ವಜ್ರಾಯುಧದಿಂದ ಕತ್ತರಿಸಿ ಭಯಂಕರವಾದ ಆ ಶತ್ರು ಸೈನ್ಯದೊಳಗೆ ಹೊಕ್ಕನು.

೧೩. ಅವನು ದೈತ್ಯಪ್ರಮುಖರನ್ನು ಕೊಂದು ಅಸುರರ ಆ ದೊಡ್ಡ ಸೈನ್ಯದ ಮೇಲೆ ಅಂಧಕಾರಾಸ್ತ್ರವನ್ನು ಪ್ರಯೋಗಿಸಿ ಕಗ್ಗತ್ತಲೆ ಕವಿಯುವಂತೆ ಮಾಡಿದನು.

೧೪. ಇಂದ್ರನ ತೇಜೋಬಲದಿಂದ ಕಗ್ಗತ್ತಲೆಯು ತುಂಬಿಕೊಳ್ಳಲು ಆ ಅಸುರರು ದೇವತೆಗಳನ್ನೂ ಅವರ ವಾಹನಗಳನ್ನೂ, ತಮ್ಮಲ್ಲೇ ಒಬ್ಬರಿನ್ನೊಬ್ಬರನ್ನೂ ಕಾಣದೆ ಹೋದರು.

ಮಾಯಾಪಾಶೈರ್ವಿನಿರ್ಮುಕ್ತಾಸ್ತು ಯತ್ನವಂತಃ ಸುರೋತ್ತಮಾಃ ।
ವಪೂಂಷಿ ದೈತ್ಯಸಿಂಹಾನಾಂ ತಮೋಭೂತಾನ್ಯಪಾತಯನ್ ॥೧೫॥

ಅಪಧ್ವಸ್ತಾ ವಿಸಂಜ್ಞಾಶ್ಚ ತಮಸಾ ನೀಲವರ್ಚಸಾ ।
ಪೇತುಸ್ತೇ ದಾನವಾಗಣಾಶ್ಛಿನ್ನಪಕ್ಷಾ ಇವಾದ್ರಯಃ ॥೧೬॥

ತದ್ಘನೀಭೂತದೈತ್ಯೇಂದ್ರಮಂಧಕಾರ ಇವಾರ್ಣವೇ ।
ದಾನವಂ ದೇವಕದನಂ ತಮೋಭೂತಮಿವಾಭವತ್ ॥೧೭॥

ತದಾಸೃಜನ್ಮಹಾಮಾಯಾಂ ಮಯಸ್ತಾಂ ತಾಮಸೀಂ ದಹನ್ ।
ಯುಗಾಂತೋದ್ಯೋತಜನನೀಂ ಸೃಷ್ಟಾಮೌರ್ವೇಣ ವಹ್ನಿನಾ ॥೧೮॥

ಸಾ ದದಾಹ ತತಃ ಸರ್ವಾನ್ಮಾಯಾ ಮಯವಿಕಲ್ಪಿತಾ ।
ದೈತ್ಯಾಶ್ಚಾದಿತ್ಯವಪುಷಃ ಸದ್ಯ ಉತ್ತಸ್ಥು ರಾಹವೇ ॥೧೯॥

---

೧೫. ಸುರಶ್ರೇಷ್ಠರು ತಮ್ಮ ಪ್ರಯತ್ನಬಲದಿಂದ ಅಸುರರ ಮಾಯಾ ಪಾಶಗಳಿಂದ ಬಿಡುಗಡೆಹೊಂದಿ ಗಾಢಾಂಧಕಾರದಲ್ಲಿ ಮುಳುಗಿಹೋಗಿದ್ದ ದೈತ್ಯೋತ್ತಮರ ಶರೀರಗಳನ್ನು ಕತ್ತರಿಸಿ ಬೀಳಿಸಿದರು.

೧೬. ಕಾಡಿಗೆಯಂತೆ ಕಪ್ಪಾದ ಆ ಕತ್ತಲೆಯಲ್ಲಿ ಓಡಿಹೋಗಿ ದೈತ್ಯರು ರಕ್ಕೆ ಕತ್ತರಿಸಿ ಹೋದ ಪರ್ವತಗಳಂತೆ ಸಂಜ್ಞಾರಹಿತರಾಗಿ ಬಿದ್ದರು.

೧೭. ದೈತ್ಯವೀರರು ಸರ್ವವ್ಯಾಪಿಯಾಗಿದ್ದ ಆ ಕತ್ತಲೆಯ ಸಾಗರದಲ್ಲಿ ಕಟ್ಟಿಕೊಂಡಿದ್ದ ಹೆಪ್ಪಿನಂತಿದ್ದರು. ದೇವಾಸುರರ ಮಹಾಯುದ್ಧವು ಅಂಧಕಾರ ಮಯವೇ ಆಗಿದ್ದಂತೆ ತೋರಿತು.

೧೮. ಆಗ ಮಯನು ಇಂದ್ರನ ಆ ಅಂಧಕಾರಮಾಯೆಯನ್ನು ದಹಿಸಿ ಮಹಾಮಾಯೆಯೊಂದನ್ನು ಪ್ರಯೋಗಿಸಿದನು. ಅದು ಬಡಬಾಗ್ನಿಯಿಂದ ನಿರ್ಮಿತ ವಾಗಿತ್ತು. ಪ್ರಳಯಕಾಲದಲ್ಲಾಗುವಷ್ಟು ಬೆಳಕನ್ನು ಉಂಟುಮಾಡಬಲ್ಲುದಾಗಿತ್ತು.

೧೯. ಮಯನು ಪ್ರಯೋಗಿಸಿದ ಆ ಮಾಯೆ ದೇವತೆಗಳೆಲ್ಲರನ್ನೂ ದಹಿಸಿತು. ದೈತ್ಯರು ಸೂರ್ಯನಂತೆ ತೇಜಸ್ವಿಗಳಾಗಿ ಪರಾಕ್ರಮದಿಂದ ಮೆರೆಯುತ್ತ ಯುದ್ಧದಲ್ಲಿ ಮೇಲ್ಗೈಯನ್ನು ಪಡೆದರು.

ಮಾಯಾಮಾರ್ವೀಂ ಸಮಾಸಾದ್ಯ ದಹ್ಯಮಾನಾ ದಿವೌಕಸಃ ।
ಭೇಜಿರೇ ಚಂದ್ರವಿಷಯಂ ಶೀತಾಂಶುಂ ಸಲಿಲಪ್ರದಂ ॥೨೦॥

ತೇ ದಹ್ಯಮಾನಾ ಹ್ಯೌರ್ವೇಣ ವಹ್ನಿನಾ ನಷ್ಟಚೇತಸಃ ।
ಶಶಂಸುರ್ವಜ್ರಿಣಂ ದೇವಾಃ ಸಂತಪ್ತಾಃ ಶರಣೈಷಿಣಃ ॥೨೧॥

ಸಂತಪ್ತೇ ಮಾಯಯಾ ಸೈನ್ಯೇ ಹನ್ಯಮಾನೇ ಚ ದಾನವೈಃ ।
ಚೋದಿತೋ ದೇವರಾಜೇನ ವರುಣೋ ವಾಕ್ಯಮಬ್ರವೀತ್ ॥೨೨॥

ಪುರಾ ಬ್ರಹ್ಮರ್ಷಿಜಃ ಶಕ್ರ ತಪಸ್ತೇಪೇ ಸುದಾರುಣಂ ।
ಊರ್ವಸ್ತ್ವಪೂರ್ವತೇಜಸ್ವೀ ಸದೃಶೋ ಬ್ರಹ್ಮಣೋ ಗುಣೈಃ ॥೨೩॥

ತಂ ತಪಂತಮಿವಾದಿತ್ಯಂ ತಪಸಾ ಜಗದವ್ಯಯಂ ।
ಉಪತಸ್ಥುರ್ಮುನಿಗಣಾ ದಿವ್ಯಾ ದೇವರ್ಷಿಭಿಃ ಸಹ ॥೨೪॥

---

೨೦. ಆ ಬಡಬಾಗ್ನಿಯ ಮಾಯೆ ಆವರಿಸಿಕೊಳ್ಳಲು ದೇವತೆಗಳು ಸಂತಪ್ತರಾಗಿ ತಂಪಾದ ಕಿರಣಗಳುಳ್ಳ ಜಲಪ್ರದನಾದ ಚಂದ್ರನಲ್ಲಿಗೆ ಹೋದರು.

೨೧. ಬಡಬಾಗ್ನಿಯು ಸುಡುತ್ತಿರಲು, ಆ ದೇವತೆಗಳು ಮೂರ್ಛಿತರಾಗಿ ದೇವೇಂದ್ರನನ್ನು ಮರೆಹೊಕ್ಕು ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದರು.

೨೨. ಮಯನ ಮಾಯೆಯಿಂದ ದೇವಸೈನ್ಯವು ಸುಟ್ಟುಹೋಯಿತು. ದಾನವರು ಅದನ್ನು ಕೊಲ್ಲುತ್ತಿದ್ದರು. ಆಗ ಇಂದ್ರನು ಪ್ರಶ್ನೆಮಾಡಲು ವರುಣನು ಹೀಗೆ ಹೇಳಿದನು.

೨೩. ಓ ಇಂದ್ರಾ, ಅಪೂರ್ವತೇಜಸ್ವಿಯೆನಿಸಿದ ಬ್ರಹ್ಮರ್ಷಿಪುತ್ರನಾದ ಊರ್ವನು ಹಿಂದೆ ಅತ್ಯುಗ್ರವಾದ ತಪಸ್ಸನ್ನು ಮಾಡಿದನು. ಅವನು ಗುಣಗಳಲ್ಲಿ ಬ್ರಹ್ಮನಿಗೆ ಸಮಾನನಾಗಿದ್ದನು.

೨೪. ತನ್ನ ತಪಸ್ಸಿನಿಂದ ಲೋಕವನ್ನು ಸುಡುತ್ತ ಸೂರ್ಯನಂತೆ ಪ್ರಕಾಶಿಸುವ ಅವನ ಬಳಿಗೆ ಮುನಿಗಳೂ ದೇವತೆಗಳೂ ದೇವರ್ಷಿಗಳೊಡನೆ ಕೂಡಿ ಬಂದರು.

ಹಿರಣ್ಯಕಶಿಪುಶ್ಚೈವ ದಾನವೋ ದಾನವೇಶ್ವರಃ ।
ಋಷಿಂ ವಿಜ್ಞಾಪಯಾಮಾಸುಃ ಪುರಾ ಪರಮತೇಜಸಮ್ ॥೨೫॥

ಊಚುರ್ಬ್ರಹ್ಮರ್ಷಯಸ್ತಂ ತು ವಚನಂ ಧರ್ಮಸಂಹಿತಂ ।
ಋಷಿವಂಶೇಷು ಭಗವಂಶ್ಛಿನ್ನಮೂಲಮಿದಂ ಪದಂ ॥೨೬॥

ಏಕಸ್ತ್ವಮನಪತ್ಯಶ್ಚ ಗೋತ್ರಾಯಾನ್ಯೋ ನ ವರ್ತತೇ ।
ಕೌಮಾರಂ ವ್ರತಮಾಸ್ಥಾಯ ಕ್ಲೇಶಮೇವಾನುವರ್ತಸೇ ॥೨೭॥

ಬಹೂನಿ ವಿಪ್ರ ಗೋತ್ರಾಣಿ ಮುನೀನಾಂ ಭಾವಿತಾತ್ಮನಾಂ ।
ಏಕದೇಹಾನಿ ತಿಷ್ಠಂತಿ ವಿವಿಕ್ತಾನಿ ವಿನಾ ಪ್ರಜಾಃ ॥೨೮॥

ಏವಮುಚ್ಛಿನ್ನಮೂಲೈಶ್ಚ ಪುತ್ರೈರ್ನೋ ನಾಸ್ತಿ ಕಾರಣಂ ।
ಭವಾಂಸ್ತು ತಪಸಾ ಶ್ರೇಷ್ಠಃ ಪ್ರಜಾಪತಿಸಮದ್ಯುತಿಃ ॥೨೯॥

---

೨೫. ದಾನವರಾಜನಾದ ಹಿರಣ್ಯಕಶಿಪುವೂ ಅವರೊಡನೆಯೇ ಬಂದನು. ಅವರೆಲ್ಲರೂ ಬಹುತೇಜಸ್ವಿಯಾದ ಆ ಮುನಿಗೆ ಇಂತು ವಿಜ್ಞಾಪನಮಾಡಿದರು.

೨೬-೨೭. ಬ್ರಹ್ಮರ್ಷಿಗಳು ಅವನಿಗೆ ಧರ್ಮಸಹಿತವಾದ ಮಾತನ್ನು ಹೇಳಿದರು. ಎಲೈ ಪೂಜ್ಯನೇ, ಋಷಿಗಳ ವಂಶಜರು ಬ್ರಹ್ಮಚರ್ಯಾಶ್ರಮದಲ್ಲೇ ನಿಂತು ಈ ರೀತಿಯಾಗಿ ತಪಸ್ಸುಮಾಡುವುದರಿಂದ ವಂಶವು ಬೆಳೆಯದೆ ನಿಂತುಹೋಗುವುದು. ನೀನು ಏಕಾಕಿ. ಸಂತತಿಯಿಲ್ಲದವನು. ನಿನ್ನ ವಂಶಕ್ಕಾಗಿ ಬೇರೆ ಯಾರೂ ಇಲ್ಲ. ಈ ಬ್ರಹ್ಮಚರ್ಯವ್ರತದಲ್ಲಿ ನಿಂತು ಕಷ್ಟವನ್ನೇ ಅನುಭವಿಸುತ್ತಿರುವೆ.

೨೮. ಓ ಬ್ರಾಹ್ಮಣೋತ್ತಮನೇ, ಮಹಾಮಹಿಮರಾದ ಮುನಿಗಳ ಗೋತ್ರಜರಾದ ಹಲವರು ವಿವಾಹಮಾಡಿಕೊಳ್ಳದೆ ಒಬ್ಬಂಟಿಗರಾಗಿರುವರು. ಅವರಿಗೆ ಸಂತತಿಯೇ ಇಲ್ಲ.

೨೯. ಹೀಗೆ ಪುತ್ರರಹಿತರಾಗಿ ವಂಶಾಭಿವೃದ್ಧಿಗೆ ಮಾರ್ಗವಿಲ್ಲದಿರುವ ನಮಗೆ ಸದ್ಗತಿಗೆ ಸಾಧನವಿಲ್ಲ. ನೀನಾದರೋ ತಪಸ್ಸಿನಲ್ಲಿ ಶ್ರೇಷ್ಠ. ಬ್ರಹ್ಮನಿಗೆ ಸಮಾನವಾಗಿದೆ ನಿನ್ನ ತೇಜಸ್ಸು.

ತತ್ರ ವರ್ತಸ್ವ ವಂಶಾಯ ವರ್ಧಯಾತ್ಮಾನಮಾತ್ಮನಾ ।
ತ್ವಯಾ ಧರ್ಮೋಽರ್ಜಿತಸ್ತೇನ ದ್ವಿತೀಯಾಂ ಕುರು ವೈ ತನುಮ್ ॥೩೦॥

ಸ ಏವಮುಕ್ತೋ ಮುನಿಭಿರ್ಹ್ಯೌರ್ವೋ ಮರ್ಮಸು ತಾಡಿತಃ ।
ಜಗರ್ಹೇ ತಾನೃಷಿಗಣಾನ್ವಚನಂ ಚೇದಮಬ್ರವೀತ್ ॥೩೧॥

ಯಥಾಯಂ ವಿಹಿತೋ ಧರ್ಮೋ ಮುನಿನಾ ಶಾಶ್ವತಸ್ತು ಸಃ ।
ಆರ್ಷಂ ವೈ ಸೇವತಃ ಕರ್ಮ ವನ್ಯಮೂಲಫಲಾಶಿನಃ ॥೩೨॥

ಬ್ರಹ್ಮಯೋನೌ ಪ್ರಸೂತಸ್ಯ ಬ್ರಾಹ್ಮಣಸ್ಯಾತ್ಮದರ್ಶಿನಃ ।
ಬ್ರಹ್ಮಚರ್ಯಂ ಸುಚರಿತಂ ಬ್ರಹ್ಮಾಣಮಪಿ ಚಾಲಯೇತ್ ॥೩೩॥

ಜನಾನಾಂ ವೃತ್ತಯಸ್ತಿಸ್ರೋ ಯದ್ಗೃಹಾಶ್ರಮವಾಸಿನಾಮ್ ।
ಅಸ್ಮಾಕಂ ತು ವರಂ ವೃತ್ತಿರ್ವನಾಶ್ರಮನಿವಾಸಿನಾಮ್ ॥೩೪॥

---

೩೦. ವಂಶವನ್ನು ಬೆಳಸುವುದಕ್ಕಾಗಿ ಯತ್ನಿಸು. ವಂಶವನ್ನು ಅಭಿವೃದ್ಧಿಪಡಿಸುವುದರ ಮೂಲಕ ನೀನು ನಿನ್ನನ್ನೇ ಬೆಳಸಿಕೋ. ನೀನು ಧರ್ಮವನ್ನು ಸಂಪಾದಿಸಿರುವೆ. ಅದರಿಂದ ಇನ್ನು ಪತ್ನೀಪರಿಗ್ರಹವನ್ನು ಮಾಡು.

೩೧. ಮುನಿಗಳು ಹೀಗೆ ಹೇಳಲು ಊರ್ವನಿಗೆ ಮರ್ಮಸ್ಥಾನಗಳಲ್ಲಿ ಇರಿದಂತಾಯಿತು. ಅವನು ಆ ಋಷಿಗಳನ್ನು ಜರೆದು ಇಂತೆಂದನು.

೩೨-೩೩. ಶಾಸ್ತ್ರಗಳಲ್ಲಿ ಹೇಳಿರುವಂತೆ ಈ ಧರ್ಮವು ಮುನಿಗಳಿಗೆ ಶಾಶ್ವತವಾದುದು. ಋಷಿಪರಂಪರಾಗತವಾಗಿ ಬಂದ ಈ ಧರ್ಮವನ್ನಾಚರಿಸುತ್ತ, ಕಾಡಿನ ಗೆಡ್ಡೆಗೆಣಸುಗಳನ್ನೂ ಹಣ್ಣುಗಳನ್ನೂ ತಿನ್ನುತ್ತ ಆತ್ಮಸಾಕ್ಷಾತ್ಕಾರವನ್ನು ಪಡೆದ ಬ್ರಾಹ್ಮಣವಂಶದಲ್ಲಿ ಜನಿಸಿದವನ ಬ್ರಹ್ಮಚರ್ಯವ್ರತವು ಬ್ರಹ್ಮನನ್ನೂ ಕೂಡ ನಡುಗಿಸಿಬಿಟ್ಟೀತು.

೩೪. ಗೃಹಸ್ಥಾಶ್ರಮವನ್ನು ಅವಲಂಬಿಸಿ ನಗರಗಳಲ್ಲಿ ವಾಸಿಸುವ ಜನರಿಗೆ ಯಾಜನ, ಅಧ್ಯಾಪನ ಮತ್ತು ಪ್ರತಿಗ್ರಹಗಳೆಂಬ ಮೂರೂ ಜೀವನಕ್ಕೆ ಸಹಕಾರಿಗಳಾದ ವೃತ್ತಿಗಳು. ಆಶ್ರಮವಾಸಿಗಳಾದ ನಮಗೋ ಎಂದರೆ ಜೀವನದ ವೃತ್ತಿ ಇನ್ನೂ ಉತ್ತಮವಾದುದು.

ಅಬ್ಭಕ್ಷಾ ವಾಯುಭಕ್ಷಾಶ್ಚ ದಂತೋಲೂಖಲಿನಸ್ತಥಾ।
ಅಶ್ಮಕುಟ್ಟಾ ಹ್ಯಕನಕಾಃ ಪಂಚಾತಪಸಹಾಶ್ಚ ಯೇ ||೩೫||

ಏತೇ ತಪಸಿ ತಿಷ್ಠಂತಿ ವ್ರತೈರಪಿ ಸುದುಷ್ಕರೈಃ।
ಬ್ರಹ್ಮಚರ್ಯಂ ಪುರಸ್ಕೃತ್ಯ ಪ್ರಾರ್ಥಯಂತಿ ಪರಾಂ ಗತಿಂ ||೩೬||

ಬ್ರಹ್ಮಚರ್ಯಾದ್ಬ್ರಾಹ್ಮಣಸ್ಯ ಬ್ರಾಹ್ಮಣತ್ವಂ ವಿಧೀಯತೇ।
ಏವಮಾಹುಃ ಪರೇ ಲೋಕೇ ಬ್ರಹ್ಮಚರ್ಯವಿದೋ ಜನಾಃ ||೩೭||

ಬ್ರಹ್ಮಚರ್ಯೇ ಸ್ಥಿತಂ ಧೈರ್ಯಂ ಬ್ರಹ್ಮಚರ್ಯೇ ಸ್ಥಿತಂ ತಪಃ।
ಯೇ ಸ್ಥಿತಾ ಬ್ರಹ್ಮಚರ್ಯೇಷು ಬ್ರಾಹ್ಮಣಾ ದಿವಿ ಸಂಸ್ಥಿತಾಃ ||೩೮||

---

೩೫-೩೬. ಕೆಲವರಿಗೆ ನೀರೂ ಕೆಲವರಿಗೆ ವಾಯುವೂ ಆಹಾರ. ಕೆಲವರಿಗೆ ಹಲ್ಲೇ ಒರಳು. (ಎಂದರೆ ಸಿಕ್ಕಿದ ಹಣ್ಣು, ಗೆಣಸು ಮುಂತಾದುವನ್ನು ಹಾಗೆಯೇ ಅಗಿದು ತಿನ್ನುತ್ತಾರೆಂದು ಭಾವ) ಉಳಿದವರು ಆಹಾರಪದಾರ್ಥವನ್ನು ಕಲ್ಲಿನಲ್ಲಿ ಜಜ್ಜಿ ತಿನ್ನುತಕ್ಕವರು. ಇನ್ನೂ ಕೆಲವರಿಗೆ ಆಹಾರವೇ ಬೇಡ. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಸಭ್ಯ, ಆವಸಥ್ಯಗಳೆಂಬ ಪಂಚಾಗ್ನಿಗಳ ನಡುವೆ ತಪಸ್ಸು ಮಾಡುವವರು ಹಲವರು. ಇವರೆಲ್ಲರೂ ದುಷ್ಕರವಾದ ವ್ರತಗಳನ್ನು ಮಾಡುತ್ತ ತಪಸ್ಸಿನಲ್ಲಿ ತೊಡಗಿ ಬ್ರಹ್ಮಚರ್ಯವನ್ನು ಅತಿ ಮುಖ್ಯವಾಗಿ ಅನುಸರಿಸುತ್ತ ಸದ್ಗತಿಗೆ ಹೋಗಲು ಬಯಸುತ್ತಾರೆ.

೩೭. ಬ್ರಾಹ್ಮಣನು ನಿಜವಾಗಿಯೂ ಬ್ರಾಹ್ಮಣನೆನಿಸಿಕೊಳ್ಳುವುದು ಬ್ರಹ್ಮಚರ್ಯವ್ರತದಿಂದ. ಹೀಗೆಂದು ಲೋಕದಲ್ಲಿ ಬ್ರಹ್ಮಚರ್ಯದ ಮಾಹಾತ್ಮ್ಯವನ್ನು ಬಲ್ಲವರು ಹೇಳುತ್ತಾರೆ.

೩೮. ಧೈರ್ಯವು ನಿಂತಿರುವುದು ಬ್ರಹ್ಮಚರ್ಯದಲ್ಲಿ. ತಪಸ್ಸು ನೆಲಸಿರುವುದು ಬ್ರಹ್ಮಚರ್ಯದಲ್ಲಿ. ಬ್ರಹ್ಮಚರ್ಯವ್ರತವನ್ನು ತಪ್ಪದೆ ಆಚರಿಸಿದ ಬ್ರಾಹ್ಮಣರಿಗೆ ಸ್ವರ್ಗವಾಸವು ಹಸ್ತಗತವಾದಂತೆಯೇ ಸರಿ.

ನಾಸ್ತಿ ಯೋಗಂ ವಿನಾ ಸಿದ್ಧಿರ್ನ ವಾ ಸಿದ್ಧಿಂ ವಿನಾ ಯಶಃ ।
ನಾಸ್ತಿ ಲೋಕೇ ಯಶೋಮೂಲಂ ಬ್ರಹ್ಮಚರ್ಯಾತ್ಪರಂ ತಪಃ ॥೩೯॥

ಯೋ ನಿಗೃಹ್ಯೇಂದ್ರಿಯಗ್ರಾಮಂ ಭೂತಗ್ರಾಮಂ ಚ ಪಂಚಕಂ ।
ಬ್ರಹ್ಮಚರ್ಯಂ ಸಮಾಧತ್ತೇ ಕಿಮತಃ ಪರಮಂ ತಪಃ ॥೪೦॥

ಅಯೋಗೇ ಕೇಶಧರಣಮಸಂಕಲ್ಪವ್ರತಕ್ರಿಯಾ ।
ಅಬ್ರಹ್ಮಚರ್ಯೇ ಚರ್ಯಾ ಚ ತ್ರಯಂ ಸ್ಯಾದ್ದಂಭಸಂಜ್ಞಕಂ ॥೪೧॥

ಕ್ವ ದಾರಾಃ ಕ್ವ ಚ ಸಂಯೋಗಃ ಕ್ವ ಚ ಭಾವವಿಪರ್ಯಯಃ ।
ನನ್ವಿಯಂ ಬ್ರಹ್ಮಣಾ ಸೃಷ್ಟಾ ಮನಸಾ ಮಾನಸೀ ಪ್ರಜಾ ॥೪೨॥

ಯದ್ಯಸ್ತಿ ತಪಸೋ ವೀರ್ಯಂ ಯುಷ್ಮಾಕಂ ವಿದಿತಾತ್ಮನಾಂ ।
ಸೃಜಧ್ವಂ ಮಾನಸಾನ್ ಪುತ್ರಾನ್ ಪ್ರಾಜಾಪತ್ಯೇನ ಕರ್ಮಣಾ ॥೪೩॥

---

೩೯. ಯೋಗವಿಲ್ಲದೆ ಸಿದ್ಧಿ ದೊರಕದು. ಸಿದ್ಧಿ ಲಭಿಸದೆ ಯಶಸ್ಸು ಬಾರದು. ಲೋಕದಲ್ಲಿ ಬ್ರಹ್ಮಚರ್ಯವನ್ನು ಬಿಟ್ಟರೆ ಯಶಸ್ಸಿಗೆ ಕಾರಣವಾದ ತಪಸ್ಸು ಬೇರೆ ಯಾವುದೂ ಇಲ್ಲ.

೪೦. ಇಂದ್ರಿಯಗಳ ಮತ್ತು ಶಬ್ದಸ್ಪರ್ಶಾದಿಪಂಚೇಂದ್ರಿಯ ವಿಷಯಗಳ ಆಕರ್ಷಣೆಗೆ ಒಳಗಾಗದೆ ಬ್ರಹ್ಮಚರ್ಯವ್ರತವನ್ನು ಸಾಧಿಸುವಾತನಿಗೆ ಅದಕ್ಕಿಂತ ಉತ್ಕೃಷ್ಟವಾದ ಬೇರೆ ತಪಸ್ಸೇನಿದೆ?

೪೧. ಶಾಸ್ತ್ರೀಯವಾದ ನಿಮಿತ್ತವಿಲ್ಲದೆ ಕೂದಲನ್ನು ಬೆಳಸುವುಧು, ಸಂಕಲ್ಪ ವಿಲ್ಲದೆ ವ್ರತವನ್ನು ಮಾಡುವುದು, ಬ್ರಹ್ಮಚರ್ಯವನ್ನಾಚರಿಸದೆ ಧ್ಯಾನಾದಿ ಕರ್ಮಗಳಲ್ಲಿ ತೊಡಗುವುದು ಈ ಮೂರೂ ಡಂಭದ ಗುರುತುಗಳು.

೪೨. ಪತ್ನಿಯೆಂದರೇನು? ಅವಳೊಡನೆ ಸಮಾಗಮವೆಂದರೇನು? ಮನೋವಿಕಾರವೆಂಬುದು ಎಲ್ಲಿಯದು? ಬ್ರಹ್ಮನು ತನ್ನ ಸಂಕಲ್ಪ ಮಾತ್ರದಿಂದಲೇ ಮಾನಸ ಪುತ್ರರನ್ನು ಸೃಷ್ಟಿಸಲಿಲ್ಲವೇನು?

೪೩. ಆತ್ಮಜ್ಞಾನಿಗಳಾದ ನಿಮಗೆ ತಪಸ್ಸಿನ ಬಲವಿರುವುದಾದರೆ ಪ್ರಾಜಾ ಪತ್ಯ ವಿಧಿಯಿಂದ ಮಾನಸಪುತ್ರರನ್ನು ಸೃಷ್ಟಿಸಿರಿ.

**ಮನಸಾ ನಿರ್ಮಿತಾ ಯೋನಿರಾಧಾತವ್ಯಾ ತಪಸ್ವಿಭಿಃ ।**
**ನ ದಾರಯೋಗೋ ಬೀಜಂ ವಾ ವ್ರತಮುಕ್ತಂ ತಪಸ್ವಿನಾಂ ॥೪೪॥**

**ಯದಿದಂ ಲುಪ್ತಧರ್ಮಾರ್ಥಂ ಯುಷ್ಮಾಭಿರಿಹ ನಿರ್ಭಯೈಃ ।**
**ವ್ಯಾಹೃತಂ ಸದ್ಭಿರತ್ಯರ್ಥಮಸದ್ಭಿರಿವ ಮೇ ಮತಂ ॥೪೫॥**

**ವಪುರ್ದೀಪ್ತಾಂತರಾತ್ಮಾನಮೇತತ್ಕೃತ್ವಾ ಮನೋಮಯಂ ।**
**ದಾರಯೋಗಂ ವಿನಾ ಸ್ರಕ್ಷ್ಯೇ ಪುತ್ರಮಾತ್ಮತನೂರುಹಂ ॥೪೬॥**

**ಏವಮಾತ್ಮಾನಮಾತ್ಮಾ ಮೇ ದ್ವಿತೀಯಂ ಜನಯಿಷ್ಯತಿ ।**
**ವನ್ಯೇನಾನೇನ ವಿಧಿನಾ ದಿಧಿಕ್ಷಂತಮಿವ ಪ್ರಜಾಃ ॥೪೭॥**

---

೪೪. ತಪಸ್ವಿಗಳು ಸಂತಾನಕ್ಕೆ ಕಾರಣವಾದ ಯೋನಿಯನ್ನು ತಮ್ಮ ಮನಸ್ಸಿನಿಂದಲೇ ನಿರ್ಮಾಣಮಾಡಿಕೊಳ್ಳಬೇಕು. ಪತ್ನೀಸಂಬಂಧವಾಗಲಿ ವೀರ್ಯ ಸ್ಖಲನವಾಗಲಿ ಅವರಿಗೆ ಬೇಕಿಲ್ಲ.

೪೫. ತಪಸ್ವಿಗಳೆನಿಸಿದ ನೀವು ನಿಮ್ಮ ಧರ್ಮವು ನಷ್ಟವಾದುದಕ್ಕಾಗಿ ಹೀಗೆ ನಿರ್ಭಯವಾಗಿ ಹೇಳುವುದಾದರೆ ನನಗೇನೋ ನೀವು ತಪಸ್ವಿಗಳಲ್ಲವೆಂದೇ ತೋರುವುದು.

೪೬. ನನ್ನ ಈ ದೇಹವನ್ನು ಒಳಗೆ ಅಡಗಿರುವ ಆತ್ಮತೇಜಸ್ಸಿನಿಂದ ಪ್ರಜ್ವಲಿಸುವಂತೆ ಮಾಡಿ ಪತ್ನಿಯ ಸಂಬಂಧವೇ ಇಲ್ಲದೆ ಇದರಲ್ಲಿಯೇ ಮಾನಸ ಪುತ್ರನನ್ನು ಸೃಷ್ಟಿಸುವೆನು.

೪೭. ಹೀಗೆ ಈ ತಪೋವಿಧಿಯಿಂದಲೇ ನನ್ನ ಮನಸ್ಸು ನನ್ನ ಮತ್ತೊಂದು ರೂಪವನ್ನು ಎಂದರೆ ಮಗನನ್ನು ಸೃಷ್ಟಿಸುವುದು. ("ಆತ್ಮಾ ವೈ ಪುತ್ರನಾಮಾಸಿ" ಎಂಬ ಶ್ರುತಿವಚನದಿಂದ ತಂದೆಯೇ ಮಗನ ರೂಪವಾಗಿ ಜನಿಸುವನೆಂದು ಅಭಿಪ್ರಾಯ.) ಅವನು ಪ್ರಜೆಗಳನ್ನು ದಹಿಸುವನೋ ಎಂಬಂತೆ ಅತ್ಯಧಿಕ ತೇಜೋ ವಂತನಾಗುವನು.

**ಊರ್ವಸ್ತು ತಪಸಾವಿಷ್ಟೋ ನಿವೇಶ್ಯೋರುಂ ಹುತಾಶನೇ ।**
**ಮಮಂಥೈಕೇನ ದರ್ಭೇಣ ಸುತಸ್ಯ ಪ್ರಭವಾರಣಿಂ ॥೪೮॥**

**ತಸ್ಯೋರುಂ ಸಹಸಾ ಭಿತ್ವಾ ಜ್ವಾಲಾಮಾಲೀ ಹ್ಯನಿಂಧನಃ ।**
**ಜಗತೋ ದಹನಾಕಾಂಕ್ಷೀ ಪುತ್ರೋಽಗ್ನಿಃ ಸಮಪದ್ಯತ ॥೪೯॥**

**ಊರ್ವಸ್ಯೋರುಂ ವಿನಿರ್ಭಿದ್ಯ ಔರ್ವೋ ನಾಮಾಂತಕೋಽನಲಃ ।**
**ದಿಧಕ್ಷನ್ನಿವ ಲೋಕಾಂಸ್ತ್ರೀಞ್ಜಜ್ಞೇ ಪರಮಕೋಪನಃ ॥೫೦॥**

**ಉತ್ಪನ್ನಮಾತ್ರಶ್ಚೋವಾಚ ಪಿತರಂ ಕ್ಷೀಣಯಾ ಗಿರಾ ।**
**ಕ್ಷುಧಾ ಮೇ ಬಾಧತೇ ತಾತ ಜಗದ್ಭಕ್ಷ್ಯೇ ತ್ಯಜಸ್ವ ಮಾಂ ॥೫೧॥**

**ತ್ರಿದಿವಾರೋಹಿಭಿರ್ಜ್ವಾಲೈರ್ಜೃಂಭಮಾಣೋ ದಿಶೋ ದಶ ।**
**ನಿರ್ದಹನ್ ಸರ್ವಭೂತಾನಿ ವವೃಧೇ ಸೋಽಂತಕೋಽನಲಃ ॥೫೨॥**

---

೪೮. ಮಹಾತಪಸ್ವಿಯಾದ ಊರ್ವನು ತನ್ನ ತೊಡೆಯನ್ನು ಬೆಂಕಿಯಲ್ಲಿರಿಸಿ ಒಂದು ದರ್ಭದಿಂದ ಕಡೆದನು. ಪುತ್ರನೆಂಬ ಅಗ್ನಿಯು ಹುಟ್ಟುವುದಕ್ಕೆ ಆ ತೊಡೆಯೇ ಅರಣಿಯಾಯಿತು.

೪೯. ಅವನ ತೊಡೆಯನ್ನು ಥಟ್ಟನೆ ಸೀಳಿಕೊಂಡು ಜ್ವಾಲೆಗಳು ಸುತ್ತಲೂ ವ್ಯಾಪಿಸುತ್ತಿರಲು, ಸೌದೆಯಿಲ್ಲದೆ ತವಕಪಡುತ್ತ ಲೋಕವನ್ನು ಸುಡಲು ಬಯಸುತ್ತ ಅಗ್ನಿಯೇ ಪುತ್ರನಾಗಿ ಜನಿಸಿದನು.

೫೦. ಊರ್ವನ ತೊಡೆಯನ್ನು ಭೇಧಿಸಿಕೊಂಡು ಪ್ರಳಯಾಗ್ನಿಯು ಮೂರು ಲೋಕಗಳನ್ನೂ ಸುಡಲು ಅಪೇಕ್ಷಿಸುತ್ತಿರವನೋ ಎಂಬಂತೆ ಬಹು ಕೋಪಿಷ್ಠನಾಗಿ ಔರ್ವನೆಂಬ ಹೆಸರಿನಿಂದ ಜನಿಸಿದನು.

೫೧. ಅವನು ಹುಟ್ಟಿದ ಕೂಡಲೇ ಕುಗ್ಗಿದ ಧ್ವನಿಯಿಂದ, "ಅಪ್ಪಾ, ನನ್ನನ್ನು ಹಸಿವು ಪೀಡಿಸುತ್ತಿದೆ. ನನ್ನನ್ನು ಬಿಡು; ಲೋಕವನ್ನೇ ಭಕ್ಷಿಸುವೆನು" ಎಂದು ಹೇಳಿದನು.

೫೨. ಸರ್ವನಾಶಕನಾದ ಆ ಅಗ್ನಿಯು ಜ್ವಾಲೆಗಳು ಸ್ವರ್ಗವನ್ನು ಮುಟ್ಟುತ್ತಿರಲು, ಹತ್ತು ದಿಕ್ಕುಗಳಲ್ಲೂ ವ್ಯಾಪಿಸುತ್ತ, ಸಕಲ ಪ್ರಾಣಿಗಳನ್ನೂ ಸುಟ್ಟು ಹಾಕುತ್ತ ಬೆಳೆದನು.

ಏತಸ್ಮಿನ್ನಂತರೇ ಬ್ರಹ್ಮಾ ಮುನಿಮೂರ್ವಂ ಸಭಾಜಯನ್ ।
ಉವಾಚ ವಾರ್ಯತಾಂ ಪುತ್ರೋ ಜಗತಶ್ಚ ದಯಾಂ ಕುರು ॥೫೩॥

ಅಸ್ಯಾಪತ್ಯಸ್ಯ ತೇ ವಿಪ್ರ ಕರಿಷ್ಯೇ ಸ್ಥಾನಮುತ್ತಮಂ ।
ತಥ್ಯಮೇತದ್ವಚಃ ಪುತ್ರ ಶೃಣು ತ್ವಂ ವದತಾಂ ವರ ॥೫೪॥

॥ ಊರ್ವ ಉವಾಚ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮೇಽದ್ಯ ಭಗವಾಞ್ಛಿಶೋಃ ।
ಮತಿಮೇತಾಂ ದದಾತೀಹ ಪರಮಾನುಗ್ರಹಾಯ ವೈ ॥೫೫॥

ಪ್ರಭಾತಕಾಲೇ ಸಂಪ್ರಾಪ್ತೇ ಕಾಂಕ್ಷಿತವ್ಯೇ ಸಮಾಗಮೇ ।
ಭಗವಂಸ್ತರ್ಪಿತಃ ಪುತ್ರಃ ಕೈರ್ಹವ್ಯೈಃ ಪ್ರಾಪ್ಸ್ಯತೇ ಸುಖಂ ॥೫೬॥

ಕುತ್ರ ಚಾಸ್ಯ ನಿವಾಸಃ ಸ್ಯಾದ್ಭೋಜನಂ ವಾ ಕಿಮಾತ್ಮಕಂ ।
ವಿಧಾಸ್ಯತೀಹ ಭಗವಾನ್ವೀರ್ಯತುಲ್ಯಂ ಮಹೌಜಸಃ ॥೫೭॥

---

೫೩-೫೪. ಈ ವೇಳೆಗೆ ಬ್ರಹ್ಮನು ಊರ್ವಮುನಿಯನ್ನು ಸಮಾಧಾನ ಪಡಿಸುತ್ತ ಇಂತೆಂದನು. " ನಿನ್ನ ಮಗನನ್ನು ತಡೆ. ಜಗತ್ತಿನ ಮೇಲೆ ದಯೆಯಿಡು. ಓ ವಿಪ್ರಾ, ಈ ನಿನ್ನ ಮಗನಿಗೆ ಉತ್ತಮವಾದ ಸ್ಥಾನವನ್ನು ನಾನು ಕಲ್ಪಿಸಿ ಕೊಡುವೆನು. ಜ್ಞಾನಿಗಳಲ್ಲಿ ಅಗ್ರಗಣ್ಯನಾದ ಓ ಪುತ್ರಾ, ನನ್ನ ಮಾತು ನಿಜ, ಇದನ್ನು ಕೇಳು.''

೫೫. ಊರ್ವನು ಹೇಳಿದನು.—ನಾನು ಧನ್ಯನಾದೆನು. ಅನುಗೃಹೀತ ನಾದೆನು. ಏಕೆಂದರೆ ಪೂಜ್ಯನಾದ ನೀನು ಬಾಲಕನಾದ ನನಗೆ ಈ ಬುದ್ಧಿಯನ್ನು ದಯಪಾಲಿಸಿದೆ. ಇದು ಪರಮಾನುಗ್ರಹ.

೫೬. ಓ ದೇವಾ, ಪ್ರಾತಃಕಾಲದಲ್ಲಿ ನನ್ನ ಬಳಿಗೆ ಮಗನು ಬಂದಾಗ ಅವನಿಗೆ ಯಾವ ಹವಿಸ್ಸುಗಳನ್ನು ಕೊಟ್ಟು ತೃಪ್ತಿಪಡಿಸಲಿ ? ಅವನಿಗೆ ಸುಖವಾಗುವುದೆಂತು?

೫೭. ಇವನು ವಾಸಮಾಡುವ ಸ್ಥಳವಾವುದು ? ಅತಿ ತೇಜಸ್ವಿಯಾದ ಈತನ ಪರಾಕ್ರಮಕ್ಕೆ ತಕ್ಕಂತೆ ಎಂತಹ ಭೋಜನವನ್ನು ಇವನಿಗೆ ಪೂಜ್ಯನಾದ ನೀನು ಏರ್ಪಡಿಸುವೆ ?

॥ ಬ್ರಹ್ಮೋವಾಚ ॥

ಬಡವಾಮುಖೇಽಸ್ಯ ವಸತಿಃ ಸಮುದ್ರೇ ವೈ ಭವಿಷ್ಯತಿ ।
ಮಮ ಯೋನಿರ್ಜಲಂ ವಿಪ್ರ ತಸ್ಯ ಪೀತವತಃ ಸುಖಂ ॥೫೮॥

ಯತ್ರಾಹಮಾಸ ನಿಯತಂ ಪಿಬನ್ವಾರಿಮಯಂ ಹವಿಃ ।
ತದ್ಧವಿಸ್ತವ ಪುತ್ರಸ್ಯ ವಿಸೃಜಾಮ್ಯಾಲಯಂ ಚ ತತ್ ॥೫೯॥

ತತೋ ಯುಗಾಂತೇ ಭೂತಾನಾಮೇಷ ಚಾಹಂ ಚ ಪುತ್ರಕ ।
ಸಹಿತೌ ವಿಚರಿಷ್ಯಾವೋ ನಿಷ್ಪುತ್ರಾಣಾಮೃಣಾಪಹಃ ॥೬೦॥

ಏಷೋಽಗ್ನಿರಂತಕಾಲೇ ತು ಸಲಿಲಾಶೀ ಮಯಾ ಕೃತಃ ।
ದಹನಸ್ಸರ್ವಭೂತಾನಾಂ ಸದೇವಾಸುರರಕ್ಷಸಾಂ ॥೬೧॥

ಏವಮಸ್ತ್ವಿತಿ ತಂ ಸೋಽಗ್ನಿಃ ಸಂವೃತಜ್ವಾಲಮಂಡಲಃ ।
ಪ್ರವಿವೇಶಾರ್ಣವಮುಖಂ ಪ್ರಕ್ಷಿಪ್ಯ ಪಿತರಿ ಪ್ರಭಾಂ ॥೬೨॥

---

೫೮. ಬ್ರಹ್ಮನು ಹೇಳಿದನು.—ಇವನು ಸಮುದ್ರದಲ್ಲಿ ಬಡವಾ ಎಂದರೆ ಹೆಣ್ಣು ಕುದುರೆಯ ಮುಖದಲ್ಲಿ ವಾಸಿಸುವನು. ಎಲೈ ಬ್ರಾಹ್ಮಣೋತ್ತಮನೇ, ನನ್ನ ಉತ್ಪತ್ತಿ ಸ್ಥಳ ಜಲ ; ಅದನ್ನು ಕುಡಿದವನಿಗೆ ಸುಖವುಂಟು.

೫೯. ಜಲಮಯವಾದ ಹವಿಸ್ಸನ್ನು ಪಾನಮಾಡುತ್ತ ನಾನು ಅಲ್ಲಿ ನಿಯತವಾಗಿ ವಾಸಮಾಡುತ್ತಿದ್ದೆನು. ನಿನ್ನ ಮಗನಿಗೂ ಅದೇ ಹವಿಸ್ಸನ್ನು ಪ್ರಳಯಕಾಲದವರೆಗೂ ಕೊಡುತ್ತಿರುವೆನು.

೬೦-೬೧. ಪುತ್ರಾ, ಬಳಿಕ ಯುಗಾಂತದಲ್ಲಿ ಇವನೂ ನಾನೂ ಒಟ್ಟಿಗೆ ಸಂಚರಿಸುವೆವು. ಜಲವೇ ಆಹಾರವಾದ ಈ ಅಗ್ನಿಯು ಪುತ್ರರಹಿತರಾದ ದೇವತೆಗಳು, ಅಸುರರು ಮತ್ತು ರಾಕ್ಷಸರು ಇವರೆಲ್ಲರ ಪುತ್ರಋಣವನ್ನು ಪರಿಹರಿಸುವಂತೆ ನಾನು ಏರ್ಪಡಿಸಿರುವೆನು.

೬೨. ಆ ಅಗ್ನಿಯು ಹಾಗೆಯೇ ಆಗಲೆಂದು ಹೇಳಿ ಸುತ್ತಲೂ ಪ್ರಸರಿಸುತ್ತಿರುವ ತನ್ನ ಜ್ವಾಲೆಗಳನ್ನು ಕುಗ್ಗಿಸಿಕೊಂಡು, ತನ್ನ ತೇಜಸ್ಸನ್ನು ತಂದೆಯಲ್ಲಿರಿಸಿ ಸಮುದ್ರವನ್ನು ಪ್ರವೇಶಿಸಿದನು.

ಪ್ರತಿಯಾತಸ್ತತೋ ಬ್ರಹ್ಮಾ ಯೇ ಚ ಸರ್ವೇ ಮಹರ್ಷಯಃ ।
ಊರ್ವಸ್ಯಾಗ್ನೇಃ ಪ್ರಭಾಂ ಜ್ಞಾತ್ವಾ ಸ್ವಾಂ ಸ್ವಾಂ ಗತಿಮುಪಾಶ್ರಿತಾಃ ॥೬೩॥

ಹಿರಣ್ಯಕಶಿಪುರ್ದೃಷ್ಟ್ವಾ ತದಾ ತನ್ಮಹದದ್ಭುತಂ ।
ಉಚ್ಚೈಃ ಪ್ರಣತಸರ್ವಾಂಗೋ ವಾಕ್ಯಮೇತದುವಾಚ ಹ ॥೬೪॥

ಭಗವನ್ನದ್ಭುತಮಿದಂ ಸಂವೃತ್ತಂ ಲೋಕಸಾಕ್ಷಿಕಂ ।
ತಪಸಾ ತೇ ಮುನಿಶ್ರೇಷ್ಠ ಪರಿತುಷ್ಟಃ ಪಿತಾಮಹಃ ॥೬೫॥

ಅಹಂ ತು ತವ ಪುತ್ರಸ್ಯ ತವ ಚೈವ ಮಹಾವ್ರತ ।
ಭೃತ್ಯ ಇತ್ಯವಗಂತವ್ಯಃ ಸಾಧ್ಯೋ ಯದಿಹ ಕರ್ಮಣಾ ॥೬೬॥

ತನ್ಮಾಂ ಪಶ್ಯ ಸಮಾಪನ್ನಂ ತವೈವಾರಾಧನೇ ರತಂ ।
ಯದಿ ಸೀದೇ ಮುನಿಶ್ರೇಷ್ಠ ತವೈವ ಸ್ಯಾತ್ಪರಾಜಯಃ ॥೬೭॥

---

೬೩. ಬಳಿಕ ಬ್ರಹ್ಮನು ಹೊರಟುಹೋದನು. ಎಲ್ಲ ಮಹರ್ಷಿಗಳೂ ಬಡಬಾಗ್ನಿಯ ತೇಜಸ್ಸನ್ನು ತಿಳಿದು ತಮ್ಮತಮ್ಮ ಸ್ಥಳಗಳಿಗೆ ತೆರಳಿದರು.

೬೪. ಆಗ ಹಿರಣ್ಯಕಶಿಪು ಅತ್ಯದ್ಭುತವಾದ ಆ ವೃತ್ತಾಂತವನ್ನು ನೋಡಿ ಸಾಷ್ಟಾಂಗ ನಮಸ್ಕಾರಮಾಡಿ ಈ ಮಾತನ್ನು ಹೇಳಿದನು.

೬೫. ಎಲೈ ಪೂಜ್ಯನೇ, ಎಲ್ಲ ಜನಗಳ ಕಣ್ಣೆದುರಿಗೆ ಈ ಅದ್ಭುತ ವ್ಯಾಪಾರವು ನಡೆಯಿತು. ಓ ಮುನಿಶ್ರೇಷ್ಠಾ, ನಿನ್ನ ತಪಸ್ಸಿನಿಂದ ಬ್ರಹ್ಮನು ಸಂತುಷ್ಟನಾದನು.

೬೬. ಎಲೈ ಮಹಾವ್ರತನೇ, ನಾನು ನಿನ್ನ ಮಗನಿಗೂ ನಿನಗೂ ಭೃತ್ಯನೆಂದು ತಿಳಿ; ಏಕೆಂದರೆ ನಿಮ್ಮ ಅದ್ಭುತವಾದ ಕಾರ್ಯದಿಂದ ನಾನು ನಿಮ್ಮ ವಶವಾಗಿರುವೆನು.

೬೭. ಆದುದರಿಂದ ಇಗೋ ನೋಡು; ನಾನು ನಿನ್ನ ಸೇವೆಯಲ್ಲಿಯೇ ಆಸಕ್ತನಾಗಿ ಬಂದಿರುವೆನು. ಓ ಮುನಿವರ್ಯಾ, ನನಗೆ ಪರಾಭವವಾದರೆ ಆ ಅಪಜಯವು ನಿನ್ನದೇ ಆಗುವುದು.

|| ಊರ್ವ ಉವಾಚ ||

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯಸ್ಯ ತೇಽಹಂ ಗುರುಃ ಸ್ಥಿತಃ ।
ನಾಸ್ತಿ ತೇ ತಪಸಾಽನೇನ ಭಯಮದ್ಯೇಹ ಸುವ್ರತ ||೬೮||

ತಾಮೇವ ಮಾಯಾಂ ಗೃಹ್ಣೀಷ್ವ ಮಮ ಪುತ್ರೇಣ ನಿರ್ಮಿತಾಂ ।
ನಿರಂಧನಾಮಗ್ನಿಮಯೀಂ ದುರ್ಧರ್ಷಾಂ ಪಾವಕೈರಪಿ || ೬೯||

ಏಷಾ ತೇ ಸ್ವಸ್ಯ ವಂಶಸ್ಯ ವಶಗಾರಿವಿನಿಗ್ರಹೇ ।
ಸಂರಕ್ಷತ್ಯಾತ್ಮಪಕ್ಷಂ ಚ ವಿಪಕ್ಷಂ ಚ ಪ್ರಧರ್ಷತಿ ||೭೦||

ಏವಮಸ್ತ್ವಿತಿ ತಾಂ ಗೃಹ್ಯ ಪ್ರಣಮ್ಯ ಮುನಿಪುಂಗವಂ ।
ಜಗಾಮ ತ್ರಿದಿವಂ ಹೃಷ್ಟಃ ಕೃತಾರ್ಥೋ ದಾನವೇಶ್ವರಃ ||೭೧||

ಏಷಾ ದುರ್ವಿಷಹಾ ಮಾಯಾ ದೇವೈರಪಿ ದುರಾಸದಾ ।
ಔರ್ವೇಣ ನಿರ್ಮಿತಾ ಪೂರ್ವಂ ಪಾವಕೇನೋರ್ವಸೂನುನಾ ||೭೨||

---

೬೮. ಊರ್ವನು ಹೇಳಿದನು.—ನನ್ನನ್ನು ನೀನು ಗುರುವೆಂದು ತಿಳಿದ ಕಾರಣ ನಾನು ಧನ್ಯನಾದೆನು. ಅನುಗೃಹೀತನಾದೆನು. ಓ ಸುವ್ರತಾ, ನನ್ನ ಈ ತಪಸ್ಸಿನ ಬಲದಿಂದ ನಿನಗೆ ಈಗ ಭಯವಾವುದೂ ಇಲ್ಲ.

೬೯. ನನ್ನ ಪುತ್ರನು ನಿರ್ಮಿಸಿದ ಆ ಮಾಯೆಯನ್ನೇ ತೆಗೆದುಕೋ ; ಅದು ಅಗ್ನಿಮಯವಾದುದು. ಸೌದೆಯನ್ನು ಅಪೇಕ್ಷಿಸದು. ಮಿಕ್ಕ ಅಗ್ನಿಗಳಿಗೆ ಬಗ್ಗದು.

೭೦. ಇದು ನಿನ್ನ ವಂಶಸ್ಥರ ವಶವಾಗಿ ಶತ್ರುಗಳನ್ನು ಅಡಗಿಸುವುದು. ತನ್ನ ಪಕ್ಷದವರನ್ನು ರಕ್ಷಿಸುವುದು ; ಶತ್ರುಗಳನ್ನು ವಿನಾಶಗೊಳಿಸುವುದು.

೭೧. ದಾನವೇಶ್ವರನಾದ ಹಿರಣ್ಯಕಶಿಪು ಹಾಗೆಯೇ ಆಗಲೆಂದು ಅದನ್ನು ತೆಗೆದುಕೊಂಡು, ಮುನಿಶ್ರೇಷ್ಠನಾದ ಊರ್ವನನ್ನು ನಮಸ್ಕರಿಸಿ ಕೃತಾರ್ಥನಾಗಿ ಸಂತೋಷದಿಂದ ಸ್ವರ್ಗಕ್ಕೆ ತೆರಳಿದನು.

೭೨. ಊರ್ವ ಪುತ್ರನಾದ ಔರ್ವಾಗ್ನಿಯಿಂದ ಪೂರ್ವದಲ್ಲಿ ನಿರ್ಮಿತವಾದ ಈ ಮಾಯೆಯು ದುಸ್ಸಹವಾದುದು. ದೇವತೆಗಳೂ ಸಹ ಇದನ್ನು ಎದುರಿಸಲಾರರು.

**ತಸ್ಮಿಂಸ್ತು ವ್ಯುತ್ಥಿತೇ ದೈತ್ಯೇ ನಿರ್ವೀರ್ಯೈಷಾ ನ ಸಂಶಯಃ ।**
**ಶಾಪೋ ಹ್ಯಸ್ಯಾಃ ಪುರಾ ದತ್ತಃ ಸೃಷ್ಟ್ವಾ ಯೇನೈವ ತೇಜಸಾ ॥೭೩॥**

**ಯದ್ಯೇಷಾ ಪ್ರತಿಹಂತವ್ಯಾ ಕರ್ತವ್ಯೋ ಭಗವಾನ್ ಸುಖೀ ।**
**ದೀಯತಾಂ ಮೇ ಸಖಾ ಶಕ್ರ ತೋಯಯೋನಿರ್ನಿಶಾಕರಃ ॥೭೪॥**

**ತೇನಾಹಂ ಸಹ ಸಂಗಮ್ಯ ಯಾದೋಭಿಶ್ಚ ಸಮಾವೃತಃ ।**
**ಮಾಯಾಮೇತಾಂ ಹನಿಷ್ಯಾಮಿ ತ್ವತ್ಪ್ರಸಾದಾನ್ನ ಸಂಶಯಃ ॥೭೫॥**

## ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಸಂಗ್ರಾಮೇ ಪಂಚಸಪ್ತತ್ಯಧಿಕ ಶತತಮೋಽಧ್ಯಾಯಃ

೭೩. ಆ ದೈತ್ಯನು ನಿರ್ಮೂಲವಾದರೆ ಇದರ ವೀರ್ಯವು ಅಡಗುವುದು. ಸಂದೇಹವಿಲ್ಲ. ಇದನ್ನು ತನ್ನ ತೇಜಸ್ಸಿನಿಂದ ಸೃಷ್ಟಿಸಿದ ಔರ್ವನೇ ಇದಕ್ಕೆ ಶಾಪವನ್ನು ಕೊಟ್ಟಿದ್ದಾನೆ.

೭೪. ಓ ಇಂದ್ರಾ, ಇದನ್ನು ನಾಶಗೊಳಿಸಿ ಪೂಜ್ಯನಾದ ನಿನ್ನನ್ನು ಸುಖಿಯನ್ನಾಗಿ ಮಾಡಬೇಕಾದರೆ ಜಲದಲ್ಲಿ ಸಂಭೂತನಾದ ಚಂದ್ರನು ನನಗೆ ಸಹಾಯನಾಗಲಿ.

೭೫. ನಾನು ಅವನೊಡಗೂಡಿ, ಜಲಜಂತುಗಳಿಂದಲೂ ಪರಿವೃತನಾಗಿ ನಿನ್ನ ದಯೆಯಿಂದ ಈ ಮಾಯೆಯನ್ನು ಧ್ವಂಸಮಾಡುವೆನು. ಇದರಲ್ಲಿ ಸಂದೇಹವಿಲ್ಲ.

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಬಡಬಾಗ್ನಿಯ ಉತ್ಪತ್ತಿಕ್ರಮವನ್ನು ವಿವರಿಸಿದೆ.

ಸುರಾಸುರರ ಯುದ್ಧವು ಬಹು ಭಯಂಕರವಾಗಿತ್ತು. ದೇವತೆಗಳು ದಾನವರ ಪ್ರಹಾರವನ್ನು ತಡೆಯಲಾರದೆ ಹೋದರು. ಇಂದ್ರನು ಅಂಧಕಾರಾಸ್ತ್ರವನ್ನು ಪ್ರಯೋಗಿಸಿ ದೈತ್ಯ ಸೈನ್ಯವನ್ನು ಕಗ್ಗತ್ತಲೆಯಲ್ಲಿ ಮುಳುಗಿಸಿದನು. ಆಗ ಮಯನು ಔರ್ವನಿಂದ ಎಂದರೆ ಬಡಬಾಗ್ನಿಯಿಂದ ನಿರ್ಮಿತವಾದ ಮಾಯೆಯನ್ನು ಪ್ರಯೋಗಿಸಿದನು. ದೇವತೆಗಳು ಅದನ್ನು ಎದುರಿಸಲಾರದೆ ಅದರ ತೇಜಸ್ಸಿನಿಂದ ಸಂತಪ್ತರಾದರು. ಆಗ ಇಂದ್ರನು ಪ್ರಶ್ನೆಮಾಡಲು ವರುಣನು ಆ ಅದ್ಭುತವಾದ ಶಕ್ತ್ಯಾಯುಧದ ಪೂರ್ವವೃತ್ತಾಂತವನ್ನು ಹೇಳಿದನು. ಮತ್ತು ಚಂದ್ರನೊಡನೆ ಹೋಗಿ ಆ ಮಾಯೆಯನ್ನು ಧ್ವಂಸಮಾಡುವುದಾಗಿ ಮಾತುಕೊಟ್ಟನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯಸಂಗ್ರಾಮದಲ್ಲಿ
ನೂರ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಷಟ್ಸಪ್ತತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಏವಮುಕ್ತಸ್ತ್ವತಿ ಸಂಹೃಷ್ಟಃ ಶಕ್ರಸ್ತ್ರಿದಶವರ್ಧನಃ ।
ಸಂದಿದೇಶಾಗ್ರತಃ ಸೋಮಂ ಯುದ್ಧಾಯ ಶಿಶಿರಾಯುಧಂ ॥ ೧ ॥

ಗಚ್ಛ ಸೋಮ ಸಹಾಯತ್ವಂ ಕುರು ಪಾಶಧರಸ್ಯ ವೈ ।
ಅಸುರಾಣಾಂ ವಿನಾಶಾಯ ಜಯಾರ್ಥಂ ಚ ದಿವೌಕಸಾಂ ॥ ೨ ॥

ತ್ವಂ ಮತ್ತಃ ಪ್ರತಿವೀರ್ಯಶ್ಚ ಜ್ಯೋತಿಷಾಂ ಚೇಶ್ವರೇಶ್ವರಃ ।
ತ್ವನ್ಮಯಂ ಸರ್ವಲೋಕೇಷು ರಸಂ ರಸವಿದೋ ವಿದುಃ ॥ ೩ ॥

ಕ್ಷಯವೃದ್ಧೀ ತವ ವ್ಯಕ್ತೇ ಸಾಗರಸ್ಯೇವ ಮಂಡಲೇ ।
ಪರಿವರ್ತಸ್ಯಹೋರಾತ್ರಂ ಕಾಲಂ ಜಗತಿ ಯೋಜಯನ್ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ದೇವತೆಗಳ ರಕ್ಷಕನಾದ ಇಂದ್ರನಿಗೆ ವರುಣನ ಮಾತನ್ನು ಕೇಳಿ ಸಂತೋಷವಾಯಿತು ಅವನು ಹಾಗೆಯೇ ಆಗಲೆಂದು ಒಪ್ಪಿ, ಮುಂದೆ ನಿಂತಿದ್ದ ಶೈತ್ಯವೇ ಆಯುಧವೆನಿಸಿದ್ದ ಚಂದ್ರನಿಗೆ ಯುದ್ಧಕ್ಕಾಗಿ ಅಪ್ಪಣೆಯಿತ್ತು ಹೀಗೆ ಹೇಳಿದನು.

೨. ಓ ಚಂದ್ರಾ, ಹೋಗು ; ಅಸುರರ ನಾಶಕ್ಕಾಗಿಯೂ ದೇವತೆಗಳ ಜಯಕ್ಕಾಗಿಯೂ ವರುಣನಿಗೆ ಸಾಹಾಯ್ಯವನ್ನು ಮಾಡು.

೩. ನೀನು ನನಗಿಂತಲೂ ವೀರ ; ಗ್ರಹಗಳಿಗೂ ನಕ್ಷತ್ರಗಳಿಗೂ ಅಧಿಪತಿ. ಎಲ್ಲ ಲೋಕಗಳಲ್ಲಿಯೂ ಇರುವ ರಸವು ನಿನ್ನದೇ ಎಂದು ರಸಜ್ಞರು ತಿಳಿಯುತ್ತಾರೆ.

೪. ಸಾಗರದ ಏರಿಳಿತಗಳಂತೆ ನಿನ್ನ ಮಂಡಲದಲ್ಲಿ ಕ್ಷಯವೂ ವೃದ್ಧಿಯೂ ತೋರಿ ಬರುತ್ತಿವೆ. ಜಗತ್ತಿನಲ್ಲಿ ಕಾಲಭೇದವನ್ನು ಉಂಟುಮಾಡುತ್ತ ನೀನು ಹಗಲೂ ರಾತ್ರಿಯೂ ತಿರುಗುತ್ತಿರುವೆ.

ಲೋಕಚ್ಛಾಯಾಮಯಂ ಲಕ್ಷ್ಮ ತವಾಂಕಃ ಶಶಸನ್ನಿಭಃ ।
ನ ವಿದುಃ ಸೋಮ ದೇವಾಪಿ ಯೇ ಚ ನಕ್ಷತ್ರಯೋನಯಃ ॥ ೫ ॥

ತ್ವಮಾದಿತ್ಯಪಥಾದೂರ್ಧ್ವಂ ಜ್ಯೋತಿಷಾಂ ಚೋಪರಿ ಸ್ಥಿತಃ ।
ತಮಃ ಪ್ರೋತ್ಸಾರ್ಯ ಮಹಸಾ ಭಾಸಯಸ್ಯಖಿಲಂ ಜಗತ್ ॥ ೬ ॥

ಶ್ವೇತಭಾನುರ್ಹಿಮತನುರ್ಜ್ಯೋತಿಷಾಮಧಿಪಃ ಶಶೀ ।
ಅಧಿಕೃತ್ಕಾಲಯೋಗಾತ್ಮಾ ಇಷ್ಟೋ ಯಜ್ಞಶ್ಚ ಸೋಽವ್ಯಯಃ ॥ ೭ ॥

ಓಷಧೀಶಃ ಕ್ರಿಯಾಯೋನಿರ್ಹರಶೇಖರಭಾಕ್ತಥಾ ।
ಶೀತಾಂಶುರಮೃತಾಧಾರಶ್ಚಪಲಃ ಶ್ವೇತವಾಹನಃ ॥ ೮ ॥

ತ್ವಂ ಕಾಂತಿಃ ಕಾಂತವಪುಷಾಂ ತ್ವಂ ಸೋಮಃ ಸೋಮಪಾಯಿನಾಂ ।
ಸೌಮ್ಯಸ್ತ್ವಂ ಸರ್ವಭೂತಾನಾಂ ತಿಮಿರಘ್ನಸ್ತ್ವಮೃಕ್ಷರಾಟ್ ॥ ೯ ॥

---

೫. ಲೋಕದ ಛಾಯೆ ನಿನ್ನಲ್ಲಿ ಬಿದ್ದು ಮೊಲದ ಆಕಾರದ ಮಚ್ಚೆಯಂತೆ ಕಾಣುವುದು. ಎಲೈ ಚಂದ್ರನೇ, ನಕ್ಷತ್ರಗಳಿಂದ ಉತ್ಪನ್ನರಾದ ದೇವತೆಗಳೂ ಸಹ ನಿನ್ನ ಮಹಿಮೆಯನ್ನರಿಯರು.

೬. ನೀನು ಸೂರ್ಯನ ಮಾರ್ಗಕ್ಕೂ ಅತ್ತ ನಕ್ಷತ್ರಗಳಿಗೂ ಮೇಲ್ಗಡೆಯಿರುವೆ. ಕತ್ತಲೆಯನ್ನು ಓಡಿಸಿ ನಿನ್ನ ತೇಜಸ್ಸಿನಿಂದ ಜಗತ್ತನ್ನೆಲ್ಲ ಬೆಳಗಿರುವೆ.

೭-೮. ನಿನ್ನ ಕಿರಣಗಳು ಬಿಳಿಯವು. ದೇಹವು ಹಿಮಮಯವಾದುದು. ನೀನು ಗ್ರಹನಕ್ಷತ್ರಗಳ ಅಧಿಪತಿ. ಮೊಲದ ಮಚ್ಚೆಯಿಂದ ಕೂಡಿದವನು. ಎಲ್ಲರಿಗೂ ಮೇಲ್ಪಟ್ಟವನು. ಕಾಲರೂಪ, ಯೋಗರೂಪ, ಯಜಮಾನ, ಯಜ್ಞರೂಪನಾದ ಆ ವಿಷ್ಣು ಇವೆಲ್ಲ ನೀನೇ ಆಗಿರುವೆ. ಮತ್ತು ಓಷಧಿಗಳ ಅಧಿಪತಿಯೂ, ಕರ್ಮ ಕಲಾಪಗಳಿಗೆ ಕಾರಣನೂ, ಈಶ್ವರನ ಶಿರೋಭೂಷಣನೂ, ಶೀತಕಿರಣನೂ, ಅಮೃತದ ನಿಧಿಯೂ, ಚಪಲನೂ ಮತ್ತು ಶ್ವೇತವಾಹನನೂ ನೀನಾಗಿರುವೆ.

೯. ಸುಂದರವಾದ ದೇಹಗಳಲ್ಲಿನ ಕಾಂತಿ ನೀನು. ಯಜ್ಞದಲ್ಲಿ ಸೋಮವನ್ನು ಪಾನಮಾಡಿದವರ ಸೋಮರಸ ನೀನು. ಸಕಲ ಪ್ರಾಣಿಗಳಿಗೂ ಸೌಮ್ಯನು ನೀನು. ಅಂಧಕಾರವನ್ನು ತೊಲಗಿಸುವ ನಕ್ಷತ್ರಗಳ ರಾಜನು ನೀನು.

ತದ್ಗಚ್ಛ ತ್ವಂ ಮಹಾಸೇನ ವರುಣೇನ ವರೂಥಿನಾ ।
ಶಮಯ ತ್ವಾಸುರೀಂ ಮಾಯಾಂ ಯಯಾ ದಹ್ಯಾಮ ಸಂಯುಗೇ ॥೧೦॥

॥ ಸೋಮ ಉವಾಚ ॥

ಯನ್ಮಾಂ ವದಸಿ ಯುದ್ಧಾರ್ಥೇ ದೇವರಾಜ ವರಪ್ರದ ।
ಏವಂ ವರ್ಷಾಮಿ ಶಿಶಿರಂ ದೈತ್ಯಮಾಯಾಪಕರ್ಷಣಂ ॥೧೧॥

ಏತಾನ್ಮಚ್ಛೀತನಿರ್ದಗ್ಧಾನ್ಪಶ್ಯ ತ್ವಂ ಹಿಮವೇಷ್ಟಿತಾನ್ ।
ವಿಮಾಯಾನ್ ವಿಮದಾಂಶ್ಚೈವ ದೈತ್ಯಸಿಂಹಾನ್ಮಹಾಹವೇ ॥೧೨॥

ಇತ್ಯುಕ್ತ್ವಾ ತಾರಕಾಧೀಶಃ ಸಜಲೇಶಃ ಶಿವೋದಕೈಃ ।
ಪ್ಲಾವಯಾಮಾಸ ಸೈನ್ಯಾನಿ ಸುರಾಣಾಂ ಶಾಂತಿವೃದ್ಧಯೇ ॥೧೩॥

ತೇಷಾಂ ಹಿಮಕರೋತ್ಸೃಷ್ಟಾಃ ಸಪಾಶಾ ಹಿಮವೃಷ್ಟಯಃ ।
ವೇಷ್ಟಯಂತಿ ಸ್ಮ ತಾನ್ ಘೋರಾನ್ ದೈತ್ಯಾನ್ ಮೇಘಗಣಾ ಇವ ॥೧೪॥

---

೧೦. ಬಹುಸೇನಾಪರಿವೃತನಾದ ಓ ಚಂದ್ರಾ, ಆದುದರಿಂದ ನೀನು ವೀರನಾದ ವರುಣನೊಡನೆ ಹೋಗು. ಯುದ್ಧದಲ್ಲಿ ನಮ್ಮನ್ನು ದಹಿಸುತ್ತಿರುವ ಈ ದೈತ್ಯಮಾಯಾ ಶಕ್ತಿಯನ್ನು ಅಡಗಿಸು.

೧೧. ಚಂದ್ರನು ಹೇಳಿದನು.—ವರಗಳನ್ನು ಕರುಣಿಸುವ ಎಲೈ ಇಂದ್ರನೇ, ಯುದ್ಧಕ್ಕಾಗಿ ನನಗೆ ನೀನು ಹೇಳುತ್ತಿರುವೆಯಷ್ಟೆ. ಅದರಂತೆಯೇ ದೈತ್ಯರ ಮಾಯೆಯನ್ನು ತೊಲಗಿಸಬಲ್ಲ ಮಂಜಿನ ಮಳೆಯನ್ನು ಕರೆಯುತ್ತೇನೆ.

೧೨. ಈ ದೈತ್ಯೋತ್ತಮರು ಮಹಾ ಸಂಗ್ರಾಮದಲ್ಲಿ ನನ್ನ ಶೈತ್ಯದಿಂದ ಹಾಳಾಗಿ, ತಮ್ಮ ಮಾಯೆಯೂ ಮದವೂ ನಷ್ಟವಾಗಲು, ಹಿಮದಲ್ಲಿ ಹೊರಳಾಡುವುದನ್ನು ನೀನು ನೋಡುವೆಯಂತೆ.

೧೩. ಚಂದ್ರನು ಹೀಗೆ ಹೇಳಿ ವರುಣನೊಡಗೂಡಿ ದೇವತೆಗಳ ಅಭಿವೃದ್ಧಿ ಗೋಸ್ಕರ ದೈತ್ಯರ ಸೈನ್ಯವನ್ನು ನೀರಿನಲ್ಲಿ ತೇಲಿಸಿ ಬಿಟ್ಟನು.

೧೪. ಚಂದ್ರನು ಕರೆದ ಮಂಜಿನ ಮಳೆಗಳೂ ವರುಣನ ಪಾಶಗಳೂ ಹೋಗಿ ಭಯಂಕರವಾದ ಆ ದೈತ್ಯರನ್ನು ಮೋಡಗಳ ರಾಶಿಯಂತೆ ಆವರಿಸಿದುವು.

ತೌ ಪಾಶಶೀತಾಂಶುಧರೌ ವರುಣೇಂದೂ ಮಹಾಬಲಾ ।
ಜಘ್ನತುರ್ಹಿಮಪಾತೈಶ್ಚ ಪಾಶಪಾತೈಶ್ಚ ದಾನವಾನ್ ॥೧೫॥

ದ್ವಾವಂಬುನಾಥೌ ಸಮರೇ ತೌ ಪಾಶಹಿಮಯೋಧಿನೌ ।
ಮೃಧೇ ಚೇರುತುರಂಭೋಭಿಃ ಕ್ಷುಬ್ಧಾವಿವ ಮಹಾರ್ಣವೌ ॥೧೬॥

ತಾಭ್ಯಾಮಾಪ್ಲಾವಿತಂ ಸೈನ್ಯಂ ತದ್ದಾನವಮದೃಶ್ಯತ ।
ಜಗತ್ಸಂವರ್ತಕಾಂಭೋದೈಃ ಪ್ರವಿಷ್ಟೈರಿವ ಸಂವೃತಂ ॥೧೭॥

ತಾವುದ್ಯತಾಂಬುನಾಥೌ ತು ಶಶಾಂಕವರುಣಾವುಭೌ ।
ಶಮಯಾಮಾಸತುರ್ಮಾಯಾಂ ದೇವೌ ದೈತ್ಯೇಂದ್ರನಿರ್ಮಿತಾಂ ॥೧೮॥

ಶೀತಾಂಶುಜಾಲನಿರ್ದಗ್ಧಾಃ ಪಾಶೈಶ್ಚ ಸ್ಪಂದಿತಾ ರಣೇ ।
ನ ಶೇಕುಶ್ಚಲಿತುಂ ದೈತ್ಯಾ ವಿಶಿರಸ್ಕಾ ಇವಾದ್ರಯಃ ॥೧೯॥

---

೧೫. ಪಾಶವೂ ಶೀತಕಿರಣವೂ ಆಯುಧವಾದ, ಮಹಾಬಲರಾದ ಆ ವರುಣ ಮತ್ತು ಚಂದ್ರರು ಹಿಮದಿಂದಲೂ ಪಾಶಗಳಿಂದಲೂ ದಾನವರನ್ನು ಪ್ರಹರಿಸಿದರು.

೧೬. ಜಲಾಧಿಪತಿಗಳಾದ ಆ ವರುಣ ಚಂದ್ರರಿಬ್ಬರೂ ಅಲ್ಲೋಲಕಲ್ಲೋಲಗಳಾದ ಎರಡು ಮಹಾಸಾಗರಗಳಂತೆ ಯುದ್ಧದಲ್ಲಿ ಓಡಾಡಿದರು.

೧೭. ಅವರಿಬ್ಬರಿಂದ ಜಲಮಯವಾದ ಆ ದೈತ್ಯಸೈನ್ಯವು ಪ್ರಳಯಕಾಲದ ಮೋಡಗಳಿಂದ ಆವೃತವಾದ ಜಗತ್ತಿನಂತೆ ತೋರಿತು.

೧೮. ಜಲದ ಅಧಿದೇವತೆಗಳಾದ ಆ ವರುಣ ಮತ್ತು ಚಂದ್ರರಿಬ್ಬರೂ ಪ್ರಯತ್ನಪಟ್ಟು ಮಯನು ಪ್ರಯೋಗಿಸಿದ ಮಾಯೆಯನ್ನು ಅಡಗಿಸಿದರು.

೧೯. ಯುದ್ಧದಲ್ಲಿ ಹಿಮಕಿರಣಗಳ ಪರಂಪರೆಯು ಕೊರೆಯುತ್ತಿರಲು, ಪಾಶಾಯುಧಗಳಿಂದ ಕಂಪಿಸುತ್ತ ತಲೆಗೆ ಕಬ್ಬಿಣದ ಕುಲಾವಿಗಳಿಲ್ಲದ ದೈತ್ಯರು ಬೆಟ್ಟಗಳಂತೆ ಚಲಿಸಲಾರದೆ ಬಿದ್ದಿದ್ದರು.

೨೦. ಚಂದ್ರನು ಎಡೆಬಿಡದೆ ಪ್ರಹರಿಸುತ್ತಿರಲು, ಜಲದಿಂದಲೂ ಮಂಜಿನಿಂದಲೂ ಪೀಡಿತರಾಗಿ ಮೈಯೆಲ್ಲ ಹಿಮದಿಂದ ತೊಯ್ದುಹೋಗಿರಲು ದೈತ್ಯರು ಉಷ್ಣವಿಲ್ಲದ ಅಗ್ನಿಗಳಂತೆ ಕಾಣುತ್ತಿದ್ದರು.

ಶೀತಾಂಶುನಿಹತಾಸ್ತೇ ತು ದೈತ್ಯಾಸ್ತೋಯಹಿಮಾರ್ದಿತಾಃ ।
ಹಿಮಾಪ್ಲಾವಿತಸರ್ವಾಂಗಾ ನಿರೂಷ್ಮಾಣ ಇವಾಗ್ನಯಃ ॥೨೦॥

ತೇಷಾಂ ತು ದಿವಿ ದೈತ್ಯಾನಾಂ ವಿಪರೀತಪ್ರಭಾಣಿ ವೈ ।
ವಿಮಾನಾನಿ ವಿಚಿತ್ರಾಣಿ ಪ್ರಪತಂತ್ಯುತ್ಪತಂತಿ ಚ ॥೨೧॥

ತಾನ್ ಪಾಶಹಸ್ತಗ್ರಥಿತಾಂಶ್ಛಾದಿತಾಞ್ಛೀತರಶ್ಮಿಭಿಃ ।
ಮಯೋ ದದರ್ಶ ಮಾಯಾವೀ ದಾನವಾನ್ ದಿವಿ ದಾನವಃ ॥೨೨॥

ಸ ಶಿಲಾಜಾಲವಿತತಾಂ ಖಡ್ಗಚರ್ಮಾಟ್ಟಹಾಸಿನೀಂ ।
ಪಾದಪೋತ್ಕಟಕೂಟಾಗ್ರಾಂ ಕಂದರಾಕೀರ್ಣಕಾನನಾಂ ॥೨೩॥

ಸಿಂಹವ್ಯಾಘ್ರಗಣಾಕೀರ್ಣಾಂ ನದದ್ಭಿರ್ಗಜಯೂಥಪೈಃ ।
ಈಹಾಮೃಗಗಣಾಕೀರ್ಣಾಂ ಪವನಾಘೂರ್ಣಿತದ್ರುಮಾಂ ॥೨೪॥

ನಿರ್ಮಿತಾಂ ಸ್ವೇನ ಯತ್ನೇನ ಕೂಜಿತಾಂ ದಿವಿ ಕಾಮಗಾಂ ।
ಪ್ರಥಿತಾಂ ಪಾರ್ವತೀಂ ಮಾಯಾಮಸೃಜತ್ಸ ಸಮಂತತಃ ॥೨೫॥

---

೨೧. ಆ ದೈತ್ಯರ ವಿಮಾನಗಳು ಕಾಂತಿಯನ್ನು ಕಳೆದುಕೊಂಡು ಆಕಾಶದಲ್ಲಿ ಬೀಳುತ್ತಿದ್ದುವು. ಮತ್ತು ಏಳುತ್ತಿದ್ದುವು.

೨೨. ಪಾಶಗಳಿಂದ ಬಿಗಿದ ಕೈಯೂ ಹಿಮಕಿರಣದಿಂದ ಆವೃತವಾದ ಮೈಯೂ ಆಗಿ ಬಳಲುತ್ತಿರುವ ಆ ದಾನವರನ್ನು ಮಾಯಾವಿಯಾದ ಮಯನು ನೋಡಿದನು.

೨೩-೨೫. ಅವನು ತನ್ನ ಪ್ರಯತ್ನದಿಂದ ನಿರ್ಮಿತವಾದ, ಅಬ್ಬರಿಸುತ್ತ ಬೇಕಾದಂತೆ ಸಂಚರಿಸಬಲ್ಲ, ಪ್ರಸಿದ್ಧವಾದ ಪರ್ವತರೂಪವಾದ ಮಾಯಾ ಶಕ್ತಿಯನ್ನು ಎಲ್ಲಕಡೆಯಲ್ಲೂ ಪ್ರಯೋಗಿಸಿದನು. ಅದು ಕಲ್ಲು ಬಂಡೆಗಳ ರಾಶಿಯಿಂದ ತುಂಬಿದ್ದಿತು· ಕತ್ತಿ ಗುರಾಣಿಗಳಿಂದ ಅಟ್ಟಹಾಸಮಾಡುತ್ತಿತ್ತು. ಅದರ ಶಿಖರದಲ್ಲಿ ಮರಗಳು ಗುಂಪಾಗಿ ಬೆಳೆದಿದ್ದುವು. ಕಾಡಿನಲ್ಲಿ ಗುಹೆಗಳು ಯಥೇಚ್ಛವಾಗಿದ್ದುವು. ಸಿಂಹ, ಹುಲಿ ಮತ್ತು ತೋಳಗಳು ಹಿಂಡು ಹಿಂಡಾಗಿದ್ದುವು. ಆನೆಗಳ ಸಲಗಗಳು ಘರ್ಜಿಸುತ್ತಿದ್ದುವು. ಮರಗಳು ಗಾಳಿಯಿಂದ ಭೋರಿಡುತ್ತಿದ್ದುವು.

ಸಾಸಿಶಬ್ದೈಃ ಶಿಲಾವರ್ಷೈಃ ಸಂಪತದ್ಭಿಶ್ಚ ಪಾದಪೈಃ ।
ಜಘಾನ ದೇವಸಂಘಾಂಶ್ಚ ದಾನವಾಂಶ್ಚಾಪ್ಯಜೀವಯತ್ ॥೨೬॥

ನೈಶಾಕರೀ ವಾರುಣೀ ಚ ಮಾಯೇಽಂತರ್ದಧತುಸ್ತತಃ ।
ಅಸಿಭಿಶ್ಚಾಯಸಗಣೈಃ ಕಿರ್ಣ ದೇವಗಣಾನ್ರಣೇ ॥೨೭॥

ಸಾಶ್ಮಯಂತ್ರಾಯುಧಘನಾ ದ್ರುಮಪರ್ವತಸಂಕಟಾ ।
ಅಭವದ್ಘೋರಸಂಚಾರಾ ಪೃಥಿವೀ ಪರ್ವತೈರಿವ ॥೨೮॥

ಅಶ್ಮನಾ ಪ್ರಹತಾಃ ಕೇಚಿಚ್ಛಿಲಾಭಿಃ ಶಕಲೀಕೃತಾಃ ।
ನಾನಿರುದ್ಧೋ ದ್ರುಮಗಣೈರ್ದೇವೋಽದೃಶ್ಯತ ಕಶ್ಚನ ॥೨೯॥

ತದಪಧ್ವಸ್ತಧನುಷಂ ಭಗ್ನಪ್ರವರಣಾವಿಲಂ ।
ನಿಷ್ಪ್ರಯತ್ನಂ ಸುರಾನೀಕಂ ವರ್ಜಯಿತ್ವಾ ಗದಾಧರಂ ॥೩೦॥

---

೨೬. ಕತ್ತಿಗಳು ಧ್ವನಿಮಾಡುತ್ತಿರಲು, ಬಂಡೆಗಳ ಮಳೆ ಸುರಿಯುತ್ತಿರಲು, ಮರಗಳು ಬೀಳುತ್ತಿರಲು, ಅವನು ಆ ಮಾಯೆಯಿಂದ ದೇವತೆಗಳನ್ನು ಸಂಹರಿಸಿ ದೈತ್ಯರನ್ನು ಬದುಕಿಸಿದನು.

೨೭-೨೮. ಬಳಿಕ ಚಂದ್ರವರುಣರ ಮಾಯೆಗಳೆರಡೂ ಮರೆಯಾದುವು. ಕತ್ತಿಗಳಿಂದಲೂ ಇನ್ನೂ ಅನೇಕ ಕಬ್ಬಿಣದ ಆಯುಧಗಳಿಂದಲೂ ದೇವಗಣಗಳು ದಿಕ್ಕುಪಾಲಾಗಿ ಚದುರಿದರು. ಭೂಮಿಯಲ್ಲಿ ಬಂಡೆಗಳೂ ಯಂತ್ರಗಳೂ ಒತ್ತೊತ್ತಾಗಿ ಬಿದ್ದಿದ್ದುವು. ಮರಗಳೂ ಪರ್ವತಗಳೂ ನಿಬಿಡವಾಗಿದ್ದುವು. ಪರ್ವತಗಳಿಂದ ಆಗುವಂತೆಯೇ ಇವುಗಳಿಂದಲೂ ನೆಲದಮೇಲೆ ಸಂಚಾರಕ್ಕೆ ದೊಡ್ಡ ಅಡ್ಡಿಯಾಯಿತು.

೨೯. ಕೆಲವರಿಗೆ ಕಲ್ಲಿನಿಂದ ಏಟು ಬಿದ್ದಿತು. ಇನ್ನೂ ಕೆಲವರು ಬಂಡೆಗಳಿಂದ ನುಚ್ಚುನೂರಾದರು. ದೇವತೆಗಳಲ್ಲಿ ಮರಗಳ ಹೊಡೆತಕ್ಕೆ ಸಿಕ್ಕದವರೊಬ್ಬರೂ ಇರಲಿಲ್ಲ.

೩೦. ದೇವತೆಗಳ ಸೈನ್ಯದಲ್ಲಿ ವಿಷ್ಣುವೊಬ್ಬನನ್ನುಳಿದು ಮಿಕ್ಕವರೆಲ್ಲರ ಬಿಲ್ಲುಗಳೂ ನಾಶವಾದುವು. ಆಯುಧಗಳು ಮುರಿದು ಬಿದ್ದುವು. ದಿಕ್ಕುತೋರದೆ ಅವರು ಪ್ರಯತ್ನರಹಿತರಾದರು.

ಸ ಹಿ ಯುದ್ಧಗತಃ ಶ್ರೀಮಾನೀಶೋ ನ ಸ್ಮ ವ್ಯಕಂಪತ ।
ಸಹಿಷ್ಣುತ್ವಾಜ್ಜಗತ್ಸ್ವಾಮೀ ನ ಚುಕ್ರೋಧ ಗದಾಧರಃ ॥೩೧॥

ಕಾಲಜ್ಞಃ ಕಾಲಮೇಘಾಭಃ ಸಮೀಕ್ಷ್ಯ ಕಾಲಮಾಹವೇ ।
ದೇವಾಸುರವಿಮರ್ದಂ ತು ದ್ರಷ್ಟುಕಾಮಸ್ತದಾ ಹರಿಃ ॥೩೨॥

ತತೋ ಭಗವತಾ ದೃಷ್ಟೌ ರಣೇ ಪಾವಕಮಾರುತೌ ।
ಚೋದಿತೌ ವಿಷ್ಣುವಾಕ್ಯೇನ ತೌ ಮಾಯಾಮುಪಕರ್ಷತಾಂ ॥೩೩॥

ತಾಭ್ಯಾಮುದ್ಧತವೇಗಾಭ್ಯಾಂ ಪ್ರವೃದ್ಧಾಭ್ಯಾಂ ಮಹಾಹವೇ ।
ದಗ್ಧಾ ಸಾ ಪಾರ್ವತೀ ಮಾಯಾ ಭಸ್ಮೀಭೂತಾ ನನಾಶ ಹ ॥೩೪॥

ಸೋಽನಿಲೋಽನಲಸಂಯುಕ್ತಃ ಸೋಽನಲಶ್ಚಾನಿಲಾಕುಲಃ ।
ದೈತ್ಯಸೇನಾಂ ದದಹತುರ್ಯುಗಾಂತೇಷ್ವಿವ ಮೂರ್ಛಿತೌ ॥೩೫॥

---

೩೧. ಸರ್ವೇಶ್ವರನಾದ ಆ ಶ್ರೀಮನ್ನಾರಾಯಣನು ಯುದ್ಧಕ್ಕೆ ಹೋಗಿದ್ದರೂ ನಡುಗಲಿಲ್ಲ. ಜಗತ್ಸ್ವಾಮಿಯಾದ ಆ ಗದಾಧರನು ಕ್ಷಮಾಶೀಲನಾದುದರಿಂದ ಕೋಪಿಸಿಕೊಳ್ಳಲೂ ಇಲ್ಲ.

೩೨. ಕಾಲವನ್ನು ಬಲ್ಲವನೂ, ಕಾಲಮೇಘದಂತೆ ಮೈಬಣ್ಣದವನೂ ಆದ ವಿಷ್ಣುವು ದೇವಾಸುರರ ಹೋರಾಟವನ್ನು ನೋಡಬೇಕೆಂದು ಬಯಸಿ ಯುದ್ಧದಲ್ಲಿ ಸಮಯವನ್ನು ಇದಿರು ನೋಡುತ್ತಿದ್ದನು.

೩೩. ಬಳಿಕ ಭಗವಂತನಾದ ವಿಷ್ಣು ಅಗ್ನಿವಾಯುಗಳನ್ನು ನೋಡಿದನು. ಅವನಿಂದ ಆಜ್ಞಪ್ತರಾಗಿ ಅವರಿಬ್ಬರೂ ಆ ದೈತ್ಯಮಾಯೆಯನ್ನು ಹಿಮ್ಮೆಟ್ಟಿಸಿದರು.

೩೪. ಆ ದೊಡ್ಡಯುದ್ಧದಲ್ಲಿ ಅವರಿಬ್ಬರೂ ಬಹುಪ್ರಬಲರಾಗಿ ಅತಿ ವೇಗದಿಂದ ಆ ಪರ್ವತಮಾಯೆಯನ್ನು ಸುಟ್ಟರು. ಅದು ಬೂದಿಯಾಗಿ ಹಾಳಾಯಿತು.

೩೫. ಅಗ್ನಿಯೊಡಗೂಡಿ ವಾಯುವೂ ವಾಯುವಿನೊಡಗೂಡಿ ಅಗ್ನಿಯೂ ಪ್ರಳಯಕಾಲದಲ್ಲಿ ಒಟ್ಟುಗೂಡುವಂತೆ ಕೂಡಿ ಆವೇಶದಿಂದ ದೈತ್ಯಸೈನ್ಯವನ್ನು ಸುಟ್ಟರು.

ವಾಯುಃ ಪ್ರಧಾವಿತಸ್ತತ್ರ ಪಶ್ಚಾದಗ್ನಿಸ್ತು ಮಾರುತಂ ।
ಚೇರತುರ್ದಾನವಾನೀಕೇ ಕ್ರೀಡಂತಾವನಿಲಾನಲೌ ॥೩೬॥

ಭಸ್ಮಾವಯವಭೂತೇಷು ಪ್ರಪತತ್ಸೂತ್ಪತತ್ಸು ಚ ।
ದಾನವಾನಾಂ ವಿಮಾನೇಷು ನಿಪತತ್ಸು ಸಮಂತತಃ ॥೩೭॥

ವಾತಸ್ಕಂಧಾಪವಿದ್ಧೇಷು ಕೃತಕರ್ಮಣಿ ಪಾವಕೇ ।
ಮಾಯಾಬಂಧೇ ನಿವೃತ್ತೇ ತು ಸ್ತೂಯಮಾನೇ ಗದಾಧರೇ ॥೩೮॥

ನಿಷ್ಪ್ರಯತ್ನೇಷು ದೈತ್ಯೇಷು ತ್ರೈಲೋಕ್ಯೇ ಮುಕ್ತಬಂಧನೇ ।
ಸಂಪ್ರಹೃಷ್ಟೇಷು ದೇವೇಷು ಸಾಧು ಸಾಧ್ವಿತಿ ಸರ್ವಶಃ ॥೩೯॥

ಜಯೇ ದಶಶತಾಕ್ಷಸ್ಯ ದೈತ್ಯಾನಾಂ ಚ ಪರಾಜಯೇ ।
ದಿಕ್ಷು ಸರ್ವಾಸು ಶುದ್ಧಾಸು ಪ್ರವೃತ್ತೇ ಧರ್ಮವಿಸ್ತರೇ ॥೪೦॥

ಅಪಾವೃತೇ ಚಂದ್ರಮಸಿ ಸ್ವಸ್ಥಾನಸ್ಥೇ ದಿವಾಕರೇ ।
ಪ್ರಕೃತಿಸ್ಥೇಷು ಲೋಕೇಷು ತ್ರಿಷು ಚಾರಿತ್ರಬಂಧುಷು ॥೪೧॥

---

೩೬. ಮುಂದುಗಡೆ ವಾಯುವೂ ಅವನ ಹಿಂದೆ ಅಗ್ನಿಯೂ ನುಗ್ಗಿದರು. ಅವರಿಬ್ಬರೂ ದಾನವಸೈನ್ಯದಲ್ಲಿ ಕ್ರೀಡಿಸುತ್ತ ಅಲ್ಲೆಲ್ಲ ಸಂಚರಿಸಿದರು.

೩೭-೪೭. ಅಗ್ನಿಯೂ ವಾಯುವೂ ಆ ಯುದ್ಧದಲ್ಲಿ ಅಂತಹ ಅದ್ಭುತವಾದ ಸಾಹಸಕಾರ್ಯವನ್ನು ನಡೆಸಿದರು. ಅದರಿಂದ ದಾನವರ ವಿಮಾನಗಳ ಅವಯವ ಗಳೆಲ್ಲ ಸುಟ್ಟು ಬೂದಿಯಾಗಿ ಬಿದ್ದು ಬಿದ್ದು ಏಳುತ್ತಿದ್ದುವು. ಅವು ವಾಯುವಿನ ವೇಗಕ್ಕೆ ಸಿಕ್ಕಿ ಎತ್ತೆತ್ತಲೂ ಚದುರಿಬಿದ್ದುವು. ಮಾಯಾಬಂಧವು ಕಳಚಿತು. ವಿಷ್ಣು ವನ್ನು ಎಲ್ಲರೂ ಹೊಗಳಿದರು. ದೈತ್ಯರು ಪ್ರಯತ್ನಹೀನರಾದರು. ಮೂರು ಲೋಕಕ್ಕೂ ಒದಗಿದ್ದ ಬಂಧನವು ಹೋಯಿತು. ದೇವತೆಗಳು ಸಂತೋಷ ಗೊಂಡರು. ಎಲ್ಲ ಕಡೆಯೂ ಸಾಧು ಸಾಧುವೆಂಬ ಶಬ್ದವು ಹರಡಿತು. ದೇವೇಂದ್ರ ನಿಗೆ ಜಯವೂ ದೈತ್ಯರಿಗೆ ಪರಾಜಯವೂ ಆಗಲು ಎಲ್ಲದಿಕ್ಕುಗಳೂ ನಿರ್ಮಲ ವಾದುವು. ಧರ್ಮವು ವಿಶೇಷವಾಗಿ ಹರಡಿತು. ಚಂದ್ರನು ನಿರ್ಬಂಧವಿಲ್ಲದವ ನಾದನು. ಸೂರ್ಯನು ತನ್ನ ಸ್ಥಾನದಲ್ಲಿ ಪ್ರಕಾಶಿಸಿದನು. ಜನರು ಯಾಗದಲ್ಲಿ ತೊಡಗಿದರು. ಪಾಪಗಳು ಶಾಂತವಾದುವು. ಮೃತ್ಯುವು ಲೋಕದ ಮೇಲೆ ಮತ್ತೆ

ಯಜಮಾನೇಷು ಭೂತೇಷು ಪ್ರಶಾಂತೇಷು ಚ ಪಾಪ್ಮಸು ।
ಅಭಿನ್ನಬಂಧನೇ ವೃತ್ತೌ ಹೂಯಮಾನೇ ಹುತಾಶನೇ ॥೪೨॥

ಯಜ್ಞಶೋಭಿಷು ದೇವೇಷು ಸ್ವರ್ಗಾರ್ಥಂ ದರ್ಶಯತ್ಸು ಚ ।
ಲೋಕಪಾಲೇಷು ಸರ್ವೇಷು ದಿಕ್ಷು ಸಂಯಾನವರ್ತಿಷು ॥೪೩॥

ಭಾವೇ ತಪಸಿ ಸಿದ್ಧಾನಾಮಭಾವೇ ಪಾಪಕರ್ಮಣಾಂ ।
ದೇವಪಕ್ಷೇ ಪ್ರಮುದಿತೇ ದೈತ್ಯಪಕ್ಷೇ ವಿಷೀದತಿ ॥೪೪॥

ತ್ರಿಪಾದವಿಗ್ರಹೇ ಧರ್ಮೇ ಅಧರ್ಮೇ ಪಾದವಿಗ್ರಹೇ ।
ಅಪಾವೃತ್ತೇ ಮಹಾದ್ವಾರೇ ವರ್ತಮಾನೇ ಚ ಸತ್ಪಥೇ ॥೪೫॥

ಲೋಕೇ ಪ್ರವೃತ್ತೇ ಧರ್ಮೇಷು ಸಧ್ವರ್ಮೇಷ್ವಾಶ್ರಮೇಷು ಚ ।
ಪ್ರಜಾರಕ್ಷಣಯುಕ್ತೇಷು ಭ್ರಾಜಮಾನೇಷು ರಾಜಸು ॥೪೬॥

ಪ್ರಶಾಂತಕಲ್ಮಷೇ ಲೋಕೇ ಶಾಂತೇ ತಮಸಿ ದಾನವೇ ।
ಅಗ್ನಿಮಾರುತಯೋಸ್ತತ್ರ ವೃತ್ತೇ ಸಂಗ್ರಾಮಕರ್ಮಣಿ ॥೪೭॥

---

ತನ್ನ ಬಂಧನವನ್ನು ಸ್ಥಾಪಿಸಿದನು. ಅಗ್ನಿಯಲ್ಲಿ ಹೋಮಕಾರ್ಯವು ಪ್ರಾರಂಭವಾಯಿತು. ದೇವತೆಗಳು ಯಜ್ಞದಿಂದ ತೃಪ್ತರಾಗಿ ಮನುಷ್ಯರಿಗೆ ಸ್ವರ್ಗಲಾಭವನ್ನು ತೋರಿಸುತ್ತಿದ್ದರು. ಲೋಕಪಾಲಕರೆಲ್ಲರೂ ವಾಹನಗಳನ್ನೇರಿ ತಮ್ಮತಮ್ಮ ದಿಕ್ಕುಗಳಲ್ಲಿ ಸುಖವಾಗಿದ್ದರು. ತಪಸ್ಸಿದ್ಧಿಗಳು ನೆಲೆಗೊಂಡುವು. ಪಾಪಕರ್ಮಗಳು ನಷ್ಟವಾದುವು. ದೇವಪಕ್ಷದವರು ಬಹು ಸಂತುಷ್ಟರಾದರು. ದೈತ್ಯಪಕ್ಷದವರು ವಿಷಾದಗೊಂಡರು. ಧರ್ಮವು ಮೂರುಪಾಲೂ ಅಧರ್ಮವು ಒಂದು ಪಾಲೂ ಆದುವು. ಧರ್ಮಾಚರಣೆಯೆಂಬ ಹೆಬ್ಬಾಗಿಲು ತೆರೆಯಿತು. ಸನ್ಮಾರ್ಗವು ರೂಢಿಗೆ ಬಂದಿತು. ಜನರು ಧರ್ಮದಲ್ಲಿ ತೊಡಗಿದರು. ರಾಜರು ವರ್ಣಾಶ್ರಮ ಧರ್ಮಗಳನ್ನು ರಕ್ಷಿಸಿ ಪ್ರಜಾಪರಿಪಾಲನದಲ್ಲಿ ನಿರತರಾದರು. ಲೋಕದಲ್ಲಿ ಕಲ್ಮಷವೆಂಬುದು ಅಡಗಿತು. ದಾನವರೆಂಬ ಅಂಧಕಾರವು ತೊಲಗಿತು. ಜಗತ್ತಿನಲ್ಲೆಲ್ಲ ಅಗ್ನಿವಾಯುಗಳ ಕೀರ್ತಿಯೇ ಹರಡಿತು. ಅವರನ್ನುದ್ದೇಶಿಸಿ ಜಯಸಮಾರಂಭಗಳು ನಡೆದುವು.

ತನ್ಮಯಾ ವಿಪುಲಾ ಲೋಕಾಸ್ತಾಭ್ಯಾಂ ಕೃತಜಯಕ್ರಿಯಾಃ ।
ಪೂರ್ವಂ ದೈತ್ಯಭಯಂ ಶ್ರುತ್ವಾ ಮಾರುತಾಗ್ನಿಕೃತಂ ಮಹತ್ ॥೪೮॥

ಕಾಲನೇಮೀತಿ ವಿಖ್ಯಾತೋ ದಾನವಃ ಪ್ರತ್ಯದೃಶ್ಯತ ।
ಭಾಸ್ಕರಾಕಾರಮುಕುಟಃ ಶಿಂಜಿತಾಭರಣಾಂಗದಃ ॥೪೯॥

ಮಂದರಾದ್ರಿಪ್ರತೀಕಾಶೋ ಮಹಾರಜತಸಂವೃತಃ ।
ಶತಪ್ರಹರಣೋದಗ್ರಃ ಶತಬಾಹುಃ ಶತಾನನಃ ॥೫೦॥

ಶತಶೀರ್ಷಃ ಸ್ಥಿತಃ ಶ್ರೀಮಾಞ್ಛತಶೃಂಗ ಇವಾಚಲಃ ।
ಪಕ್ಷೇ ಮಹತಿ ಸಂವೃದ್ಧೋ ನಿದಾಘ ಇವ ಪಾವಕಃ ॥೫೧॥

ಧೂಮ್ರಕೇಶೋ ಹರಿಚ್ಛ್ಮಶ್ರುಃ ಸಂದಷ್ಟೌಷ್ಠಪುಟಾನನಃ ।
ತ್ರೈಲೋಕ್ಯಾಂತರವಿಸ್ತಾರಿ ಧಾರಯನ್ ವಿಪುಲಂ ವಪುಃ ॥೫೨॥

---

೪೮. ಅಗ್ನಿವಾಯುಗಳಿಂದ ದೇವತೆಗಳಿಗೆ ಉಂಟಾದ ಮಹಾಭಯವನ್ನು ಕೇಳಿ ಕಾಲನೇಮಿಯೆಂಬ ಪ್ರಖ್ಯಾತನಾದ ದಾನವನು ಮೊದಲು ಯುದ್ಧಗೋಚರ ನಾದನು.

೪೯-೫೧. ಅವನು ಸೂರ್ಯನಂತೆ ಪ್ರಕಾಶಿಸುವ ಕಿರೀಟವನ್ನು ಧರಿಸಿದ್ದನು. ಮನೋಹರವಾಗಿ ಧ್ವನಿಮಾಡುತ್ತಿರುವ ಆಭರಣಗಳನ್ನೂ ತೋಳುಬಳೆಗಳನ್ನೂ ತೊಟ್ಟಿದ್ದನು. ಆಕಾರದಲ್ಲಿ ಮಂದರಪರ್ವತಕ್ಕೆ ಸಮಾನನಾಗಿದ್ದನು. ಸುವರ್ಣಾಭರಣಗಳನ್ನು ಮೈತುಂಬ ಹಾಕಿಕೊಂಡಿದ್ದನು. ಅವನಿಗೆ ಶ್ರೇಷ್ಠವಾದ ನೂರಾರು ಆಯುಧಗಳೂ, ನೂರಾರು ತೋಳುಗಳೂ, ನೂರು ಮುಖಗಳೂ, ನೂರು ತಲೆಗಳೂ ಇದ್ದುವು. ಆತನು ನೂರಾರು ಶಿಖರಗಳಿಂದ ಕೂಡಿದ ಪರ್ವತದಂತೆ ಕಂಗೊಳಿಸುತ್ತಿದ್ದನು. ಬೇಸಗೆಯಲ್ಲಿ ಅಗ್ನಿಯಂತೆ ಅವನು ಆ ದೊಡ್ಡ ದೈತ್ಯ ಪಕ್ಷದಲ್ಲಿ ಬಹು ಪ್ರಬಲನಾಗಿದ್ದನು.

೫೨. ಅವನ ಕೂದಲು ಧೂಮ್ರವರ್ಣವಾಗಿಯೂ ಮೀಸೆಗಳು ಹಸುರು ಬಣ್ಣವಾಗಿಯೂ ಇದ್ದುವು. ಬಿಗಿಯಾಗಿ ಕಚ್ಚಿದ ತುಟಿಗಳಿಂದ ಮುಖವು ಭಯಂಕರವಾಗಿ ಕಾಣುತ್ತಿತ್ತು. ಅವನು ಮೂರು ಲೋಕವನ್ನು ವ್ಯಾಪಿಸುವಷ್ಟು ದೊಡ್ಡ ದೇಹದಿಂದ ಕೂಡಿದ್ದನು.

ಬಾಹುಭಿಸ್ತುಲಯನ್ವ್ಯೋಮ ಕ್ಷಿಪನ್ಪದ್ಭ್ಯಾಂ ಮಹೀಧರಾನ್ ।
ಈರಯನ್ಮುಖನಿಃಶ್ವಾಸೈರ್ವೃಷ್ಟಿಯುಕ್ತಾನ್ ಬಲಾಹಕಾನ್ ॥೫೩॥

ತಿರ್ಯಗಾಯತರಕ್ತಾಕ್ಷಂ ಮಂದರೋದಗ್ರವರ್ಚಸಂ ।
ದಿಧಕ್ಷಂತಮಿವಾಯಾಂತಂ ಸರ್ವಾನ್ ದೇವಗಣಾನ್ಮೃಧೇ ॥೫೪॥

ತರ್ಜಯಂತಂ ಸುರಗಣಾಂಶ್ಛಾದಯಂತಂ ದಿಶೋ ದಶ ।
ಸಂವರ್ತಕಾಲೇ ತೃಷಿತಂ ದೃಷ್ಟಂ ಮೃತ್ಯುಮಿವೋತ್ಥಿತಂ ॥೫೫॥

ಸುತಲೇನೋಚ್ಛ್ರಯವತಾ ವಿಪುಲಾಂಗುಲಿಪರ್ವಣಾ ।
ಲಂಬಾಭರಣಪೂರ್ಣೇನ ಕಿಂಚಿಚ್ಚಲಿತವರ್ಮಣಾ ॥೫೬॥

ಉಚ್ಛ್ರಿತೇನಾಗ್ರಹಸ್ತೇನ ದಕ್ಷಿಣೇನ ವಪುಷ್ಮತಾ ।
ದಾನವಾನ್ ದೇವನಿಹತಾನುತ್ತಿಷ್ಠಧ್ವಮಿತಿ ಬ್ರುವನ್ ॥೫೭॥

---

೫೩. ಬಾಹುಗಳಿಂದ ಆಕಾಶವನ್ನು ತೂಗುತ್ತಿದ್ದನು. ಕಾಲುಗಳಿಂದ ಪರ್ವತಗಳನ್ನೆತ್ತಿ ಬಿಸುಡುತ್ತಿದ್ದನು. ಮುಖದ ನಿಶ್ವಾಸಗಳಿಂದ ಮಳೆಗರೆಯುವ ಮೋಡಗಳನ್ನು ಚದರಿಸುತ್ತಿದ್ದನು.

೫೪. ಅವನ ಕೆಂಗಣ್ಣುಗಳು ಅಡ್ಡಡ್ಡವಾಗಿ ನೀಳವಾಗಿದ್ದುವು. ಅವನು ಮಂದರಪರ್ವತದಂತೆ ಅಧಿಕವರ್ಚಸ್ವಿಯಾಗಿದ್ದನು. ಯುದ್ಧದಲ್ಲಿ ದೇವಗಣಗಳನ್ನೆಲ್ಲ ಸುಟ್ಟುಬಿಡಬೇಕೆಂದಿರುವನೋ ಎನ್ನುವಂತೆ ಬರುತ್ತಿದ್ದನು.

೫೫. ದೇವತೆಗಳನ್ನು ಹೆದರಿಸುತ್ತ ಹತ್ತು ದಿಕ್ಕುಗಳನ್ನೂ ಮರೆಮಾಡುತ್ತಲಿದ್ದನು. ಬಾಯಾರಿಕೆಯಿಂದ ಎದ್ದು ಬಂದ ಪ್ರಳಯಕಾಲದ ಮೃತ್ಯುವೋ ಎನ್ನುವಂತೆ ತೋರುತ್ತಿದ್ದನು.

೫೬-೫೭. ಸುಂದರವಾದ ಅಂಗೈಯಿಂದ ಕೂಡಿದ, ಯಾವಾಗಲೂ ಏಳಿಗೆಯನ್ನೇ ಪಡೆಯುತ್ತಿರುವ, ದಪ್ಪವಾದ ಬೆರಳುಗಿಣ್ಣುಗಳಿಂದ ಯುಕ್ತವಾದ, ಜೋಲಾಡುವ ಆಭರಣಗಳಿಂದ ಪೂರ್ಣವಾದ, ಪುಷ್ಟವಾದ ಬಲಗೈಯನ್ನು ಕವಚವು ಸ್ವಲ್ಪ ಅಲುಗಾಡುವಂತೆ ಮೇಲಕ್ಕೆತ್ತಿ, ದೇವತೆಗಳಿಂದ ಹತರಾದ ದಾನವರಿಗೆ ಏಳುವಂತೆ ತುದಿಗೈಯಿಂದ ಸನ್ನೆಮಾಡಿ ಹೇಳುತ್ತಿದ್ದನು.

ತಂ ಕಾಲನೇಮಿಂ ಸಮರೇ ದ್ವಿಷತಾಂ ಕಾಲಚೇಷ್ಟಿತಂ ।
ವೀಕ್ಷಂತೇ ಸ್ಮ ಸುರಾಃ ಸರ್ವೇ ಭಯವಿತ್ರಸ್ತಲೋಚನಾಃ ॥೫೮॥

ತಂ ವೀಕ್ಷಂತಿ ಸ್ಮ ಭೂತಾನಿ ಕ್ರಮಂತಂ ಕಾಲನೇಮಿನಂ ।
ತ್ರಿವಿಕ್ರಮಂ ವಿಕ್ರಮಂತಂ ನಾರಾಯಣಮಿವಾಪರಂ ॥೫೯॥

ಸೋಽತ್ಯುಚ್ಛ್ರಯಪುರಃಪಾದಮಾರುತಾಘೂರ್ಣಿತಾಂಬರಃ ।
ಪ್ರಕ್ರಾಮನ್ನಸುರೋ ಯುದ್ಧೇ ತ್ರಾಸಯಾಮಾಸ ದೇವತಾಃ ॥೬೦॥

ಸ ಮಯೇನಾಸುರೇಂದ್ರೇಣ ಪರಿಷ್ವಕ್ತಸ್ತತೋ ರಣೇ ।
ಕಾಲನೇಮಿರ್ಬಭೌ ದೈತ್ಯಃ ಸವಿಷ್ಣುರಿವ ಮಂದರಃ ॥೬೧॥

ಅಥ ವಿವ್ಯಥಿರೇ ದೇವಾಃ ಸರ್ವೇ ಶಕ್ರಪುರೋಗಮಾಃ ।
ಕಾಲನೇಮಿಂ ಸಮಾಯಾಂತಂ ದೃಷ್ಟ್ವಾ ಕಾಲಮಿವಾಪರಂ ॥೬೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಯುದ್ಧೇ
ಷಟ್ಸಪ್ತತ್ಯಧಿಕಶತತಮೋಽಧ್ಯಾಯಃ

---

೫೮. ಯುದ್ಧದಲ್ಲಿ ಶತ್ರುಗಳಿಗೆ ಯಮನಂತೆ ಕಾಣಬರುತ್ತಿರುವ ಆ ಕಾಲನೇಮಿಯನ್ನು ದೇವತೆಗಳು ಭಯದಿಂದ ಗಾಬರಿಗೊಂಡ ಕಣ್ಣುಗಳಿಂದ ನೋಡಿದರು.

೫೯. ಆ ಕಾಲನೇಮಿಯು ಹೆಜ್ಜೆಯಿಡುತ್ತಿದ್ದರೆ, ಮೂರು ಹೆಜ್ಜೆಗಳಿಂದ ಹಿಂದೆ ಲೋಕವನ್ನು ಅಳೆದ ತ್ರಿವಿಕ್ರಮರೂಪನಾದ ನಾರಾಯಣನ ಮತ್ತೊಂದು ರೂಪವೋ ಎನ್ನುವಂತೆ ಪ್ರಾಣಿಗಳಿಗೆ ಗೋಚರನಾದನು.

೬೦. ಬಲು ಉದ್ದವಾದ ಕಾಲುಗಳನ್ನು ಮುಂದಕ್ಕೆತ್ತಿ ಇಡುವಾಗ ಗಾಳಿಯಿಂದ ಪಂಚೆ ಓಡಾಡುತ್ತಿರಲು, ಆ ದೈತ್ಯನು ಅಡಿಯಿಡುತ್ತ ಯುದ್ಧದಲ್ಲಿ ದೇವತೆಗಳಿಗೆ ಭಯಹುಟ್ಟಿಸಿದನು.

೬೧. ಅಸುರರಾಜನಾದ ಮಯನು ಪ್ರೀತಿಯಿಂದ ಆಲಿಂಗನಮಾಡಿ ಬೀಳ್ಕೊಡಲು ಆ ಕಾಲನೇಮಿಯು ವಿಷ್ಣುವಿನ ಮೇಲೆ ಏರಿಬಂದು ಮಂದರ ಪರ್ವತದಂತೆ ಯುದ್ಧದಲ್ಲಿ ಪ್ರಕಾಶಿಸಿದನು.

೬೨. ಬಳಿಕ ಬೇರೊಬ್ಬ ಯಮನೋ ಎಂಬಂತೆ ಬರುತ್ತಿರುವ ಕಾಲನೇಮಿಯನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ವ್ಯಸನಪಟ್ಟರು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಾಲನೇಮಿಯು ಯುದ್ಧಕ್ಕೆ ಬಂದ ವೃತ್ತಾಂತವನ್ನು ವರ್ಣಿಸಿದೆ.

ಇಂದ್ರನ ಇಷ್ಟದಂತೆ ಚಂದ್ರನು ವರುಣನೊಡಗೂಡಿ ಯುದ್ಧಕ್ಕೆ ತೆರಳಿದನು. ಇಬ್ಬರ ಸಾಹಸದಿಂದ ದೈತ್ಯಮಾಯೆ ಅಡಗಿತು. ಬಳಿಕ ಮಯನು ಬಹು ಕೋಪಿಷ್ಠನಾಗಿ ಪರ್ವತಮಾಯೆಯನ್ನು ಪ್ರಯೋಗಿಸಿದನು. ಅದರಿಂದ ವಿಷ್ಣುವೊಬ್ಬನನ್ನುಳಿದು ಮಿಕ್ಕದೇವತೆಗಳೆಲ್ಲರೂ ನಿಸ್ತೇಜಸ್ಕರಾದರು. ಆಗ ನಾರಾಯಣನು ಅಗ್ನಿವಾಯುಗಳಿಗೆ ಅಪ್ಪಣೆಯಿತ್ತನು. ಅವರಿಬ್ಬರ ಪರಾಕ್ರಮದಿಂದ ದೈತ್ಯಸೈನ್ಯವೆಲ್ಲವೂ ದಗ್ಧವಾಯಿತು. ದೇವತೆಗಳು ಸಂತುಷ್ಟರಾದರು. ಆದರೆ ಅವರ ಹರ್ಷವು ಚಿರಕಾಲ ನಿಲ್ಲಲಿಲ್ಲ. ಬಹು ಭಯಂಕರಾಕಾರನಾದ ಕಾಲನೇಮಿಯು ಪ್ರಳಯ ಕಾಲದ ಯಮನಂತೆ ಯುದ್ಧಕ್ಕೆ ಬಂದನು. ಅವನನ್ನು ನೋಡಿ ಇಂದ್ರಾದಿ ದೇವತೆಗಳೆಲ್ಲರೂ ಭೀತರಾದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯ ಯುದ್ಧದಲ್ಲಿ
ನೂರೆಪ್ಪತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ದಾನವಾನಾಮನೀಕೇಷು ಕಾಲನೇಮಿರ್ಮಹಾಸುರಃ ।
ವ್ಯವರ್ಧತ ಮಹಾತೇಜಾಸ್ತಪಾಂತೇ ಜಲದೋ ಯಥಾ ॥ ೧ ॥

ತಂ ತ್ರೈಲೋಕ್ಯಾಂತರಗತಂ ದೃಷ್ಟ್ವಾ ತೇ ದಾನವೇಶ್ವರಾಃ ।
ಉತ್ತಸ್ಥುರಪರಿಶ್ರಾಂತಾಃ ಪೀತ್ವಾಮೃತಮನುತ್ತಮಂ ॥ ೨ ॥

ತೇ ವೀತಭಯಸಂತ್ರಾಸಾ ಮಯತಾರಪುರೋಗಮಾಃ ।
ತಾರಕಾಮಯಸಂಗ್ರಾಮೇ ಸತತಂ ಜಿತಕಾಶಿನಃ ॥ ೩ ॥

ರೇಜುರಾಯೋಧನಗತಾ ದಾನವಾ ಯುದ್ಧಕಾಂಕ್ಷಿಣಃ ।
ಮಂತ್ರಮಭ್ಯಸತಾಂ ತೇಷಾಂ ವ್ಯೂಹಂ ಚ ಪರಿಧಾವತಾಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ದಾನವರ ಸೈನ್ಯದಲ್ಲಿ ಅಸುರಪ್ರಮುಖನೂ, ಮಹಾತೇಜಸ್ವಿಯೂ ಆದ ಕಾಲನೇಮಿಯು ಬೇಸಗೆ ಕಳೆದ ಮೇಲೆ ಮೋಡವು ಪ್ರಬಲವಾಗುವಂತೆ ಪ್ರಬಲನಾಗುತ್ತಿದ್ದನು.

೨. ಮೂರು ಲೋಕಗಳ ಅಂತರ್ಭಾಗವನ್ನೆಲ್ಲ ತುಂಬುವಷ್ಟು ದೊಡ್ಡ ಆಕಾರವುಳ್ಳ ಆ ದಾನವನನ್ನು ಕಂಡು ದಾನವಪ್ರಮುಖರು ಅವನ ಬಳಿಗೆ ಬಂದು ನಿಂತರು. ದಿವ್ಯವಾದ ಅಮೃತವನ್ನು ಪಾನಮಾಡಿದ್ದ ಕಾರಣ ಅವರಿಗೆ ದಣಿವೇ ಇರಲಿಲ್ಲ.

೩. ಆ ತಾರಕಾಮಯಯುದ್ಧದಲ್ಲಿ ಎಡೆಬಿಡದ ಶೌರ್ಯದಿಂದ ಮೆರೆಯುತ್ತಿದ್ದ ಮಯ, ತಾರ ಮುಂತಾದ ದೈತ್ಯರು ಭಯವೂ ಗಾಬರಿಯೂ ಇಲ್ಲದೆ ಯುದ್ಧಾಭಿಲಾಷಿಗಳಾಗಿ ರಣರಂಗಕ್ಕೆ ಬಂದು ಪ್ರಕಾಶಿಸಿದರು.

೪. ದೈತ್ಯರಲ್ಲಿ ಕೆಲವರು ಮಂತ್ರವನ್ನು ಅಭ್ಯಾಸಮಾಡುತ್ತಲೂ, ಇನ್ನೂ ಕೆಲವರು ವ್ಯೂಹದ ಸುತ್ತಲೂ ಓಡುತ್ತಲೂ, ಮಿಕ್ಕವರು ಕಾಲನೇಮಿಯನ್ನು ನೋಡುತ್ತಲೂ ಸಂತೋಷದಿಂದಿದ್ದರು.

**ಪ್ರೇಕ್ಷತಾಂ ಚಾಭವತ್ಪ್ರೀತಿರ್ದಾನವಂ ಕಾಲನೇಮಿನಂ ॥**
**ಯೇ ತು ತತ್ರ ಮಯಸ್ಯಾರ್ಸ ಮುಖ್ಯಾ ಯುದ್ಧಪುರಸ್ಸರಾಃ ॥ ೫ ॥**

**ತೇ ತು ಸರ್ವೇ ಭಯಂ ತ್ಯಕ್ತ್ವಾ ಹೃಷ್ಟಾ ಯೋದ್ಧುಮುಪಸ್ಥಿತಾಃ ।**
**ಮಯಸ್ತಾರೋ ವರಾಹಶ್ಚ ಹಯಗ್ರೀವಶ್ಚ ವೀರ್ಯವಾನ್ ॥ ೬ ॥**

**ವಿಪ್ರಚಿತ್ತಿಸುತಃ ಶ್ವೇತಃ ಖರಲಂಬಾವುಭಾವಪಿ ।**
**ಅರಿಷ್ಟೋ ಬಲಿಪುತ್ರಶ್ಚ ಕಿಶೋರಾಖ್ಯಸ್ತಥೈವ ಚ ॥ ೭ ॥**

**ಸ್ವರ್ಭಾನುಶ್ಚಾಮರಪ್ರಖ್ಯೋ ವಕ್ತ್ರಯೋಧೀ ಮಹಾಸುರಃ**
**ಏತೇಽಸ್ತ್ರವೇದಿನಃ ಸರ್ವೇ ಸರ್ವೇ ತಪಸಿ ಸುಸ್ಥಿತಾಃ ॥ ೮ ॥**

**ದಾನವಾಃ ಕೃತಿನೋ ಜಗ್ಮುಃ ಕಾಲನೇಮಿಂ ತಮದ್ಭುತಂ ।**
**ತೇ ಗದಾಭಿರ್ಮುಸುಂಡೀಭಿಶ್ಚಕ್ರೈರಥ ಪರಶ್ವಥೈಃ ॥ ೯ ॥**

**ಕಾಲಕಲ್ಪೈಶ್ಚ ಮುಸಲೈಃ ಕ್ಷೇಪಣೀಯೈಶ್ಚ ಮುದ್ಗರೈಃ ।**
**ಅಶ್ಮಭಿಶ್ಚಾದ್ರಿಸದೃಶೈರ್ಗಂಡಶೈಲೈಶ್ಚ ದಾರುಣೈಃ ॥೧೦॥**

---

೫. ಯುದ್ಧದಲ್ಲಿ ಮುಂದಾಳುಗಳೆನಿಸಿದ್ದ ಮಯನ ಕಡೆಯ ದಾನವ ಪ್ರಮುಖರೆಲ್ಲರೂ ಭಯವನ್ನು ಬಿಟ್ಟು ಹರ್ಷದಿಂದ ಕಾಳಗಕ್ಕೆ ನಡೆದರು.

೬-೮. ಮಯ, ತಾರ, ವರಾಹ, ಪರಾಕ್ರಮಶಾಲಿಯಾದ ಹಯಗ್ರೀವ, ವಿಪ್ರಚಿತ್ತಿ ಪುತ್ರನಾದ ಶ್ವೇತ, ಖರ, ಲಂಬ, ಅರಿಷ್ಟ, ಬಲಿಪುತ್ರನಾದ ಕಿಶೋರ, ದೇವತೆಗೆ ಸಮಾನನಾದ ಸ್ವರ್ಭಾನು, ವಕ್ತ್ರಯೋಧಿ ಮುಂತಾದ ದಾನವರೆಲ್ಲರೂ ಅದ್ಭುತ ಪರಾಕ್ರಮಿಯಾದ ಕಾಲನೇಮಿಯ ಬಳಿಗೆ ಹೋದರು. ಇವರು ಅಸ್ತ್ರ ವಿದ್ಯೆಯನ್ನು ಬಲ್ಲವರು ; ಬಹುಕಾಲ ತಪಸ್ಸುಮಾಡಿದವರು.

೯-೧೪. ಆ ದೈತ್ಯರು ಮನಸ್ಸಿನಲ್ಲಿ ಉತ್ಸಾಹವು ತುಂಬಿರಲು, ಧನುರ್ಧಾರಿಗಳಾಗಿ ಬಗೆ ಬಗೆಯ ಆಯುಧಗಳನ್ನು ಧರಿಸಿ ಹೊರಟರು. ಗದೆಗಳು, ಮುಸುಂಡಿಗಳು ಚಕ್ರಗಳು ಕೊಡಲಿಗಳು, ಮೃತ್ಯುವಿನಂತಿರುವ ಮುಸಲಗಳು, ಎಸೆಯುವಂತಹ ಆಯುಧ ವಿಶೇಷಗಳು ಮುದ್ಗರಗಳು, ಬೆಟ್ಟಗಳಂತಹ ಬಂಡೆಗಳು

ಪಟ್ಟಿಶೈರ್ಭಿಂದಿಪಾಲೈಶ್ಚ ಪರಿಘೈಶ್ಚೋತ್ತಮಾಯಸೈಃ ।
ಘಾತನೀಭಿಃ ಸುಗುರ್ವೀಭಿಃ ಶತಘ್ನೀಭಿಸ್ತಥೈವ ಚ ॥೧೧॥

ಯುಗೈರ್ಯಂತ್ರೈಶ್ಚ ನಿರ್ಮುಕ್ತೈರ್ಮಾರ್ಗಣೈರುಗ್ರತಾಡಿತೈಃ ।
ದೋರ್ಭಿಶ್ಚಾಯತದೀಪ್ತೈಶ್ಚ ಪ್ರಾಸೈಃ ಪಾಶೈಶ್ಚ ಮೂರ್ಛನೈಃ ॥೧೨॥

ಭುಜಂಗವಕ್ತ್ರೈರ್ಲೇಲಿಹಾನೈರ್ವಿಸರ್ಪದ್ಭಿಶ್ಚ ಸಾಯಕೈಃ ।
ವಜ್ರೈಃ ಪ್ರಹರಣೀಯೈಶ್ಚ ದೀಪ್ಯಮಾನೈಶ್ಚ ತೋಮರೈಃ ॥೧೩॥

ವಿಕೋಶೈರಸಿಭಿಸ್ತೀಕ್ಷ್ಣೈಃ ಶೂಲೈಶ್ಚ ಶಿತನಿರ್ಮಲೈಃ ।
ದೈತ್ಯಾಃ ಸಂದೀಪ್ತಮನಸಃ ಪ್ರಗೃಹೀತಶರಾಸನಾಃ ॥೧೪॥

ತತಃ ಪುರಸ್ಕೃತ್ಯ ತದಾ ಕಾಲನೇಮಿಂ ಮಹಾಹವೇ ।
ಸಾ ದೀಪ್ತಶಸ್ತ್ರಪ್ರವರಾ ದೈತ್ಯಾನಾಂ ರುರುಚೇ ಚಮೂಃ ॥೧೫॥

---

ಭಯಂಕರವಾದ ಗುಂಡುಕಲ್ಲುಗಳು, ಪಟ್ಟಿಶಗಳು, ಭಿಂದಿಪಾಲಗಳು, ಪರಿಘಗಳು, ಉತ್ತಮವಾದ ಕಬ್ಬಿಣದ ಶಸ್ತ್ರಗಳು, ಹೊಡೆಯುವುದಕ್ಕೆ ಉಪಯೋಗಿಸುವ ಘಾತನಿಗಳೆಂಬ ಆಯುಧಗಳು, ಬಲು ದೊಡ್ಡ ಫಿರಂಗಿಗಳು, ನೊಗಗಳು, ಯಂತ್ರಗಳು, ಕ್ರೂರವಾಗಿ ಶತ್ರುಗಳನ್ನು ಪ್ರಹರಿಸಬಲ್ಲ ಬಾಣಗಳು, ದೀರ್ಘವಾಗಿ ಕಾಂತಿಯುಕ್ತವಾದ ತೋಳುಗಳು, ಪ್ರಾಸಗಳು, ಪಾಶಗಳು, ಮೂರ್ಛನಗಳು, ಹಾವಿನ ಮುಖದಂತಿರುವ ಆಯುಧಗಳು, ಸರ್ಪಾಕಾರವಾದ ಶಸ್ತ್ರಗಳು, ವೇಗದಿಂದ ಮುಂದುವರಿಯುವ ಬಾಣಗಳು, ವಜ್ರಗಳು, ಪ್ರಹರಣೀಯಗಳು, ಪ್ರಕಾಶಿಸುತ್ತಿರುವ ತೋಮರಗಳು, ಒರೆಯಿಂದ ಬಿಚ್ಚಿದ ಹರಿತವಾದ ಕತ್ತಿಗಳು, ಹೊಳೆಹೊಳೆವ ಮೊನೆಚಾದ ಶೂಲಗಳು ಮುಂತಾದ ಆಯುಧಗಳು ಅವರಲ್ಲಿದ್ದುವು.

೧೫. ಬಳಿಕ ಬೆಳಬೆಳಗುವ ಉತ್ತಮವಾದ ಶಸ್ತ್ರಗಳಿಂದ ಸನ್ನದ್ಧವಾದ ಆ ದೈತ್ಯಸೈನ್ಯವು ಮಹಾಸಂಗ್ರಾಮದಲ್ಲಿ ಕಾಲನೇಮಿಯನ್ನು ಮುಂದೆ ಬಿಟ್ಟುಕೊಂಡು ಪ್ರಕಾಶಿಸುತ್ತಿತ್ತು.

ದ್ಯೌರ್ನಿಮೀಲಿತಸರ್ವಾಂಗಾ ಘನಾನಾಂ ಚಾಭ್ಯುಪಾಗಮೇ ।
ದೇವತಾನಾಮಪಿ ಚಮೂಮುರ್ಮುದೇ ಶಕ್ರಪಾಲಿತಾ ॥೧೬॥

ಉಪೇತಾ ಸಿತಕೃಷ್ಣಾಭ್ಯಾಂ ತಾರಾಭ್ಯಾಂ ಚಂದ್ರಸೂರ್ಯಯೋಃ ।
ವಾಯುವೇಗವತೀ ಸೌಮ್ಯಾ ತಾರಾಗಣಪತಾಕಿನೀ ॥೧೭॥

ತೋಯದಾವಿದ್ಧವಸನಾ ಗ್ರಹನಕ್ಷತ್ರಹಾಸಿನೀ ।
ಯಮೇಂದ್ರವರುಣೈರ್ಗುಪ್ತಾ ಧನದೇನ ಚ ಧೀಮತಾ ॥೧೮॥

ಸಂಪ್ರದೀಪ್ತಾಗ್ನಿನಯನಾ ನಾರಾಯಣಪರಾಯಣಾ ।
ಸಾ ಸಮುದ್ರೌಘಸದೃಶೀ ದಿವ್ಯಾ ದೇವಮಹಾಚಮೂಃ ॥೧೯॥

ರರಾಜಾಸ್ತ್ರವತೀ ಭೀಮಾ ಯಕ್ಷಗಂಧರ್ವಶಾಲಿನೀ
ತಯೋಶ್ಚಮ್ವೋಸ್ತದಾನೀಂ ತು ಬಭೂವ ಸ ಸಮಾಗಮಃ ॥೨೦॥

---

೧೬-೧೯. ಗುಡುಗುಟ್ಟುತ್ತಿರುವ ಮಳೆಗಾಲದ ಕರ್ಮೋಡಗಳಿಂದ ದಟ್ಟ ವಾಗಿ ತುಂಬಿದ ಆಕಾಶದಂತೆ, ಇಂದ್ರನ ರಕ್ಷಣೆಗೆ ಒಳಗಾದ ದೇವತೆಗಳ ಸೈನ್ಯವು ಅಪರಿಮಿತವಾಗಿ ಕಣ್ಗೊಳಿಸಿತು. ಅದು ಮಹಾಸಾಗರಕ್ಕೆ ಸಮಾನವಾಗಿ ಶ್ರೇಷ್ಠವಾದ ಅಸ್ತ್ರಗಳಿಂದ ತುಂಬಿ ಯಕ್ಷರಿಂದಲೂ ಗಂಧರ್ವರಿಂದಲೂ ಮನೋಹರವಾಗಿ ಶತ್ರು ಗಳಿಗೆ ಭೀಕರವಾಗಿ ತೋರುತ್ತಿತ್ತು. ಅದು ಚಂದ್ರಸೂರ್ಯರೆಂಬ ಬಿಳಿಯ ಮತ್ತು ಕರಿಯ ಕಣ್ಣುಗುಡ್ಡೆಗಳಿಂದ ಕೂಡಿದ್ದಿತು. ವಾಯುವಿನಷ್ಟು ವೇಗವುಳ್ಳದಾಗಿ ಸೌಮ್ಯವಾಗಿತ್ತು. ನಕ್ಷತ್ರಪಙ್ಕ್ತಿಗಳೇ ಅದರ ಧ್ವಜ. ಮೇಘಮಾಲೆಯೇ ವಸ್ತ್ರ. ಗ್ರಹನಕ್ಷತ್ರಗಳೇ ಮಂದಹಾಸ. ಯಮ, ಇಂದ್ರ, ವರುಣ ಮತ್ತು ಕುಬೇರರೇ ಅದರ ರಕ್ಷಕರು. ಜಾಜ್ವಲ್ಯಮಾನವಾದ ಅಗ್ನಿಯೇ ಅದರ ಕಣ್ಣು. ನಾರಾಯಣನೇ ಅದಕ್ಕೆ ದಿಕ್ಕು.

೨೦. ಪ್ರಳಯಕಾಲದಲ್ಲಿ ಭೂಮ್ಯಾಕಾಶಗಳು ಒಟ್ಟುಗೂಡುವಂತೆ ಆ ಸೈನ್ಯ ಗಳೆರಡೂ ಆಗ ಒಂದನ್ನೊಂದು ಸಂಧಿಸಿದುವು.

ದ್ಯಾವಾಪೃಥಿವ್ಯೋಃ ಸಂಯೋಗೋ ಯಥಾ ಸ್ಯಾದ್ಯುಗಪರ್ಯಯೇ ।
ತದ್ಯುದ್ಧಮಭವದ್ಘೋರಂ ದೇವದಾನವಸಂಕುಲಂ ॥೨೧॥

ಕ್ಷಮಾಪರಾಕ್ರಮವರಂ ದರ್ಪಸ್ಯ ವಿನಯಸ್ಯ ಚ
ನಿಶ್ಚಕ್ರಮುರ್ಬಲಾಭ್ಯಾಂ ತು ಭೀಮಾಸ್ತತ್ರ ಸುರಾಸುರಾಃ ॥೨೨॥

ಪೂರ್ವಾಪರಾಭ್ಯಾಂ ಸಂರಬ್ಧಾಃ ಸಾಗರಾಭ್ಯಾಮಿವಾಂಬುದಾಃ ।
ತಾಭ್ಯಾಂ ಬಲಾಭ್ಯಾಂ ಸಂಹೃಷ್ಟಾಶ್ಚೇರುಸ್ತೇ ದೇವದಾನವಾಃ ॥೨೩॥

ವನಾಭ್ಯಾಂ ಪಾರ್ವತೀಯಾಭ್ಯಾಂ ಪುಷ್ಪಿತಾಭ್ಯಾಂ ಯಥಾ ಗಜಾಃ ।
ಸಮಾಜಘ್ನುಸ್ತತೋ ಭೇರೀಃ ಶಂಖಾನ್ ದಧ್ಮುರನೇಕಶಃ ॥೨೪॥

ಸ ಶಬ್ದೋ ದ್ಯಾಂ ದಿವಂ ಖಂ ಚ ದಿಶಶ್ಚ ಸಮಪೂರಯತ್ ।
ಜ್ಯಾಘಾತತಲನಿರ್ಘೋಷೋ ಧನುಷಾಂ ಕೂಜಿತಾನಿ ಚ ॥೨೫॥

---

೨೧. ದೇವತೆಗಳಿಗೂ ದಾನವರಿಗೂ ನಡೆದ ಆ ಯುದ್ಧವು ಬಹು ಭಯಂಕರವಾಗಿತ್ತು. ಅದು ಕ್ಷಮೆಗೂ ಕ್ರೌರ್ಯದೊಡಗೂಡಿದ ಪರಾಕ್ರಮಕ್ಕೂ, ದರ್ಪಕ್ಕೂ ವಿನಯಕ್ಕೂ ನಡೆದ ಯುದ್ಧವಾಗಿತ್ತು.

೨೨. ಅವೆರಡು ಸೈನ್ಯಗಳಿಂದಲೂ ಸುರರೂ ಅಸುರರೂ ಪೂರ್ವಪಶ್ಚಿಮ ಸಮುದ್ರಗಳಿಂದ ಅಬ್ಬರಿಸುತ್ತ ಮೋಡಗಳು ಹೊರಡುವಂತೆ ಹೊರಹೊರಟರು.

೨೩. ಆ ಸೈನ್ಯಗಳೆರಡರಿಂದ ದೇವತೆಗಳೂ ದಾನವರೂ ಹೂ ಬಿಟ್ಟಿರುವ ಪರ್ವತದ ವನಗಳಿಂದ ಆನೆಗಳು ಸಂಚಾರಕ್ಕೆ ಹೊರಡುವಂತೆ ಸಂತೋಷದಿಂದ ಹೊರಟು ತಿರುಗುತ್ತಿದ್ದರು.

೨೪. ಬಳಿಕ ಭೇರಿಗಳನ್ನು ಬಾರಿಸಿದರು. ಲೆಕ್ಕವಿಲ್ಲದಂತೆ ಶಂಖಗಳನ್ನೂದಿದರು. ಆ ಶಬ್ದವು ಆಕಾಶವನ್ನೂ ಸ್ವರ್ಗವನ್ನೂ ದಿಕ್ಕುಗಳನ್ನೂ ತುಂಬಿತು.

೨೫. ಹೆದೆಗಳ ಮಿಡಿತದಿಂದಾಗುವ ಶಬ್ದ, ಬಿಲ್ಲುಗಳಿಂದ ಹುಟ್ಟಿದ ಸದ್ದು, ಭೇರಿಗಳ ಅಬ್ಬರ ಇವು ದೈತ್ಯರ ಅಟ್ಟಹಾಸದ ಧ್ವನಿಯನ್ನು ಮರೆಮಾಡಿದುವು.

ದುಂದುಭೀನಾಂ ಚ ನಿನದೋ ದೈತ್ಯಮುಂತರ್ದಧುಃ ಸ್ವನಂ ।
ತೇಽನ್ಯೋಽನ್ಯಮಭಿಸಂಪೇತುಃ ಪಾತಯಂತಃ ಪರಸ್ಪರಂ ॥೨೬॥

ಬಭಂಜುರ್ಬಾಹುಭಿರ್ಬಾಹೂನ್ ದ್ವಂದ್ವಮನ್ಯೇ ಯುಯುತ್ಸವಃ
ದೇವಾಸ್ತು ಚಾಶನಿಂ ಘೋರಂ ಪರಿಘಾಂಶ್ಚೋತ್ತಮಾಯಸಾನ್ ॥೨೭॥

ನಿಸ್ತ್ರಿಂಶಾನ್ ಸಸೃಜುಃ ಸಂಖ್ಯೇ ಗದಾ ಗುರ್ವೀಶ್ಚ ದಾನವಾಃ ।
ಗದಾನಿಪಾತೈರ್ಭಗ್ನಾಂಗಾ ಬಾಣೈಶ್ಚ ಶಕಲೀಕೃತಾಃ ॥೨೮॥

ಪರಿಪೇತುರ್ಭೃಶಂ ಕೇಚಿತ್ಪುನಃ ಕೇಚಿತ್ತು ಜಘ್ನಿರೇ ।
ತತೋ ರಥೈಃ ಸತುರಗೈರ್ವಿಮಾನೈಶ್ಚಾಶುಗಾಮಿಭಿಃ ॥೨೯॥

ಸಮೀಯುಸ್ತೇ ಸುಸಂರಬ್ಧಾ ರೋಷಾದನ್ಯೋಽನ್ಯಮಾಹವೇ ।
ಸಂವರ್ತಮಾನಾಃ ಸಮರೇ ಸಂದಷ್ಟೌಷ್ಠಪುಟಾನನಾಃ ॥೩೦॥

---

೨೬. ಅವರು ಒಬ್ಬರನ್ನೊಬ್ಬರು ಬೀಳಿಸುತ್ತ ಒಬ್ಬರಮೇಲೊಬ್ಬರು ಬಿದ್ದರು. ತಮ್ಮ ಭುಜಗಳಿಂದ ಶತ್ರುಗಳ ಭುಜಗಳನ್ನು ಮುರಿದರು. ಇನ್ನು ಕೆಲವರು ದ್ವಂದ್ವ ಯುದ್ಧವನ್ನು ಮಾಡಲಿಚ್ಛಿಸಿದರು.

೨೭-೨೮. ದೇವತೆಗಳಾದರೋ ಭಯಂಕರವಾದ ವಜ್ರಾಸ್ತ್ರವನ್ನೂ, ಕಬ್ಬಿಣ ದಿಂದಾದ ಉತ್ತಮವಾದ ಪರಿಘಗಳನ್ನೂ, ಕತ್ತಿಗಳನ್ನೂ, ದೊಡ್ಡದೊಡ್ಡ ಗದೆಗಳನ್ನೂ ಪ್ರಯೋಗಿಸಿದರು. ಗದೆಗಳು ಬಿದ್ದು ದಾನವರ ಅಂಗಗಳನ್ನು ಮುರಿ ದುವು. ಬಾಣಗಳು ಅವರನ್ನು ತುಂಡುಮಾಡಿದುವು. ಕೆಲವರು ಚೆಲ್ಲಾಪಿಲ್ಲಿಯಾಗಿ ಬಿದ್ದರು. ಇನ್ನು ಕೆಲವರಾದರೋ ಪ್ರತಿಯಾಗಿ ದೇವತೆಗಳನ್ನು ಹೊಡೆದರು.

೨೯-೩೦. ಬಳಿಕ ಅವರು ರೋಷದಿಂದ ಉದ್ವೇಗಗೊಂಡು ರಥಗಳು, ಕುದುರೆಗಳು, ವೇಗವಾಗಿ ಸಂಚರಿಸುವ ವಿಮಾನಗಳು ಇವುಗಳಿಂದ ಒಬ್ಬರ ನ್ನೊಬ್ಬರು ಎದುರಿಸಿದರು. ಅವರು ತುಟಿಗಳನ್ನು ಬಲವಾಗಿ ಕಚ್ಚಿಕೊಂಡು ಯುದ್ಧ ದಲ್ಲಿ ಧೈರ್ಯದಿಂದ ನಿಂತರು.

ರಥಾ ರಥೈರ್ನಿರುಧ್ಯಂತೇ ಪಾದಾತಾಶ್ಚ ಪದಾತಿಭಿಃ ।
ತೇಷಾಂ ರಥಾನಾಂ ತುಮುಲಃ ಸ ಶಬ್ದಃ ಶಬ್ದವಾಹಿನಾಂ ॥೩೧॥

ನಭೋನಭಸ್ಯೌ ಹಿ ಯಥಾ ನಭಸ್ಯೈರ್ಜಲದಸ್ವನೈಃ ।
ಬಭಂಜುಸ್ತು ರಥಾ್ ಕೇಚಿತ್ಕೇಚಿತ್ಸಂಮರ್ದಿತಾ ರಥೈಃ ॥೩೨॥

ಸಂಬಾಧಮನ್ಯೇ ಸಂಪ್ರಾಪ್ಯ ನ ಶೇಕುಶ್ಚಲಿತುಂ ರಥಾ್ ।
ಅನ್ಯೋನ್ಯಮನ್ಯೇ ಸಮರೇ ದೋರ್ಭ್ಯಾಮುತ್ಕ್ಷಿಪ್ಯ ದಂಶಿತಾಃ ॥೩೩॥

ಸಂಹ್ರಾದಮಾನಾಭರಣಾ ಜಘ್ನುಸ್ತತ್ರಾಪಿ ಚರ್ಮಿಣಃ ।
ಅಸ್ತ್ರೈರನ್ಯೇ ವಿನಿರ್ಭಿನ್ನಾ ವೇಮೂ ರಕ್ತಂ ಹತಾ ಯುಧಿ ॥೩೪॥

ಕ್ಷರಜ್ಜಲಾನಾಂ ಸದೃಶಾ ಜಲದಾನಾಂ ಸಮಾಗಮೇ ।
ತೈರಸ್ತ್ರಶಸ್ತ್ರಗ್ರಥಿತಂ ಕ್ಷಿಪ್ತೋತ್ಕ್ಷಿಪ್ತಗದಾವಿಲಂ ॥೩೫॥

---

೩೧. ರಥಗಳು ರಥಗಳನ್ನೂ, ಕಾಲಾಳುಗಳು ಕಾಲಾಳುಗಳನ್ನೂ ತಡೆದು ಹೋರಾಡಿದರು. ಧ್ವನಿಮಾಡುತ್ತ ಓಡುವ ಆ ತೇರುಗಳು ದೊಡ್ಡ ಗದ್ದಲವನ್ನು ಹುಟ್ಟಿಸಿದುವು. ಹೀಗೆ ಆ ಮಹಾಶಬ್ದದಿಂದ ಕೂಡಿದ ಇಕ್ಕಡೆಯ ಸೈನ್ಯಗಳು ಆಕಾಶದಲ್ಲಿ ನೆರೆದ ಕರ್ಮೋಡಗಳ ಅಬ್ಬರದಿಂದ ತುಂಬಿದ ಶ್ರಾವಣ ಭಾದ್ರಪದ ಮಾಸಗಳನ್ನು ಹೋಲುತ್ತಿದ್ದುವು. ಕೆಲವರು ಶತ್ರುಗಳ ತೇರುಗಳನ್ನು ಮುರಿದರು. ಇನ್ನು ಕೆಲವರು ಅವುಗಳಿಗೆ ಸಿಕ್ಕಿ ಜಜ್ಜಿಹೋದರು.

೩೨-೩೩. ಮತ್ತೆ ಕೆಲವರು ಇಕ್ಕಟ್ಟಿಗೆ ಸಿಕ್ಕಿಕೊಂಡು ತಮ್ಮ ರಥಗಳನ್ನು ಕದಲಿಸಲಾರದೆ ಹೋದರು. ಒಬ್ಬರು ಮತ್ತೊಬ್ಬರನ್ನು ತೋಳುಗಳಿಂದ ಎತ್ತಿಕೊಂಡು ಕಚ್ಚಿದರು.

೩೪. ತೊಟ್ಟಿದ್ದ ಆಭರಣಗಳು ಧ್ವನಿಮಾಡುತ್ತಿರಲು, ಹಲವರು ಗುರಾಣಿ ಹಿಡಿದಿದ್ದವರನ್ನು ಹೊಡೆದರು. ಇನ್ನು ಕೆಲವರು ಅಸ್ತ್ರಗಳಿಂದ ಭಿನ್ನದೇಹರಾಗಿ ರಕ್ತವನ್ನು ಕಾರುತ್ತ ಮಳೆಗಾಲದಲ್ಲಿ ನೀರನ್ನು ಸುರಿಸುತ್ತಿರುವ ಮೋಡಗಳನ್ನು ಅನುಸರಿಸಿ ಮಡಿದರು.

೩೫. ಅಸ್ತ್ರಗಳನ್ನೂ ಶಸ್ತ್ರಗಳನ್ನೂ ಪ್ರಯೋಗಿಸುತ್ತ, ಗದೆಗಳನ್ನು ಬೀಸುತ್ತ, ಹೊಡೆಯುವುದಕ್ಕಾಗಿ ಮೇಲಕ್ಕೆತ್ತುತ್ತ ಬಹು ರೋಷಾವಿಷ್ಟರಾಗಿದ್ದ ಆ ದೇವದಾನವರ ತುಮುಲ ಯುದ್ಧವು ಅತಿ ಭಯಂಕರವಾಗಿ ತೋರಿತು.

ದೇವದಾನವಸಂಕ್ಷುಬ್ಧಂ ಸಂಕುಲಂ ಯುದ್ಧಮಾಬಭೌ ।
ತದ್ದಾನವಮಹಾಮೇಘಂ ದೇವಾಯುಧವಿರಾಜಿತಂ ॥೩೬॥

ಅನ್ಯೋನ್ಯಬಾಣವರ್ಷೇಣ ಯುದ್ಧದುರ್ದಿನಮಾಬಭೌ ।
ಏತಸ್ಮಿನ್ನಂತರೇ ಕ್ರುದ್ಧಃ ಕಾಲನೇಮೀ ಸ ದಾನವಃ ॥೩೭॥

ವ್ಯವರ್ಧತ ಸಮುದ್ರೌಘೈಃ ಪೂರ್ಯಮಾಣ ಇವಾಂಬುದಃ ।
ತಸ್ಯ ವಿದ್ಯುಚ್ಚಲಾಪೀಡೈಃ ಪ್ರದೀಪ್ತಾಶನಿವರ್ಷಿಣಃ ॥೩೮॥

ಗಾತ್ರೈರ್ನಗಗಿರಿಪ್ರಖ್ಯಾ ವಿನಿಪೇತುರ್ಬಲಾಹಕಾಃ ।
ಕ್ರೋಧಾನ್ನಿಶ್ವಸತಸ್ತಸ್ಯ ಭ್ರೂಭೇದಸ್ವೇದವರ್ಷಿಣಃ ॥೩೯॥

ಸಾಗ್ನಿಸ್ಫುಲಿಂಗಪ್ರತತಾ ಮುಖಾನ್ನಿಷ್ಪೇತುರರ್ಚಿಷಃ ।
ತಿರ್ಯಗೂರ್ಧ್ವಂ ಚ ಗಗನೇ ವವೃಧುಸ್ತಸ್ಯ ಬಾಹವಃ ॥೪೦॥

---

೩೬. ದಾನವರೆಂಬ ದೊಡ್ಡ ಮೋಡಗಳೂ, ದೇವತೆಗಳೆಂಬ ಕಾಮನಬಿಲ್ಲೂ, ಒಬ್ಬರಮೇಲೊಬ್ಬರು ಎಡೆಬಿಡದೆ ಪ್ರಯೋಗಿಸುವ ಬಾಣಗಳೆಂಬ ಮಳೆಯೂ ಕಂಗೊಳಿಸುತ್ತಿರಲು ಆ ಯುದ್ಧವು ಜಡಿಮಳೆಯ ದಿನವಾಯಿತು.

೩೭. ಈ ವೇಳೆಗೆ ಕಾಲನೇಮಿಯು ಸಮುದ್ರಗಳಿಂದ ನೀರು ತುಂಬಿಕೊಂಡು ಕೊಬ್ಬಿ ಬೆಳೆಯುವ ಮೋಡದಂತೆ ಬಹು ಕೋಪಾವಿಷ್ಟನಾಗಿ ಪ್ರಬಲನಾದನು.

೩೮. ಸಿಡಿಲಿನ ಮಳೆಯನ್ನು ಅವನು ಕರೆಯುತ್ತಿರಲು, ಮಿಂಚಿನಂತೆ ಹೊಳೆಹೊಳೆವ ಒಡವೆಗಳನ್ನು ತೊಟ್ಟಿದ್ದ ಅವನ ಅವಯವಗಳಿಂದ ಮೇರುಪರ್ವತದಂತಹ ದೊಡ್ಡ ಮೋಡಗಳು ಉದುರಿದುವು.

೩೯. ಗಂಟಿಕ್ಕಿದ ಹುಬ್ಬಿನಿಂದ ಬೆವರು ಸುರಿಯುತ್ತಿರಲು ಕಡುರೋಷದಿಂದ ಉಸಿರು ಬಿಡುತ್ತಿರುವ ಅವನ ಮುಖದಿಂದ ಕಿಡಿಗಳನ್ನು ಕೆದರುತ್ತ ಬೆಂಕಿಯ ಉರಿಗಳು ಹೊರಬಿದ್ದುವು.

೪೦. ಪರ್ವತದಿಂದ ಹೊರಕ್ಕೆ ಬಂದ ಐದು ಹೆಡೆಯ ಹಾವುಗಳಂತೆ ಅವನ ತೋಳುಗಳು ಆಕಾಶದಲ್ಲಿ ಅಡ್ಡಡ್ಡಲಾಗಿಯೂ ಮೇಲು ಮುಖವಾಗಿಯೂ ಬೆಳೆದುವು.

ಪರ್ವತಾದಿವ ನಿಷ್ಕ್ರಾಂತಾಃ ಪಂಚಾಸ್ಯಾ ಇವ ಪನ್ನಗಾಃ ।
ಸೋऽಸ್ತ್ರಜಾಲೈರ್ಬಹುವಿಧೈರ್ಧನುರ್ಭಿಃ ಪರಿಘೈರಪಿ ॥೪೧॥

ದಿವ್ಯಮಾಕಾಶಮಾವವ್ರೇ ಪರ್ವತೈರುಚ್ಛ್ರಿತೈರಿವ ।
ಸೋऽನಿಲೋದ್ಧೂತವಸನಸ್ತಸ್ಥೌ ಸಂಗ್ರಾಮಲಾಲಸಃ ॥೪೨॥

ಸಂಧ್ಯಾತಪಗ್ರಸ್ತಶಿಲಃ ಸಾಕ್ಷಾನ್ಮೇರುರಿವಾಚಲಃ ।
ಊರುವೇಗಪ್ರಮಥಿತೈಃ ಶೈಲಶೃಂಗಾಗ್ರಪಾದಪೈಃ ॥೪೩॥

ಅಪಾತಯದ್ದೇವಗಣಾನ್ವಜ್ರೇಣೇವ ಮಹಾಗಿರೀನ್ ।
ಬಹುಭಿಃ ಶಸ್ತ್ರನಿಸ್ತ್ರಿಂಶೈಶ್ಛಿನ್ನಭಿನ್ನಶಿರೋರುಹಾಃ ॥೪೪॥

ನ ಶೇಕುಶ್ಚಲಿತುಂ ದೇವಾ ಕಾಲನೇಮಿಹತಾ ಯುಧಿ ।
ಮುಷ್ಟಿಭಿರ್ನಿಹತಾಃ ಕೇಚಿತ್ಕೇಚಿತ್ತು ವಿದಲೀಕೃತಾಃ ॥೪೫॥

---

೪೧. ಅವನ ಬಹುವಿಧವಾದ ಅಸ್ತ್ರಸಮೂಹಗಳಿಂದಲೂ, ಧನುಸ್ಸುಗಳಿಂದಲೂ, ಪರಿಘಗಳಿಂದಲೂ ಆಕಾಶವು ಉನ್ನತವಾದ ಪರ್ವತಗಳಿಂದ ಆವೃತವಾದಂತೆ ಎಲ್ಲಕಡೆಯೂ ಆವೃತವಾಯಿತು.

೪೨. ಗಾಳಿಯಿಂದ ಅವನ ವಸ್ತ್ರವು ಅಲುಗಾಡುತ್ತಿತ್ತು. ಸಂಜೆಯ ಬಿಸಿಲು ಬಂಡೆಯ ಮೇಲೆ ಬಿದ್ದಿರುವ ಸಾಕ್ಷಾನ್ಮೇರುಪರ್ವತದಂತೆ ಅವನು ಯುದ್ಧಾಭಿಲಾಷೆಯಿಂದ ನಿಂತಿದ್ದನು.

೪೩. ಅವನ ತೊಡೆಗಳ ವೇಗದಿಂದ ಬೆಟ್ಟದ ಶಿಖರಗಳ ತುದಿಯಲ್ಲಿ ಬೆಳೆದಿದ್ದ ಮರಗಳು ಉರುಳಿಬಿದ್ದುವು. ವಜ್ರಾಯುಧದಿಂದ ದೊಡ್ಡ ಪರ್ವತಗಳನ್ನು ಕೆಡಹುವಂತೆ ಅವನು ದೇವಗಣಗಳನ್ನು ನೆಲಕ್ಕೆ ಬೀಳಿಸಿದನು.

೪೪. ಯುದ್ಧದಲ್ಲಿ ಅನೇಕ ಶಸ್ತ್ರಗಳಿಂದಲೂ ಕತ್ತಿಗಳಿಂದಲೂ ದೇವತೆಗಳ ತಲೆಗೂದಲು ಕತ್ತರಿಸಿಹೋಯಿತು. ಕಾಲನೇಮಿಯಿಂದ ಹತರಾಗಿ ಅವರು ಚಲಿಸಲಾರದೆ ಹೋದರು.

೪೫. ಅವನು ಕೆಲವರನ್ನು ಮುಷ್ಟಿಗಳಿಂದ ಹೊಡೆದನು. ಕೆಲವರನ್ನು ಸೀಳಿದನು. ಯಕ್ಷರು, ಗಂಧರ್ವಪ್ರಮುಖರು, ಮಹಾಸರ್ಪರು ಇವರೆಲ್ಲರೂ ಬಿದ್ದರು.

ಯಕ್ಷಗಂಧರ್ವಪತಯಃ ಪೇತುಃ ಸಹ ಮಹೋರಗೈಃ ।
ತೇ ನ ವಿತ್ರಾಸಿತಾ ದೇವಾಃ ಸಮರೇ ಕಾಲನೇಮಿನಾ ॥೪೬॥

ನ ಶೇಕುರ್ಯತ್ನವಂತೋಽಪಿ ಯತ್ನಂ ಕರ್ತುಂ ವಿಚೇತಸಃ ।
ತೇನ ಶಕ್ರಃ ಸಹಸ್ರಾಕ್ಷಃ ಸ್ಪಂದಿತಃ ಶರಬಂಧನೈಃ ॥೪೭॥

ಐರಾವತಗತಃ ಸಂಖ್ಯೇ ಚಲಿತುಂ ನ ಶಶಾಕ ಹ ।
ನಿರ್ಜಲಾಂಭೋದಸದೃಶೋ ನಿರ್ಜಲಾರ್ಣವಸಪ್ರಭಃ ॥೪೮॥

ನಿರ್ವ್ಯಾಪಾರಃ ಕೃತಸ್ತೇನ ವಿಪಾಶೋ ವರುಣೋ ಮೃಧೇ ।
ರಣೇ ವೈಶ್ರವಣಸ್ತೇನ ಪರಿಘೈಃ ಕಾಮರೂಪಿಣಾ ॥೪೯॥

ವಿತ್ತದೋಽಪಿ ಕೃತಃ ಸಂಖ್ಯೇ ನಿರ್ಜಿತಃ ಕಾಲನೇಮಿನಾ ।
ಯಮಃ ಸರ್ವಹರಸ್ತೇನ ಮೃತ್ಯುಃ ಪ್ರಹರಣೈ ರಣೇ ॥೫೦॥

---

೪೬. ಯುದ್ಧದಲ್ಲಿ ಆ ಕಾಲನೇಮಿಯಿಂದ ಬಹು ಭೀತರಾದ ದೇವತೆಗಳು ಮೂರ್ಛೆಬಿದ್ದರು. ಸಹಜವಾಗಿಯೇ ಅವರು ಪ್ರಯತ್ನಶೀಲರಾದಾಗ್ಯೂ ಶತ್ರು ನಿಗ್ರಹಕ್ಕೆ ಯತ್ನಿಸಲಾರದೆ ಹೋದರು.

೪೭. ಐರಾವತವನ್ನೇರಿದ್ದ ಸಹಸ್ರಾಕ್ಷನೆನಿಸಿದ ದೇವೇಂದ್ರನು ಅವನ ಬಾಣ ಗಳಿಗೆ ಕಟ್ಟುಬಿದ್ದು ಗಡಗಡನೆ ನಡುಗುತ್ತ ಚಲಿಸುವುದಕ್ಕೆ ಶಕ್ತಿಯಿಲ್ಲದವನಾದನು.

೪೮. ನೀರಿಲ್ಲದ ಮೋಡದಂತೆಯೂ ನೀರು ಬತ್ತಿದ ಸಾಗರದಂತೆಯೂ ವರುಣನು ಕಾಂತಿಹೀನನಾದನು. ಪಾಶಾಯುಧವನ್ನು ಕಳೆದುಕೊಂಡು ಯುದ್ಧೋ ದ್ಯೋಗವಾವುದನ್ನೂ ಮಾಡಲಾರದೆ ಹೋದನು.

೪೯. ಸ್ವೇಚ್ಛಾರೂಪವನ್ನು ತಾಳಬಲ್ಲ ಆ ಕಾಲನೇಮಿಯು ಧನಾಧಿಪತಿ ಯಾದ ಕುಬೇರನನ್ನೂ ಕೂಡ ಪರಿಘಾಯುಧಗಳಿಂದ ಸಂಪೂರ್ಣವಾಗಿ ಸೋಲಿಸಿ ದನು.

೫೦. ಸರ್ವಸಂಹಾರಕನೂ ಮೃತ್ಯುಪ್ರದನೂ ಆದ ಯಮನು ಅವನ ಆಯುಧಗಳ ಪ್ರಹಾರಕ್ಕೆ ಭೀತನಾಗಿ ತನ್ನ ದಿಕ್ಕನ್ನು ತೊರೆದು ಬೇರೆ ದಿಕ್ಕಿಗೆ ಓಡಿ ದನು.

**ಯಾಮ್ಯಾಂ ದಿಶಂ ತು ಸಂತ್ಯಜ್ಯ ಭೀತಸ್ತ್ವನ್ಯಾಂ ಸಮಾವಿಶತ್ ।**
**ಸ ಲೋಕಪಾಲಾನುತ್ಸಾರ್ಯ ಕೃತ್ವಾ ತೇಷಾಂ ಚ ಕರ್ಮ ತತ್ ॥೫೧॥**

**ದಿಕ್ಷು ಸರ್ವಾಸು ದೇಹಂ ಸ್ವಂ ಚತುರ್ಧಾ ವಿದಧೇ ತದಾ ।**
**ಸ ನಕ್ಷತ್ರಪಥಂ ಗತ್ವಾ ದಿವ್ಯಂ ಸ್ವರ್ಭಾನುದರ್ಶಿತಂ ॥೫೨॥**

**ಜಹಾರ ಲಕ್ಷ್ಮೀಂ ಸೋಮಸ್ಯ ತಂ ಚಾಸ್ಯ ವಿಷಯಂ ಮಹತ್ ।**
**ಚಾಲಯಾಮಾಸ ದೀಪ್ತಾಂಶುಂ ಸ್ವರ್ಗದ್ವಾರಾತ್ಸಭಾಸ್ಕರಂ ॥೫೩॥**

**ಸಾಯನಂ ಚಾಸ್ಯ ವಿಷಯಂ ಜಹಾರ ದಿನಕರ್ಮ ಚ ।**
**ಸೋಽಗ್ನಿಂ ದೇವಮುಖಂ ದೃಷ್ಟ್ವಾ ಚಕಾರಾತ್ಮಮುಖಾಶ್ರಯಂ ॥೫೪॥**

**ವಾಯುಂ ಚ ತರಸಾ ಜಿತ್ವಾ ಚಕಾರಾತ್ಮವಶಾನುಗಂ ।**
**ಸ ಸಮುದ್ರಾನ್ ಸಮಾನೀಯ ಸರ್ವಾಶ್ಚ ಸರಿತೋ ಬಲಾತ್ ॥೫೫॥**

---

೫೧. ಅವನು ಲೋಕಪಾಲಕರನ್ನು ಓಡಿಸಿ, ಅವರ ಕಾರ್ಯವನ್ನು ತಾನೇ ಮಾಡತೊಡಗಿ ನಾಲ್ಕು ವಿಧವಾದ ದೇಹದಿಂದ ಎಲ್ಲ ದಿಕ್ಕುಗಳಲ್ಲೂ ನೆಲಸಿದನು.

೫೨-೫೩. ರಾಹುವು ತೋರಿಸಿದ ದಿವ್ಯವಾದ ನಕ್ಷತ್ರ ಮಾರ್ಗದಲ್ಲಿ ಹೋಗಿ ಅವನು ಚಂದ್ರನ ಕಾಂತಿಯನ್ನೂ ಅವನ ದೊಡ್ಡ ರಾಜ್ಯವನ್ನೂ ಅಪಹರಿಸಿದನು. ಬೆಳಗುವ ಕಿರಣಗಳಿಂದ ತುಂಬಿದ ಸೂರ್ಯನನ್ನು ಸ್ವರ್ಗದ ಬಾಗಿಲಿನಿಂದ ಹೊರಕ್ಕೆ ನೂಕಿದನು. ಉತ್ತರಾಯಣ ದಕ್ಷಿಣಾಯನಗಳಿಂದ ಸಹಿತವಾದ ಅವನ ದೇಶವನ್ನೂ ಅವನ ನಿತ್ಯಕರ್ಮವನ್ನೂ ಅವನಿಂದ ಕಿತ್ತುಕೊಂಡನು.

೫೪. ಅಗ್ನಿಯು ದೇವತೆಗಳ ಮುಖವಾಗಿರುವುದನ್ನು ಕಂಡು ಅವನನ್ನು ತನ್ನ ಮುಖದಲ್ಲಿರುವಂತೆ ಹೇಳಿದನು. ವಾಯುವನ್ನು ಬೇಗನೆ ಜಯಿಸಿ ತನ್ನ ಅಧೀನ ದಲ್ಲಿ ಇರಿಸಿಕೊಂಡನು.

೫೫-೫೬. ಅವನು ಸಾಮರ್ಥ್ಯದಿಂದ ಸಮುದ್ರಗಳನ್ನೂ ಎಲ್ಲ ನದಿಗಳನ್ನೂ ಬಲಾತ್ಕಾರವಾಗಿ ತಂದು ತನ್ನ ಮುಖದಲ್ಲಿರಿಸಿಕೊಂಡನು. ಸಮುದ್ರಗಳು ಅವನ

ಚಕಾರಾತ್ಮಮುಖೇ ವೀರ್ಯಾದ್ದೇಹಭೂತಾಶ್ಚ ಸಿಂಧವಃ ।
ಅಪಃ ಸ್ವವಶಗಾಃ ಕೃತ್ವಾ ದಿವಿಜಾ ಯಾಶ್ಚ ಭೂಮಿಜಾಃ ॥೫೭॥

ಸ ಸ್ವಯಂಭುರಿವಾಭಾತಿ ಮಹಾಭೂತಪತಿರ್ಯಥಾ ।
ಸರ್ವಲೋಕಮಯೋ ದೈತ್ಯಃ ಸರ್ವಭೂತಭಯಾವಹಃ ॥೫೭॥

ಸ ಲೋಕಪಾಲೈಕವಪುಶ್ಚಂದ್ರಾದಿತ್ಯಗ್ರಹಾತ್ಮವಾನ್ ।
ಸ್ಥಾಪಯಾಮಾಸ ಜಗತೀಂ ಸುಗುಪ್ತಾಂ ಧರಣೀಧರೈಃ ॥೫೮॥

ಪಾವಕಾನಿಲಸಂಪಾತೋ ರರಾಜ ಯುಧಿ ದಾನವಃ ।
ಪಾರಮೇಷ್ಠ್ಯೇ ಸ್ಥಿತಃ ಸ್ಥಾನೇ ಲೋಕಾನಾಂ ಪ್ರಭವಾಪ್ಯಯೋಃ ।
ತಂ ತುಷ್ಟುವುರ್ದೈತ್ಯಗಣಾ ದೇವಾ ಇವ ಪಿತಾಮಹಂ ॥೫೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಮಯಯುದ್ಧೇ
ಸಪ್ತಸಪ್ತತ್ಯಧಿಕಶತತಮೋಽಧ್ಯಾಯಃ

---

ದೇಹದಲ್ಲಿ ಸೇರಿಹೋದುವು. ಅಂತರಿಕ್ಷದಲ್ಲೂ ಭೂಮಿಯಲ್ಲೂ ಇರುವ ಜಲವೆಲ್ಲವನ್ನೂ ತನ್ನ ವಶಪಡಿಸಿಕೊಂಡನು.

೫೭. ಮಹಾಭೂತಗಳಿಗೆಲ್ಲ ಅಧಿಪತಿಯಂತೆಯೂ ಬ್ರಹ್ಮನಂತೆಯೂ ಅವನು ಮೆರೆದನು. ಎಲ್ಲ ಲೋಕವೂ ಆ ದೈತ್ಯನಿಂದಲೇ ತುಂಬಿತು· ಸಕಲ ಜಂತುಗಳಿಗೂ ಅವನು ಭಯಂಕರನಾಗಿದ್ದನು.

೫೮. ಲೋಕಪಾಲಕರೆಲ್ಲರೂ ಅವನ ಶರೀರವಾಗಿದ್ದರು. ಚಂದ್ರ ಸೂರ್ಯಾದಿ ಗ್ರಹರೂಪನೂ ಅವನೇ ಆಗಿದ್ದನು. ಅವನು ಪರ್ವತಗಳಿಂದ ಭೂಮಿಯನ್ನು ಸ್ಥಿರಗೊಳಿಸಿ ಚೆನ್ನಾಗಿ ರಕ್ಷಿಸಿದನು.

೫೯. ಯುದ್ಧದಲ್ಲಿ ಆ ದೈತ್ಯನು ಅಗ್ನಿವಾಯುಗಳ ತೀವ್ರ ವೇಗದಿಂದ ಪ್ರಕಾಶಿಸಿದನು. ಲೋಕಗಳ ಸೃಷ್ಟಿ ಸಂಹಾರಗಳನ್ನು ಮಾಡಬಲ್ಲ ಅತ್ಯುತ್ತಮ ಸ್ಥಾನದಲ್ಲಿ ನೆಲಸಿದನು. ದೇವತೆಗಳು ಬ್ರಹ್ಮನನ್ನು ಸ್ತುತಿಸುವಂತೆ ದೈತ್ಯರೆಲ್ಲರೂ ಅವನನ್ನು ಸ್ತುತಿಸಿದರು.

## ಅಧ್ಯಾಯದ ಸಾರಾಂಶ

**ಈ** ಅಧ್ಯಾಯದಲ್ಲಿ ಕಾಲನೇಮಿಯ ಯುದ್ಧವನ್ನು ವರ್ಣಿಸಿದೆ.

ಕಾಲನೇಮಿಯು ದೈತ್ಯಸೇನೆಯ ಮುಂದಾಳಾದನು. ಇತ್ತ ದೇವೇಂದ್ರನು ದೇವತೆಗಳ ಮುಖಂಡನಾದನು. ಎರಡು ಸೇನೆಗಳಿಗೂ ತುಮುಲ ಯುದ್ಧವಾಯಿತು. ಉಭಯ ಪಕ್ಷದ ವೀರರೂ ರೋಷಾವೇಶದಿಂದ ಕಾದಾಡಿದರು. ಬಳಿಕ ಕಾಲ ನೇಮಿಯೇ ಯದ್ಧಕ್ಕೆ ಬಂದನು. ಅವನ ವೇಗವನ್ನು ತಡೆಯುವುದು ದೇವತೆಗಳಿಗೆ ಅಸಾಧ್ಯವಾಯಿತು. ಇಂದ್ರಾದಿ ದಿಕ್ಪಾಲಕರೆಲ್ಲರೂ ಅವನಿಗೆ ಸೋತು ಅಧೀನ ರಾದರು. ಜಗತ್ತೆಲ್ಲವೂ ಕಾಲನೇಮಿಯದೇ ಆಯಿತು. ದೇವತೆಗಳು ಬ್ರಹ್ಮನನ್ನು ಸ್ತುತಿಸುವಂತೆ ದೈತ್ಯರು ಅವನನ್ನು ಸ್ತುತಿಸಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಮಯ ಯುದ್ಧದಲ್ಲಿ
ನೂರೆಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಸಪ್ತತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಪಂಚ ತಂ ನಾಭ್ಯವರ್ತಂತ ವಿಪರೀತೇನ ಕರ್ಮಣಾ ।
ವೇದೋ ಧರ್ಮಃ ಕ್ಷಮಾ ಸತ್ಯಂ ಶ್ರೀಶ್ಚ ನಾರಾಯಣಾಶ್ರಯಾ ॥ ೧ ॥

ಸ ತೇಷಾಮನುಪಸ್ಥಾನಾತ್ಸಕ್ರೋಧೋ ದಾನವೇಶ್ವರಃ ।
ವೈಷ್ಣವಂ ಪದಮನ್ವಿಚ್ಛನ್ ಯಯೌ ನಾರಾಯಣಾಂತಿಕಂ ॥ ೨ ॥

ಸ ದದರ್ಶ ಸುಪರ್ಣಸ್ಥಂ ಶಂಖಚಕ್ರಗದಾಧರಂ ।
ದಾನವಾನಾಂ ವಿನಾಶಾಯ ಭ್ರಾಮಯಂತಂ ಗದಾಂ ಶುಭಾಂ ॥ ೩ ॥

ಸಜಲಾಂಭೋದಸದೃಶಂ ವಿದ್ಯುತ್ಸದೃಶವಾಸಸಂ ।
ಸ್ವಾರೂಢಂ ಸ್ವರ್ಣಪಕ್ಷಾಢ್ಯಂ ಶಿಖಿನಂ ಕಾಶ್ಯಪಂ ಖಗಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವೇದ, ಧರ್ಮ, ಕ್ಷಮೆ, ಸತ್ಯ ಮತ್ತು ನಾರಾಯಣನನ್ನು ಆಶ್ರಯಿಸಿದ್ದ ಲಕ್ಷ್ಮಿ ಈ ಐವರೂ ಕಾಲನೇಮಿಯನ್ನು ಅವನ ಕರ್ಮದ ವೈಪರೀತ್ಯದಿಂದ ಆಶ್ರಯಿಸಲಿಲ್ಲ.

೨. ಅವರು ತನ್ನಲ್ಲಿಗೆ ಬಾರದಿದ್ದುದರಿಂದ ದಾನವೇಶ್ವರನಾದ ಆ ಕಾಲನೇಮಿಗೆ ಕೋಪ ಬಂದಿತು. ಅವನು ವಿಷ್ಣುವಿನ ಸ್ಥಾನವನ್ನಪೇಕ್ಷಿಸಿ ನಾರಾಯಣನ ಬಳಿಗೆ ಹೋದನು.

೩. ಶಂಖಚಕ್ರಗದಾಧಾರಿಯೂ ಗರುಡಾರೂಢನೂ ಆಗಿ ದಾನವರ ವಿನಾಶಕ್ಕೋಸ್ಕರ ಮಂಗಳಕರವಾದ ತನ್ನ ಗದೆಯನ್ನು ತಿರುಗಿಸುತ್ತಿದ್ದ ವಿಷ್ಣುವನ್ನು ಅವನು ನೋಡಿದನು.

೪. ವಿಷ್ಣುವು ನೀರಿನಿಂದ ತುಂಬಿದ ಮೋಡದಂತಿದ್ದನು. ಅವನ ವಸ್ತ್ರವು ಮಿಂಚನ್ನು ಹೋಲುತ್ತಿತ್ತು. ಅವನು ಸುವರ್ಣಪಕ್ಷಗಳಿಂದ ಪೂರ್ಣನಾದ, ಶಿಖಾಧಾರಿಯೂ ಕಶ್ಯಪನ ಪುತ್ರನೂ ಆದ ಗರುಡನನ್ನೇರಿ ಕುಳಿತಿದ್ದನು.

ದೃಷ್ಟ್ವಾ ದೈತ್ಯವಿನಾಶಾಯ ರಣೇ ಸ್ವಸ್ಥಮುಪಸ್ಥಿತಂ ।
ದಾನವೋ ವಿಷ್ಣುಮಕ್ಷೋಭ್ಯಂ ಬಭಾಷೇ ಕ್ಷುಬ್ಧಮಾನಸಃ ॥ ೫ ॥

ಅಯಂ ಸ ರಿಪುರಸ್ಮಾಕಂ ಪೂರ್ವೇಷಾಂ ಪ್ರಾಣನಾಶನಃ ।
ಅರ್ಣವಾವಾಸಿನಶ್ಚೈವ ಮಧೋರ್ವೈ ಕೈಟಭಸ್ಯ ಚ ॥ ೬ ॥

ಅಯಂ ಸ ವಿಗ್ರಹೋಽಸ್ಮಾಕಮಶಾಮ್ಯಃ ಕಿಲ ಕಥ್ಯತೇ ।
ಅನೇನ ಸಂಯುಗೇಷ್ವದ್ಯ ದಾನವಾ ಬಹವೋ ಹತಾಃ ॥ ೭ ॥

ಅಯಂ ಸ ನಿರ್ಘೃಣೋ ಲೋಕೇ ಸ್ತ್ರೀಬಾಲನಿರಪತ್ರಪಃ ।
ಯೇನ ದಾನವನಾರೀಣಾಂ ಸೀಮಂತೋದ್ಧರಣಂ ಕೃತಂ ॥ ೮ ॥

ಅಯಂ ಸ ವಿಷ್ಣುರ್ದೇವಾನಾಂ ವೈಕುಂಠಶ್ಚ ದಿವೌಕಸಾಂ ।
ಅನಂತೋ ಭೋಗಿನಾಮಪ್ಸು ಸ್ವಪನ್ನಾದ್ಯಃ ಸ್ವಯಂಭುವಃ ॥ ೯ ॥

---

೫. ದೈತ್ಯರ ವಿನಾಶಕ್ಕಾಗಿಯೇ ಯುದ್ಧದಲ್ಲಿ ಶಾಂತನಾಗಿಯೂ ಕ್ಷೋಭರಹಿತನಾಗಿಯೂ ಇದ್ದ ವಿಷ್ಣುವನ್ನು ನೋಡಿ ಮನಸ್ಸಿನಲ್ಲಿ ಸಿಟ್ಟೇರಲು ಆ ದಾನವನು ಇಂತೆಂದನು.

೬. "ಇವನೇ ನಮ್ಮ ಶತ್ರು. ನಮ್ಮ ಹಿರಿಯರ ಪ್ರಾಣವನ್ನು ತೆಗೆದವನೂ, ಸಮುದ್ರದಲ್ಲಿ ವಾಸಿಸುತ್ತಿದ್ದ ಮಧುಕೈಟಭರನ್ನು ಸಂಹರಿಸಿದವನೂ ಈತನೇ.

೭. ಇವನೇ ಜಗಳಗಂಟಿಗನು. ನಮಗೆ ಬಗ್ಗದಿರುವಾತನು· ಯುದ್ಧದಲ್ಲಿ ಈತನಿಂದ ಎಷ್ಟೋಜನ ದಾನವರು ಹತರಾದರು.

೮. ಸ್ತ್ರೀಹತ್ಯ, ಬಾಲಹತ್ಯ, ಇವುಗಳನ್ನು ಮಾಡಿ ಲಜ್ಜೆಯೇ ಇಲ್ಲದ ದಯಾಹೀನನು ಈತ. ದಾನವ ಸ್ತ್ರೀಯರಿಗೆ ವೈಧವ್ಯವನ್ನುಂಟುಮಾಡುವುದರ ಮೂಲಕ ಅವರು ಬೈತಲೆಯನ್ನು ಬಾಚಿಕೊಳ್ಳದಂತೆ ಮಾಡಿದವನು ಇವನು.

೯. ಇವನು ದೇವತೆಗಳಿಗೆ ವಿಷ್ಣುವೂ, ಸ್ವರ್ಗವಾಸಿಗಳಿಗೆ ವೈಕುಂಠನೂ, ಸರ್ಪಗಳಿಗೆ ಅನಂತನೂ, ಸಮುದ್ರದಲ್ಲಿ ಯೋಗನಿದ್ರೆಯನ್ನು ಮಾಡುವ ಆದಿ ಪುರುಷನೂ ಆಗಿರುವನು.

ಅಯಂ ಸ ನಾಥೋ ದೇವಾನಾಮಸ್ಮಾಭಿರ್ವ್ಯಥಿತಾತ್ಮನಾಂ ।
ಅಸ್ಯ ಕ್ರೋಧಂ ಸಮಾಸಾದ್ಯ ಹಿರಣ್ಯಕಶಿಪುರ್ಹತಃ ॥೧೦॥

ಅಸ್ಯ ಚ್ಛಾಯಾಮುಪಾಶ್ರಿತ್ಯ ದೇವಾ ಮಖಮುಖೇ ಶ್ರಿತಾಃ ।
ಆಜ್ಯಂ ಮಹರ್ಷಿಭಿರ್ದತ್ತಮಶ್ನುವಂತಿ ವಿಧೌ ಹುತಂ ॥೧೧॥

ಅಯಂ ಸ ನಿಧನೇ ಹೇತುಃ ಸರ್ವೇಷಾಮಮರದ್ವಿಷಾಂ ।
ಯಸ್ಯ ಚಕ್ರೇ ಪ್ರವಿಷ್ಟಾನಿ ಕುಲಾನ್ಯಸ್ಮಾಕಮಾಹವೇ ॥೧೨॥

ಅಯಂ ಸ ಕಿಲ ಯುದ್ಧೇಷು ಸುರಾರ್ಥೇ ತ್ಯಕ್ತಜೀವಿತಃ ।
ಸವಿತುಸ್ತೇಜಸಾ ತುಲ್ಯಂ ಚಕ್ರಂ ಕ್ಷಿಪತಿ ಶತ್ರುಷು ॥೧೩॥

ಅಯಂ ಸ ಕಾಲೋ ದೈತ್ಯಾನಾಂ ಕಾಲಭೂತಃ ಸಮಾಸ್ಥಿತಃ ।
ಅತಿಕ್ರಾಂತಸ್ಯ ಕಾಲಸ್ಯ ಫಲಂ ಪ್ರಾಪ್ಸ್ಯತಿ ಕೇಶವಃ ॥೧೪॥

---

೧೦. ನಮ್ಮಿಂದ ದುಃಖಕ್ಕೀಡಾಗಿರುವ ದೇವತೆಗಳನ್ನು ಪಾಲಿಸುವಾತನು ಇವನು. ಇವನ ಕೋಪಕ್ಕೆ ಪಾತ್ರನಾಗಿ ಹಿರಣ್ಯಕಶಿಪು ಹತನಾದನು.

೧೧. ಇವನ ನೆರಳಿನ ಆಸರೆಯಲ್ಲಿ ನಿಂತು ದೇವತೆಗಳು ಯಜ್ಞದಲ್ಲಿ ಭಾಗಿಗಳಾಗಿರುವರು. ಮತ್ತು ಮಹರ್ಷಿಗಳು ಶಾಸ್ತ್ರೋಕ್ತಕ್ರಮದಲ್ಲಿ ಹೋಮಮಾಡಿದ ಆಜ್ಯವನ್ನು ಭುಜಿಸುವರು,

೧೨. ದೇವತೆಗಳಿಗೆ ಶತ್ರುಗಳೆನಿಸಿದವರೆಲ್ಲರ ನಾಶಕ್ಕೂ ಇವನೇ ಕಾರಣ. ನಮ್ಮ ದೈತ್ಯವಂಶಗಳೆಷ್ಟೋ ಇವನ ಚಕ್ರಕ್ಕೆ ಸಿಕ್ಕಿ ಯುದ್ಧದಲ್ಲಿ ಹಾಳಾದುವು.

೧೩. ದೇವತೆಗಳಿಗೋಸ್ಕರವಾಗಿ ಈತನು ಯುದ್ಧಗಳಲ್ಲಿ ತನ್ನ ಪ್ರಾಣವನ್ನಾದರೂ ಬಿಡಲು ಸಿದ್ಧನಾಗಿರುವನು. ಸೂರ್ಯನ ತೇಜಸ್ಸಿಗೆ ಸಮಾನವಾದ ತನ್ನ ಚಕ್ರವನ್ನು ಶತ್ರುಗಳ ಮೇಲೆ ಪ್ರಯೋಗಿಸುವನು.

೧೪ ದೈತ್ಯರಿಗೆ ಮೃತ್ಯುರೂಪನಾದ ಕೇಶವನು ಇಗೋ ಇಲ್ಲಿರುವನು. ಹಿಂದೆ ತಾನು ಮಾಡಿದುದಕ್ಕೆ ಫಲವನ್ನು ಈತನು ಈಗ ಪಡೆಯುವನು.

ದಿಷ್ಟ್ಯೇದಾನೀಂ ಸಮಕ್ಷಂ ಮೇ ವಿಷ್ಣುರೇಷ ಸಮಾಗತಃ ।
ಅದ್ಯ ಮದ್ಬಾಹುನಿಷ್ಪಿಷ್ಟೋ ಮಾಮೇವ ಪ್ರಣಮಿಷ್ಯತಿ ॥೧೫॥

ಯಾಸ್ಯಾಮ್ಯಪಚಿತಿಂ ದಿಷ್ಟ್ಯಾ ಪೂರ್ವೇಷಾಮದ್ಯ ಸಂಯುಗೇ ।
ಇಮಂ ನಾರಾಯಣಂ ಹತ್ವಾ ದಾನವಾನಾಂ ಭಯಾವಹಂ ॥೧೬॥

ಕ್ಷಿಪ್ರಮೇವ ಹನಿಷ್ಯಾಮಿ ರಣೇಽಮರಗಣಾಂಸ್ತತಃ ।
ಜಾತ್ಯಂತರಗತೋ ಹ್ಯೇಷ ಬಾಧತೇ ದಾನವಾನ್ಮೃಧೇ ॥೧೭॥

ಏಷೋಽನಂತಃ ಪುರಾ ಭೂತ್ವಾ ಪದ್ಮನಾಭ ಇತಿ ಶ್ರುತಃ ।
ಜಘಾನೈಕಾರ್ಣವೇ ಘೋರೇ ತಾವುಭೌ ಮಧುಕೈಟಭೌ ॥೧೮॥

ದ್ವಿಧಾ ಭೂತಂ ವಪುಃ ಕೃತ್ವಾ ಸಿಂಹಸ್ಯಾರ್ಧಂ ನರಸ್ಯ ಚ ।
ಪಿತರಂ ಮೇ ಜಘಾನೈಕೋ ಹಿರಣ್ಯಕಶಿಪುಂ ಪುರಾ ॥೧೯॥

---

೧೫. ಅದೃಷ್ಟವಶದಿಂದ ಈ ವಿಷ್ಣುವು ನನ್ನ ಕಣ್ಣೆದುರಿಗೆ ಬಂದನು. ಇವನು ಈಗ ನನ್ನ ಬಾಹುಗಳಿಗೆ ಸಿಕ್ಕಿ ಅಜ್ಜಿಬಜ್ಜಿಯಾಗಿ ನನಗೇ ನಮಸ್ಕಾರ ಮಾಡುವನು.

೧೬. ದಾನವರಿಗೆ ಭಯವನ್ನು ಹುಟ್ಟಿಸುತ್ತಿರುವ ಈ ನಾರಾಯಣನನ್ನು ಯುದ್ಧದಲ್ಲಿ ಇಂದು ಸಂಹರಿಸಿ ನಮ್ಮ ಪೂರ್ವಿಕರ ಸೇಡನ್ನು ತೀರಿಸಿಕೊಳ್ಳುವೆನು. ಇದು ನನ್ನ ಅದೃಷ್ಟ.

೧೭. ಬಳಿಕ ತಡಮಾಡದೆ ದೇವತೆಗಳ ಗಣಗಳನ್ನು ಸಂಹರಿಸುವೆನು. ನಮ್ಮ ಶತ್ರುಗಳ ಜಾತಿಗೆ ಸೇರಿದ ಈ ವಿಷ್ಣುವು ಯುದ್ಧದಲ್ಲಿ ದಾನವರನ್ನು ಬಾಧಿಸುತ್ತಿರುವನು.

೧೮. ಈತನು ಪೂರ್ವದಲ್ಲಿ ಅನಂತನಾಗಿ ಪದ್ಮನಾಭನೆಂಬ ಪ್ರಖ್ಯಾತಿಯನ್ನು ಪಡೆದನು. ಜಗತ್ತೆಲ್ಲವೂ ಜಲಮಯವಾಗಿದ್ದ ಕಾಲದಲ್ಲಿ ಸುಪ್ರಸಿದ್ಧರಾದ ಮಧುಕೈಭಟರಿಬ್ಬರನ್ನೂ ಸಂಹರಿಸಿದನು.

೧೯. ಅರ್ಧಸಿಂಹವೂ, ಅರ್ಧಮನುಷ್ಯನೂ ಆಗಿ ಇಬ್ಬಗೆಯಾದ ರೂಪವನ್ನು ತಾಳಿ ಪೂರ್ವದಲ್ಲಿ ನಮ್ಮ ತಂದೆಯಾದ ಹಿರಣ್ಯಕಶಿಪುವನ್ನು ಯಾರ ಸಹಾಯವೂ ಇಲ್ಲದೆ ಒಬ್ಬನೇ ವಧಿಸಿದನು.

ಶುಭಂ ಗರ್ಭಮಧತ್ತೈನಮದಿತಿರ್ದೇವತಾರಣಿಃ ।
ತ್ರೀಂಲ್ಲೋಕಾನುಜ್ಜಹಾರೈಕಃ ಕ್ರಮಮಾಣಸ್ತ್ರಿಭಿಃ ಕ್ರಮೈಃ ॥೨೦॥

ಭೂಯಸ್ತ್ವಿದಾನೀಂ ಸಂಗ್ರಾಮೇ ಸಂಪ್ರಾಪ್ತೇ ತಾರಕಾಮಯೇ ।
ಮಯಾ ಸಹ ಸಮಾಗಮ್ಯ ಸದೇವೋ ವಿನಶಿಷ್ಯತಿ ॥೨೧॥

ಏವಮುಕ್ತ್ವಾ ಬಹುವಿಧಂ ಕ್ಷಿಪನ್ನಾರಾಯಣಂ ರಣೇ ।
ವಾಗ್ಭಿರಪ್ರತಿರೂಪಾಭಿರ್ಯುದ್ಧಮೇವಾಭ್ಯರೋಚಯತ್ ॥೨೨॥

ಕ್ಷಿಪ್ಯಮಾಣೋಽಸುರೇಂದ್ರೇಣ ನ ಚುಕೋಪ ಗದಾಧರಃ ।
ಕ್ಷಮಾಬಲೇನ ಮಹತಾ ಸಸ್ಮಿತಂ ಚೇದಮಬ್ರವೀತ್ ॥೨೩॥

ಅಲ್ಪಂ ದರ್ಪಬಲಂ ದೈತ್ಯ ಸ್ಥಿರಮಕ್ರೋಧಜಂ ಬಲಂ ।
ಹತಸ್ತ್ವಂ ದರ್ಪಜೈರ್ದೋಷೈರ್ಹಿತ್ವಾ ಯದ್ಭಾಷಸೇ ಕ್ಷಮಾಂ ॥೨೪॥

---

೨೦. ದೇವತೆಗಳ ಜನನಿಯಾದ ಅದಿತಿಯು ದೇವತೆಗಳ ಹಿತಾಕಾಂಕ್ಷಿಯಾದ ಈ ವಿಷ್ಣುವನ್ನು ತನ್ನ ಗರ್ಭದಲ್ಲಿ ಪಡೆದಳು. ಇವನು ತ್ರಿವಿಕ್ರಮಾವತಾರದಲ್ಲಿ ತನ್ನ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನೂ ಬಲಿಚಕ್ರವರ್ತಿಯಿಂದ ಅಪಹರಿಸಿದನು.

೨೧. ಈಗ ಮತ್ತೆ ತಾರಕಾಮಯ ಸಂಗ್ರಾಮವು ಒದಗಿದೆ. ಈತನು ಯುದ್ಧದಲ್ಲಿ ನನ್ನನ್ನು ಸಂಧಿಸಿ ಸಕಲ ದೇವತೆಗಳ ಸಹಿತವಾಗಿ ನಾಶವಾಗುವನು."

೨೨. ಹೀಗೆ ಅನುಚಿತವಚನಗಳಿಂದ ಬಹುವಿಧವಾಗಿ ನಾರಾಯಣನನ್ನು ಜರೆದು ಕಾಲನೇಮಿಯು ಯುದ್ಧಮಾಡಬೇಕೆಂದೇ ನಿಶ್ಚಯಿಸಿದನು.

೨೩. ಅಸುರೇಂದ್ರನು ಹೀಗೆ ತಿರಸ್ಕರಿಸಿ ಮಾತನಾಡಿದರೂ ವಿಷ್ಣುವು ಕೋಪಿಸಿಕೊಳ್ಳಲಿಲ್ಲ. ಅವನ ಕ್ಷಮಾಗುಣವು ಅಪಾರವಾದುದು. ಅದರಿಂದ ಅವನು ಮುಗುಳುನಗೆ ನಗುತ್ತ ಇಂತೆಂದನು.

೨೪. "ಎಲೈ ದೈತ್ಯಾ, ದರ್ಪದಿಂದ ಬಂದ ಬಲವು ಅಲ್ಪವಾದುದು. ತಾಳ್ಮೆಯಿಂದುಂಟಾದ ಬಲವಾದರೋ ಸ್ಥಿರವಾದುದು. ನೀನು ತಾಳ್ಮೆಯನ್ನು ಬಿಟ್ಟು ಮಾತನಾಡುತ್ತಿರುವೆ. ನಿನ್ನ ಗರ್ವದ ದೋಷಗಳಿಂದಲೇ ನೀನು ಹಾಳಾಗುವೆ.

ಅಧೀರಸ್ತ್ವಂ ಮಮ ಮತೋ ಧಿಗೇತತ್ತವ ವಾಗ್ಬಲಂ ।
ನ ಯತ್ರ ಪುರುಷಾಃ ಸಂತಿ ತತ್ರ ಗರ್ಜಂತಿ ಯೋಷಿತಃ ॥೨೫॥

ಅಹಂ ತ್ವಾಂ ದೈತ್ಯ ಪಶ್ಯಾಮಿ ಪೂರ್ವೇಷಾಂ ಮಾರ್ಗಗಾಮಿನಂ ।
ಪ್ರಜಾಪತಿಕೃತಂ ಸೇತುಂ ಭಿತ್ವಾ ಕಃ ಸ್ವಸ್ತಿಮಾನ್ವ್ರಜೇತ್ ॥೨೬॥

ಅದ್ಯ ತ್ವಾಂ ನಾಶಯಿಷ್ಯಾಮಿ ದೇವವ್ಯಾಪಾರಘಾತಕಂ ।
ಸ್ವೇಷು ಸ್ವೇಷು ಚ ಸ್ಥಾನೇಷು ಸ್ಥಾಪಯಿಷ್ಯಾಮಿ ದೇವತಾಃ ॥೨೭॥

ಏವಂ ಬ್ರುವತಿ ವಾಕ್ಯಂ ತು ಮೃಧೇ ಶ್ರೀವತ್ಸಧಾರಿಣಿ ।
ಜಹಾಸ ದಾನವಃ ಕ್ರೋಧಾದ್ಧಸ್ತಾಂಶ್ಚಕ್ರೇ ಸಹಾಯುಧಾನ್ ॥೨೮॥

ಸ ಬಾಹುಶತಮುದ್ಯಮ್ಯ ಸರ್ವಾಸ್ತ್ರಗ್ರಹಣಂ ರಣೇ ।
ಕ್ರೋಧಾದ್ದ್ವಿಗುಣರಕ್ತಾಕ್ಷೋ ವಿಷ್ಣುಂ ವಕ್ಷಸ್ಯತಾಡಯತ್ ॥೨೯॥

---

೨೫. ನೀನು ಹೇಡಿಯೆಂದು ನಾನು ಭಾವಿಸುತ್ತೇನೆ. ನಿನ್ನ ಈ ಬರಿಯ ಮಾತಿನ ಬಲಕ್ಕೆ ಧಿಕ್ಕಾರವಿರಲಿ. ಗಂಡಸರಿಲ್ಲದ ಕಡೆಯಲ್ಲಿ ಹೆಂಗಸರು ಘರ್ಜಿಸುತ್ತಾರೆ.

೨೬. ನಿನ್ನ ಹಿಂದಿನವರ ದಾರಿಯನ್ನೇ ನೀನು ಹಿಡಿಯುತ್ತೀಯೆ. ಅದನ್ನೀಗಲೆ ನಾನು ನೋಡುತ್ತೇನೆ. ಪ್ರಜಾಪತಿಯು ಏರ್ಪಡಿಸಿದ ಧರ್ಮದ ನಿಬಂಧನೆಯನ್ನು ಮೀರಿ ಯಾವನು ತಾನೆ ಕ್ಷೇಮದಿಂದಿದ್ದಾನು ?

೨೭. ದೇವತೆಗಳ ವ್ಯಾಪಾರಕ್ಕೆ ಅಡ್ಡಿಬಂದ ನಿನ್ನನ್ನು ಈಗ ನಾಶಪಡಿಸಿ ಅವರವರ ಸ್ಥಾನದಲ್ಲಿ ಅವರನ್ನು ನೆಲಗೊಳಿಸುವೆನು."

೨೮. ಯುದ್ಧರಂಗದಲ್ಲಿ ಶ್ರೀವತ್ಸಲಾಂಛನನಾದ ಶ್ರೀಮನ್ನಾರಾಯಣನು ಹೀಗೆ ಹೇಳುತ್ತಿರಲು ಕಾಲನೇಮಿಯು ನಕ್ಕು ಕೋಪದಿಂದ ಕೈಗಳಲ್ಲಿ ಆಯುಧಗಳನ್ನೆತ್ತಿಕೊಂಡನು.

೨೯. ಅವನು ಎಲ್ಲ ಬಗೆಯ ಅಸ್ತ್ರಗಳನ್ನೂ ಧರಿಸಿದ್ದ ತನ್ನ ನೂರು ತೋಳುಗಳನ್ನೂ ಮೇಲಕ್ಕೆತ್ತಿ, ಕ್ರೋಧದಿಂದ ಕಣ್ಣು ಇಮ್ಮಡಿಯಾಗಿ ಕೆಂಪಾಗಲು ವಿಷ್ಣುವಿನ ಎದೆಯ ಮೇಲೆ ಹೊಡೆದನು.

ದಾನವಾಶ್ಚಾಪಿ ಸಮರೇ ಮಯತಾರಪುರೋಗಮಾಃ ।
ಉದ್ಯತಾಯುಧನಿಸ್ತ್ರಿಂಶಾ ವಿಷ್ಣುಮಭ್ಯದ್ರವನ್ರಣೇ ॥೩೦॥

ಸ ತಾಡ್ಯಮಾನೋಽತಿಬಲೈರ್ದೈತ್ಯೈಃ ಸರ್ವೋದ್ಯತಾಯುಧೈಃ ।
ನ ಚಚಾಲ ತತೋ ಯುದ್ಧೇಽಕಂಪಮಾನ ಇವಾಚಲಃ ॥೩೧॥

ಸಂಸಕ್ತಶ್ಚ ಸುಪರ್ಣೇನ ಕಾಲನೇಮೀ ಮಹಾಸುರಃ ।
ಸರ್ವಪ್ರಾಣೇನ ಮಹತೀಂ ಗದಾಮುದ್ಯಮ್ಯ ಬಾಹುಭಿಃ ॥೩೨॥

ಘೋರಾಂ ಜ್ವಲಂತೀಂ ಮುಮುಚೇ ಸಂರಬ್ಧೋ ಗರುಡೋಪರಿ ।
ಕರ್ಮಣಾ ತೇನ ದೈತ್ಯಸ್ಯ ವಿಷ್ಣುರ್ವಿಸ್ಮಯಮಾವಿಶತ್ ॥೩೩॥

ಯದಾ ತೇನ ಸುಪರ್ಣಸ್ಯ ಪತಿತಾ ಮೂರ್ಧ್ನಿ ಸಾ ಗದಾ ।
ಸುಪರ್ಣಂ ವ್ಯಥಿತಂ ದೃಷ್ಟ್ವಾ ಕ್ಷತಂ ಚ ವಪುರಾತ್ಮನಃ ॥೩೪॥

ಕ್ರೋಧಸಂರಕ್ತನಯನೋ ವೈಕುಂಠಶ್ಚಕ್ರಮಾದದೇ ।
ವ್ಯವರ್ಧತ ಸವೇಗೇನ ಸುಪರ್ಣೇನ ಸಮಂ ವಿಭುಃ ॥೩೫॥

---

೩೦ ಮಯ, ತಾರ ಮುಂತಾದ ಮಿಕ್ಕ ದಾನವರೂ ಸಹ ಆಯುಧಗಳನ್ನೂ ಕತ್ತಿಗಳನ್ನೂ ಎತ್ತಿಕೊಂಡು ವಿಷ್ಣುವಿನ ಕಡೆಗೆ ಓಡಿಬಂದರು.

೩೧. ಎಲ್ಲ ವಿಧವಾದ ಆಯುಧಗಳನ್ನೂ ಎತ್ತಿ ಅತಿ ಬಲಿಷ್ಠರಾದ ದೈತ್ಯರು ಹೊಡೆದರೂ ಕೂಡ ಆ ವಿಷ್ಣುವು ಪರ್ವತದಂತೆ ಅಲುಗಾಡದಿದ್ದನು.

೩೨-೩೩. ಬಳಿಕ ಗರುಡನು ಕಾಲನೇಮಿಯನ್ನೆದುರಿಸಿದನು· ಅವನು ಜ್ವಲಿಸುತ್ತಿರುವ ಭಯಂಕರವಾದ ದೊಡ್ಡಗದೆಯನ್ನು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ತೋಳುಗಳಿಂದೆತ್ತಿ ಅವನ ಮೇಲೆ ಬಿಸುಟನು. ದೈತ್ಯನ ಆ ಸಾಹಸ ಕಾರ್ಯದಿಂದ ವಿಷ್ಣುವಿಗೆ ಆಶ್ಚರ್ಯವಾಯಿತು.

೩೪-೩೫. ಕಾಲನೇಮಿಯು ಗರುಡನ ತಲೆಯಮೇಲೆ ಗದೆಯನ್ನು ಬಿಸುಟನು. ಅವನಿಗೆ ಬಹಳ ನೋವಾಯಿತು. ವಿಷ್ಣುವಿನ ದೇಹದಲ್ಲೂ ಗಾಯವಾಯಿತು. ಆಗ ಸರ್ವೇಶ್ವರನಾದ ನಾರಾಯಣನು ಕೋಪದಿಂದ ಕಣ್ಣು ಕೆಂಪೇರಲು ಚಕ್ರವನ್ನೆತ್ತಿಕೊಂಡನು. ಕೂಡಲೆ ಗರುಡನೊಡಗೂಡಿ ತಾನೂ ದೊಡ್ಡ ಆಕಾರವನ್ನು ತಾಳಿದನು.

ಭುಜಾಶ್ಚಾಸ್ಯ ವ್ಯವರ್ಧಂತ ವ್ಯಾಪ್ನುವಂತೋ ದಿಶೋ ದಶ ।
ಪ್ರದಿಶಶ್ಚೈವ ಖಂ ಗಾಂ ವೈ ಪೂರಯಾಮಾಸ ಕೇಶವಃ ॥೩೬॥

ವವೃಧೇ ಚ ಪುನರ್ಲೋಕಾನ್ ಕ್ರಾಂತುಕಾಮ ಇವೌಜಸಾ ।
ತರ್ಜನಾಯಾಸುರೇಂದ್ರಾಣಾಂ ವರ್ಧಮಾನಂ ನಭಃಸ್ಥಲೇ ॥೩೭॥

ಋಷಯಶ್ಚೈವ ಗಂಧರ್ವಾಸ್ತುಷ್ಟುವುರ್ಮಧುಸೂದನಂ ।
ಸರ್ವಾನ್ ಕಿರೀಟೇನ ಲಿಹನ್ಸಾಭ್ರಮಂಬರಮಂಬರೈಃ ॥೩೮॥

ಪದ್ಭ್ಯಾಮಾಕ್ರಮ್ಯ ವಸುಧಾಂ ದಿಶಃ ಪ್ರಚ್ಛಾದ್ಯ ಬಾಹುಭಿಃ ।
ಸ ಸೂರ್ಯಕರತುಲ್ಯಾಭಂ ಸಹಸ್ರಾರಮರಿಕ್ಷಯಂ ॥೩೯॥

ದೀಪ್ತಾಗ್ನಿಸದೃಶಂ ಘೋರಂ ದರ್ಶನೇನ ಸುದರ್ಶನಂ ।
ಸುವರ್ಣರೇಣುಪರ್ಯಂತಂ ವಜ್ರನಾಭಂ ಭಯಾಪಹಂ ॥೪೦॥

---

೩೬. ಅವನ ತೋಳುಗಳು ಬೆಳೆದು ಹತ್ತು ದಿಕ್ಕುಗಳಿಗೂ ವ್ಯಾಪಿಸಿದುವು. ದಿಕ್ಕುಗಳ ಮೂಲೆಗಳು, ಆಕಾಶ, ಭೂಮಿ ಇವೆಲ್ಲವೂ ಕೇಶವನಿಂದ ತುಂಬಿ ಹೋದುವು.

೩೭-೩೮. ಲೋಕಗಳನ್ನು ಪುನಃ ಅಳೆಯುವುದಕ್ಕೆ ಇಚ್ಛಿಸುತ್ತಾನೆಯೋ ಎಂಬಂತೆ ಅವನು ಪರಾಕ್ರಮದಿಂದ ಬೆಳೆದನು. ದೈತ್ಯವೀರರ ಭಯೋತ್ಪಾದನಕ್ಕಾಗಿ ಅಂತರಿಕ್ಷದಲ್ಲಿ ಮಹಾರೂಪವನ್ನು ತಾಳುತ್ತಿರುವ ಮಧುಸೂದನನನ್ನು ಋಷಿಗಳೂ ಗಂಧರ್ವರೂ ಸ್ತೋತ್ರಮಾಡಿದರು. ವಿಷ್ಣುವಿನ ಕಿರೀಟವು ಅವರೆಲ್ಲರಿಗೂ ತಗುಲುತ್ತಿತ್ತು. ಅವನ ವಸ್ತ್ರವು ಮೋಡಗಳಿಂದ ಕೂಡಿದ ಆಕಾಶವನ್ನು ಮುಚ್ಚಿತು. ಪಾದಗಳು ಭೂಮಿಯನ್ನು ಆಕ್ರಮಿಸಿದುವು. ತೋಳುಗಳು ದಿಕ್ಕುಗಳನ್ನು ಮರೆ ಮಾಡಿದುವು.

೩೯-೪೬. ಕ್ರೋಧೋದ್ದೀಪ್ತನಾದ ವಿಷ್ಣುವು ಸೂರ್ಯನ ಕಿರಣಗಳಂತೆ ತೇಜೋಯುಕ್ತವಾಗಿ, ಸಾವಿರ ಅರಗಳಿಂದ ಕೂಡಿ, ಶತ್ರುಗಳನ್ನು ನಾಶಮಾಡುವ ಚಕ್ರವನ್ನು ಕೈಗೆ ತೆಗೆದುಕೊಂಡನು. ಆ ಸುದರ್ಶನವು ಜ್ವಲಿಸುವ ಅಗ್ನಿಗೆ ಸಮಾನವಾಗಿ ಭಯಂಕರವಾಗಿತ್ತು. ಅದರ ಅಂಚು ಚಿನ್ನದ ರೇಣುಗಳಿಂದ ಅಲಂಕೃತ

ಮೇದೋಽಸ್ಥಿಮಜ್ಜಾರುಧಿರೈಃ ಸಿಕ್ತಂ ದಾನವಸಂಭವೈಃ ।
ಅದ್ವಿತೀಯಪ್ರಹರಣಂ ಕ್ಷುರಪರ್ಯಂತಮಂಡಲಂ ॥೪೧॥

ಸ್ರಗ್ದಾಮಮಾಲಾವಿತತಂ ಕಾಮಗಂ ಕಾಮರೂಪಿಣಂ ।
ಸ್ವಯಂ ಸ್ವಯಂಭುವಾ ಸೃಷ್ಟಂ ಭಯದಂ ಸರ್ವವಿದ್ವಿಷಾಂ ॥೪೨॥

ಮಹರ್ಷಿರೋಷೈರಾವಿಷ್ಟಂ ನಿತ್ಯಮಾಹವದರ್ಪಿತಂ ।
ಕ್ಷೇಪಣಾದ್ಯಸ್ಯ ಮುಹ್ಯಂತಿ ಲೋಕಾಃ ಸಸ್ಥಾಣುಜಂಗಮಾಃ ॥೪೩॥

ಕ್ರವ್ಯಾದಾನಿ ಚ ಭೂತಾನಿ ತೃಪ್ತಿಂ ಯಾಂತಿ ಮಹಾಮೃಥೇ ।
ತದಪ್ರತಿಮಕರ್ಮೋಗ್ರಂ ಸಮಾನಂ ಸೂರ್ಯವರ್ಚಸಾ ॥೪೪॥

ಚಕ್ರಮುದ್ಯಮ್ಯ ಸಮರೇ ಕ್ರೋಧದೀಪ್ತೋ ಗದಾಧರಃ ।
ಸ ಮುಷ್ಣನ್ ದಾನವಂ ತೇಜಃ ಸಮರೇ ಸ್ವೇನ ತೇಜಸಾ ॥೪೫॥

ಚಿಚ್ಛೇದ ಬಾಹೂಂಶ್ಚಕ್ರೇಣ ಶ್ರೀಧರಃ ಕಾಲನೇಮಿನಃ ।
ತಚ್ಚ ವಕ್ತ್ರಶತಂ ಘೋರಂ ಸಾಗ್ನಿಪೂರ್ಣಾಟ್ಟಹಾಸಿ ವೈ ॥೪೬॥

---

ವಾಗಿತ್ತು. ಮಧ್ಯಭಾಗವು ವಜ್ರಮಯವಾಗಿತ್ತು. ಆಶ್ರಿತರ ಭಯವನ್ನು ಅದು ಪರಿಹರಿಸುತ್ತಿತ್ತು. ದಾನವರ ಮೇದಸ್ಸು, ಮೂಳೆ, ಜಿಡ್ಡು ಮತ್ತು ರಕ್ತಗಳಲ್ಲಿ ಅದು ನೆನೆದಿತ್ತು. ಅದರಂತಹ ಆಯುಧವು ಬೇರೊಂದಿರಲಿಲ್ಲ. ಅದರ ಅಲಗಿನ ತುದಿಯು ಗುಂಡಾಗಿತ್ತು. ಅದು ಪುಷ್ಪಮಾಲೆಗಳಿಂದ ಅಲಂಕೃತವಾಗಿ, ಸ್ವೇಚ್ಛಾ ರೂಪವನ್ನು ತಾಳಿ ಬೇಕಾದ ಕಡೆಗೆ ಹೋಗಬಲ್ಲುದಾಗಿತ್ತು. ಶತ್ರುಗಳಿಗೆಲ್ಲ ಭಯವನ್ನು ಹುಟ್ಟಿಸುವಂತಹ ಆ ದಿವ್ಯಾಯುಧವನ್ನು ವಿಷ್ಣುವೇ ನಿರ್ಮಾಣಮಾಡಿದ್ದನು. ಮಹರ್ಷಿಗಳ ರೋಷದಿಂದ ಸಹಕೃತವಾಗಿ ಅದು ಯುದ್ಧದಲ್ಲಿ ಯಾವಾಗಲೂ ದರ್ಪವನ್ನು ಪ್ರಕಟಿಸುತ್ತಿತ್ತು. ಅದನ್ನು ಪ್ರಯೋಗಿಸಿದರೆ ಸ್ಥಾವರಜಂಗಮರೂಪವಾದ ಲೋಕವೆಲ್ಲ ಭ್ರಾಂತಿಗೊಳ್ಳುತ್ತಿತ್ತು. ಮಾಂಸಾಹಾರಿಗಳಾದ ಪ್ರಾಣಿಗಳಿಗೆ ಯುದ್ಧದಲ್ಲಿ ಅದು ತೃಪ್ತಿಯನ್ನು ಕೊಡುತ್ತಿತ್ತು. ಅದು ಮಾಡುತ್ತಿದ್ದ ಸಾಹಸಕಾರ್ಯವು ಅಸದೃಶವಾಗಿದ್ದಿತು. ಸೂರ್ಯನ ತೇಜಸ್ಸಿಗೆ ಸಮಾನವಾದ ತನ್ನ ತೇಜಸ್ಸಿನಿಂದ ಅದು ಕಾಲನೇಮಿಯ ತೇಜಸ್ಸನ್ನು ಅಪಹರಿಸುತ್ತಿದ್ದಿತು. ನಾರಾಯಣನು ಇಂತಹ ಚಕ್ರಾಯುಧದಿಂದ ಆ ದೈತ್ಯನ ಬಾಹುಗಳನ್ನೂ ಅಗ್ನಿಯಿಂದ ಪೂರ್ಣವಾಗಿ ಅಟ್ಟಹಾಸ ಮಾಡುತ್ತಿದ್ದ ಒಂದು ನೂರು ಮುಖಗಳನ್ನೂ ಕತ್ತರಿಸಿದನು.

ತಸ್ಯ ದೈತ್ಯಸ್ಯ ಚಕ್ರೇಣ ಪ್ರಮಮಾಥ ಬಲಾದ್ಧರಿಃ ।
ಸ ಚ್ಛಿನ್ನಬಾಹುರ್ವಿಶಿರಾ ನ ಪ್ರಾಕಂಪತ ದಾನವಃ ॥೪೭॥

ಕಬಂಧೋಽವಸ್ಥಿತಃ ಸಂಖ್ಯೇ ವಿಶಾಖ ಇವ ಪಾದಪಃ ।
ಸಂವಿತತ್ಯ ಮಹಾಪಕ್ಷೌ ವಾಯೋಃ ಕೃತ್ವಾ ಸಮಂ ಜವಂ ॥೪೮॥

ಉರಸಾ ಪಾತಯಾಮಾಸ ಗರುಡಃ ಕಾಲನೇಮಿನಂ ।
ಸ ತಸ್ಯ ದೇಹೋ ವಿಮುಖೋ ವಿಬಾಹುಶ್ಚ ಪರಿಭ್ರಮನ್ ।  ॥೪೯॥

ನಿಪಪಾತ ದಿವಂ ತ್ಯಕ್ತ್ವಾ ಕ್ಷೋಭಯನ್ ಧರಣೀತಲಂ ।
ತಸ್ಮಿನ್ನಿಪತಿತೇ ದೈತ್ಯೇ ದೇವಾಃ ಸರ್ಷಿಗಣಾಸ್ತದಾ ॥೫೦॥

ಸಾಧು ಸಾಧ್ವಿತಿ ವೈಕುಂಠಂ ಸಮೇತಾಃ ಪ್ರತ್ಯಪೂಜಯನ್ ।
ಅಪರೇ ಯೇ ತು ದೈತ್ಯಾಶ್ಚ ಯುದ್ಧೇ ದೃಷ್ಟಪರಾಕ್ರಮಾಃ ॥೫೧॥

---

೪೭. ಬಳಿಕ ಹರಿಯು ತನ್ನ ಚಕ್ರದಿಂದ ಬಲಾತ್ಕಾರವಾಗಿ ಆ ದೈತ್ಯನ ತಲೆಗಳನ್ನೂ ತೋಳುಗಳನ್ನೂ ಕತ್ತರಿಸಿದನು. ಆದರೂ ಆ ದಾನವನು ಅಲುಗಾಡಲಿಲ್ಲ.

೪೮. ಕೊಂಬೆಗಳಿಲ್ಲದ ಮರದಂತೆ ಆ ಮುಂಡವು ಪ್ರಕಾಶಿಸಿತು. ಗರುಡನು ತನ್ನ ದೊಡ್ಡ ರೆಕ್ಕೆಗಳೆರಡನ್ನೂ ಬಿಚ್ಚಿ, ವಾಯುವೇಗದಿಂದ ಹೋಗಿ, ಎದೆಯಿಂದ ಹೊಡೆದು ಕಾಲ ನೇಮಿಯನ್ನು ಬೀಳಿಸಿದನು.

೪೯. ಮುಖವೂ ತೋಳೂ ಇಲ್ಲದ ಅವನ ಆ ದೇಹವು ಉರುಳುತ್ತ ಆಕಾಶವನ್ನು ಬಿಟ್ಟು ನೆಲದ ಮೇಲೆ ಬಿದ್ದು ಕ್ಷೋಭೆಯನ್ನು ಹುಟ್ಟಿಸಿತು.

೫೦. ಆ ದೈತ್ಯನು ಹತನಾಗಿ ಬೀಳಲು ದೇವತೆಗಳೂ ಋಷಿಗಳೂ ಒಟ್ಟುಗೂಡಿ ಸಾಧು ಸಾಧುವೆಂದು ಹೊಗಳುತ್ತ ವಿಷ್ಣುವನ್ನು ಪೂಜಿಸಿದರು.

೫೧. ಯುದ್ಧದಲ್ಲಿ ಪರಾಕ್ರಮವನ್ನು ತೋರಿಸಿದ ಉಳಿದ ದೈತ್ಯರೆಲ್ಲರೂ ವಿಷ್ಣುವಿನ ತೋಳುಗಳ ಹಿಡಿತಕ್ಕೆ ಸಿಕ್ಕಿ ಚಲಿಸಲಾರದವರಾದರು.

ತೇ ಸರ್ವೇ ಬಾಹುಭಿರ್ವ್ಯಾಪ್ತಾ ನ ಶೇಕುಶ್ಚಲಿತುಂ ರಣೇ ।
ಕಾಂಶ್ಚಿತ್ಕೇಶೇಷು ಜಗ್ರಾಹ ಕಾಂಶ್ಚಿತ್ಕಂಠೇಷ್ವಪೀಡಯತ್ ॥೫೨॥

ಚಕರ್ಷ ಕಸ್ಯಚಿದ್ವಕ್ತ್ರಂ ಮಧ್ಯೇಽಗೃಹ್ಣಾದಥಾಪರಂ ।
ತೇ ಗದಾಚಕ್ರನಿರ್ದಗ್ಧಾ ಗತಸತ್ತ್ವಾ ಗತಾಸವಃ ॥೫೩॥

ಗಗನಾದ್ಭ್ರಷ್ಟಸರ್ವಾಂಗಾ ನಿಪೇತುರ್ಧರಣೀತಲೇ ।
ತೇಷು ದೈತ್ಯೇಷು ಸರ್ವೇಷು ಹತೇಷು ಪುರುಷೋತ್ತಮಃ ॥೫೪॥

ತಸ್ಥೌ ಶಕ್ರಪ್ರಿಯಂ ಕೃತ್ವಾ ಕೃತಕರ್ಮಾ ಗದಾಧರಃ ।
ತಸ್ಮಿನ್ ವಿಮರ್ದೇ ನಿರ್ವೃತ್ತೇ ಸಂಗ್ರಾಮೇ ತಾರಕಾಮಯೇ ॥೫೫॥

ತಂ ದೇಶಮಾಜಗಾಮಾಶು ಬ್ರಹ್ಮಾ ಲೋಕಪಿತಾಮಹಃ ।
ಸರ್ವೈರ್ಬ್ರಹ್ಮರ್ಷಿಭಿಃ ಸಾರ್ಧಂ ಗಂಧರ್ವಾಪ್ಸರಸಾಂ ಗಣೈಃ ॥೫೬॥

---

೫೨. ಕೆಲವರ ಜುಟ್ಟನ್ನು ಹಿಡಿದೆಳೆದನು. ಕೆಲವರ ಕುತ್ತಿಗೆಗಳನ್ನು ಹಿಸುಕಿದನು. ಮತ್ತೊಬ್ಬನ ಮುಖವನ್ನು ಎಳೆದನು. ಇನ್ನೊಬ್ಬನ ಸೊಂಟವನ್ನು ಹಿಡಿದೆತ್ತಿದನು.

೫೩. ಗದೆಯ ಮತ್ತು ಚಕ್ರದ ಜ್ವಾಲೆಯಿಂದ ದಗ್ಧರಾಗಿ, ಶಕ್ತಿಯಡಗಿ, ಪ್ರಾಣಹೋಗಿ, ಅವಯವಗಳೆಲ್ಲವೂ ಕತ್ತರಿಸಿ ಬಿದ್ದುಹೋಗಿ ಆ ದೈತ್ಯರು ನೆಲದ ಮೇಲೆ ಬಿದ್ದರು.

೫೪. ಆ ದಾನವರೆಲ್ಲರೂ ಹತರಾಗಲು ಪುರುಷೋತ್ತಮನಾದ ನಾರಾಯಣನು ದೇವೇಂದ್ರನ ಕೋರಿಕೆಯನ್ನು ಸಲ್ಲಿಸಿ ತನ್ನ ಕರ್ತವ್ಯವನ್ನು ನೆರವೇರಿಸಿದನು.

೫೫-೫೬. ತಾರಕ, ಮಯ ಮುಂತಾದ ದೈತ್ಯರೊಡನೆ ದೇವತೆಗಳಿಗೆ ನಡೆದ ಆ ಮಹಾಸಂಗ್ರಾಮವು ಮುಗಿದ ಕೂಡಲೇ ಲೋಕಪಿತಾಮಹನೆನಿಸಿದ ಬ್ರಹ್ಮನು ಬ್ರಹ್ಮರ್ಷಿಗಳು, ಗಂಧರ್ವರು ಅಪ್ಸರಸ್ತ್ರೀಯರು ಇವರೆಲ್ಲರೊಡಗೂಡಿ ಆ ಸ್ಥಳಕ್ಕೆ ಬಂದನು.

ದೇವದೇವೋ ಹರಿಂ ದೇವಂ ಪೂಜಯನ್ವಾಕ್ಯಮಬ್ರವೀತ್ ।
ಕೃತಂ ದೇವ ಮಹತ್ಕರ್ಮ ಸುರಾಣಾಂ ಶಲ್ಯಮುದ್ಧೃತಂ ।
ವಧೇನಾನೇನ ದೈತ್ಯಾನಾಂ ವಯಂ ಚ ಪರಿತೋಷಿತಾಃ ॥೫೭॥

ಯೋಽಯಂ ತ್ವಯಾ ಹತೋ ವಿಷ್ಣೋ ಕಾಲನೇಮೀ ಮಹಾಸುರಃ ।
ತ್ವಮೇಕೋಽಸ್ಯ ಮೃಧೇ ಹಂತಾ ನಾನ್ಯಃ ಕಶ್ಚನ ವಿದ್ಯತೇ ॥೫೮॥

ಏಷ ದೇವಾನ್ ಪರಿಭವಂಲ್ಲೋಕಾಂಶ್ಚ ಸಸುರಾಸುರಾನ್ ।
ಋಷೀಣಾಂ ಕದನಂ ಕೃತ್ವಾ ಮಾಮಪಿ ಪ್ರತಿಗರ್ಜತಿ ॥೫೯॥

ತದನೇನ ತವಾಗ್ರ್ಯೇಣ ಪರಿತುಷ್ಟೋಽಸ್ಮಿ ಕರ್ಮಣಾ ।
ಯದಯಂ ಕಾಲಕಲ್ಪಸ್ತು ಕಾಲನೇಮೀ ನಿಪಾತಿತಃ ॥೬೦॥

---

೫೭. ದೇವದೇವನಾದ ಬ್ರಹ್ಮನು ಮಹಾವಿಷ್ಣುವನ್ನು ಪೂಜಿಸುತ್ತ ಹೀಗೆ ಹೇಳಿದನು. “ದೇವಾ, ನೀನು ಬಲು ದೊಡ್ಡ ಕಾರ್ಯವನ್ನು ಮಾಡಿದೆ. ದೇವತೆಗಳ ಸಂಕಟವನ್ನು ಪರಿಹರಿಸಿದೆ. ಈ ದೈತ್ಯರನ್ನು ವಧಿಸಿ ನಮ್ಮೆಲ್ಲರಿಗೂ ಸಂತೋಷ ವನ್ನುಂಟುಮಾಡಿದೆ.

೫೮. ಓ ವಿಷ್ಣೋ, ನೀನು ಸಂಹರಿಸಿದ ಮಹಾಸುರನಾದ ಈ ಕಾಲನೇಮಿ ಯನ್ನು ಯುದ್ಧದಲ್ಲಿ ವಧಿಸಬಲ್ಲವನು ನೀನೊಬ್ಬನೇ. ಮತ್ತಾರೂ ಈ ಕೆಲಸವನ್ನು ಮಾಡಲಾರರು.

೫೯. ಇವನು ದೇವತೆಗಳನ್ನೂ ಸುರಾಸುರರೊಡಗೂಡಿದ ಲೋಕಗಳನ್ನೂ ಪೀಡಿಸುತ್ತಿದ್ದನು. ಋಷಿಗಳನ್ನು ಹಿಂಸಿಸುತ್ತ ನನ್ನ ಮೇಲೂ ಸಹ ಆರ್ಭಟವನ್ನು ಮಾಡುತ್ತಿದ್ದನು.

೬೦. ಅತಿ ಮಹತ್ತಾದ ನಿನ್ನ ಈ ಕಾರ್ಯದಿಂದ ನಾನು ಬಹು ಸಂತುಷ್ಟನಾಗಿ ದ್ದೇನೆ. ಏಕೆಂದರೆ ಯಮನಿಗೆ ಸರಿಸಮನೆನಿಸಿದ ಈ ಕಾಲನೇಮಿಯನ್ನ ನೀನು ಸಂಹರಿಸಿದೆ.

ತದಾಗಚ್ಛಸ್ವ ಭದ್ರಂ ತೇ ಗಚ್ಛಾಮ ದಿವಮುತ್ತಮಂ ।
ಬ್ರಹ್ಮರ್ಷಯಸ್ತ್ವಾಂ ತತ್ರಸ್ಥಾಃ ಪ್ರತೀಕ್ಷಂತೇ ಸದೋಗತಾಃ ॥೬೧॥

ಕಂ ಚಾಹಂ ತವ ದಾಸ್ಯಾಮಿ ವರಂ ವರವತಾಂ ವರ ।
ಸುರೇಷ್ವಥ ಚ ದೈತ್ಯೇಷು ವರಾಣಾಂ ವರದೋ ಭವಾನ್ ॥೬೨॥

ನಿರ್ಯಾತಯೈತತ್ರೈಲೋಕ್ಯಂ ಸ್ಫೀತಂ ನಿಹತಕಂಟಕಂ ।
ಅಸ್ಮಿನ್ನೇವ ಮೃಧೇ ವಿಷ್ಣೋ ಶಕ್ರಾಯ ಸುಮಹಾತ್ಮನೇ ॥೬೩॥

ಏವಮುಕ್ತೋ ಭಗವತಾ ಬ್ರಹ್ಮಣಾ ಹರಿರವ್ಯಯಃ ।
ದೇವಾಞ್ಛಕ್ರಮುಖಾನ್ಸರ್ವಾನುವಾಚ ಶುಭಯಾ ಗಿರಾ ॥೬೪॥

॥ ವಿಷ್ಣುರುವಾಚ ॥

ಶೃಣ್ವಂತು ತ್ರಿದಶಾಃ ಸರ್ವೇ ಯಾವಂತೋಽತ್ರ ಸಮಾಗತಾಃ ।
ಶ್ರವಣಾವಹಿತೈಃ ಶ್ರೋತ್ರೈಃ ಪುರಸ್ಕೃತ್ಯ ಪುರಂದರಂ ॥೬೫॥

---

೬೧. ಆದುದರಿಂದ ಶುಭಮಯವಾದ ಸ್ವರ್ಗಕ್ಕೆ ಹೋಗೋಣ ಬಾ. ನಿನಗೆ ಮಂಗಳವಾಗಲಿ. ಅಲ್ಲಿ ಬ್ರಹ್ಮರ್ಷಿಗಳು ಸಭೆಸೇರಿ ನಿನ್ನನ್ನು ಎದುರು ನೋಡುತ್ತಿದ್ದಾರೆ.

೬೨. ವರವನ್ನು ಕರುಣಿಸುವವರಲ್ಲೆಲ್ಲ ಶ್ರೇಷ್ಠನಾದ ಓ ದೇವಾ, ನಾನು ನಿನ್ನ ಯಾವ ಅಭಿಮತವನ್ನು ನಡೆಸಲಿ ! ಸುರೇಶ್ವರರಿಗೂ ದಾನವೇಂದ್ರರಿಗೂ ವರಗಳನ್ನು ಕೊಡತಕ್ಕವನು ನೀನು.

೬೩. ಎಲೈ ವಿಷ್ಣೋ, ಶತ್ರುರಹಿತವೆನಿಸಿ ವಿಸ್ತಾರವಾದ ಈ ಮೂರು ಲೋಕವನ್ನೂ ಮಹಾತ್ಮನಾದ ದೇವೇಂದ್ರನಿಗೆ ಈ ಯುದ್ಧ ಮುಗಿದ ಸಂದರ್ಭದಲ್ಲಿಯೇ ಹಿಂದಕ್ಕೆ ಕೊಡಿಸು.''

೬೪. ಪೂಜ್ಯನಾದ ಬ್ರಹ್ಮನು ಹೀಗೆ ಹೇಳಲು ಶಾಶ್ವತನೂ, ನಿರ್ವಿಕಾರನೂ ಆದ ವಿಷ್ಣುವು ಇಂದ್ರಾದಿ ದೇವತೆಗಳೆಲ್ಲರನ್ನೂ ಕುರಿತು ಮಧುರ ವಚನದಿಂದಿಂತು ನುಡಿದನು.

೬೫. ವಿಷ್ಣು ಹೇಳಿದನು.—ಇಲ್ಲಿ ನೆರೆದಿರುವ ಇಂದ್ರಾದಿ ದೇವತೆಗಳೆಲ್ಲರೂ ಸಾವಧಾನದಿಂದ ಕಿವಿಗೊಟ್ಟು ಕೇಳಿರಿ.

ಅಸ್ಮಾಭಿಃ ಸಮರೇ ಸರ್ವೇ ಕಾಲನೇಮಿಮುಖಾ ಹತಾಃ ।
ದಾನವಾ ವಿಕ್ರಮೋಪೇತಾಃ ಶಕ್ರಾದಪಿ ಮಹತ್ತರಾಃ ॥೬೬॥

ಅಸ್ಮಿನ್ಮಹತಿ ಸಂಗ್ರಾಮೇ ದೈತೇಯೌ ದ್ವೌ ವಿನಿಃಸೃತೌ ।
ವಿರೋಚನಶ್ಚ ದೈತ್ಯೇಂದ್ರಃ ಸ್ವರ್ಭಾನುಶ್ಚ ಮಹಾಗ್ರಹಃ ॥೬೭॥

ಸ್ವಾಂ ದಿಶಂ ಭಜತಾಂ ಶಕ್ರೋ ದಿಶಂ ವರುಣ ಏವ ಚ ।
ಯಾಮ್ಯಾಂ ಯಮಃ ಪಾಲಯತಾಮುತ್ತರಾಂ ಚ ಧನಾಧಿಪಃ ॥೬೮॥

ಋಕ್ಷೈಃ ಸಹ ಯಥಾಯೋಗಂ ಗಚ್ಛತಾಂ ಚೈವ ಚಂದ್ರಮಾಃ ।
ಅಬ್ದಂ ಋತುಮುಖೇ ಸೂರ್ಯೋ ಭಜತಾಮಯನೈಃ ಸಹ ॥೬೯॥

ಆಜ್ಯಭಾಗಾಃ ಪ್ರವರ್ತಂತಾಂ ಸದಸ್ಯೈರಭಿಪೂಜಿತಾಃ ।
ಹೂಯಂತಾಮಗ್ನಯೋ ವಿಪ್ರೈರ್ವೇದದೃಷ್ಟೇನ ಕರ್ಮಣಾ ॥೭೦॥

---

೬೬. ಪರಾಕ್ರಮಶಾಲಿಗಳೂ ಇಂದ್ರನಿಗಿಂತ ಪ್ರಬಲರೂ ಆದ ಕಾಲನೇಮಿ ಮೊದಲಾದ ದಾನವರೆಲ್ಲರೂ ಯುದ್ಧದಲ್ಲಿ ನಮ್ಮಿಂದ ಹತರಾದರು.

೬೭. ಈ ದೊಡ್ಡ ಯುದ್ಧದಲ್ಲಿ ದೈತ್ಯೇಂದ್ರನಾದ ವಿರೋಚನ, ಗ್ರಹಗಳಲ್ಲಿ ಮುಖ್ಯನೆನಿಸಿದ ರಾಹು ಈ ಇಬ್ಬರು ದೈತ್ಯರೂ ತಪ್ಪಿಸಿಕೊಂಡು ಹೋದರು.

೬೮. ಇಂದ್ರನೂ ವರುಣನೂ ತಮ್ಮತಮ್ಮ ದಿಕ್ಕುಗಳಿಗೆ ಹೋಗಲಿ. ಯಮನು ದಕ್ಷಿಣ ದಿಕ್ಕನ್ನು ರಕ್ಷಿಸಲಿ. ಕುಬೇರನು ಉತ್ತರ ದಿಕ್ಕನ್ನು ಪಾಲಿಸಲಿ.

೬೯. ಚಂದ್ರನು ಎಂದಿನಂತೆ ನಕ್ಷತ್ರಗಳೊಡನೆ ಸಮಾಗಮವನ್ನು ಹೊಂದಲಿ. ಸೂರ್ಯನು ಆಯನಗಳೊಡನೆ ಆಯಾ ಋತುಗಳಲ್ಲಿ ಸಂವತ್ಸರವನ್ನು ಸೇರಲಿ.

೭೦. ಅಗ್ನಿಹೋತ್ರಿಗಳು ಸಭಾಸದರಿಂದ ಮನ್ನಣೆಯನ್ನು ಪಡೆದು ಹೋಮ ಕಾರ್ಯಗಳನ್ನು ಆರಂಭಿಸಲಿ. ಬ್ರಾಹ್ಮಣರು ವೇದೋಕ್ತವಾದ ಕರ್ಮದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಲಿ.

ದೇವಾಶ್ಚಾಪ್ಯಗ್ನಿಹೋಮೇನ ಸ್ವಾಧ್ಯಾಯೇನ ಮಹರ್ಷಯಃ ।
ಶ್ರಾದ್ಧೇನ ಪಿತರಶ್ಚೈವ ತೃಪ್ತಿಂ ಯಾಂತು ಯಥಾಸುಖಂ ॥೭೧॥

ವಾಯುಶ್ಚರತು ಮಾರ್ಗಸ್ಥಸ್ತ್ರಿಧಾ ದೀಪ್ಯತು ಪಾವಕಃ ।
ತ್ರೀಂಸ್ತು ವರ್ಣಾಂಶ್ಚ ಲೋಕಾಂಸ್ತ್ರೀಂಸ್ತರ್ಪಯಂಶ್ಚಾತ್ಮಜೈರ್ಗುಣೈಃ ॥೭೨॥

ಕ್ರತವಃ ಸಂಪ್ರವರ್ತಂತಾಂ ದೀಕ್ಷಣೀಯೈರ್ದ್ವಿಜಾತಿಭಿಃ ।
ದಕ್ಷಿಣಾಶ್ಚೋಪಪಾದ್ಯಂತಾಂ ಯಾಜ್ಞಿಕೇಭ್ಯಃ ಪೃಥಕ್‌ಪೃಥಕ್ ॥೭೩॥

ಗಾಶ್ಚ ಸೂರ್ಯೋ ರಸಾನ್ ಸೋಮೋ ವಾಯುಃ ಪ್ರಾಣಾಂಶ್ಚ ಪ್ರಾಣಿಷು ।
ತರ್ಪಯಂತಃ ಪ್ರವರ್ತಂತಾಂ ಸರ್ವ ಏವ ಸ್ವಕರ್ಮಭಿಃ ॥೭೪॥

ಯಥಾವದಾನುಪೂರ್ವ್ಯೇಣ ಮಹೇಂದ್ರಮಲಯೋದ್ಭವಾಃ ।
ತ್ರೈಲೋಕ್ಯಮಾತರಃ ಸರ್ವಾಃ ಸಮುದ್ರಂ ಯಾಂತು ಸಿಂಧವಃ ॥೭೫॥

---

೭೧. ಅಗ್ನಿಹೋಮದಿಂದ ದೇವತೆಗಳೂ, ವೇದಾಧ್ಯಯನದಿಂದ ಮಹರ್ಷಿಗಳೂ, ಶ್ರಾದ್ಧದಿಂದ ಪಿತೃಗಳೂ ಸುಖವಾಗಿ ತೃಪ್ತಿಯನ್ನು ಪಡೆಯಲಿ.

೭೨. ವಾಯುವು ತನ್ನ ಸಹಜವಾದ ಮಾರ್ಗದಲ್ಲಿ ಸಂಚರಿಸಲಿ. ಅಗ್ನಿಯು ದಕ್ಷಿಣ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ರೂಪಗಳಿಂದ ಜ್ವಲಿಸುತ್ತ ತನ್ನ ಗುಣಗಳಿಂದ ಬ್ರಾಹ್ಮಣಾದಿ ಮೂರು ವರ್ಣದವರಿಗೂ ಮೂರು ಲೋಕಗಳಿಗೂ ತೃಪ್ತಿಯನ್ನುಂಟುಮಾಡಲಿ.

೭೩. ದೀಕ್ಷಾರ್ಹರಾದ ಬ್ರಾಹ್ಮಣರು ಯಾಗಗಳನ್ನು ನಡೆಸಲಿ. ಯಾಜ್ಞಿಕರಿಗೆ ಬೇರೆ ಬೇರೆಯಾಗಿ ದಕ್ಷಿಣೆಗಳನ್ನು ಕೊಡಲಿ.

೭೪. ಸೂರ್ಯನು ಹಸುಗಳನ್ನೂ, ಚಂದ್ರನು ರಸಗಳನ್ನೂ, ವಾಯುವು ಪ್ರಾಣಿಗಳಲ್ಲಿ ಪ್ರಾಣಗಳನ್ನೂ ಆಪ್ಯಾಯನಗೊಳಿಸಲಿ. ಇವರೆಲ್ಲರೂ ತಮ್ಮ ತಮ್ಮ ಕರ್ಮದಲ್ಲಿ ನಿರತರಾಗಿರಲಿ.

೭೫. ಮಹೇಂದ್ರ, ಮಲಯ ಮುಂತಾದ ಪರ್ವತಗಳಲ್ಲಿ ಹುಟ್ಟಿ ಹರಿದು ಮೂರು ಲೋಕಗಳ ಮಾತೆಯರೆನಿಸಿದ ನದಿಗಳೆಲ್ಲವೂ ಎಂದಿನಂತೆ ಕ್ರಮವಾಗಿ ಸಮುದ್ರವನ್ನು ಸೇರಲಿ.

ದೈತ್ಯೇಭ್ಯಸ್ತ್ಯಜ್ಯತಾಂ ಭೀಶ್ಚ ಶಾಂತಿಂ ವ್ರಜತ ದೇವತಾಃ ।
ಸ್ವಸ್ತಿ ವೋಽಸ್ತು ಗಮಿಷ್ಯಾಮಿ ಬ್ರಹ್ಮಲೋಕಂ ಸನಾತನಂ ॥೭೬॥

ಸ್ವಗೃಹೇ ಸ್ವರ್ಗಲೋಕೇ ವಾ ಸಂಗ್ರಾಮೇ ವಾ ವಿಶೇಷತಃ ।
ವಿಶ್ರಂಭೋ ವೋ ನ ಮಂತವ್ಯೋ ನಿತ್ಯಂ ಕ್ಷುದ್ರಾ ಹಿ ದಾನವಾಃ ॥೭೭॥

ಛಿದ್ರೇಷು ಪ್ರಹರಂತ್ಯೇತೇ ನ ತೇಷಾಂ ಸಂಸ್ಥಿತಿರ್ಧ್ರುವಾ ।
ಸೌಮ್ಯಾನಾಮೃಜುಭಾವಾನಾಂ ಭವತಾಮಾರ್ಜವಂ ಧನಂ ॥೭೮॥

ಏವಮುಕ್ತ್ವಾ ಸುರಗಣಾನ್ವಿಷ್ಣುಃ ಸತ್ಯಪರಾಕ್ರಮಃ ।
ಜಗಾಮ ಬ್ರಹ್ಮಣಾ ಸಾರ್ಧಂ ಸ್ವಲೋಕಂ ತು ಮಹಾಯಶಾಃ ॥೭೯॥

ಏತದಾಶ್ಚರ್ಯಮಭವತ್ಸಂಗ್ರಾಮೇ ತಾರಕಾಮಯೇ ।
ದಾನವಾನಾಂ ಚ ವಿಷ್ಣೋಶ್ಚ ಯನ್ಮಾಂ ತ್ವಂ ಪರಿಪೃಷ್ಟವಾನ್ ॥೮೦॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವಪ್ರಾದುರ್ಭಾವ ಸಂಗ್ರಹೋ ನಾಮಾಷ್ಟಸಪ್ತತ್ಯಧಿಕಶತತಮೋಽಧ್ಯಾಯಃ**

---

೭೬. ಓ ದೇವತೆಗಳಿರಾ, ದೈತ್ಯರ ಹೆದರಿಕೆಯನ್ನು ಬಿಡಿ. ನೆಮ್ಮದಿಯಿಂದಿರಿ. ನಿಮಗೆ ಮಂಗಳವಾಗಲಿ. ಶಾಶ್ವತವಾದ ಬ್ರಹ್ಮಲೋಕಕ್ಕೆ ಇನ್ನು ನಾನು ತೆರಳುವೆನು.

೭೭. ನಿಮ್ಮ ಮನೆಯಲ್ಲಾಗಲಿ, ಸ್ವರ್ಗಲೋಕದಲ್ಲಾಗಲಿ, ಮುಖ್ಯವಾಗಿ ಯುದ್ಧದಲ್ಲಾಗಲಿ ನೀವು ದಾನವರಲ್ಲಿ ನಂಬಿಕೆಯಿಡಬೇಡಿ. ಏಕೆಂದರೆ ಅವರು ಯಾವಾಗಲೂ ಕ್ಷುದ್ರರೇ ಸರಿ.

೭೮. ಸಂದು ಸಿಕ್ಕಿದರೆ ಸಾಕು ಇವರು ಹೊಡೆಯುವರು. ಇವರ ನೆಲೆ ಶಾಶ್ವತವಲ್ಲ. ನೀವು ಸೌಮ್ಯರು. ಸರಳಸ್ವಭಾವದವರು. ನಿಷ್ಕಾಪಟ್ಯವೇ ನಿಮ್ಮ ಧನ.

೭೯. ಮಹಾ ಕೀರ್ತಿವಂತನೂ ಸತ್ಯ ಪರಾಕ್ರಮನೂ ಆದ ವಿಷ್ಣುವು ದೇವ ಗಣಗಳಿಗೆ ಹೀಗೆ ಹೇಳಿ ಬ್ರಹ್ಮನೊಡನೆ ತನ್ನ ಲೋಕಕ್ಕೆ ಹೋದನು.

೮೦. ದಾನವರಿಗೂ ವಿಷ್ಣುವಿಗೂ ನಡೆದ ತಾರಕಾಮಯವೆಂಬ ಮಹಾ ಯುದ್ಧದಲ್ಲಿ ಈ ಆಶ್ಚರ್ಯವು ನಡೆಯಿತು. ಓ ರಾಜೇಂದ್ರಾ, ಇದನ್ನಲ್ಲವೇ ನೀನು ಪ್ರಶ್ನೆಮಾಡಿದೆ ?

ಅಧ್ಯಾಯ ೧೭೮

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಾಲನೇಮಿಯ ವಧವನ್ನು ವರ್ಣಿಸಿದೆ.

ಕಾಲನೇಮಿಗೆ ಇಂದ್ರಾದಿ ಸಕಲ ದೇವತೆಗಳೂ ವಶರಾದರು. ಆದರೆ ವೇದ, ಧರ್ಮ, ಕ್ಷಮೆ, ಸತ್ಯ ಮತ್ತು ಲಕ್ಷ್ಮಿ ಈ ಐವರು ಮಾತ್ರ ಅವನನ್ನು ಆಶ್ರಯಿಸಲಿಲ್ಲ. ಅವನಿಗೆ ಬಹು ಕೋಪ ಬಂದಿತು. ನೆಟ್ಟಗೆ ವಿಷ್ಣುವಿನ ಬಳಿಗೆ ಹೋಗಿ ಮನಸ್ಸು ಬಂದಂತೆ ಅವನನ್ನು ಜರೆದು ಮಾತನಾಡಿದನು. ಇಬ್ಬರಿಗೂ ಅತಿ ಘೋರವಾದ ಯುದ್ಧವು ನಡೆಯಿತು. ಕೊನೆಗೆ ವಿಷ್ಣು ತನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸಿ ಕಾಲನೇಮಿಯನ್ನೂ ಉಳಿದ ದೈತ್ಯವೀರರನ್ನೂ ಸಂಹರಿಸಿದನು. ಲೋಕದಲ್ಲಿ ಮತ್ತೆ ಶಾಂತಿ ನೆಲಸಿತು. ನಾರಾಯಣನು ದೇವತೆಗಳೆಲ್ಲರಿಗೂ ಅವರವರ ಅಧಿಕಾರವನ್ನು ಮತ್ತೆ ಕೊಟ್ಟು ಅವರನ್ನು ಸಂತೈಸಿ ತನ್ನ ಲೋಕಕ್ಕೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವಸಂಗ್ರಹವೆಂಬ
ನೂರೆಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ನವಸಪ್ತತ್ಯಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಶ್ರುತಃ ಪದ್ಮೋದ್ಭವಸ್ತಾತ ವಿಸ್ತರೇಣ ತ್ವಯೇರಿತಃ ।
ಸಮಾಸಾದ್ಭವಮಾಹಾತ್ಮ್ಯಂ ಭೈರವಸ್ಯ ವಿಧೀಯತಾಂ || ೧ ||

|| ಸೂತ ಉವಾಚ ||

ತಸ್ಯಾಪಿ ದೇವದೇವಸ್ಯ ಶೃಣುಧ್ವಂ ಕರ್ಮ ಚೋತ್ತಮಂ ।
ಆಸೀದ್ದೈತ್ಯೋಽಂಧಕೋ ನಾಮ ಭಿನ್ನಾಂಜನಚಯೋಪಮಃ || ೨ ||

ತಪಸಾ ಮಹತಾ ಯುಕ್ತೋ ಹ್ಯವಧ್ಯಸ್ತ್ರಿದಿವೌಕಸಾಂ ।
ಸ ಕದಾಚಿನ್ಮಹಾದೇವಂ ಪಾರ್ವತ್ಯಾ ಸಹಿತಂ ಪ್ರಭುಂ || ೩ ||

---

೧. ಋಷಿಗಳು ಹೇಳಿದರು.—ಪೂಜ್ಯನಾದ ಎಲೈ ಸೂತಪೌರಾಣಿಕನೇ, ನೀನು ವಿಸ್ತಾರವಾಗಿ ಹೇಳಿದ ಪದ್ಮೋದ್ಭವ ಪ್ರಾದುರ್ಭಾವದ ವೃತ್ತಾಂತವನ್ನು ಕೇಳಿದೆವು. ಇನ್ನು ಜಗತ್ಸಂಹಾರಮೂರ್ತಿಯೆನಿಸಿದ ಪರಮೇಶ್ವರನ ಮಹಿಮೆಯನು ಸಂಗ್ರಹವಾಗಿ ತಿಳಿಸು.

೨. ಸೂತಪೌರಾಣಿಕನು ಹೇಳಿದನು.—ದೇವ ದೇವನಾದ ಆ ಮಹೇಶ್ವರನ ಲೋಕೋತ್ತರವಾದ ಅದ್ಭುತಕಾರ್ಯವನ್ನು ಕೇಳಿರಿ. ಅಂಧಕನೆಂಬ ದೈತ್ಯನೊಬ್ಬ ನಿದ್ದನು. ಅವನು ಆಗತಾನೆ ಬಗೆದು ಗುಡ್ಡೆಹಾಕಿದ ಕಾಡಿಗೆಯ ರಾಶಿಯಂತೆ ಕಪ್ಪಗಿದ್ದನು.

೩. ಅವನು ಬಹು ಘೋರವಾದ ತಪಸ್ಸನ್ನು ಮಾಡಿ ದೇವತೆಗಳಿಗೆ ಕೂಡ ಅವಧ್ಯನೆನಿಸಿದ್ದನು. ಮಹಾದೇವನು ಪಾರ್ವತಿಯೊಡನೆ ವಿಹರಿಸುತ್ತಿದ್ದುದನ್ನು ಒಮ್ಮೆ ಕಂಡು ಅವನು ದೇವಿಯನ್ನು ಅಪಹರಿಸಲು ಯತ್ನಿಸಿದನು.

ಕ್ರೀಡಮಾನಂ ತದಾ ದೃಷ್ಟ್ವಾ ಹರ್ತುಂ ದೇವೀಂ ಪ್ರಚಕ್ರಮೇ ।
ತಸ್ಯ ಯುದ್ಧಂ ತದಾ ಘೋರಮಭವತ್ಸಹ ಶಂಭುನಾ ॥ ೪ ॥

ಆವಂತ್ಯೇ ವಿಷಯೇ ಘೋರೇ ಮಹಾಕಾಲವನಂ ಪ್ರತಿ ।
ತಸ್ಮಿನ್ ಯುದ್ಧೇ ತದಾ ರುದ್ರಶ್ಚಾಂಧಕೇನಾತಿಪೀಡಿತಃ ॥ ೫ ॥

ಸುಷುವೇ ಬಾಣಮತ್ಯುಗ್ರಂ ನಾಮ್ನಾ ಪಾಶುಪತಂ ಹಿ ತತ್ ।
ರುದ್ರಬಾಣವಿನಿರ್ಭೇದಾದ್ರುಧಿರಾದಂಧಕಸ್ಯ ತು ॥ ೬ ॥

ಅಂಧಕಾಶ್ಚ ಸಮುತ್ಪನ್ನಾಃ ಶತಶೋಽಥ ಸಹಸ್ರಶಃ ।
ತೇಷಾಂ ವಿದಾರ್ಯಮಾಣಾನಾಂ ರುಧಿರಾದಪರೇ ಪುನಃ ॥ ೭ ॥

ಬಭೂವುರಂಧಕಾ ಘೋರಾ ಯೈರ್ವ್ಯಾಪ್ತಮಖಿಲಂ ಜಗತ್ ।
ಏವಂ ಮಾಯಾವಿನಂ ದೃಷ್ಟ್ವಾ ತಂ ಚ ದೇವಸ್ತದಾಂಧಕಂ ॥ ೮ ॥

---

೪. ವನದುರ್ಗಗಳಿಂದ ಬಹು ವಿಷಮವಾದ ಅವಂತೀ ದೇಶದಲ್ಲಿ ಮಹಾಕಾಲವನದ ಎದುರಿಗೆ ಆವನಿಗೂ ಪರಮೇಶ್ವರನಿಗೂ ಭಯಂಕರವಾದ ಯುದ್ಧವಾಯಿತು.

೫. ಆ ಕದನದಲ್ಲಿ ಈಶ್ವರನು ಅಂಧಕಾಸುರನಿಂದ ಬಹಳ ನೊಂದನು. ಆಗ ಅತ್ಯುಗ್ರವಾದ ಮಹಾಸ್ತ್ರವೊಂದನ್ನು ಸೃಷ್ಟಿಸಿದನು. ಅದೇ ಪಾಶುಪತವೆಂಬುದು.

೬. ಮಹಾದೇವನ ಬಾಣಗಳು ಬಂದು ನಾಟಿಕೊಳ್ಳಲು ಅಂಧಕನ ಶರೀರದಿಂದ ರಕ್ತವು ಹರಿಯಿತು. ಅದರಿಂದ ನೂರುಗಟ್ಟಲೆಯಾಗಿ ಹೊಸ ಹೊಸ ಅಂಧಕರು ಉತ್ಪನ್ನರಾದರು.

೭. ಅವರನ್ನು ಸೀಳಿಹಾಕಿದರೆ ಅವರ ರಕ್ತದಿಂದ ಮತ್ತೆ ಬೇರೆ ಅಂಧಕರು ಹುಟ್ಟುತ್ತಿದ್ದರು. ಹೀಗೆ ಅವರಿಂದ ಜಗತ್ತೆಲ್ಲ ತುಂಬಿಹೋಯಿತು.

೮. ಆಗ ಪರಮೇಶ್ವರನು ಅಂಧಕನ ಆ ಮಾಯೆಯನ್ನು ಕಂಡು ಅವನ ರಕ್ತವನ್ನು ಪಾನಮಾಡುವುದಕ್ಕೋಸ್ಕರ ಮಾತೆಯರನ್ನು ಸೃಷ್ಟಿಸಿದನು.

ಪಾನಾರ್ಥಮಂಧಕಾಸ್ರಸ್ಯ ಸೋಽಸೃಜನ್ಮಾತರಸ್ತದಾ ।
ಮಾಹೇಶ್ವರೀ ತಥಾ ಬ್ರಾಹ್ಮೀ ಕೌಮಾರೀ ಮಾಲಿನೀ ತಥಾ ॥ ೯ ॥

ಸೌಪರ್ಣೀ ಹ್ಯಥ ವಾಯವ್ಯಾ ಶಾಕ್ರೀ ವೈ ನೈರ್ಋತೀ ತಥಾ ।
ಸೌರೀ ಸೌಮ್ಯಾ ಶಿವಾ ದೂತೀ ಚಾಮುಂಡಾ ಚಾಥ ವಾರುಣೀ ॥೧೦॥

ವಾರಾಹೀ ನಾರಸಿಂಹೀ ಚ ವೈಷ್ಣವೀ ಚ ಚಲಚ್ಛಿಖಾ ।
ಶತಾನಂದಾ ಭಗಾನಂದಾ ಪಿಚ್ಛಿಲಾ ಭಗಮಾಲಿನೀ ॥೧೧॥

ಬಲಾ ಚಾತಿಬಲಾ ರಕ್ತಾ ಸುರಭೀ ಮುಖಮಂಡಿಕಾ ।
ಮಾತೃನಂದಾ ಸುನಂದಾ ಚ ಬಿಡಾಲೀ ಶಕುನೀ ತಥಾ ॥೧೨॥

ರೇವತೀ ಚ ಮಹಾರಕ್ತಾ ತಥೈವ ಪಿಲಪಿಚ್ಛಿಕಾ ।
ಜಯಾ ಚ ವಿಜಯಾ ಚೈವ ಜಯಂತೀ ಚಾಪರಾಜಿತಾ ॥೧೩॥

ಕಾಲೀ ಚೈವ ಮಹಾಕಾಲೀ ದೂತೀ ಚೈವ ತಥೈವ ಚ ।
ಸುಭಗಾ ದುರ್ಭಗಾ ಚೈವ ಕರಾಲೀ ನಂದಿನೀ ತಥಾ ॥೧೪॥

---

೯-೧೦ ಮಹಾದೇವನು ನಿರ್ಮಿಸಿದ ಮಾತೆಯರು ಇವರು :—ಮಾಹೇಶ್ವರಿ, ಬ್ರಾಹ್ಮಿ, ಕೌಮಾರಿ, ಮಾಲಿನಿ, ಸೌಪರ್ಣಿ, ವಾಯವ್ಯೆ, ಶಾಕ್ರಿ, ನೈರ್ಋತಿ, ಸೌರಿ, ಸೌಮ್ಯೆ, ಶಿವೆ, ದೂತಿ, ಚಾಮುಂಡಿ, ವಾರುಣಿ.

೧೧. ವಾರಾಹಿ, ನಾರಸಿಂಹಿ, ವೈಷ್ಣವಿ, ಚಲಚ್ಛಿಖೆ, ಶತಾನಂದೆ, ಭಗಾನಂದೆ, ಪಿಚ್ಛಿಲೆ, ಭಗಮಾಲಿನಿ.

೧೨. ಬಲೆ, ಅತಿಬಲೆ, ರಕ್ತೆ, ಸುರಭಿ, ಮುಖಮಂಡಿಕೆ, ಮಾತೃನಂದೆ, ಸುನಂದೆ, ಬಿಡಾಲಿ, ಶಕುನಿ.

೧೩. ರೇವತಿ, ಮಹಾರಕ್ತೆ, ಪಿಲಪಿಚ್ಛಿಕೆ, ಜಯೆ, ವಿಜಯೆ, ಜಯಂತಿ, ಅಪರಾಜಿತೆ.

೧೪. ಕಾಲಿ, ಮಹಾಕಾಲಿ, ದೂತಿ, ಸುಭಗೆ, ದುರ್ಭಗೆ, ಕರಾಲಿ, ನಂದಿನಿ.

ಅದಿತಿಶ್ಚ ದಿತಿಶ್ಚೈವ ಮಾರೀ ವೈ ಮೃತ್ಯುರೇವ ಚ ।
ಕರ್ಣಮೋಟೀ ತಥಾ ಗ್ರಾಮ್ಯಾ ಉಲೂಕೀ ಚ ಘಟೋದರೀ ॥೧೫॥

ಕಪಾಲೀ ವಜ್ರಹಸ್ತಾ ಚ ಪಿಶಾಚೀ ರಾಕ್ಷಸೀ ತಥಾ ।
ಭುಶುಂಡೀ ಶಾಂಕರೀ ಚಂಡಾ ಲಾಂಗಲೀ ಕುಟಭೀ ತಥಾ ॥೧೬॥

ಖೇಟಾ ಸುಲೋಚನಾ ಧೂಮ್ರಾ ಏಕವೀರಾ ಕರಾಲಿನೀ ।
ವಿಶಾಲದಂಷ್ಟ್ರಿಣೀ ಶ್ಯಾಮಾ ತ್ರಿಜಟೀ ಕುಕ್ಕುಟೀ ತಥಾ ॥೧೭॥

ವೈನಾಯಕೀ ಚ ವೈತಾಲೀ ಉನ್ಮತ್ತೋದುಂಬರೀ ತಥಾ ।
ಸಿದ್ಧಿಶ್ಚ ಲೇಲಿಹಾನಾ ಚ ಕೇಕರೀ ಗರ್ದಭೀ ತಥಾ ॥೧೮॥

ಭ್ರುಕುಟೀ ಬಹುಪುತ್ರೀ ಚ ಪ್ರೇತಯಾನಾ ವಿಡಂಬಿನೀ ।
ಕ್ರೌಂಚಾ ಶೈಲಮುಖೀ ಚೈವ ವಿನತಾ ಸುರಸಾ ದನುಃ ॥೧೯॥

ಉಷಾ ರಂಭಾ ಮೇನಕಾ ಚ ಸಲಿಲಾ ಚಿತ್ರರೂಪಿಣೀ ।
ಸ್ವಾಹಾ ಸ್ವಧಾ ವಷಟ್ಕಾರಾ ಧೃತಿರ್ಜ್ಯೇಷ್ಠಾ ಕಪರ್ದಿನೀ ॥೨೦॥

---

೧೫. ಅದಿತಿ, ದಿತಿ, ಮಾರಿ, ಮೃತ್ಯು, ಕರ್ಣಮೋಟಿ, ಗ್ರಾಮ್ಯೆ, ಉಲೂಕಿ, ಘಟೋದರಿ.

೧೬. ಕಪಾಲಿ, ವಜ್ರಹಸ್ತೆ, ಪಿಶಾಚಿ, ರಾಕ್ಷಸಿ, ಭುಶುಂಡಿ, ಶಾಕರಿ, ಚಂಡೆ, ಲಾಂಗಲಿ, ಕುಟಭಿ.

೧೭. ಖೇಟೆ, ಸುಲೋಚನೆ, ಧೂಮ್ರೆ, ಏಕವೀರೆ, ಕರಾಲಿನಿ, ವಿಶಾಲ ದಂಷ್ಟ್ರಿಣಿ, ಶ್ಯಾಮೆ, ತ್ರಿಜಟೆ, ಕುಕ್ಕುಟೆ.

೧೮. ವೈನಾಯಕಿ, ವೈತಾಲಿ, ಉನ್ಮತ್ತೆ, ಉದುಂಬರಿ, ಸಿದ್ಧಿ, ಲೇಲಿಹಾನೆ, ಕೇಕರಿ, ಗರ್ದಭಿ.

೧೯. ಭ್ರುಕುಟೆ, ಬಹುಪುತ್ರಿ, ಪ್ರೇತಯಾನೆ, ವಿಡಂಬಿನಿ, ಕ್ರೌಂಚೆ, ಶೈಲಮುಖಿ, ವಿನತೆ, ಸುರಸೆ, ದನು.

೨೦. ಉಷೆ, ರಂಭೆ, ಮೇನಕೆ, ಸಲಿಲೆ, ಚಿತ್ರರೂಪಿಣಿ, ಸ್ವಾಹೆ, ಸ್ವಧೆ, ವಷಟ್ಕಾರೆ, ಧೃತಿ, ಜ್ಯೇಷ್ಠೆ, ಕಪರ್ದಿನಿ.

ಮಾಯಾ ವಿಚಿತ್ರರೂಪಾ ಚ ಕಾಮರೂಪಾ ಚ ಸಂಗಮಾ ।
ಮುಖೇವಿಲಾ ಮಂಗಲಾ ಚ ಮಹಾನಾಸಾ ಮಹಾಮುಖೀ ॥೨೧॥

ಕುಮಾರೀ ರೋಚನಾ ಭೀಮಾ ಸದಾಹಾಸಾ ಮದೋದ್ಧತಾ ।
ಅಲಂಬಾಕ್ಷೀ ಕಾಲಪರ್ಣೀ ಕುಂಭಕರ್ಣೀ ಮಹಾಸುರೀ ॥೨೨॥

ಕೇಶಿನೀ ಶಂಖಿನೀ ಲಂಭಾ ಪಿಂಗಲಾ ಲೋಹಿತಾಮುಖೀಃ
ಘಂಟಾರವಾಥ ದಂಷ್ಟ್ರಾಲಾ ರೋಚನಾ ಕಾಕಜಂಘಿಕಾ ॥೨೩॥

ಗೋಕರ್ಣಿಕಾಜಮುಖಿಕಾ ಮಹಾಗ್ರೀವಾ ಮಹಾಮುಖೀ
ಉಲ್ಕಾಮುಖೀ ಧೂಮಶಿಖಾ ಕಂಪಿನೀ ಪರಿಕಂಪಿನೀ ॥೨೪॥

ಮೋಹನಾ ಕಂಪನಾ ಕ್ಷ್ವೇಲಾ ನಿರ್ಭಯಾ ಬಾಹುಶಾಲಿನೀ ।
ಸರ್ಪಕರ್ಣೀ ತಥೈಕಾಕ್ಷೀ ವಿಶೋಕಾ ನಂದಿನೀ ತಥಾ ॥೨೫॥

ಜ್ಯೋತ್ಸ್ನಾಮುಖೀ ಚ ರಭಸಾ ನಿಕುಂಭಾ ರಕ್ತಕಂಪನಾ ।
ಅವಿತಾರಾ ಮಹಾಚಿತ್ರಾ ಚಂದ್ರಸೇನಾ ಮನೋರಮಾ ॥೨೬॥

---

೨೧. ಮಾಯೆ, ವಿಚಿತ್ರರೂಪೆ, ಕಾಮರೂಪೆ, ಸಂಗಮೆ, ಮುಖೇವಿಲೆ, ಮಂಗಲೆ, ಮಹಾನಾಶೆ, ಮಹಾಮುಖಿ.

೨೨. ಕುಮಾರಿ, ರೋಚನೆ, ಭೀಮೆ, ಸದಾಹಾಸೆ, ಮದೋದ್ಧತೆ, ಅಲಂಬಾಕ್ಷಿ, ಕಾಲಪರ್ಣಿ, ಕುಂಭಕರ್ಣಿ, ಮಹಾಸುರಿ.

೨೩. ಕೇಶಿನಿ, ಶಂಖಿನಿ, ಲಂಬೆ, ಪಿಂಗಲೆ, ಲೋಹಿತಾಮುಖಿ, ಘಂಟಾರವೆ, ದಂಷ್ಟ್ರಾಲೆ, ರೋಚನೆ, ಕಾಕಂಜಘಿಕೆ.

೨೪. ಗೋಕರ್ಣಿಕೆ, ಅಜಮುಖಿಕೆ, ಮಹಾಗ್ರೀವೆ, ಮಹಾಮುಖಿ, ಉಲ್ಕಾಮುಖಿ, ಧೂಮಶಿಖಿ, ಕಂಪಿನಿ, ಪರಿಕಂಪಿನಿ.

೨೫. ಮೋಹನೆ, ಕಂಪನೆ, ಕ್ಷ್ವೇಲೆ, ನಿರ್ಭಯೆ, ಬಾಹುಶಾಲಿನಿ, ಸರ್ಪಕರ್ಣಿ, ಏಕಾಕ್ಷಿ, ವಿಶೋಕೆ, ನಂದಿನಿ.

೨೬. ಜ್ಯೋತ್ಸ್ನಾಮುಖಿ, ರಭಸೆ, ನಿಕುಂಭೆ, ರಕ್ತಕಂಪನೆ, ಅವಿತಾರೆ, ಮಹಾಚಿತ್ರೆ, ಚಂದ್ರಸೇನೆ, ಮನೋರಮೆ.

ಅದರ್ಶನಾ ಹರತ್ಪಾಪಾ ಮಾತಂಗೀ ಲಂಬಮೇಖಲಾ ।
ಅಬಾಲಾ ವಂಚನಾ ಕಾಲೀ ಪ್ರಮೋದಾ ಲಾಂಗಲಾವತೀ ॥೨೭॥

ಚಿತ್ತಾ ಚಿತ್ತಜಲಾ ಕೋಣಾ ಶಾಂತಿಕಾ ಹ್ಯಮಿತಾಶಿನೀ ।
ಲಂಬಸ್ತನೀ ಲಂಬಸಟಾ ವಿಸಟಾ ವಾಸಚೂರ್ಣಿನೀ ॥೨೮॥

ಸ್ಖಲಂತೀ ದೀರ್ಘಕೇಶೀ ಚ ಸುಚಿರಾ ಸುಂದರೀ ಶುಭಾ ।
ಅಯೋಮುಖೀ ಕಟುಮುಖೀ ಕ್ರೋಧನೀ ಚ ತಥಾಶನೀ ॥೨೯॥

ಕುಟುಂಬಿಕಾ ಮುಕ್ತಿಕಾ ಚ ಚಂದ್ರಿಕಾ ಬಲಮೋಹಿನೀ ।
ಸಾಮಾನ್ಯಾ ಹಾಸಿನೀ ಲಂಬಾ ಕೋವಿದಾರೀ ಸಮಾಸವೀ ॥೩೦॥

ಶಂಕುಕರ್ಣೀ ಮಹಾನಾದಾ ಮಹಾದೇವೀ ಮಹೋದರೀ ।
ಹೂಂಕಾರೀ ರುದ್ರಸುಸಟಾ ರುದ್ರೇಶೀ ಭೂತಡಾಮರೀ ॥೩೧॥

ಪಿಂಡಜಿಹ್ವಾ ಚಲಜ್ಜ್ವಾಲಾ ಶಿವಾ ಜ್ವಾಲಾಮುಖೀ ತಥಾ ।
ಏತಾಶ್ಚಾನ್ಯಾಶ್ಚ ದೇವೇಶಃ ಸೋಽಸೃಜನ್ಮಾತರಸ್ತದಾ ॥೩೨॥

---

೨೭. ಅದರ್ಶನೆ, ಹರತ್ಪಾಪೆ, ಮಾತಂಗಿ, ಲಂಬಮೇಖಲೆ, ಅಬಾಲೆ, ವಂಚನೆ, ಕಾಲಿ, ಪ್ರಮೋದೆ, ಲಾಂಗಲಾವತಿ.

೨೮. ಚಿತ್ತೆ, ಚಿತ್ತಜಲೆ, ಕೋಣೆ, ಶಾಂತಿಕೆ, ಅಮಿತಾಶಿನಿ, ಲಂಬಸ್ತನಿ, ಲಂಬಸಟೆ, ವಿಸಟೆ, ವಾಸಚೂರ್ಣಿನಿ.

೨೯. ಸ್ಖಲಂತಿ, ದೀರ್ಘಕೇಶಿ, ಸುಚಿರೆ, ಸುಂದರಿ, ಶುಭೆ, ಅಯೋಮುಖಿ, ಕಟುಮುಖಿ, ಕ್ರೋಧನಿ, ಅಶನಿ.

೩೦. ಕುಟುಂಬಿಕೆ, ಮುಕ್ತಿಕೆ, ಚಂದ್ರಿಕೆ, ಬಲಮೋಹಿನಿ, ಸಾಮಾನ್ಯೆ, ಹಾಸಿನಿ, ಲಂಬೆ, ಕೋವಿದಾರಿ, ಸಮಾಸವಿ.

೩೧. ಶಂಕುಕರ್ಣೆ, ಮಹಾನಾದೆ, ಮಹಾದೇವಿ, ಮಹೋದರಿ, ಹೂಂಕಾರಿ, ರುದ್ರಸುಸಟೆ, ರುದ್ರೇಶಿ, ಭೂತಡಾಮರಿ.

೩೨. ಪಿಂಡಜಿಹ್ವೆ, ಚಲಜ್ಜ್ವಾಲೆ, ಶಿವೆ, ಜ್ವಾಲಾಮುಖಿ, ಮುಂತಾದ ಇನ್ನೂ ಎಷ್ಟೋ ಜನ ಮಾತೆಯರನ್ನು ಮಹಾದೇವನು ಆಗ ಸೃಷ್ಟಿಸಿದನು.

**ಅಂಧಕಾನಾಂ ಮಹಾಘೋರಾಃ ಪಪುಸ್ತದ್ರುಧಿರಂ ತದಾ ।**
**ತತೋಽಂಧಕಾಸೃಜಃ ಸರ್ವಾಃ ಪರಾಂ ತೃಪ್ತಿಮುಪಾಗತಾಃ ॥೩೩॥**

**ತಾಸು ತೃಪ್ತಾಸು ಸಂಭೂತಾ ಭೂಯ ಏವಾಂಧಕಪ್ರಜಾಃ ।**
**ಅರ್ದಿತಸ್ತೈರ್ಮಹಾದೇವಃ ಶೂಲಮುದ್ಗರಪಾಣಿಭಿಃ ॥೩೪॥**

**ತತಃ ಸ ಶಂಕರೋ ದೇವಸ್ತ್ವಂಧಕೈರ್ವ್ಯಾಕುಲೀಕೃತಃ ।**
**ಜಗಾಮ ಶರಣಂ ದೇವಂ ವಾಸುದೇವಮಜಂ ವಿಭುಂ ॥೩೫॥**

**ತತಸ್ತು ಭಗವಾನ್ ವಿಷ್ಣುಃ ಸೃಷ್ಟವಾನ್ ಶುಷ್ಕರೇವತೀಂ ।**
**ಯಾ ಪಪೌ ಸಕಲಂ ತೇಷಾಮಂಧಕಾನಾಮಸೃಕ್ ಕ್ಷಣಾತ್ ॥೩೬॥**

**ಯಥಾ ಯಥಾ ಚ ರುಧಿರಂ ಪಿಬಂತ್ಯಂಧಕಸಂಭವಂ ।**
**ತಥಾ ತಥಾಧಿಕಂ ದೇವೀ ಸಂಶುಷ್ಯತಿ ಜನಾಧಿಪ ॥೩೭॥**

---

೩೩. ಬಹು ಭಯಂಕರರೂಪವನ್ನು ತಾಳಿ ಅವರು ಕೋಟಿಗಟ್ಟಲೆಯ ಅಂಧಕಾಸುರರ ರಕ್ತವನ್ನು ಕುಡಿದರು. ಎಲ್ಲರಿಗೂ ಸಂಪೂರ್ಣವಾಗಿ ತೃಪ್ತಿಯಾಯಿತು.

೩೪. ಆ ಮಾತೃಕೆಯರು ತೃಪ್ತರಾದ ಬಳಿಕ ಮತ್ತೆ ಅಂಧಕನ ಮಕ್ಕಳು ಉತ್ಪನ್ನರಾದರು. ಅವರು ಕೈಗಳಲ್ಲಿ ಮುದ್ಗರಗಳನ್ನೂ ಶೂಲಗಳನ್ನೂ ಹಿಡಿದು ಮಹಾದೇವನನ್ನು ಪೀಡಿಸಿದರು.

೩೫. ಅಂಧಕರ ಕೋಟಲೆಗೆ ಗುರಿಯಾಗಿ ಪರಮೇಶ್ವರನು ಉತ್ಪತ್ತಿ ರಹಿತನೂ ಸರ್ವವ್ಯಾಪಕನೂ ಆದ ವಾಸುದೇವನನ್ನು ಮರೆಹೊಕ್ಕನು.

೩೬. ಬಳಿಕ ಪೂಜ್ಯನಾದ ವಿಷ್ಣು ಶುಷ್ಕರೇವತಿಯೆಂಬಾಕೆಯನ್ನು ಸೃಷ್ಟಿಸಿದನು. ಅವಳು ಆ ಅಂಧಕರ ರಕ್ತವನ್ನು ಒಂದುಗಳಿಗೆಯೊಳಗೆ ಕುಡಿದು ಬಿಟ್ಟಳು.

೩೭. ಓ ರಾಜಾ, ಅಂಧಕರ ರಕ್ತವನ್ನು ಕುಡಿದಹಾಗೆಲ್ಲ ಆ ದೇವಿಯು ಹೆಚ್ಚುಹೆಚ್ಚಾಗಿ ಬಡವಾಗುತ್ತ ಬಂದಳು.

**ಪೀಯಮಾನೇ ತಯಾ ತೇಷಾಮಂಧಕಾನಾಂ ತಥಾಸೃಜಿ ।**
**ಅಂಧಕಾಸ್ತು ಕ್ಷಯಂ ನೀತಾಃ ಸರ್ವೇ ತೇ ತ್ರಿಪುರಾರಿಣಾ ॥೩೮॥**

**ಮೂಲಾಂಧಕಂ ತು ವಿಕ್ರಮ್ಯ ತದಾ ಶರ್ವಸ್ತ್ರಿಲೋಕಧೃಕ್ ।**
**ಚಕಾರ ವೇಗಾಚ್ಛೂಲಾಗ್ರೇ ಸ ಚ ತುಷ್ಟಾವ ಶಂಕರಂ ॥೩೯॥**

**ಅಂಧಕಸ್ತು ಮಹಾವೀರ್ಯಸ್ತಸ್ಯ ತುಷ್ಟೋಽಭವದ್ಭವಃ ।**
**ಸಾಮೀಪ್ಯಂ ಪ್ರದದೌ ನಿತ್ಯಂ ಗಣೇಶತ್ವಂ ತಥೈವ ಚ ॥೪೦॥**

**ತತೋ ಮಾತೃಗಣಾಃ ಸರ್ವೇ ಶಂಕರಂ ವಾಕ್ಯಮಬ್ರುವನ್ ।**
**ಭಗವನ್ ಭಕ್ಷಯಿಷ್ಯಾಮಃ ಸದೇವಾಸುರಮಾನುಷಂ ।**
**ತ್ವತ್ಪ್ರಸಾದಾಜ್ಜಗತ್ಸರ್ವಂ ತದನುಜ್ಞಾತುಮರ್ಹಸಿ ॥೪೧॥**

---

೩೮. ಆಕೆಯು ಹಾಗೆ ಅಂಧಕರ ರಕ್ತವನ್ನೆಲ್ಲ ಕುಡಿಯಲು, ತ್ರಿಪುರಾಂತಕನಾದ ಈಶ್ವರನು ಅವರೆಲ್ಲರನ್ನೂ ಸಂಹರಿಸಿದನು.

೩೯. ತ್ರಿಲೋಕಧರನಾದ ಶಂಕರನು ಈ ಅಂಧಕರೆಲ್ಲರಿಗೂ ಮೂಲಪುರುಷನಾದ ಮೂಲಾಂಧಕನನ್ನು ತನ್ನ ಪೌರುಷದಿಂದ ಗೆದ್ದು ಅವನನ್ನು ತನ್ನ ಶೂಲದ ತುದಿಯಿಂದ ಮೇಲಕ್ಕೆತ್ತಿದನು. ಆಗ ಅಸುರನು ಪರಮೇಶ್ವರನನ್ನು ಸ್ತೋತ್ರ ಮಾಡಿದನು.

೪೦. ಅಂಧಕನಾದರೋ ಮಹಾವೀರ. ಮಹಾದೇವನು ಅವನ ಸ್ತುತಿಗೆ ಮೆಚ್ಚಿ, ಅವನಿಗೆ ತನ್ನ ಸಾನ್ನಿಧ್ಯವನ್ನು ಕರುಣಿಸಿ, ಅವನನ್ನು ಪ್ರಮಥಗಣಗಳ ಅಧಿಪತಿಯನ್ನಾಗಿ ಮಾಡಿದನು.

೪೧. ಬಳಿಕ ಆ ಮಾತೃಕೆಯರೆಲ್ಲರೂ ಪರಮೇಶ್ವರನಿಗೆ ಹೇಳಿದರು. "ದೇವಾ, ನೀನು ಕರುಣಿಸಿದರೆ ದೇವತೆಗಳು, ಅಸುರರು, ಮನುಷ್ಯರು ಇವರಿಂದ ತುಂಬಿದ ಜಗತ್ತೆಲ್ಲವನ್ನೂ ಭಕ್ಷಿಸಬೇಕೆಂದಿರುವೆವು. ನಮಗೆ ಅಪ್ಪಣೆಯನ್ನು ಕೊಡು."

|| ಶಂಕರ ಉವಾಚ ||

ಭವತೀಭಿಃ ಪ್ರಜಾಃ ಸರ್ವಾ ರಕ್ಷಣೀಯಾ ನ ಸಂಶಯಃ |
ತಸ್ಮಾದ್ಘೋರಾದಭಿಪ್ರಾಯಾನ್ಮನಃ ಶೀಘ್ರಂ ನಿವರ್ತ್ಯತಾಂ ||೪೨||

ಇತ್ಯೇವಂ ಶಂಕರೇಣೋಕ್ತಮನಾದೃತ್ಯ ವಚಸ್ತದಾ |
ಭಕ್ಷಯಾಮಾಸುರತ್ಯುಗ್ರಾಸ್ತ್ರೈಲೋಕ್ಯಂ ಸಚರಾಚರಂ ||೪೩||

ತ್ರೈಲೋಕ್ಯೇ ಭಕ್ಷ್ಯಮಾಣೇ ತು ತದಾ ಮಾತೃಗಣೇನ ವೈ |
ನೃಸಿಂಹಮೂರ್ತಿಂ ದೇವೇಶಂ ಪ್ರದಧ್ಯೌ ಭಗವಾಞ್ಛಿವಃ ||೪೪||

ಅನಾದಿನಿಧನಂ ದೇವಂ ಸರ್ವಲೋಕಭವೋದ್ಭವಂ |
ದೈತ್ಯೇಂದ್ರವಕ್ಷೋರುಧಿರಚರ್ಚಿತಾಗ್ರಮಹಾನಖಂ ||೪೫||

---

೪೨. ಶಂಕರನು ಹೇಳಿದನು.—ಪ್ರಜೆಗಳೆಲ್ಲರನ್ನೂ ರಕ್ಷಿಸಬೇಕಾದುದು ನಿಮ್ಮ ಕರ್ತವ್ಯ; ಅದರಲ್ಲಿ ಸಂಶಯವಿಲ್ಲ. ನೀವು ಈಗ ಆಲೋಚಿಸಿರುವುದು ಅತಿಕ್ರೂರವಾದ ವ್ಯಾಪಾರ. ಮನಸ್ಸನ್ನು ಕೂಡಲೇ ಅಲ್ಲಿಂದ ಹಿಂದಿರುಗಿಸಿ.

೪೩. ಪರಮೇಶ್ವರನು ಹೀಗೆ ಹೇಳಿದರೂ ಅವನ ಮಾತನ್ನು ಲಕ್ಷ್ಯಮಾಡದೆ ಅತ್ಯುಗ್ರಸ್ವಭಾವದ ಆ ಮಾತೆಯರು ಸ್ಥಾವರಜಂಗಮಸಹಿತವಾದ ಮೂರು ಲೋಕವನ್ನೂ ಭಕ್ಷಿಸತೊಡಗಿದರು.

೪೪. ಹೀಗೆ ಲೋಕತ್ರಯವು ಆ ಮಾತೆಯರಿಗೆ ತುತ್ತಾಗುತ್ತಿರುವುದನ್ನು ಕಂಡು ಪೂಜ್ಯನಾದ ಶಿವನು ನರಸಿಂಹರೂಪನಾದ ಮಹಾವಿಷ್ಣುವನ್ನು ಧ್ಯಾನ ಮಾಡಿದನು.

೪೫. ಆ ದೇವದೇವನು ಉತ್ಪತ್ತಿಯೂ ನಾಶವೂ ಇಲ್ಲದವನು. ಸಕಲ ಲೋಕಗಳ ಸೃಷ್ಟಿಕಾರಣನು. ಹಿರಣ್ಯಕಶಿಪುವಿನ ಎದೆಯ ರಕ್ತದಿಂದ ಆತನ ದೊಡ್ಡ ಉಗುರುಗಳ ಮೊನೆಯು ಲಿಪ್ತವಾಗಿದ್ದಿತು.

ವಿವ್ಯುಜ್ಜಿಹ್ವಂ ಮಹಾದಂಷ್ಟ್ರಂ ಸ್ಫುರತ್ಕೇಸರಕಂಟಕಂ ।
ಕಲ್ಪಾಂತಮಾರುತಕ್ಷುಬ್ಧಂ ಸಪ್ತಾರ್ಣವಸಮಸ್ವನಂ ॥೪೬॥

ವಜ್ರತೀಕ್ಷ್ಣನಖಂ ಘೋರಮಾಕರ್ಣವ್ಯಾದಿತಾನನಂ ।
ಮೇರುಶೈಲಪ್ರತೀಕಾಶಮುದಯಾರ್ಕಸಮೇಕ್ಷಣಂ ॥೪೭॥

ಹಿಮಾದ್ರಿಶಿಖರಾಕಾರಂ ಚಾರುದಂಷ್ಟ್ರೋಜ್ವಲಾನನಂ ।
ನಖನಿಃಸೃತರೋಷಾಗ್ನಿಜ್ವಾಲಾಕೇಸರಮಾಲಿನಂ ॥೪೮॥

ವಜ್ರಾಂಗದಂ ಸುಮುಕುಟಂ ಹಾರಕೇಯೂರಭೂಷಣಂ ।
ಶ್ರೋಣೀಸೂತ್ರೇಣ ಮಹತಾ ಕಾಂಚನೇನ ವಿರಾಜಿತಂ ॥೪೯॥

ನೀಲೋತ್ಪಲದಲಶ್ಯಾಮಂ ವಾಸೋಯುಗವಿಭೂಷಣಂ ।
ತೇಜಸಾಕ್ರಾಂತಸಕಲಬ್ರಹ್ಮಾಂಡಾಗಾರಸಂಕುಲಂ ॥೫೦॥

---

೪೬. ಅವನ ನಾಲಗೆ ಮಿಂಚಿನಂತಿತ್ತು. ಕೋರೆದಾಡೆಗಳು ಬಲು ದೊಡ್ಡವಾಗಿದ್ದುವು. ಕೇಸರಗಳು ಎದ್ದು ನಿಂತು ಹೊಳೆಯುತ್ತಿದ್ದುವು. ಪ್ರಳಯ ಕಾಲದ ವಾಯುವಿನಂತೆ ಅವನು ಕ್ಷುಬ್ಧನಾಗಿದ್ದನು. ಅವನ ಧ್ವನಿ ಸಪ್ತಸಾಗರಗಳ ಅಬ್ಬರವನ್ನು ಹೋಲುತ್ತಿತ್ತು.

೪೭. ಅವನ ನಖಗಳು ವಜ್ರಾಯುಧದಂತೆ ತೀಕ್ಷ್ಣವಾಗಿದ್ದುವು. ಬಾಯಿ ಕಿವಿಯವರೆಗೆ ತೆರೆದಿತ್ತು. ಆತನು ಮೇರುಪರ್ವತಕ್ಕೆ ಸಮಾನವಾಗಿದ್ದನು. ಅವನ ಕಣ್ಣುಗಳು ಉದಿಸುತ್ತಿರುವ ಸೂರ್ಯನಂತೆ ಹೊಳೆಯುತ್ತಿದ್ದುವು.

೪೮. ಅವನ ಆಕಾರವು ಹಿಮಾಚಲದ ಶಿಖರವನ್ನು ಹೋಲುತ್ತಿತ್ತು. ಮುಖವು ಅಂದವಾದ ಕೋರೆಹಲ್ಲುಗಳಿಂದ ಬೆಳಗುತ್ತಿತ್ತು. ಕೇಸರದ ಪಙ್ಕ್ತಿಗಳು ನಖಗಳಿಂದ ಹೊರಹೊರಟ ಕೋಪವೆಂಬ ಬೆಂಕಿಯ ಜ್ವಾಲೆಗಳಂತಿದ್ದುವು.

೪೯. ಅವನು ವಜ್ರದ ತೋಳುಬಳೆ, ಸುಂದರವಾದ ಕಿರೀಟ, ಹಾರ, ಕೇಯೂರ ಇವುಗಳಿಂದ ಅಲಂಕೃತನಾಗಿದ್ದನು. ಅಮೂಲ್ಯವಾದ ಚಿನ್ನದ ಉಡಿದಾರವನ್ನು ಹಾಕಿಕೊಂಡಿದ್ದನು.

೫೦. ಕನ್ನೈದಿಲೆಯ ಎಸಳಿನಂತೆ ನಿಲವರ್ಣದಿಂದ ಪ್ರಕಾಶಿಸುತ್ತಿದ್ದನು. ಪಂಚೆಯನ್ನುಟ್ಟು ಧೋತ್ರವನ್ನು ಹೊದೆದಿದ್ದನು. ಅವನ ತೇಜಸ್ಸು ಬ್ರಹ್ಮಾಂಡ ಮಂಡಲವನ್ನೆಲ್ಲ ಆಕ್ರಮಿಸಿತ್ತು.

ಪವನಭ್ರಾಮ್ಯಮಾಣಾನಾಂ ಹುತಹವ್ಯವಹಾರ್ಚಿಷಾಂ ।
ಆವರ್ತಸದೃಶಾಕಾರೈಃ ಸಂಯುಕ್ತಂ ದೇಹಲೋಮಜೈಃ ॥೫೧॥

ಸರ್ವಪುಷ್ಪವಿಚಿತ್ರಾಂ ಚ ಧಾರಯಂತಂ ಮಹಾಸ್ರಜಂ ।
ಸ ಧ್ಯಾತಮಾತ್ರೋ ಭಗವಾನ್ಪ್ರದದೌ ತಸ್ಯ ದರ್ಶನಂ ॥೫೨॥

ಯಾದೃಶೇನೈವ ರೂಪೇಣ ಧ್ಯಾತೋ ರುದ್ರೇಣ ಧೀಮತಾ ।
ತಾದೃಶೇನೈವ ರೂಪೇಣ ದುರ್ನಿರೀಕ್ಷ್ಯೇಣ ದೈವತೈಃ ॥೫೩॥

ಪ್ರಣಿಪತ್ಯ ತು ದೇವೇಶಂ ತದಾ ತುಷ್ಟಾವ ಶಂಕರಃ ॥೫೪॥

॥ ಶಂಕರ ಉವಾಚ ॥

ನಮಸ್ತೇಽಸ್ತು ಜಗನ್ನಾಥ ನರಸಿಂಹವಪುರ್ಧರ ।
ದೈತ್ಯನಾಥಾಸೃಜಾಪೂರ್ಣನಖಶಕ್ತಿವಿರಾಜಿತ ॥೫೫॥

---

೫೧. ಒತ್ತಾಗಿ ಬೆಳೆದಿದ್ದ ಆತನ ಮೈಗೂದಲು ಸುಳಿಸುಳಿಯಾಗಿದ್ದುವು. ಅವು ಗಾಳಿಯ ಅಲೆತದಿಂದ ಸುಳಿದಾಡುತ್ತ, ಆಗತಾನೆ ಹೋಮಮಾಡಿದ ಅಗ್ನಿಯನ್ನು ಅನುಸರಿಸುತ್ತಿದ್ದುವು.

೫೨-೫೩. ಬಗೆಬಗೆಯ ಹೂಗಳಿಂದ ಕಟ್ಟಿದ ಸೊಗಸಾದ ಮಾಲೆಯನ್ನು ಅವನು ಹಾಕಿಕೊಂಡಿದ್ದನು. ಸರ್ವಜ್ಞನಾದ ಪರಮೇಶ್ವರನು ಯಾವ ರೂಪದಿಂದ ತನ್ನನ್ನು ಧ್ಯಾನಮಾಡಿದನೋ ಅದೇ ರೂಪದಿಂದ, ಷಡ್ಗುಣಪರಿಪೂರ್ಣನಾದ ಆ ಭಗವಂತನು ನೆನೆದ ಗಳಿಗೆಯಲ್ಲಿಯೇ ದರ್ಶನವಿತ್ತನು. ಅವನನ್ನು ಕಣ್ಣೆತ್ತಿ ನೋಡಲು ದೇವತೆಗಳಿಗೂ ಶಕ್ತಿ ಸಾಲದು.

೫೪. ಆ ದೇವದೇವನಿಗೆ ನಮಸ್ಕಾರಮಾಡಿ ಪರಮೇಶ್ವರನು ಆಗ ಸ್ತುತಿಸಿದನು.

೫೫. ಶಂಕರನು ಹೇಳಿದನು.—ನರಸಿಂಹರೂಪವನ್ನು ಧರಿಸಿದ ಓ ಜಗದೀಶ್ವರಾ, ನಿನಗೆ ನಮಸ್ಕಾರ. ದೈತ್ಯರಾಜನಾದ ಹಿರಣ್ಯಕಶಿಪುವಿನ ರಕ್ತದಿಂದ ತುಂಬಿ ನಿನ್ನ ನಖಗಳು ಶಕ್ತಿಯುತವಾಗಿವೆ. ಅವುಗಳಿಂದ ನೀನು ಮತ್ತಷ್ಟು ಪ್ರಕಾಶಿಸುತ್ತಿರುವೆ.

ಜಗತ್ಸಕಲಸಂಲಗ್ನಹೇಮಪಿಂಗಲವಿಗ್ರಹ ।
ನತೋಽಸ್ಮಿ ಪದ್ಮನಾಭ ತ್ವಾಂ ಸುರಶಕ್ರಜಗದ್ಗುರೋ ॥೫೬॥

ಕಲ್ಪಾಂತಾಂಭೋದನಿರ್ಘೋಷ ಸೂರ್ಯಕೋಟಿಸಮಪ್ರಭ ।
ಸಹಸ್ರಯಮಸಂಕ್ರೋಧ ಸಹಸ್ರೇಂದ್ರಪರಾಕ್ರಮ ॥೫೭॥

ಸಹಸ್ರಧನದಸ್ಫೀತ ಸಹಸ್ರವರುಣಾತ್ಮಕ ।
ಸಹಸ್ರಕಾಲರಚಿತ ಸಹಸ್ರನಿಯತೇಂದ್ರಿಯ ॥೫೮॥

ಸಹಸ್ರಭೂಮರ್ಹಾಧೈರ್ಯ ಸಹಸ್ರಾನಂತಮೂರ್ತಿಮನ್ ।
ಸಹಸ್ರಚಂದ್ರಪ್ರತಿಮ ಸಹಸ್ರಗ್ರಹವಿಕ್ರಮ ॥೫೯॥

---

೫೬. ಸುವರ್ಣದಂತೆ ಪಿಂಗಲವರ್ಣವಾದ ನಿನ್ನ ಶರೀರವು ಸಕಲ ಜಗತ್ತುಗಳನ್ನೂ ವ್ಯಾಪಿಸಿದೆ. ಓ ಪದ್ಮನಾಭಾ, ದೇವತೆಗಳು, ಇಂದ್ರ, ಬ್ರಹ್ಮಾಂಡ ಇವುಗಳಿಗೆಲ್ಲ ಗುರುವಾದ ನಿನ್ನನ್ನು ನಮಿಸುವೆನು.

೫೭. ಓ ದೇವಾ, ನೀನು ಅಬ್ಬರದಲ್ಲಿ ಪ್ರಳಯದ ಮೇಘವನ್ನೂ, ತೇಜಸ್ಸಿನಲ್ಲಿ ಕೋಟಿಸೂರ್ಯರನ್ನೂ, ಕ್ರೋಧದಲ್ಲಿ ಸಹಸ್ರ ಯಮರನ್ನೂ, ಪರಾಕ್ರಮದಲ್ಲಿ ಸಾವಿರ ಇಂದ್ರರನ್ನೂ ಹೋಲುತ್ತಿರುವೆ.

೫೮. ಸ್ವಾಮೀ, ನೀನು ಸಾವಿರಾರು ಕುಬೇರರಷ್ಟು ಸಂಪನ್ನನಾಗಿರುವೆ. ಸಾವಿರಾರು ವರುಣರಷ್ಟು ಪ್ರಭಾವಶಾಲಿಯಾಗಿರುವೆ. ಸಾವಿರಾರು ಯಮರ ಶಕ್ತಿಯಿಂದ ಕೂಡಿರುವೆ. ಸಾವಿರಾರು ಇಂದ್ರಿಯಗಳ ಬಲದಿಂದ ಪೂರ್ಣನಾಗಿರುವೆ.

೫೯. ಓ ಭಗವಂತಾ, ಸಾವಿರಾರು ಭೂಮಿಗಳ ಧೈರ್ಯವೂ, ಸಾವಿರಾರು ದಿವ್ಯರೂಪಗಳೂ, ಸಾವಿರಾರು ಚಂದ್ರರ ಕಾಂತಿಯೂ, ಸಾವಿರಾರು ಗ್ರಹಗಳ ಪರಾಕ್ರಮವೂ ನಿನ್ನಲ್ಲಿ ನೆಲಸಿವೆ.

ಸಹಸ್ರರುದ್ರತೇಜಸ್ಕ ಸಹಸ್ರಬ್ರಹ್ಮಸಂಸ್ತುತ ।
ಸಹಸ್ರಬಾಹುವೇಗೋಗ್ರ ಸಹಸ್ರಾಸ್ಯನಿರೀಕ್ಷಣ ।
ಸಹಸ್ರಯಂತ್ರಮಥನ ಸಹಸ್ರವಧಮೋಚನ ॥೬೦॥

ಅಂಧಕಸ್ಯ ವಿನಾಶಾಯ ಯಾಃ ಸೃಷ್ಟಾ ಮಾತರೋ ಮಯಾ ।
ಅನಾದೃತ್ಯ ತು ಮದ್ವಾಕ್ಯಂ ಭಕ್ಷಯಂತ್ಯದ್ಯ ತಾಃ ಪ್ರಜಾಃ ॥೬೧॥

ಕೃತ್ವಾ ತಾಶ್ಚ ನ ಶಕ್ತೋಽಹಂ ಸಂಹರ್ತುಮಪರಾಜಿತ ।
ಸ್ವಯಂ ಕೃತ್ವಾ ಕಥಂ ತಾಸಾಂ ವಿನಾಶಮಭಿಕಾರಯೇ ॥೬೨॥

ಏವಮುಕ್ತಃ ಸ ರುದ್ರೇಣ ನರಸಿಂಹವಪುರ್ಧರಃ ।
ಸಸರ್ಜ ದೇವೋ ಜಿಹ್ವಾಯಾಸ್ತದಾ ವಾಣೀಶ್ವರೀಂ ಹರಿಃ ॥೬೩॥

ಹೃದಯಾಚ್ಚ ತಥಾ ಮಾಯಾ ಗುಹ್ಯಾಚ್ಚ ಭವಮಾಲಿನೀ ।
ಅಸ್ಥಿಭ್ಯಶ್ಚ ತಥಾ ಕಾಲೀ ಸೃಷ್ಟಾ ಪೂರ್ವಂ ಮಹಾತ್ಮನಾ ॥೬೪॥

---

೬೦. ಸಾವಿರಾರು ರುದ್ರರ ತೇಜಸ್ಸನ್ನು ಒಳಗೊಂಡಿರುವೆ. ಸಾವಿರಾರು ಬ್ರಹ್ಮರಿಂದ ಸ್ತುತಿಯನ್ನು ಕೈಗೊಂಡಿರುವೆ. ಸಾವಿರಾರು ತೋಳುಗಳ ಬಲವನ್ನು ಬೀರುವೆ. ಸಾವಿರಾರು ಮುಖಗಳಿಂದ ನೋಡುವೆ. ಸಾವಿರಾರು ಯಂತ್ರಗಳ ಶಕ್ತಿಯಿಂದ ದುಷ್ಟರನ್ನು ಅಡಗಿಸುವೆ. ಸಾವಿರಾರು ವಿಪತ್ತುಗಳಿಂದ ಭಕ್ತರನ್ನು ಪಾರುಮಾಡುವೆ.

೬೧. ಅಂಧಕಾಸುರನ ಸಂಹಾರಕ್ಕಾಗಿ ನಾನು ಸೃಷ್ಟಿಸಿದ ಮಾತೆಯರು ಈಗ ನನ್ನ ಮಾತನ್ನು ಕಡೆಗಣಿಸಿ ಪ್ರಜೆಗಳನ್ನು ಭಕ್ಷಿಸುತ್ತಿರುವರು.

೬೨. ಸೋಲನ್ನೇ ಕಂಡರಿಯದ ಎಲೈ ದೇವಾ, ಅವರನ್ನು ಸೃಷ್ಟಿಸಿದ ತರುವಾಯ ಸಂಹರಿಸುವುದು ನನ್ನಿಂದಾಗದು. ನಿರ್ಮಿಸಿದವನೇ ನಾನು. ಈಗ ಅವರನ್ನು ಹೇಗೆ ಕೊಲ್ಲಲಿ ?

೬೩. ರುದ್ರನು ಹೀಗೆ ಹೇಳಲು ನರಸಿಂಹರೂಪನಾದ ವಿಷ್ಣು ತನ್ನ ನಾಲಗೆಯಿಂದ ವಾಗಧಿದೇವತೆಯಾದ ಸರಸ್ವತಿಯನ್ನು ಸೃಷ್ಟಿಸಿದನು.

೬೪-೫೫. ಆ ಮಹಾತ್ಮನ ಹೃದಯದಿಂದ ಮಾಯೆಯೂ, ಗುಹ್ಯದೇಶದಿಂದ ಭವಮಾಲಿನಿಯೂ ಸೃಷ್ಟಿಸಲ್ಪಟ್ಟರು. ಮೂಳೆಗಳಿಂದ ಈ ಮೊದಲೇ ಆತನು

ಯಯಾ ತದ್ರುಧಿರಂ ಪೀತಮಂಧಕಾನಾಂ ಮಹಾತ್ಮನಾಂ ।
ಯಾ ಚಾಸ್ಮಿನ್ ಕಥಿತಾ ಲೋಕೇ ನಾಮತಃ ಶುಷ್ಕರೋಹಿಣೀ ॥೬೫॥

ದ್ವಾತ್ರಿಂಶನ್ಮಾತರಃ ಸೃಷ್ಟ್ವಾ ಗಾತ್ರೇಭ್ಯಶ್ಚಕ್ರಿಣಾ ತತಃ ।
ತಾಸಾಂ ನಾಮಾನಿ ವಕ್ಷ್ಯಾಮಿ ತಾನಿ ಮೇ ಗದತಃ ಶೃಣು ॥೬೬॥

ಸರ್ವಾಸ್ತಾಸ್ತು ಮಹಾಭಾಗಾ ಘಂಟಾಕರ್ಣೀ ತಥೈವ ಚ ।
ತ್ರೈಲೋಕ್ಯಮೋಹಿನೀ ಪುಣ್ಯಾ ಸರ್ವಸತ್ತ್ವವಶಂಕರೀ ॥೬೭॥

ತಥಾ ಚ ಚಕ್ರಹೃದಯಾ ಪಂಚಮೀ ವ್ಯೋಮಚಾರಿಣೀ ।
ಶಂಖಿನೀ ಲೇಖಿನೀ ಚೈವ ಕಾಲಸಂಕರ್ಷಣೀ ತಥಾ ॥೬೮॥

ಇತ್ಯೇತಾಃ ಪೃಷ್ಠಗಾ ರಾಜನ್ ವಾಗೀಶಾನುಚರಾಃ ಸ್ಮೃತಾಃ ।
ಸಂಕರ್ಷಣೀ ತಥಾಶ್ವತ್ಥಾ ಬೀಜಭಾವಾಪರಾಜಿತಾ ॥೬೯॥

ಕಲ್ಯಾಣೀ ಮಧುದಂಷ್ಟ್ರೀ ಚ ಕಮಲೋತ್ಪಲಹಸ್ತಿಕಾ ।
ಇತಿ ದೇವ್ಯಷ್ಟಕಂ ರಾಜನ್ ಮಾಯಾನುಚರಮುಚ್ಯತೇ ॥೭೦॥

---

ಕಾಳಿಯನ್ನು ನಿರ್ಮಿಸಿದನು. ಮಹಾಧೀರರಾದ ಅಂಧಕರ ರಕ್ತವನ್ನು ಪಾನಮಾಡಿದವಳು ಅವಳೇ. ಆಕೆಯು ಈ ಲೋಕದಲ್ಲಿ ಶುಷ್ಕರೋಹಿಣಿಯೆಂಬ ಹೆಸರಿನಿಂದ ಪ್ರಖ್ಯಾತಳಾಗಿರುವಳು.

೬೬. ತರುವಾಯ ನಾರಾಯಣನು ತನ್ನ ಅವಯವಗಳಿಂದ ಮೂವತ್ತೆರಡು ಜನ ಮಾತೆಯರನ್ನು ನಿರ್ಮಾಣ ಮಾಡಿದನು. ಅವರ ಹೆಸರುಗಳನ್ನು ಹೇಳುವೆನು ಕೇಳು.

೬೭-೬೮. ಅವರೆಲ್ಲರೂ ಬಹು ಮಹಿಮೆಯುಳ್ಳವರು. ಘಂಟಾಕರ್ಣಿ, ತ್ರೈಲೋಕ್ಯಮೋಹಿನಿ, ಸರ್ವಸತ್ತ್ವವಶಂಕರಿ, ಚಕ್ರಹೃದಯೆ, ವ್ಯೋಮಚಾರಿಣಿ, ಶಂಖಿನಿ, ಲೇಖಿನಿ, ಕಾಲಸಂಕರ್ಷಣಿ ಇವರೆಲ್ಲ ವಾಗೀಶ್ವರಿಯಾದ ಆ ಸರಸ್ವತಿಯ ಅನುಚರಿಯರೆಂದು ತಿಳಿಯಬೇಕು.

೬೯-೭೦. ಓ ರಾಜಾ, ಸಂಕರ್ಷಣಿ, ಅಶ್ವತ್ಥೆ, ಬೀಜಭಾವೆ, ಅಪರಾಜಿತೆ, ಕಲ್ಯಾಣಿ, ಮಧುದಂಷ್ಟ್ರಿ, ಕಮಲೆ, ಉತ್ಪಲಹಸ್ತಿಕೆ ಈ ಎಂಟುಜನರನ್ನೂ ಮಾಯಾದೇವಿಯ ಕಡೆಯವರೆನ್ನುವರು.

ಅಜಿತಾ ಸೂಕ್ಷ್ಮಹೃದಯಾ ವೃದ್ಧಾ ವೇಶಾಶ್ಮದಂಶನಾ ।
ನೃಸಿಂಹಭೈರವಾ ಬಿಲ್ವಾ ಗರುತ್ಮದ್ಧೃದಯಾ ಜಯಾ ॥೭೧॥

ಭವಮಾಲಿನ್ಯನುಚರಾ ಇತ್ಯಷ್ಟೌ ನೃಪ ಮಾತರಃ ।
ಆಕರ್ಣನೀ ಸಂಭಟಾ ಚ ತಥೈವೋತ್ತರಮಾಲಿಕಾ ॥೭೨॥

ಜ್ವಾಲಾಮುಖೀ ಭೀಷಣಿಕಾ ಕಾಮಧೇನುಶ್ಚ ಬಾಲಿಕಾ ।
ತಥಾ ಪದ್ಮಕರಾ ರಾಜನ್ ರೇವತ್ಯನುಚರಾಃ ಸ್ಮೃತಾಃ ॥೭೩॥

ಅಷ್ಟೌ ಮಹಾಬಲಾಃ ಸರ್ವಾ ದೇವಗಾತ್ರಸಮುದ್ಭವಾಃ ।
ತ್ರೈಲೋಕ್ಯಸೃಷ್ಟಿಸಂಹಾರಸಮರ್ಥಾಃ ಸರ್ವದೇವತಾಃ ॥೭೪॥

ತಾಃ ಸೃಷ್ಟಮಾತ್ರಾ ದೇವೇನ ಕ್ರುದ್ಧಾ ಮಾತೃಗಣಸ್ಯ ತು ।
ಪ್ರಧಾವಿತಾ ಮಹಾರಾಜ ಕ್ರೋಧವಿಸ್ಫಾರಿತೇಕ್ಷಣಾಃ ॥೭೫॥

---

೭೧. ಎಲೈ ಭೂಪಾಲಕಾ, ಅಜಿತೆ, ಸೂಕ್ಷ್ಮಹೃದಯೆ, ವೃದ್ಧೆ, ವೇಶಾಶ್ಮದಂಶನೆ, ನೃಸಿಂಹಭೈರವೆ, ಬಿಲ್ವೆ, ಗರುತ್ಮದ್ಧೃದಯೆ, ಜಯೆ ಈ ದೇವಿಯರೆಂಟು ಮಂದಿಯೂ ಭವಮಾಲಿನಿಯನ್ನು ಅನುಸರಿಸಿದವರು.

೭೨-೭೪. ಆಕರ್ಣನಿ, ಸಂಭಟೆ, ಉತ್ತರಮಾಲಿಕೆ, ಜ್ವಾಲಾಮುಖಿ, ಭೀಷಣಿಕೆ, ಕಾಮಧೇನು, ಬಾಲಿಕೆ, ಪದ್ಮಕರೆ ಈ ಎಂಟು ಜನರು ಶುಷ್ಕ ರೋಹಿಣಿಯರ ಸಂಗಾತಿಗಳು. ಓ ರಾಜಾ, ಭಗವಂತನ ಶರೀರದಲ್ಲಿ ಉದಿಸಿದ ಈ ದೇವತೆಯರೆಲ್ಲರೂ ಬಹು ಬಲವುಳ್ಳವರು. ಮೂರುಲೋಕಗಳ ಸೃಷ್ಟಿಸಂಹಾರಗಳನ್ನು ಕೂಡ ಮಾಡಬಲ್ಲ ಶಕ್ತಿ ಇವರಿಗುಂಟು.

೭೫. ಎಲೈ ಮನುಚಕ್ರವರ್ತೀ, ಉತ್ಪನ್ನರಾದ ಕೂಡಲೆ ಆ ದೇವಿಯರು ಕೋಪದಿಂದ ಕಣ್ಣುಗಳನ್ನು ಬಿರುಬಿರನೆ ಬಿಟ್ಟುಕೊಂಡು ಮಾತೃಗಣದ ಕಡೆಗೆ ಓಡಿದರು.

ಅವಿಷಹ್ಯತಮಂ ತಾಸಾಂ ದೃಷ್ಟಿತೇಜಃ ಸುದಾರುಣಂ ।
ತಮೇವ ಶರಣಂ ಪ್ರಾಪ್ತಾ ನೃಸಿಂಹೋ ವಾಕ್ಯಮಬ್ರವೀತ್ ॥೭೬॥

ಯಥಾ ಮನುಷ್ಯಾಃ ಪಶವಃ ಪಾಲಯಂತಿ ಚಿರಾತ್ಸುತಾನ್ ।
ಜಯಂತಿ ತೇ ತಥೈವಾಶು ಯಥಾ ವೈ ದೇವತಾಗಣಾಃ ॥೭೭॥

ಭವತ್ಯಸ್ತು ತಥಾ ಲೋಕಾನ್ ಪಾಲಯಂತು ಮಯೇರಿತಾಃ ।
ಮನುಜೈಶ್ಚ ತಥಾ ದೇವೈರ್ಯಜಧ್ವಂ ತ್ರಿಪುರಾಂತಕಂ ॥೭೮॥

ನ ಚ ಬಾಧಾ ಪ್ರವರ್ತವ್ಯಾ ಯೇ ಭಕ್ತಾಸ್ತ್ರಿಪುರಾಂತಕೇ ।
ಯೇ ಚ ಮಾಂ ಸಂಸ್ಮರಂತೀಹ ತೇ ಚ ರಕ್ಷ್ಯಾಃ ಸದಾ ನರಾಃ ॥೭೯॥

ಬಲಿಕರ್ಮ ಕರಿಷ್ಯಂತಿ ಯುಷ್ಮಾಕಂ ಯೇ ಸದಾ ನರಾಃ ।
ಸರ್ವಕಾಮಪ್ರದಾಸ್ತೇಷಾಂ ಭವಿಷ್ಯಧ್ವಂ ತಥೈವ ಚ ॥೮೦॥

---

೭೬. ಅತ್ಯುಗ್ರವಾದ ಅವರ ಕಣ್ಣುಗಳ ತೇಜಸ್ಸನ್ನು ತಡೆಯಲಾರದೆ ಮಾತೆಯರು ನರಸಿಂಹಸ್ವಾಮಿಯನ್ನೇ ಮರೆಹೊಕ್ಕರು. ಆತನು ಅವರಿಗೆ ಇಂತೆಂದನು.

೭೭-೭೮. ಮನುಷ್ಯರೂ ಪಶುಗಳೂ ಬಹುಕಾಲ ತಮ್ಮ ಸುತರನ್ನು ರಕ್ಷಿಸಿ ಏಳ್ಗೆಹೊಂದುವಂತೆ, ಓ ದೇವಿಯರಿರಾ, ನೀವೂ ಸಹ ನನ್ನ ಆಜ್ಞೆಯನ್ನು ಮನ್ನಿಸಿ ಲೋಕಗಳನ್ನು ಪಾಲಿಸಿ ಕೀರ್ತಿವಂತರಾಗಿ. ಮನುಷ್ಯರಿಂದಲೂ ದೇವತೆಗಳಿಂದಲೂ ತ್ರಿಪುರಾಂತಕನಾದ ಪರಮೇಶ್ವರನಿಗೆ ಪೂಜೆಯನ್ನು ಸಲ್ಲಿಸಿ.

೭೯. ಪರಮೇಶ್ವರನ ಭಕ್ತರಿಗೆ ಯಾವ ಭಾಧೆಯನ್ನೂ ಕೊಡಕೂಡದು. ನನ್ನನ್ನು ಧ್ಯಾನಿಸುವ ಜನರಿಗೆ ವಿಪತ್ತು ಬಾರದಂತೆ ಸದಾ ರಕ್ಷಿಸಬೇಕು.

೮೦. ಅಲ್ಲದೆ ಎಡೆಬಿಡದೆ ನಿಮ್ಮ ಪೂಜಾಕಾರ್ಯದಲ್ಲಿ ನಿರತರಾಗಿರುವ ಮನುಷ್ಯರಿಗೆ ನೀವು ಸಕಲ ಮನೋರಥಗಳನ್ನೂ ಕರುಣಿಸಿ.

ಉಚ್ಚಾಟನಾದಿಕಂ ಯೇ ಚ ಕಥಯಂತಿ ಮಯೇರಿತಂ ।
ತೇ ಚ ರಕ್ಷ್ಯಾಃ ಸದಾ ಲೋಕಾ ರಕ್ಷಿತವ್ಯಂ ಚ ಶಾಸನಂ ॥೬೧॥

ರೌದ್ರೀಂ ಚೈವ ಪರಾಂ ಮೂರ್ತಿಂ ಮಹಾದೇವಃ ಪ್ರದಾಸ್ಯತಿ ।
ಯುಷ್ಮನ್ಮುಖ್ಯಾ ಮಹಾದೇವ್ಯಸ್ತದುಕ್ತಂ ಪರಿರಕ್ಷ್ಯಥ ॥೬೨॥

ಮಯಾ ಮಾತೃಗಣಃ ಸೃಷ್ಟೋ ಯೋಽಯಂ ವಿಗತಸಾಧ್ವಸಃ ।
ಏಷ ನಿತ್ಯಂ ವಿಶಾಲಾಕ್ಷೋ ಮಯೈವ ಸಹ ರಂಸ್ಯತೇ ॥೬೩॥

ಮಯಾ ಸಾರ್ಧಂ ತಥಾ ಪೂಜಾಂ ನರೇಭ್ಯಶ್ಚೈವ ಲಪ್ಸ್ಯಥ ।
ಪೃಥಕ್ಸುಪೂಜಿತಾ ಲೋಕೈಃ ಸರ್ವಾನ್ ಕಾಮಾನ್ ಪ್ರದಾಸ್ಯಥ ॥೬೪॥

ಶುಷ್ಕಾಂ ಸಂಪೂಜಯಿಷ್ಯಂತಿ ಯೇ ಚ ಪುತ್ರಾರ್ಥಿನೋ ಜನಾಃ ।
ತೇಷಾಂ ಪುತ್ರಪ್ರದಾ ದೇವೀ ಭವಿಷ್ಯತಿ ನ ಸಂಶಯಃ ॥೬೫॥

ಏವಮುಕ್ತ್ವಾ ತು ಭಗವಾನ್ ಸಹ ಮಾತೃಗಣೇನ ತು ।
ಜ್ವಾಲಾಮಾಲಾಕುಲವಪುಸ್ತತ್ರೈವಾಂತರಧೀಯತ ॥೬೬॥

---

೬೧. ನಾನು ಹೇಳಿರುವ ಉಚ್ಚಾಟನಾದಿ ವಿಧಿಯನ್ನು ಪಾರಾಯಣ ಮಾಡುವ ಮಾನವರನ್ನು ಕೂಡ ನೀವು ಸಲಹಬೇಕು. ಇದು ನನ್ನ ಅಪ್ಪಣೆ. ಇದನ್ನು ತಪ್ಪದೆ ನಡೆಸಬೇಕು.

೬೨. ಶ್ರೇಷ್ಠವಾದ ಮತ್ತು ಉಗ್ರವಾದ ದೇಹವನ್ನು ಮಹಾದೇವನು ನಿಮಗೆ ಕರುಣಿಸುವನು. ಎಲೌ ಮಹಾದೇವಿಯರಿರಾ, ಆತನು ಹೇಳಿದುದನ್ನು ನೆರವೇರಿಸಿ.

೬೩. ನಾನು ಸೃಷ್ಟಿಸಿದ, ವಿಶಾಲವಾದ ಕಣ್ಣುಗಳುಳ್ಳ, ನಿರ್ಭೀತರಾದ ಈ ಮಾತೆಯರು ಯಾವಾಗಲೂ ನನ್ನೊಡನೆಯೇ ಇದ್ದುಕೊಂಡು ಆನಂದದಿಂದಿರಲಿ.

೬೪. ನನ್ನೊಡನೆ ನೀವೂ ಸಹ ಜನರಿಂದ ಪೂಜೆಯನ್ನು ಪಡೆಯುವಿರಿ. ನಿಮ್ಮನ್ನೇ ಪ್ರತ್ಯೇಕವಾಗಿ ಪೂಜಿಸುವಂತಹವರಿಗೆ ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ಕೊಡಿ.

೬೫. ಪುತ್ರಾಪೇಕ್ಷೆಯಿಂದ ಶುಷ್ಕರೇವತಿಯನ್ನು ಪೂಜಿಸಿದ ಜನರಿಗೆ ಆ ದೇವಿಯು ಪುತ್ರರನ್ನು ಕರುಣಿಸುವಳು. ಸಂಶಯವಿಲ್ಲ.''

೬೬. ನರಸಿಂಹಸ್ವಾಮಿಯು ಹೀಗೆ ಹೇಳಿ, ದೇಹದಿಂದ ಜ್ವಾಲಾಮಾಲೆಗಳು ಹೊರಡುತ್ತಿರಲು, ಮಾತೃಗಣಗಳೊಡನೆ ಅಲ್ಲೇ ಮಾಯವಾದನು.

ತತ್ರ ತೀರ್ಥಂ ಸಮುತ್ಪನ್ನಂ ಕೃತಶೌಚೇತಿ ಯಜ್ಜಗುಃ ।
ತತ್ರಾಪಿ ಪೂರ್ವಜೋ ದೇವೋ ಜಗದಾರ್ತಿಹರೋ ಹರಃ ॥೮೭॥

ರೌದ್ರಸ್ಯ ಮಾತೃವರ್ಗಸ್ಯ ದತ್ವಾ ರುದ್ರಸ್ತು ಪಾರ್ಥಿವ ।
ರೌದ್ರೀಂ ದಿವ್ಯಾಂ ತನುಂ ತತ್ರ ಮಾತೃಮಧ್ಯೇ ವ್ಯವಸ್ಥಿತಃ ॥೮೮॥

ಸಪ್ತ ತಾ ಮಾತರೋ ದೇವ್ಯಃ ಸಾರ್ಧನಾರೀಶ್ವರಃ ಶಿವಃ ।
ನಿವೇಶ್ಯ ರೌದ್ರಂ ತತ್ಸ್ಥಾನಂ ತತ್ರೈವಾಂತರಧೀಯತ ॥೮೯॥

ಸಮಾತೃವರ್ಗಸ್ಯ ಹರಸ್ಯ ಮೂರ್ತಿಃ
ಜುಷ್ಟೇ ಯದಾ ತಿಷ್ಠತಿ ತತ್ಸಮೀಪೇ ।
ದೇವೇಶ್ವರಸ್ಯಾಪಿ ನೃಸಿಂಹಮೂರ್ತೇಃ
ಪೂಜಾಂ ವಿಧತ್ತೇ ತ್ರಿಪುರಾಂಧಕಾರಿಃ ॥೯೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽಂಧಕವಧೋ
ನಾಮೈಕೋನಾಶೀತ್ಯಧಿಕಶತತಮೋಽಧ್ಯಾಯಃ

---

೮೭-೮೮. ಆ ಸ್ಥಳದಲ್ಲಿ ಪುಣ್ಯತೀರ್ಥವೊಂದು ಉತ್ಪನ್ನವಾಯಿತು. ಅದನ್ನು ಕೃತಶೌಚವೆಂದು ಕರೆಯುತ್ತಾರೆ. ಜಗತ್ತಿನ ಕಷ್ಟಗಳನ್ನು ಪರಿಹರಿಸುವ ಪರಮೇಶ್ವರನು ಆ ರುದ್ರಮಾತೆಯರಿಗೆ ತನ್ನಂತಹುದೇ ಆದ ದಿವ್ಯದೇಹವನ್ನು ಕರುಣಿಸಿ ಅವರ ನಡುವೆ ನೆಲಸಿದನು.

೮೯. ಅರ್ಧನಾರೀರೂಪಸಹಿತನಾದ ಪರಮೇಶ್ವರನು ಸಪ್ತಮಾತೃಕೆಯರನ್ನು ಆ ರುದ್ರಸ್ಥಾನದಲ್ಲಿರಿಸಿ ತಾನು ಅಲ್ಲೇ ಅದೃಶ್ಯನಾದನು.

೯೦. ಮಹರ್ಷಿಗಳಿಂದ ಸೇವಿತವಾದ ಆ ಪುಣ್ಯತೀರ್ಥದಲ್ಲಿ ಮಾತೃವರ್ಗಸಹಿತವಾಗಿ ಪರಮೇಶ್ವರನ ದಿವ್ಯಮೂರ್ತಿಯು ಪ್ರತಿಷ್ಠಿತವಾಗಿರುವುದು. ಅಲ್ಲಿ ತ್ರಿಪುರಾಂತಕನೂ, ಅಂಧಕಾಸುರಧ್ವಂಸಿಯೂ ಆದ ಮಹಾದೇವನು ದೇವಾಧಿದೇವನಾದ ನೃಸಿಂಹಸ್ವಾಮಿಯ ಪೂಜೆಯನ್ನು ಮಾಡುತ್ತಿರುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ಅಂಧಕಾಸುರನ ವಧೆಯನ್ನು ವರ್ಣಿಸುತ್ತದೆ.

ಅಂಧಕನೆಂಬ ಅಸುರನು ಲೋಕಕಟಂಕನಾಗಿದ್ದನು. ಪರಮೇಶ್ವರನು ಪಾರ್ವತಿಯೊಡನೆ ವಿನೋದದಿಂದ ಇರುವಾಗ ಆ ದೈತ್ಯನು ದೇವಿಯನ್ನು ಅಪ ಹರಿಸಲು ಯತ್ನಿಸಿದನು. ಅವನಿಗೂ ಮಹಾದೇವನಿಗೂ ಘೋರವಾದ ಯುದ್ಧ ವಾಯಿತು. ದೈತ್ಯನ ರಕ್ತದಿಂದ ಮತ್ತೆ ಮತ್ತೆ ಅಂಧಕರು ಉತ್ಪನ್ನರಾದರು. ಆಗ ಈಶ್ವರನು ಅವರ ರಕ್ತವನ್ನು ಪಾನಮಾಡುವುದಕ್ಕಾಗಿ ಬ್ರಾಹ್ಮಿ, ಮಾಹೇಶ್ವರಿ ಮೊದಲಾದ ಮಾತೆಯರನ್ನು ನಿರ್ಮಿಸಿದನು. ಅಸುರರ ರಕ್ತವನ್ನೇನೋ ಅವರು ಕುಡಿದರು. ಆದರೂ ಮರಳಿ ಅಂಧಕನ ಪುತ್ರರು ಉದಿಸಿದರು. ಆಗ ವಿಷ್ಣುವು ಶುಷ್ಕರೋಹಿಣಿಯೆಂಬ ದೇವತೆಯನ್ನು ಸೃಷ್ಟಿಸಿದನು. ಅವಳು ಅಂಧಕಪುತ್ರರ ರಕ್ತವನ್ನೆಲ್ಲ ಹೀರಿದಳು. ತರುವಾಯ ಈಶ್ವರನು ಆ ಅಸುರರನ್ನೆಲ್ಲ ಸಂಹರಿಸಿದನು.

ಇತ್ತ ರುದ್ರಮಾತೆಯರು ಘೋರವಾದ ರೂಪವನ್ನು ತಾಳಿ ಜಗತ್ತನ್ನೆಲ್ಲ ಭಕ್ಷಿಸಲು ಯತ್ನಿಸಿದರು. ಆಗ ನೃಸಿಂಹಸ್ವಾಮಿಯು ಆ ಮಾತೃಗಣಗಳ ನಿಗ್ರಹಾರ್ಥವಾಗಿ ವಾಗೀಶ್ವರಿ, ಮಾಯೆ ಮೊದಲಾದ ಮೂವತ್ತೆರಡು ಮಂದಿ ದೇವಿಯರನ್ನು ಸೃಷ್ಟಿಸಿದನು. ಇವರ ತೇಜಸ್ಸನ್ನು ಸಹಿಸಲಾಗದೆ ಆ ಉಗ್ರ ದೇವಿಯರು ನಿರ್ವೀರ್ಯರಾದರು. ಜಗತ್ತಿಗೆ ಉಪದ್ರವವನ್ನು ಕೊಡಕೂಡದೆಂದೂ, ಭಗವದ್ಭಕ್ತರನ್ನು ರಕ್ಷಿಸಬೇಕೆಂದೂ ಆಜ್ಞೆಯಿತ್ತು ವಿಷ್ಣು ಅದೃಶ್ಯನಾದನು. ಪರಮೇಶ್ವರನೂ ಸಹ ಒಡನೆಯೇ ಅಂತರ್ಧಾನವನ್ನು ಹೊಂದಿದನು. ಆ ಸ್ಥಳದಲ್ಲಿ ಕೃತಶೌಚವೆಂಬ ಪ್ರಖ್ಯಾತವಾದ ಪುಣ್ಯತೀರ್ಥವು ಉತ್ಪನ್ನವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅಂಧಕವಧವೆಂಬ ನೂರಎಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥಾಶೀತ್ಯಧಿಕಶತತಮೋऽಧ್ಯಾಯಃ

॥ ಋಷಯ ಊಚುಃ ॥

ಶ್ರುತೋऽಂಧಕವಧಃ ಸೂತ ಯಥಾವತ್ತ್ವದುದೀರಿತಃ ।
ವಾರಾಣಸ್ಯಾಸ್ತು ಮಾಹಾತ್ಮ್ಯಂ ಶ್ರೋತುಮಿಚ್ಛಾಮ ಸಾಂಪ್ರತಂ ॥ ೧ ॥
ಭಗವಾನ್ ಪಿಂಗಲಃ ಕೇನ ಗಣತ್ವಂ ಸಮುಪಾಗತಃ ।
ಅನ್ನದತ್ವಂ ಚ ಸಂಪ್ರಾಪ್ತೋ ವಾರಾಣಸ್ಯಾಂ ಮಹಾದ್ಯುತಿಃ ॥ ೨ ॥
ಕ್ಷೇತ್ರಪಾಲಃ ಕಥಂ ಜಾತಃ ಪ್ರಿಯತ್ವಂ ಚ ಕಥಂ ಗತಃ ।
ಏತದಿಚ್ಛಾಮ ಕಥಿತಂ ಶ್ರೋತುಂ ಬ್ರಹ್ಮಸುತ ತ್ವಯಾ ॥ ೩ ॥

॥ ಸೂತ ಉವಾಚ ॥

ಶೃಣುಧ್ವಂ ವೈ ಯಥಾ ಲೇಭೇ ಗಣೇಶತ್ವಂ ಸ ಪಿಂಗಲಃ ।
ಅನ್ನದತ್ವಂ ಚ ಲೋಕಾನಾಂ ಸ್ಥಾನಂ ವಾರಾಣಸೀ ತ್ವಿಹ ॥ ೪ ॥

---

೧. ಋಷಿಗಳು ಹೇಳಿದರು.—ಎಲೈ ಸೂತಪೌರಾಣಿಕನೇ, ನೀನು ವಿವರಿಸಿದ ಅಂಧಕಾಸುರವಧೆಯ ವಿವರವನ್ನು ಕೇಳಿದೆವು. ಈಗ ಕಾಶೀಕ್ಷೇತ್ರದ ಮಹಿಮೆಯನ್ನು ಕೇಳಬಯಸುತ್ತೇವೆ.

೨-೩. ಓ ಪೂಜ್ಯನೇ, ಪಿಂಗಳನು ಪ್ರಮಥಗಣಗಳ ಗುಂಪಿಗೆ ಸೇರಿದುದು ಹೇಗೆ? ಮಹಾತೇಜಸ್ವಿಯಾದ ಆತನು ಕಾಶೀಕ್ಷೇತ್ರದಲ್ಲಿ ಅನ್ನದಾನಿಯೆಂಬ ಪ್ರಖ್ಯಾತಿಯನ್ನು ಹೇಗೆ ಪಡೆದನು? ಅವನು ಕ್ಷೇತ್ರಪಾಲಕನೂ, ಈಶ್ವರನಿಗೆ ಪ್ರಿಯನೂ ಆದುದೆಂತು? ಓ ಬ್ರಹ್ಮಪುತ್ರಾ, ಇದನ್ನು ನಮಗೆ ಹೇಳು; ಕೇಳಬೇಕೆಂದು ಇಚ್ಛಿಸುತ್ತೇವೆ.

೪. ಸೂತಪೌರಾಣಿಕನು ಹೇಳಿದನು.—ಆ ಪಿಂಗಲನಿಗೆ ಗಣೇಶಪದವಿಯು ಹೇಗೆ ಬಂದಿತು? ಅವನು ಲೋಕಗಳಿಗೆಲ್ಲ ಅನ್ನವನ್ನು ಕೊಡುವಾತನು ಹೇಗಾದನು? ಕಾಶೀಕ್ಷೇತ್ರವು ಅವನ ಸ್ಥಾನವಾದುದೆಂತು? ಈ ವಿಷಯವೆಲ್ಲವನ್ನೂ ಹೇಳುವೆನು ಕೇಳಿ.

ಪೂರ್ಣಭದ್ರಸುತಃ ಶ್ರೀಮಾನಾಸೀದ್ಯಕ್ಷಃ ಪ್ರತಾಪವಾನ್ ।
ಹರಿಕೇಶ ಇತಿ ಖ್ಯಾತೋ ಬ್ರಹ್ಮಣ್ಯೋ ಧಾರ್ಮಿಕಶ್ಚ ಹ ॥ ೫ ॥

ತಸ್ಯ ಜನ್ಮಪ್ರಭೃತ್ಯೇವ ಶರ್ವೇ ಭಕ್ತಿರನುತ್ತಮಾ ।
ತದಾಸೀತ್ತನ್ನಮಸ್ಕಾರಸ್ತನ್ನಿಷ್ಠಸ್ತತ್ಪರಾಯಣಃ ॥ ೬ ॥

ಆಸೀನಶ್ಚ ಶಯಾನಶ್ಚ ಗಚ್ಛಂಸ್ತಿಷ್ಠನ್ನನುವ್ರಜನ್ ।
ಭುಂಜಾನೋಽಥ ಪಿಬನ್ವಾಪಿ ರುದ್ರಮೇವಾನ್ವಚಿಂತಯತ್ ॥ ೭ ॥

ತಮೇವಂ ಯುಕ್ತಮನಸಂ ಪೂರ್ಣಭದ್ರಃ ಪಿತಾಬ್ರವೀತ್ ।
ನ ತ್ವಾಂ ಪುತ್ರಮಹಂ ಮನ್ಯೇ ದುರ್ಜಾತೋ ಯಸ್ತ್ವಮನ್ಯಥಾ ॥ ೮ ॥

ನ ಹಿ ಯಕ್ಷಕುಲೀನಾನಾಮೇತದ್ವೃತ್ತಂ ಭವತ್ಯುತ ।
ಗುಹ್ಯಕಾ ಬತ ಯೂಯಂ ವೈ ಸ್ವಭಾವಾತ್ಕ್ರೂರಚೇತಸಃ ॥ ೯ ॥

---

೫. ಪ್ರತಾಪಶಾಲಿಯಾದ ಹರಿಕೇಶನೆಂಬ ಪ್ರಸಿದ್ಧನಾದ ಯಕ್ಷನೊಬ್ಬ ನಿದ್ದನು. ಅವನು ಶ್ರೀಮಂತ; ಪೂರ್ಣಭದ್ರನ ಪುತ್ರ; ಬ್ರಾಹ್ಮಣರಲ್ಲಿ ಭಕ್ತಿಯುಳ್ಳವ; ಮತ್ತು ಧರ್ಮನಿಷ್ಠ.

೬. ಹುಟ್ಟಿದಂದಿನಿಂದಲೂ ಅವನಿಗೆ ಈಶ್ವರನಲ್ಲಿ ಅತಿಶಯವಾದ ಭಕ್ತಿಯಿದ್ದಿತು. ಆದುದರಿಂದ ಅವನನ್ನೇ ನಮಸ್ಕರಿಸುತ್ತ, ಅವನಲ್ಲೇ ಶ್ರದ್ಧಾಳುವಾಗಿ, ಅವನನ್ನೇ ಏಕಾಗ್ರಚಿತ್ತದಿಂದ ಧ್ಯಾನಿಸುತ್ತಿದ್ದನು.

೭. ಅವನು ಕುಳಿತಾಗ, ಮಲಗಿದಾಗ, ನಿಂತಾಗ, ಒಬ್ಬರ ಜೊತೆಯಲ್ಲಿ ನಡೆಯುವಾಗ, ಊಟಮಾಡುವಾಗ, ಮತ್ತು ನೀರುಕುಡಿಯುವಾಗಲೆಲ್ಲ ಶಂಕರನನ್ನೇ ಚಿಂತಿಸುತ್ತಿದ್ದನು.

೮. ಹೀಗೆ ಸ್ಥಿರಚಿತ್ತನಾದ ಮಗನನ್ನು ನೋಡಿ ತಂದೆಯಾದ ಪೂರ್ಣಭದ್ರನು ಹೇಳಿದನು. "ನಿನ್ನನ್ನು ನನ್ನ ಮಗನೆಂದು ತಿಳಿಯಲಾರೆನು. ನೀನು ಎಲ್ಲೋ ತಪ್ಪಿ ಹುಟ್ಟಿದ್ದೀಯೆ.

೯. ಯಕ್ಷರ ವಂಶದಲ್ಲಿ ಹುಟ್ಟಿದವರಿಗೆ ಇದು ನಡತೆಯಲ್ಲವಪ್ಪಾ! ನೀವು ಗುಹ್ಯಕರು; ಸ್ವಭಾವವಾಗಿ ಕ್ರೂರಮನಸ್ಕರಾಗಿರಬೇಕು.

ಕ್ರವ್ಯಾದಾಶ್ಚೈವ ಕಿಂಭಕ್ಷ್ಯಾ ಹಿಂಸಾಶೀಲಾಶ್ಚ ಪುತ್ರಕ ।
ನೈವಂ ಕಾರ್ಷ್ಣೀರ್ನ ತೇ ವೃತ್ತಿರೇವಂ ದೃಷ್ಟಾ ಮಹಾತ್ಮನಾ ॥೧೦॥

ಸ್ವಯಂಭುವಾ ಯಥಾದಿಷ್ಟಾ ತ್ಯಕ್ತ್ವಾ ಯದಿ ನೋ ಭವೇತ್ ।
ಆಶ್ರಮಾಂತರಜಂ ಕರ್ಮ ನ ಕುರ್ಯುರ್ಗೃಹಿಣಸ್ತು ತತ್ ॥೧೧॥

ಹಿತ್ವಾ ಮನುಷ್ಯಭಾವಂ ಚ ಕರ್ಮಭಿರ್ವಿವಿಧೈಶ್ಚರ ।
ಯತ್ತ್ವಮೇವಂ ವಿಮಾರ್ಗಸ್ಥೋ ಮನುಷ್ಯಾಜ್ಜಾತ ಏವ ಚ ॥೧೨॥

ಯಥಾವದ್ವಿವಿಧಂ ತೇಷಾಂ ಕರ್ಮ ತಜ್ಜಾತಿಸಂಶ್ರಯಂ ।
ಮಯಾಪಿ ವಿಹಿತಂ ಪಶ್ಯ ಕರ್ಮೈತನ್ನಾತ್ರ ಸಂಶಯಃ ॥೧೩॥

---

೧೦. ಮಗೂ, ಗುಹ್ಯಕರು ಮಾಂಸಹಾರಿಗಳು ; ಭಕ್ಷ್ಯಾಭಕ್ಷ್ಯಗಳ ವಿವೇಚನೆಯಿಲ್ಲದವರು ; ಹಿಂಸಾಸ್ವಭಾವದವರು. ಆದುದರಿಂದ ನೀನು ಹೀಗೆ ಸಾತ್ತ್ವಿಕಜೀವನದಲ್ಲಿರುವುದು ಉಚಿತವಲ್ಲ; ಮಹಾತ್ಮನಾದ ಬ್ರಹ್ಮನು ಇದನ್ನು ನಿನ್ನ ವೃತ್ತಿಯೆಂದು ಹೇಳಿಲ್ಲ.

೧೧. ನೀನು ಹೀಗೆಯೇ ಇದ್ದರೆ ಬ್ರಹ್ಮನು ನಮಗಾಗಿ ಗೊತ್ತುಮಾಡಿದ ಧರ್ಮವನ್ನು ನಾವು ಬಿಟ್ಟಂತೆ ಆಗುವುದು. ಗೃಹಸ್ಥರು ತಮ್ಮ ಆಶ್ರಮಕ್ಕೆ ಸಂಬಂಧ ಪಡದ ಕರ್ಮಗಳನ್ನು ಆಚರಿಸಬಾರದು.

೧೨. ಈ ಮನುಷ್ಯಸ್ವಭಾವವನ್ನು ಬಿಡು· ನಿನಗೆ ಸಹಜವಾದ ನಾನಾ ಬಗೆಯ ವ್ಯಾಪಾರಗಳಿವೆ ; ಅವುಗಳನ್ನು ಮಾಡು. ನಮ್ಮ ಧರ್ಮಕ್ಕೆ ವಿರುದ್ಧವಾಗಿ ನೀನು ನಡೆಯುತ್ತಿರುವುದನ್ನು ನೋಡಿದರೆ ನೀನು ಮನುಷ್ಯನಿಂದಲೇ ಜನಿಸಿರ ಬೇಕೆಂದು ತೋರುತ್ತದೆ.

೧೩. ಮನುಷ್ಯರಿಗೆ ನಾನಾವಿಧವಾದ ಕರ್ಮಗಳುಂಟು. ಆ ಜಾತಿಗೇ ಕರ್ಮದ ಸಂಬಂಧವು ಹೆಚ್ಚು. ನಾನೂ ಕೂಡ ಕರ್ಮವನ್ನು ಮಾಡುತ್ತಲೇ ಇದ್ದೇನೆ ನಿಜ. ಆದರೆ ಇದು ನಮ್ಮ ಜಾತಿಗೆ ವಿಹಿಕವಾದ ಕರ್ಮ.

|| ಸೂತ ಉವಾಚ ||

ಏವಮುಕ್ತ್ವಾ ಸ ತಂ ಪುತ್ರಂ ಪೂರ್ಣಭದ್ರಃ ಪ್ರತಾಪವಾನ್ ।
ಉವಾಚ ನಿಷ್ಕ್ರಮ ಕ್ಷಿಪ್ರಂ ಗಚ್ಛ ಪುತ್ರ ಯಥೇಚ್ಛಸಿ ||೧೪||

ತತಃ ಸ ನಿರ್ಗತಸ್ತ್ಯಕ್ತ್ವಾ ಗೃಹಂ ಸಂಬಂಧಿನಸ್ತಥಾ ।
ವಾರಾಣಸೀಂ ಸಮಾಸಾದ್ಯ ತಪಸ್ತೇಪೇ ಸುದುಶ್ಚರಂ ||೧೫||

ಸ್ಥಾಣುಭೂತೋ ಹ್ಯನಿಮಿಷಃ ಶುಷ್ಕಕಾಷ್ಠೋಪಲೋಪಮಃ ।
ಸನ್ನಿಯಮ್ಯೇಂದ್ರಿಯಗ್ರಾಮಮವಾತಿಷ್ಠತ ನಿಶ್ಚಲಃ ||೧೬||

ಅಥ ತಸ್ಯೈವ ತಪಸಿ ಸಂಸ್ಥಿತಸ್ಯ ಮಹಾತ್ಮನಃ ।
ಸಹಸ್ರಮೇಕಂ ವರ್ಷಾಣಾಂ ದಿವ್ಯಮಪ್ಯಭ್ಯವರ್ತತ ||೧೭||

ವಲ್ಮೀಕೇನ ಸಮಾಕ್ರಾಂತೋ ಭಕ್ಷ್ಯಮಾಣಃ ಪಿಪೀಲಿಕೈಃ ।
ವಜ್ರಸೂಚೀಮುಖೈಸ್ತೀಕ್ಷ್ಣೈರ್ವಿಧ್ಯಮಾನಸ್ತಥೈವ ಚ ||೧೮||

---

೧೪. ಸೂತಪೌರಾಣಿಕನು ಹೇಳಿದನು.—ಪ್ರತಾಪಶಾಲಿಯಾದ ಪೂರ್ಣಭದ್ರನು ಹೀಗೆ ಹೇಳಿ, ಮಗನನ್ನು ಕುರಿತು “ ಪುತ್ರಾ, ಬೇಗನೆ ಹೊರಡು ; ನಿನಗೆ ತೋರಿದ ಕಡೆಗೆ ಹೋಗು ” ಎಂದು ಅಪ್ಪಣೆಯಿತ್ತನು.

೧೫. ಬಳಿಕ ಅವನು ತನ್ನ ಮನೆಯನ್ನೂ, ಬಂಧುಬಳಗದವರನ್ನೂ ಬಿಟ್ಟು ಹೊರಟುಹೋದನು. ಕೊನೆಗೆ ಕಾಶೀಕ್ಷೇತ್ರವನ್ನು ಸೇರಿ ಅಲ್ಲಿ ಅತ್ಯುಗ್ರವಾದ ತಪಸ್ಸನ್ನು ಮಾಡಿದನು.

೧೬. ಮೋಟುಮರದಂತೆ ನಿಂತು, ರೆಪ್ಪೆ ಬಡಿಯದೆ, ಒಣಗಿದ ಕಟ್ಟಿಗೆಯಂತೆಯೂ ಕಲ್ಲಿನಂತೆಯೂ ಶುಷ್ಕಶರೀರನಾಗಿ, ಇಂದ್ರಿಯಗಳನ್ನು ವಶಪಡಿಸಿಕೊಂಡು ಅವನು ಅಲುಗಾಡದೆ ಇದ್ದನು.

೧೭. ಬಳಿಕ ಆ ಮಹಾತ್ಮನು ಹೀಗೆಯೇ ತಪಸ್ಸಿನಲ್ಲಿ ನಿರತನಾಗಿರಲು ದೇವಮಾನದಲ್ಲಿ ಒಂದು ಸಾವಿರವರ್ಷಗಳು ಕಳೆದುವು.

೧೮-೧೯. ಅವನ ಸುತ್ತಲೂ ಹುತ್ತವು ಬೆಳೆಯಿತು. ಇರುವೆಗಳು ಅವನ ದೇಹವನ್ನು ತಿನ್ನತೊಡಗಿದುವು. ವಜ್ರಕೀಟಹುಳುಗಳು ಸೂಜಿಯಂತೆ ಮೊನೆ

ನಿರ್ಮಾಂಸರುಧಿರತ್ವಕ್ಚ ಕುಂದಶಂಖೇಂದುಸಪ್ರಭಃ ।
ಅಸ್ಥಿಶೇಷೋऽಭವಚ್ಛರ್ವಂ ದೇವಂ ವೈ ಚಿಂತಯನ್ನಪಿ ॥೧೯॥

ಏತಸ್ಮಿನ್ನಂತರೇ ದೇವೀ ವ್ಯಜ್ಞಾಪಯತ ಶಂಕರಂ ॥೨೦॥

॥ ದೇವ್ಯುವಾಚ ॥

ಉದ್ಯಾನಂ ಪುನರೇವೇದಂ ದ್ರಷ್ಟುಮಿಚ್ಛಾಮಿ ಸರ್ವದಾ ।
ಕ್ಷೇತ್ರಸ್ಯ ದೇವ ಮಾಹಾತ್ಮ್ಯಂ ಶ್ರೋತುಂ ಕೌತೂಹಲಂ ಹಿ ಮೇ ।
ಯತಶ್ಚ ಪ್ರಿಯಮೇತತ್ತೇ ತಥಾಸ್ಯ ಫಲಮುತ್ತಮಂ ॥೨೧॥

ಇತಿ ವಿಜ್ಞಾಪಿತೋ ದೇವಃ ಶರ್ವಾಣ್ಯಾ ಪರಮೇಶ್ವರಃ ।
ಸರ್ವಂ ಪೃಷ್ಟಂ ಯಥಾತಥ್ಯಮಾಖ್ಯಾತುಮುಪಚಕ್ರಮೇ ॥೨೨॥

ಇತಿ ವಿಜ್ಞಾಪಿತೋ ದೇವಃ ಶರ್ವಾಣ್ಯಾ ಪರಮೇಶ್ವರಃ ।
ಉದ್ಯಾನಂ ದರ್ಶಯಾಮಾಸ ದೇವ್ಯಾ ದೇವಃ ಪಿನಾಕಧೃಕ್ ॥೨೩॥

---

ಯಾದ ತಮ್ಮ ಕೊಂಡಿಗಳಿಂದ ಚುಚ್ಚುತ್ತಿದ್ದುವು. ಮಾಂಸ, ರಕ್ತ, ಚರ್ಮ ಇವೊಂದೂ ಇಲ್ಲದೆ ಮೂಳೆ ಮಾತ್ರ ಉಳಿದಿರಲು, ಆ ಪಿಂಗಲನು ಮೊಲ್ಲೆ ಹೂ, ಶಂಖ, ಚಂದ್ರ ಇವುಗಳಂತೆ ಬಿಳುಪೇರಿದನು. ಇಷ್ಟಾದರೂ ಅವನು ಪರಮೇಶ್ವರ ನನ್ನು ಧ್ಯಾನಿಸುತ್ತಲೇ ಇದ್ದನು.

೨೦. ಇಷ್ಟರೊಳಗೆ ಪಾರ್ವತೀ ದೇವಿಯು ಶಂಕರನಲ್ಲಿ ಬಿನ್ನೈಸಿದಳು.

೨೧. ಪಾರ್ವತಿ ಹೇಳಿದಳು.—ದೇವಾ, ಈ ಉದ್ಯಾನವನ್ನು ನೋಡ ಬೇಕೆಂದರೆ ನನಗೆ ಯಾವಾಗಲೂ ಆಸೆ. ಈ ಕ್ಷೇತ್ರದ ಮಾಹಾತ್ಮ್ಯವನ್ನು ಕೇಳ ಬೇಕೆಂದು ನನಗೆ ಕುತೂಹಲವಿದೆ. ಇದು ನಿನಗೆ ಬಹು ಪ್ರಿಯವಾದ ಸ್ಥಳ. ಆದುದರಿಂದ ಈ ಕ್ಷೇತ್ರವಾಸದ ಫಲವೂ ಅತಿಶಯವಾಗಿಯೇ ಇರಬೇಕು.

೨೨. ಪಾರ್ವತಿಯು ಹೀಗೆ ಪ್ರಾರ್ಥಿಸಲು ಪೂಜ್ಯನಾದ ಪರಮೇಶ್ವರನು ಅವಳು ಕೇಳಿದುದನ್ನೆಲ್ಲ ವಿವರವಾಗಿ ಹೇಳಲು ಪ್ರಾರಂಭಿಸಿದನು.

೨೩. ದೇವೇಶನೂ, ಪಿನಾಕಧಾರಿಯೂ ಆದ ಶಂಕರನು ಪಾರ್ವತಿ ಯೊಡನೆ ಹೊರಟು ಬಂದು ಅವಳಿಗೆ ಆ ತೋಟವನ್ನು ತೋರಿಸಿದನು.

॥ ದೇವದೇವ ಉವಾಚ ॥

ಪ್ರೋತ್ಫುಲ್ಲನಾನಾವಿಧಗುಲ್ಮಶೋಭಿತಂ
ಲತಾಪ್ರತಾನಾವನತಂ ಮನೋಹರಂ ।
ವಿರೂಢಪುಷ್ಪೈಃ ಪರಿತಃ ಪ್ರಿಯಂಗುಭಿಃ
ಸುಪುಷ್ಪಿತೈಃ ಕಂಟಕಿತೈಶ್ಚ ಕೇತಕೈಃ ॥೨೪॥

ತಮಾಲಗುಲ್ಮೈರ್ನಿಚಿತಂ ಸುಗಂಧಿಭಿಃ
ಸಕರ್ಣಿಕಾರೈರ್ವಕುಲೈಶ್ಚ ಸರ್ವಶಃ ।
ಅಶೋಕಪುನ್ನಾಗವರೈಃ ಸುಪುಷ್ಪಿತೈಃ
ದ್ವಿರೇಫಮಾಲಾಕುಲಪುಷ್ಪಸಂಚಯೈಃ ॥೨೫॥

ಕ್ವಚಿತ್ಪ್ರಫುಲ್ಲಾಂಬುಜರೇಣುರೂಷಿತೈ
ರ್ವಿಹಂಗಮೈಶ್ಚಾರುಕಲಪ್ರಣಾದಿಭಿಃ ।
ಪ್ರಮತ್ತದಾತ್ಯೂಹರುತೈಶ್ಚ ವಲ್ಗುಭಿಃ
ಕ್ವಚಿಚ್ಚ ಮಾಯೂರಗಣೈಶ್ಚ ಸೇವಿತಂ ॥೨೬॥

೨೪. ಮಹಾದೇವನು ಹೇಳಿದನು.—ಪರಮೇಶ್ವರನು ಪಾರ್ವತಿಗೆ ತೋರಿಸಿದ ಉದ್ಯಾನದಲ್ಲಿ ಬಗೆಬಗೆಯ ಪೊದೆಗಳು ಹೂಗಳಿಂದ ತುಂಬಿದ್ದುವು. ಬಳ್ಳಿಗಳು ಜೋಲಾಡುತ್ತ ಮನಸ್ಸನ್ನು ಸೆಳೆಯುತ್ತಿದ್ದುವು. ಪ್ರಿಯಂಗುಲತೆಗಳು ಸುತ್ತಲೂ ಹೂಗಳಿಂದ ಕಿಕ್ಕಿರಿದಿದ್ದುವು. ತಾಳೆಗಳು ಲೆಕ್ಕವಿಲ್ಲದಷ್ಟು ಹೂ ಬಿಟ್ಟಿದ್ದುವು ; ಆದರೆ ಮೈತುಂಬ ಮುಳ್ಳುಗಳಿಂದ ಕೂಡಿದ್ದುವು.

೨೫. ಹೊಂಗೆಯ ಮರಗಳು ಒತ್ತೊತ್ತಾಗಿ ಬೆಳೆದು ಪರಿಮಳವನ್ನು ಬೀರುತ್ತಿದ್ದುವು. ಕರ್ಣಿಕಾರಗಳು ಮತ್ತು ಪುನ್ನಾಗಗಳು ಎಲ್ಲ ಕಡೆಗಳಲ್ಲಿಯೂ ಚೆನ್ನಾಗಿ ಹೂಬಿಟ್ಟದ್ದುವು. ದುಂಬಿಗಳು ಗುಂಪುಗುಂಪಾಗಿ ಹೂಗೊಂಚಲುಗಳಿಗೆ ಮುತ್ತಿಕೊಂಡಿದ್ದುವು.

೨೬. ಒಂದುಕಡೆ ಪಕ್ಷಿಗಳು ಇಂಪಾಗಿ ಕಲಕಲಧ್ವನಿಮಾಡುತ್ತಿದ್ದುವು. ಅರಳಿದ ತಾವರೆಯ ಧೂಳು ಅವುಗಳ ಮೈಗೆ ಅಂಟಿಕೊಂಡಿದ್ದಿತು. ಇನ್ನೊಂದುಕಡೆ ದಾತ್ಯೂಹಗಳೆಂಬ ನೀರುಹಕ್ಕಿಗಳು ಸೊಕ್ಕೇರಿ ಹಾಡುತ್ತಿದ್ದುವು. ನವಿಲುಗಳು ಗುಂಪುಗುಂಪಾಗಿ ಕುಣಿಯುತ್ತಿದ್ದುವು.

ಕ್ವಚಿಚ್ಚ ಚಕ್ರಾಹ್ವರವೋಪನಾದಿತಂ
　ಕ್ವಚಿಚ್ಚ ಕಾದಂಬಕದಂಬಕೈರ್ಯುತಂ ।
ಕ್ವಚಿಚ್ಚ ಕಾರಂಡವನಾದನಾದಿತಂ
　ಕ್ವಚಿಚ್ಚ ಮತ್ತಾಲಿಕುಲಾಕುಲೀಕೃತಂ ॥೨೭॥

ಮದಾಕುಲಾಭಿಸ್ತ್ವಮರಾಂಗನಾಭಿ
　ರ್ನಿಷೇವಿತಂ ಚಾರುಸುಗಂಧಿಪುಷ್ಪಂ ।
ಕ್ವಚಿತ್ಸುಪುಷ್ಪೈಃ ಸಹಕಾರವೃಕ್ಷೈ
　ರ್ಲತೋಪಗೂಢೈಸ್ತಿಲಕದ್ರುಮೈಶ್ಚ ॥೨೮॥

ಪ್ರಗೀತವಿದ್ಯಾಧರಸಿದ್ಧಚಾರಣಂ
　ಪ್ರಮತ್ತನೃತ್ಯಾಪ್ಸರಸಾಂ ಗಣಾಕುಲಂ ।
ಪ್ರಹೃಷ್ಟನಾನಾವಿಧಪಕ್ಷಿಸೇವಿತಂ
　ಪ್ರಮತ್ತಹಾರೀತಕುಲೋಪನಾದಿತಂ ॥೨೯॥

---

೨೭. ಒಂದುಕಡೆ ಚಕ್ರವಾಕಪಕ್ಷಿಗಳ ಮಧುರನಾದವು ಕೇಳಬರುತ್ತಿತ್ತು. ಇನ್ನೊಂದುಕಡೆ ಕಲಹಂಸಗಳು ಗುಂಪುಕೂಡಿದ್ದುವು. ಮತ್ತೊಂದು ಕಡೆ ಕಾರಂಡವಗಳು ಉಲಿಯುತ್ತಿದ್ದುವು. ಬೇರೊಂದುಕಡೆ ಮದಿಸಿದ ದುಂಬಿಗಳು ಝೇಂಕರಿಸುತ್ತಿದ್ದುವು.

೨೮. ಒಂದೆಡೆಯಲ್ಲಿ ಮದೋನ್ಮತ್ತೆಯರಾದ ದೇವತಾಸ್ತ್ರೀಯರು ವಿಹರಿಸುತ್ತ ಅಂದವಾದ ಹೂಗಳ ನರುಗಂಪನ್ನು ಸವಿಯುತ್ತಿದ್ದರು. ಇನ್ನೊಂದೆಡೆಯಲ್ಲಿ ಮಾವಿನಮರಗಳು ದಟ್ಟವಾಗಿ ಹೂ ಬಿಟ್ಟಿದ್ದುವು. ತಿಲಕವೃಕ್ಷಗಳಿಗೆ ಬಳ್ಳಿಗಳು ಹಬ್ಬಿಕೊಂಡಿದ್ದುವು.

೨೯. ವಿದ್ಯಾಧರರು, ಸಿದ್ಧರು ಮತ್ತು ಚಾರಣರು ಸೊಗಸಾಗಿ ಹಾಡುತ್ತಿದ್ದರು. ಅಪ್ಸರಸ್ತ್ರೀಯರು ಯೌವನದ ಮದದಿಂದ ನರ್ತಿಸುತ್ತಿದ್ದರು. ಬಗೆಬಗೆಯ ಹಕ್ಕಿಗಳು ಸಂತೋಷದಿಂದ ಮೈಮರೆತಿದ್ದುವು. ಹಾರೀತಪಕ್ಷಿಗಳು ಗುಂಪುಕಟ್ಟಿಕೊಂಡು ಸೊಕ್ಕಿನಿಂದ ಹಾಡುತ್ತಿದ್ದುವು.

ಮೃಗೇಂದ್ರನಾದಾಕುಲಸತ್ತ್ವಮಾನಸೈಃ
ಕ್ವಚಿತ್ಕ್ವಚಿದ್ದ್ವಂದ್ವಕದಂಬಕೈರ್ಮೃಗೈಃ ।
ಪ್ರಫುಲ್ಲನಾನಾವಿಧಚಾರುಪಂಕಜೈಃ
ಸರಸ್ತಟಾಕೈರುಪಶೋಭಿತಂ ಕ್ವಚಿತ್ ॥೩೦॥

ನಿಬಿಡನಿಚುಲನೀಲಂ ನೀಲಕಂಠಾಭಿರಾಮಂ
ಮದಮುದಿತವಿಹಂಗವ್ರಾತನಾದಾಭಿರಾಮಂ ।
ಕುಸುಮಿತತರುಶಾಖಾಲೀನಮತ್ತದ್ವಿರೇಫಂ
ನವಕಿಸಲಯಶೋಭಾಶೋಭಿತಪ್ರಾಂತಶಾಖಂ ॥೩೧॥

ಕ್ವಚಿಚ್ಚ ದಂತಿಕ್ಷತಚಾರುವೀರುಧಂ
ಕ್ವಚಿಲ್ಲತಾಲಿಂಗಿತಚಾರುವೃಕ್ಷಕಂ ।
ಕ್ವಚಿದ್ವಿಲಾಸಾಲಸಗಾಮಿಬರ್ಹಿಣಂ
ನಿಷೇವಿತಂ ಕಿಂಪುರುಷವ್ರಜೈಃ ಕ್ವಚಿತ್ ॥೩೨॥

---

೩೦. ಒಂದು ಕಡೆ ಸಿಂಹದ ಆರ್ಭಟದಿಂದ ವನಜಂತುಗಳು ಮನಸ್ಸಿನಲ್ಲಿ ಗಾಬರಿಗೊಂಡುವು. ಇನ್ನೊಂದು ಕಡೆ ಹೆಣ್ಣು ಮತ್ತು ಗಂಡುಜಿಂಕೆಗಳು ಜೋಡಿ ಜೋಡಿಯಾಗಿ ಆಡುತ್ತಿದ್ದುವು. ಮತ್ತೊಂದು ಕಡೆ ಸರೋವರಗಳಲ್ಲಿಯೂ ಕೆರೆಗಳ ಲ್ಲಿಯೂ ಬಗೆಬಗೆಯ ತಾವರೆಹೂಗಳು ಅರಳಿದ್ದುವು.

೩೧. ಒತ್ತಾಗಿ ಬೆಳೆದ ನೀರಹಲಸುಮರಗಳಿಂದ ಆ ವನವು ನೀಲವರ್ಣ ವಾಗಿತ್ತು. ನವಿಲುಗಳಿಂದ ಸುಂದರವಾಗಿ ಕಾಣುತ್ತಿತ್ತು. ಮದವೇರಿ ಸಂತೋಷ ದಿಂದ ಹಾಡುವ ಪಕ್ಷಿಗಳಿಂದ ಮನೋಹರವಾಗಿತ್ತು. ಹೂಗಳಿಂದ ತುಂಬಿದ ಮರದ ಕೊಂಬೆಗಳಲ್ಲಿ ಸೊಕ್ಕೇರಿದ ದುಂಬಿಗಳು ಅಡಗಿಕೊಂಡಿದ್ದುವು. ಮರಗಳ ತುದಿ ಗೊಂಬೆಗಳು ಹೊಸಚಿಗುರಿನಿಂದ ಅಂದವಾಗಿ ಕಾಣುತ್ತಿದ್ದುವು.

೩೨. ಒಂದೆಡೆಯಲ್ಲಿ ಆನೆಗಳು ಕೋಮಲವಾಗಿ ಬೆಳೆದಿದ್ದ ಲತೆಗಳನ್ನು ಕಿತ್ತುಹಾಕಿದ್ದುವು. ಇನ್ನೊಂದೆಡೆಯಲ್ಲಿ ಬಳ್ಳಿಗಳು ಹಬ್ಬಿಕೊಂಡು ಮರಗಳು ಸುಂದರ ವಾಗಿದ್ದುವು. ಮತ್ತೊಂದೆಡೆಯಲ್ಲಿ ನವಿಲುಗಳು ವಿಲಾಸದಿಂದ ಗಂಭೀರವಾಗಿ ನಡೆಯುತ್ತಿದ್ದುವು. ಬೇರೊಂದೆಡೆಯಲ್ಲಿ ಕಿಂಪುರುಷರು ಸ್ವೇಚ್ಛೆಯಿಂದ ವಿಹರಿಸು ತ್ತಿದ್ದರು.

ಪಾರಾವತಧ್ವನಿವಿಕೂಜಿತಚಾರುಶೃಂಗೈ
ರಭ್ರಂಕಷೈಃ ಸಿತಮನೋಹರಚಾರುರೂಪೈಃ ।
ಆಕೀರ್ಣಪುಷ್ಪನಿಕುರುಂಬವಿಮುಕ್ತಹಾಸೈ
ರ್ವಿಭ್ರಾಜಿತಂ ತ್ರಿದಶದೇವಕುಲೈರನೇಕೈಃ ||೩೩||

ಫುಲ್ಲೋತ್ಪಲಾಗುರುಸಹಸ್ರವಿತಾನಯುಕ್ತೈ
ಸ್ತೋಯಾಶಯೈಃ ಸಮನುಶೋಭಿತದೇವಮಾರ್ಗಂ ।
ಮಾರ್ಗಾಂತರಾಗಲಿತಪುಷ್ಪವಿಚಿತ್ರಭಕ್ತಿ
ಸಂಬದ್ಧಗುಲ್ಮವಿಟಪೈರ್ವಿಹಗೈರುಪೇತಂ ||೩೪||

ಶೃಂಗಾಗ್ರೈರ್ನೀಲಪುಷ್ಪೈಃ ಸ್ತಬಕಭರನತಪ್ರಾಂತಶಾಖೈರಶೋಕೈಃ
ಮತ್ತಾಲಿವ್ರಾತಗೀತಶ್ರುತಿಸುಖಜನನೈರ್ಭಾಸಿತಾಕ್ಷೈರ್ಮನೋಜ್ಞೈಃ ।

---

೩೩. ಮೇಘಮಂಡಲವನ್ನು ಮುಟ್ಟುತ್ತ ಬೆಳ್ಳಗೆ ಮನೋಹರವಾಗಿ ಕಂಗೊಳಿಸುವ ಗಿರಿಶಿಖರಗಳಲ್ಲಿ ಪಾರಿವಾಳಗಳು ಇಂಪಾಗಿ ಕೂಗುತ್ತಿದ್ದುವು. ಕಿಕ್ಕಿರಿಯುವಂತೆ ತುಂಬಿದ್ದ ಹೂ ಗೊಂಚಲುಗಳಿಂದ ಆ ಶಿಖರಗಳು ನಗುತ್ತಿವೆಯೋ ಎಂಬಂತೆ ತೋರುತ್ತಿದ್ದುವು. ವಿವಿಧಗಣಗಳಿಗೆ ಸೇರಿದ ದೇವತೆಗಳು ಲೆಕ್ಕವಿಲ್ಲದಷ್ಟು ಮಂದಿ ಅಲ್ಲಿ ನೆರೆದು ಕ್ರೀಡಿಸುತ್ತಿದ್ದರು.

೩೪. ಅಗಿಲುಮರಗಳು ಸಾವಿರಲೆಕ್ಕದಲ್ಲಿ ಗುಂಪುಗುಂಪಾಗಿದ್ದುವು. ಜಲಾಶಯಗಳಲ್ಲಿ ನೈದಿಲೆಗಳು ಅರಳಿದ್ದುವು; ಆಕಾಶವು ಮನೋಹರವಾಗಿ ಪ್ರತಿಬಿಂಬಿಸಿದ್ದಿತು. ದಾರಿಯಲ್ಲಿ ಅಲ್ಲಲ್ಲಿ ಪೊದೆಗಳಿಂದಲೂ ಗಿಡಗಳಿಂದಲೂ ಹೂಗಳು ಉದುರಿದ್ದುವು. ಅವು ನೆಲದ ಮೇಲೆ ಎಳೆದ ಬಣ್ಣಬಣ್ಣದ ಪಟ್ಟೆಗಳಂತೆ ಕಾಣುತ್ತಿದ್ದುವು. ಆ ಗಿಡಮರಗಳಲ್ಲಿ ಪಕ್ಷಿಗಳು ವಾಸಿಸುತ್ತಿದ್ದುವು.

೩೫. ನೀಲಪುಷ್ಪಗಳು ಶಿಖರದ ತುದಿಯಲ್ಲಿ ಕಂಗೊಳಿಸುತ್ತಿದ್ದುವು. ಅಶೋಕವೃಕ್ಷಗಳ ತುದಿಗೊಂಬೆಗಳು ಹೂಗೊಂಚಲುಗಳ ಭಾರದಿಂದ ಬಗ್ಗಿದ್ದುವು. ಮದಿಸಿದ ದುಂಬಿಗಳು ಅವುಗಳ ಮೇಲೆ ಹಾರಾಡುತ್ತ ಕಿವಿಗೆ ಹಿತವಾಗುವಂತೆ ಇಂಪಾಗಿ ಹಾಡುತ್ತಿದ್ದುವು. ಅವು ಸುಂದರವಾಗಿ ನೇತ್ರಾನಂದವನ್ನುಂಟುಮಾಡು

ರಾತ್ರೌ ಚಂದ್ರಸ್ಯ ಭಾಸಾ ಕುಸುಮಿತತಿಲಕೈರೇಕತಾಂ ಸಂಪ್ರಯಾತಂ
ಛಾಯಾಸುಪ್ತಪ್ರಬುದ್ಧಸ್ಥಿತಹರಿಣಕುಲಾಲುಪ್ತದರ್ಭಾಂಕುರಾಗ್ರಂ ॥೩೫॥

ಹಂಸಾನಾಂ ಪಕ್ಷಪಾತಪ್ರಚಲಿತಕಮಲಸ್ವಚ್ಛವಿಸ್ತೀರ್ಣತೋಯಂ
ತೋಯಾನಾಂ ತೀರಜಾತಪ್ರವಿಕಚಕದಲೀವಾಟನೃತ್ಯನ್ಮಯೂರಂ ।
ಮಾಯೂರೈಃ ಪಕ್ಷಚಂದ್ರೈಃ ಕ್ವಚಿದಪಿ ಪತಿತೈ ರಂಜಿತಕ್ಷ್ಮಾಪ್ರದೇಶಂ
ದೇಶೇ ದೇಶೇ ವಿಕೀರ್ಣಪ್ರಮುದಿತವಿಲಸನ್ಮತ್ತಹಾರೀತವೃಂದಂ ॥೩೬॥

ಸಾರಂಗೈಃ ಕ್ವಚಿದಪಿ ಸೇವಿತಪ್ರದೇಶಂ
ಸಂಛನ್ನಂ ಕುಸುಮಚಯೈಃ ಕ್ವಚಿದ್ವಿಚಿತ್ರೈಃ ।
ಹೃಷ್ಟಾಭಿಃ ಕ್ವಚಿದಪಿ ಕಿನ್ನರಾಂಗನಾಭಿಃ
ಕ್ಷೀಬಾಭಿಃ ಸಮಧುರಗೀತವೃಕ್ಷಖಂಡಂ ॥೩೭॥

---

ತ್ತಿದ್ದುವು. ಹೂಗಳಿಂದ ತುಂಬಿದ ತಿಲಕವೃಕ್ಷಗಳ ಮೇಲೆ ರಾತ್ರಿಯಲ್ಲಿ ಚಂದ್ರನ ಬೆಳದಿಂಗಳು ಬಿದ್ದರೆ ಆವೆರಡು ಕಾಂತಿಗಳಿಗೂ ಭೇದವೇ ತೋರಿಬರುತ್ತಿರಲಿಲ್ಲ. ನೆರಳಿನಲ್ಲಿ ಹಿಂಡುಹಿಂಡಾಗಿ ಮಲಗಿದ್ದ ಜಿಂಕೆಗಳು ನಿದ್ದೆಯಿಂದೆದ್ದು ದರ್ಭೆಯ ತುದಿ ಮೊಳಕೆಗಳನ್ನು ಕಚ್ಚಿ ತಿನ್ನುತ್ತಿದ್ದುವು.

೩೬. ಹಂಸಗಳು ತಮ್ಮ ರೆಕ್ಕೆಗಳನ್ನು ಬಡಿಯಲು ವಿಶಾಲವಾದ ತಿಳಿನೀರಿನ ಜಲಾಶಯಗಳಲ್ಲಿ ಬೆಳೆದಿದ್ದ ಕಮಲಗಳು ಅಲುಗಾಡುತ್ತಿದ್ದುವು. ಸರೋವರಗಳ ತೀರದ ಬಾಳೆಯ ತೋಟಗಳಲ್ಲಿ ನವಿಲುಗಳು ಕುಣಿಯುತ್ತಿದ್ದುವು. ಅವುಗಳ ಗರಿಗಳು ಅಲ್ಲಲ್ಲಿ ಉದುರಿ ಭೂಭಾಗವು ಸುಂದರವಾಗಿ ಕಾಣುತ್ತಿತ್ತು. ಒಂದೊಂದು ಕಡೆಯಲ್ಲಿಯೂ ಚೆಲುವಾದ ಹಾರೀತಪಕ್ಷಿಗಳು ಮದವೇರಿ ಸಂತೋಷದಿಂದ ಗುಂಪು ಗುಂಪಾಗಿ ಕುಳಿತಿದ್ದುವು.

೩೭. ಒಂದುಕಡೆ ಜಿಂಕೆಗಳು ಓಡಾಡುತ್ತಿದ್ದುವು. ಇನ್ನೊಂದುಕಡೆ ಚಿತ್ರವಿಚಿತ್ರವಾದ ಹೂಗಳು ಗಿಡವೇ ಕಾಣದಂತೆ ಗೊಂಚಲು ಗೊಂಚಲಾಗಿ ಅರಳಿದ್ದುವು. ಮತ್ತೊಂದುಕಡೆ ಮದೋನ್ಮತ್ತೆಯರಾದ ಕಿನ್ನರ ಸ್ತ್ರೀಯರು ಮರಗಳ ನೆರಳಿನಲ್ಲಿ ಕುಳಿತು ಮಧುರವಾಗಿ ಹಾಡುತ್ತಿದ್ದರು.

ಸಂಸ್ಪೃಷ್ಟಂ ಕ್ವಚಿದುಪಲಿಪ್ತಕೀರ್ಣಪುಷ್ಪೈ
  ರಾವಾಸೈಃ ಪರಿವೃತಪಾದಪಂ ಮುನೀನಾಂ ।
ಆಮೂಲಾತ್ಫಲನಿಚಿತೈಃ ಕ್ವಚಿದ್ವಿಶಾಲೈ
  ರುತ್ತುಂಗೈಃ ಪನಸಮಹೀರುಹೈರುಪೇತಂ ||೩೮||

ಫುಲ್ಲಾತಿಮುಕ್ತಕಲತಾಗೃಹಸಿದ್ಧಲೀಲಂ
  ಸಿದ್ಧಾಂಗನಾಕನಕನೂಪುರನಾದರಮ್ಯಂ ।
ರಮ್ಯಪ್ರಿಯಂಗುತರುಮಂಜರಿಸಕ್ತಭೃಂಗಂ
  ಭೃಂಗಾವಲೀಸ್ಖಲಿತಚಾರುಕದಂಬಪುಷ್ಪಂ ||೩೯||

ಪುಷ್ಪೋತ್ಕರಾನಿಲವಿಘೂರ್ಣಿತಪಾದಪಾಗ್ರ
  ಮಗ್ರೇಸರೈರ್ಭುವಿ ನಿಪಾತಿತವಂಶಗುಲ್ಮಂ ।
ಗುಲ್ಮಾಂತರಪ್ರಭೃತಿಲೀನಮೃಗೀಸಮೂಹಂ
  ಸಂಮುಹ್ಯತಾಂ ತನುಭೃತಾಮಪವರ್ಗದಾತೃ ||೪೦||

---

೩೮. ಒಂದೆಡೆಯಲ್ಲಿ ಮರಗಳ ತೋಪಿನ ನಡುವೆ ಮುನಿಗಳು ತಮ್ಮ ಪರ್ಣಶಾಲೆಗಳನ್ನು ಸಾರಿಸಿ ಪುಷ್ಪಬಲಿಗಳನ್ನು ಹಾಕಿದ್ದರು. ಮತ್ತೊಂದೆಡೆಯಲ್ಲಿ ವಿಶಾಲವಾಗಿಯೂ ಉನ್ನತವಾಗಿಯೂ ಬೆಳೆದಿದ್ದ ಹಲಸಿನ ಮರಗಳು ಬುಡದಿಂದ ತುದಿಯವರೆಗೆ ಹಣ್ಣು ಬಿಟ್ಟಿದ್ದುವು.

೩೯. ಹೂಬಿಟ್ಟ ಕಾಡುಮಲ್ಲಿಗೆಯ ಲತಾಗೃಹದಲ್ಲಿ ಸಿದ್ಧರು ಕ್ರೀಡಿಸುತ್ತಿದ್ದರು. ಸಿದ್ಧಾಂಗನೆಯರ ಬಂಗಾರದ ಕಾಲಂದಿಗೆಗಳು ಇಂಪಾಗಿ ಧ್ವನಿಮಾಡುತ್ತಿದ್ದುವು. ರಮ್ಯವಾದ ಪ್ರಿಯಂಗುವೃಕ್ಷದ ಹೂಗೊಂಚಲಿನಲ್ಲಿ ದುಂಬಿಗಳು ಕದಲದೆ ಕುಳಿತಿದ್ದುವು. ಕದಂಬ ಪುಷ್ಪಗಳು ಭ್ರಮರಗಳ ಭಾರವನ್ನು ತಾಳದೆ ತೊಟ್ಟಿನಿಂದ ಜಾರಿ ಉದುರುತ್ತಿದ್ದುವು.

೪೦. ಹೂಗಳಿಂದ ಕಿಕ್ಕಿರಿಯುವ ಮರದ ತುದಿಗೊಂಬೆಗಳು ಗಾಳಿಗೆ ಅಲ್ಲಾಡುತ್ತಿದ್ದುವು. ಸಲಗಗಳು ಬಿದಿರಿನ ಮೊಳಕೆಗಳನ್ನು ಕಿತ್ತು ನೆಲದ ಮೇಲೆ ಎಸೆದಿದ್ದುವು. ಹೆಣ್ಣುಜಿಂಕೆಗಳು ಪೊದೆಗಳ ಒಳಗೆ ಅವಿತುಕೊಂಡಿದ್ದುವು. ಆ ಪುಣ್ಯಾರಣ್ಯದಲ್ಲಿ ದೇಹತ್ಯಾಗಮಾಡುವ ಪ್ರಾಣಿಗಳಿಗೆ ಮೋಕ್ಷವು ಸಿಕ್ಕುತ್ತಿತ್ತು.

ಚಂದ್ರಾಂಶುಜಾಲಧವಲೈಸ್ತಿಲಕೈರ್ಮನೋಜ್ಞೈಃ
ಸಿಂದೂರಕುಂಕುಮಕುಸುಂಭನಿಭೈರಶೋಕೈಃ ।
ಚಾಮೀಕರಪ್ರತಿಸಮೈರಥ ಕರ್ಣಿಕಾರೈಃ
ಫುಲ್ಲಾರವಿಂದರಚಿತಂ ಸುವಿಶಾಲಶಾಖೈಃ ॥೪೧॥

ಕ್ವಚಿದ್ರಜತಪರ್ಣಾಭೈಃ ಕ್ವಚಿದ್ವಿದ್ರುಮಸಂನಿಭೈಃ ।
ಕ್ವಚಿತ್ಕಾಂಚನಸಂಕಾಶೈಃ ಪುಷ್ಪೈರಾಚಿತಭೂತಲಂ ॥೪೨॥

ಪುನ್ನಾಗೇಷು ದ್ವಿಜಗಣವಿರುತಂ
ರಕ್ತಾಶೋಕಸ್ತಬಕಭರನಮಿತಂ ।
ರಮ್ಯೋಪಾಂತಶ್ರಮಹರಪವನಂ
ಫುಲ್ಲಾಬ್ಜೇಷು ಭ್ರಮರವಿಲಸಿತಂ ॥೪೩॥

---

೪೧. ತಿಲಕಪುಷ್ಪಗಳು ಚಂದ್ರನ ಕಿರಣಗಳಂತೆ ಬೆಳ್ಳಗೆ ಮನೋಹರವಾಗಿದ್ದುವು. ಅಶೋಕಪುಷ್ಪಗಳು ಸಿಂದೂರ, ಕುಂಕುಮಕೇಸರಿ, ಕುಸುಂಭಪುಷ್ಪ ಇವುಗಳನ್ನು ಹೋಲುತ್ತಿದ್ದುವು. ಬೆಟ್ಟದಾವರೆಗಳು ಬಣ್ಣದಲ್ಲಿ ಬಂಗಾರದಂತಿದ್ದುವು· ದೊಡ್ಡ ದೊಡ್ಡ ಆ ಮರದ ಕೊಂಬೆಗಳು ಅರಳಿದ ತಾವರೆಗಳಿಂದಲೇ ರಚಿತವಾಗಿರುವುವೋ ಎನ್ನುವಂತೆ ತೋರುತ್ತಿದ್ದುವು.

೪೨. ನೆಲದ ಮೇಲೆ ಬಗೆಬಗೆಯ ಹೂಗಳು ಬಿದ್ದಿದ್ದುವು. ಒಂದುಕಡೆ ಅವು ಬೆಳ್ಳಿಯ ಎಸಳಿನಂತಿದ್ದುವು. ಇನ್ನೊಂದುಕಡೆ ಹವಳದಂತಿದ್ದುವು. ಮತ್ತೊಂದು ಕಡೆ ಚಿನ್ನದಂತಿದ್ದುವು.

೪೩. ಪುನ್ನಾಗವೃಕ್ಷಗಳಲ್ಲಿ ಹಕ್ಕಿಗಳು ಗುಂಪುಗುಂಪಾಗಿ ಕುಳಿತು ಕೂಗುತ್ತಿದ್ದುವು. ರಕ್ತಾಶೋಕಗಳು ಹೂಗೊಂಚಲ ಭಾರದಿಂದ ಬಾಗಿದ್ದುವು. ನೆರೆಹೊರೆಯ ರಮಣೀಯವಾದ ಪ್ರದೇಶಗಳಿಂದ ಗಾಳಿಯು ಬೀಸಿ ಶ್ರಮವನ್ನು ಪರಿಹರಿಸುತ್ತಿತ್ತು, ಅರಳಿದ ತಾವರೆಗಳಲ್ಲಿ ದುಂಬಿಗಳು ಮಕರಂದವನ್ನು ಪಾನ ಮಾಡುತ್ತ ಕಂಗೊಳಿಸುತ್ತಿದ್ದುವು.

ಸಕಲಭುವನಭರ್ತಾ ಲೋಕನಾಥಸ್ತದಾನೀಂ
ತುಹಿನಶಿಖರಿಪುತ್ರ್ಯಾಃ ಸಾರ್ಧಮಿಷ್ಟೈರ್ಗಣೇಶೈಃ ।
ವಿವಿಧತರುವಿಶಾಲಂ ಮತ್ತಹೃಷ್ಟಾನ್ಯಪುಷ್ಟಂ
ಉಪವನತರುರಮ್ಯಂ ದರ್ಶಯಾಮಾಸ ದೇವ್ಯಾಃ ॥೪೪॥

॥ ದೇವ್ಯುವಾಚ ॥

ಉದ್ಯಾನಂ ದರ್ಶಿತಂ ದೇವ ಶೋಭಯಾ ಪರಯಾ ಯುತಂ ।
ಕ್ಷೇತ್ರಸ್ಯ ತು ಗುಣಾನ್ ಸರ್ವಾನ್ ಪುನರ್ವಕ್ತುಮಿಹಾರ್ಹಸಿ ॥೪೫॥

ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಮವಿಮುಕ್ತಸ್ಯ ತತ್ತಥಾ ।
ಶ್ರುತ್ವಾಪಿ ಹಿ ನ ಮೇ ತೃಪ್ತಿರತೋ ಭೂಯೋ ವದಸ್ವ ಮೇ ॥೪೬॥

೪೪. ಆಗ ಸಕಲಲೋಕಗಳ ಅಧಿಪತಿಯಾದ ಮಹಾದೇವನು ಪರ್ವತ ರಾಜನ ಪುತ್ರಿಯಾದ ಪಾರ್ವತೀದೇವಿಗೂ ತನ್ನ ಪ್ರೀತಿಪಾತ್ರರಾದ ಗಣಾಧಿಪತಿಗಳಿಗೂ ಮನೋಹರವಾದ ಆ ಉಪವನವನ್ನು ತೋರಿಸಿದನು. ಅದು ಬಗೆಬಗೆಯ ಮರಗಳಿಂದ ತುಂಬಿ ವಿಶಾಲವಾಗಿದ್ದಿತು. ಮದಹತ್ತಿದ ಕೋಗಿಲೆಗಳು ಸಂತೋಷದಿಂದ ಅಲ್ಲಿ ಕೂಗುತ್ತಿದ್ದುವು.

೪೫. ಪಾರ್ವತೀದೇವಿ ಹೇಳಿದಳು.—ದೇವಾ, ಬಹು ಸುಂದರವಾದ ಈ ಉದ್ಯಾನವನವನ್ನು ತೋರಿಸಿದೆ. ಇನ್ನು ಈ ಕ್ಷೇತ್ರದ ಗುಣಗಳೆಲ್ಲವನ್ನೂ ವರ್ಣಿಸಿ ಹೇಳು.

೪೬. ಅವಿಮುಕ್ತವೆಂದು ಪ್ರಸಿದ್ಧವಾದ ಈ ಕ್ಷೇತ್ರದ ಮಾಹಾತ್ಮ್ಯವನ್ನು ಕೇಳಿದ್ದರೂ ಕೂಡ ನನಗೆ ತೃಪ್ತಿ ಹುಟ್ಟದು. ಆದುದರಿಂದ ಮರಳಿ ನನಗೆ ಹೇಳು. (ಶಿವನ ಸಾನ್ನಿಧ್ಯವು ಎಂದಿಗೂ ತಪ್ಪದಿರುವ ಕಾರಣ ಕಾಶೀಕ್ಷೇತ್ರಕ್ಕೆ ಅವಿಮುಕ್ತವೆಂಬ ಪ್ರಸಿದ್ಧಿ ಬಂದಿದೆ).

|| ದೇವದೇವ ಉವಾಚ ||

ಇದಂ ಗುಹ್ಯತಮಂ ಕ್ಷೇತ್ರಂ ಸದಾ ವಾರಾಣಸೀ ಮಮ |
ಸರ್ವೇಷಾಮೇವ ಭೂತಾನಾಂ ಹೇತುರ್ಮೋಕ್ಷಸ್ಯ ಸರ್ವದಾ ||೪೭||

ಅಸ್ಮಿನ್ ಸಿದ್ಧಾಃ ಸದಾ ದೇವಿ ಮದೀಯಂ ವ್ರತಮಾಸ್ಥಿತಾಃ |
ನಾನಾಲಿಂಗಧರಾ ನಿತ್ಯಂ ಮಮ ಲೋಕಾಭಿಕಾಂಕ್ಷಿಣಃ ||೪೮||

ಅಭ್ಯಸ್ಯಂತಿ ಪರಂ ಯೋಗಂ ಯುಕ್ತಾತ್ಮಾನೋ ಜಿತೇಂದ್ರಿಯಾಃ |
ನಾನಾವೃಕ್ಷಸಮಾಕೀರ್ಣೇ ನಾನಾವಿಹಗಕೂಜಿತೇ ||೪೯||

ಕಮಲೋತ್ಪಲಪುಷ್ಪಾಢ್ಯೈಃ ಸರೋಭಿಃ ಸಮಲಂಕೃತೇ |
ಅಪ್ಸರೋಗಣಗಂಧರ್ವೈಃ ಸದಾ ಸಂಸೇವಿತೇ ಶುಭೇ ||೫೦||

ರೋಚತೇ ಮೇ ಸದಾ ವಾಸೋ ಯೇನ ಕಾರ್ಯೇಣ ತಚ್ಛೃಣು |
ಮನ್ಮನಾ ಮಮ ಭಕ್ತಶ್ಚ ಮಯಿ ಸರ್ವಾರ್ಪಿತಕ್ರಿಯಃ ||೫೧||

---

೪೭. ಮಹಾದೇವನು ಹೇಳಿದನು.—ಈ ವಾರಾಣಸೀಕ್ಷೇತ್ರವು ಅತ್ಯಂತ ಪವಿತ್ರವಾದುದು. ಇಲ್ಲಿ ಯಾವಾಗಲೂ ನನ್ನ ಸಾನ್ನಿಧ್ಯವಿರುವುದು. ಸಕಲ ಜಂತುಗಳಿಗೂ ಇದು ಮೋಕ್ಷಪ್ರದವಾಗಿರುವುದು.

೪೮. ಓ ದೇವೀ, ನನ್ನ ಲೋಕವನ್ನು ಸೇರಬೇಕೆಂಬ ಅಭಿಲಾಷೆಯಿಂದ ಸಿದ್ಧರು ನಾನಾ ವಿಧವಾದ ಚಿಹ್ನೆಗಳನ್ನು ಧರಿಸಿ ಈ ಕ್ಷೇತ್ರದಲ್ಲಿ ಮಾಹೇಶ್ವರವ್ರತವನ್ನು ಅನುಷ್ಠಾನ ಮಾಡುತ್ತಿರುವರು.

೪೯-೫೦. ಈ ಶುಭಕ್ಷೇತ್ರದಲ್ಲಿ ನಾನಾ ವಿಧವಾದ ವೃಕ್ಷಗಳು ಒತ್ತಾಗಿ ಬೆಳೆದಿವೆ. ಹಲವು ಬಗೆಯ ಪಕ್ಷಿಗಳು ಮಧುರನಾದದಿಂದ ಮನೋಹರವಾಗಿ ಕೂಗುತ್ತಿವೆ. ತಾವರೆಗಳೂ ನೈದಿಲೆಗಳೂ ಅರಳಿರುವ ಸರೋವರಗಳು ಕಂಗೊಳಿಸುತ್ತಿವೆ. ಅಪ್ಸರಸ್ತ್ರೀಯರೂ ಗಂಧರ್ವರೂ ಕ್ರೀಡಿಸುತ್ತಿದ್ದಾರೆ. ಸಿದ್ಧರು ಮನಸ್ಸನ್ನು ಸ್ಥಿರಗೊಳಿಸಿ, ಇಂದ್ರಿಯಗಳನ್ನು ವಶಪಡಿಸಿಕೊಂಡು ಯೋಗವನ್ನು ಅಭ್ಯಾಸಮಾಡುತ್ತಿರುವರು.

೫೧. ಇಲ್ಲಿ ವಾಸಿಸುವಾತನು ಏನುಮಾಡುತ್ತಿದ್ದರೆ ನನಗೆ ಇಷ್ಟವೆಂಬುದನ್ನು ಹೇಳುತ್ತೇನೆ ಕೇಳು. ನನ್ನಲ್ಲಿ ಮನಸ್ಸಿಟ್ಟು, ನನ್ನ ಭಕ್ತನಾಗಿ, ಸಮಸ್ತಕರ್ಮಗಳನ್ನೂ ನನ್ನಲ್ಲೇ ಅರ್ಪಿಸಬೇಕು.

**ಯಥಾ ಮೋಕ್ಷಮಿಹಾಪ್ನೋತಿ ಹ್ಯನ್ಯತ್ರ ನ ತಥಾ ಕ್ವಚಿತ್ ।**
**ಏತನ್ಮಮ ಪುರಂ ದಿವ್ಯಂ ಗುಹ್ಯಾದ್ಗುಹ್ಯತರಂ ಮಹತ್ ॥೫೨॥**

**ಬ್ರಹ್ಮಾದಯಸ್ತು ಜಾನಂತಿ ಯೇಽಪಿ ಸಿದ್ಧಾ ಮುಮುಕ್ಷವಃ ।**
**ಅತಃ ಪ್ರಿಯತಮಂ ಕ್ಷೇತ್ರಂ ತಸ್ಮಾಚ್ಚೇಹ ರತಿರ್ಮಮ ॥೫೩॥**

**ವಿಮುಕ್ತಂ ನ ಮಯಾ ಯಸ್ಮಾನ್ಮೋಕ್ಷ್ಯತೇ ವಾ ಕದಾಚನ ।**
**ಮಹತ್ಕ್ಷೇತ್ರಮಿದಂ ತಸ್ಮಾದವಿಮುಕ್ತಮಿದಂ ಸ್ಮೃತಂ ॥೫೪॥**

**ನೈಮಿಷೇಽಥ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ।**
**ಸ್ನಾನಾತ್ಸಂಸೇವಿತಾದ್ವಾಪಿ ನ ಮೋಕ್ಷಃ ಪ್ರಾಪ್ಯತೇ ಯತಃ ॥೫೫॥**

**ಇಹ ಸಂಪ್ರಾಪ್ಯತೇ ಯೇನ ತತ ಏತದ್ವಿಶಿಷ್ಯತೇ ।**
**ಪ್ರಯಾಗೇ ಚ ಭವೇನ್ಮೋಕ್ಷ ಇಹ ವಾ ಮತ್ಪರಿಗ್ರಹಾತ್ ॥೫೬॥**

---

೫೨. ಮೋಕ್ಷವು ಇಲ್ಲಿ ಲಭಿಸುವಷ್ಟು ಸುಲಭವಾಗಿ ಮತ್ತೆಲ್ಲಿಯೂ ಲಭಿಸದು. ಈ ದಿವ್ಯನಗರವು ನನ್ನದು. ಶ್ರೇಷ್ಠವಾದುದೆಲ್ಲಕ್ಕಿಂತಲೂ ಅತಿಶ್ರೇಷ್ಠವಾದುದು.

೫೩. ಬ್ರಹ್ಮನೇ ಮೊದಲಾದ ದೇವತೆಗಳಿಗೂ ಮೋಕ್ಷಾಭಿಲಾಷಿಗಳಾದ ಸಿದ್ಧಪುರುಷರಿಗೂ ಈ ವಿಷಯವು ಗೊತ್ತು. ಆದುದರಿಂದ ಇದು ನನಗೆ ಬಹು ಪ್ರಿಯವಾದ ಕ್ಷೇತ್ರ. ನನಗೆ ಇದರಲ್ಲಿ ಬಹಳ ಆಸಕ್ತಿ.

೫೪. ಇದನ್ನು ನಾನು ಹಿಂದೆ ಎಂದೂ ಬಿಟ್ಟಿರಲಿಲ್ಲ. ಮುಂದೆಯೂ ಕೂಡ ಯಾವಾಗಲೂ ಬಿಡುವುದಿಲ್ಲ. ಆದುದರಿಂದ ಈ ಮಹಾಕ್ಷೇತ್ರಕ್ಕೆ ಅವಿಮುಕ್ತವೆಂಬ ಪ್ರಖ್ಯಾತಿ ಬಂದಿದೆ.

೫೫-೫೬. ನೈಮಿಶ, ಕುರುಕ್ಷೇತ್ರ, ಗಂಗಾದ್ವಾರ, ಪುಷ್ಕರ ಈ ಕ್ಷೇತ್ರಗಳಲ್ಲಿ ಸ್ನಾನಮಾಡಲಿ, ಸೇವೆ ನಡೆಸಲಿ ಇಷ್ಟು ಶೀಘ್ರವಾಗಿ ಮೋಕ್ಷವು ದೊರೆಯದು. ಇಲ್ಲಾದರೋ ಅದು ಕ್ಷಿಪ್ರದಲ್ಲೇ ಲಭಿಸುತ್ತದೆ. ಆದಕಾರಣ ಈ ಅವಿಮುಕ್ತಕ್ಷೇತ್ರವು ಉಳಿದವುಗಳಿಗಿಂತ ಶ್ರೇಷ್ಠವೆನಿಸಿದೆ. ನನ್ನಿಂದ ಅಂಗೀಕೃತವಾಗಿರುವ ಕಾರಣ ಪ್ರಯಾಗವೂ ಕೂಡ ಇದರಂತೆಯೇ ಮೋಕ್ಷಪ್ರದವಾದ ಕ್ಷೇತ್ರವೆಂದು ಪ್ರಖ್ಯಾತವಾಗಿದೆ.

ಪ್ರಯಾಗಾದಪಿ ತೀರ್ಥಾಗ್ರ್ಯಾದಿದಮೇವ ಮಹತ್ಸ್ಮೃತಂ ।
ಜೈಗಿಷವ್ಯಃ ಪರಾಂ ಸಿದ್ಧಿಂ ಯೋಗತಃ ಸುಮಹಾತಪಾಃ ॥೫೭॥

ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಾದ್ಭಕ್ತ್ಯಾ ಚ ಮಮ ಭಾವನಾತ್ ।
ಜೈಗಿಷವ್ಯೋ ಮಹಾಶ್ರೇಷ್ಠೋ ಯೋಗಿನಾಂ ಸ್ಥಾನಮಿಷ್ಯತೇ ॥೫೮॥

ಧ್ಯಾಯತಸ್ತತ್ರ ಮಾಂ ನಿತ್ಯಂ ಯೋಗಾಗ್ನಿರ್ದೀಪ್ಯತೇ ಭೃಶಂ ।
ಕೈವಲ್ಯಂ ಪರಮಂ ಯಾತಿ ದೇವಾನಾಮಪಿ ದುರ್ಲಭಂ । ॥೫೯॥

ಅವ್ಯಕ್ತಲಿಂಗೈರ್ಮುನಿಭಿಃ ಸರ್ವಸಿದ್ಧಾಂತವೇದಿಭಿಃ ।
ಇಹ ಸಂಪ್ರಾಪ್ಯತೇ ಮೋಕ್ಷೋ ದುರ್ಲಭೋ ದೇವದಾನವೈಃ ॥೬೦॥

---

೫೭. ಪ್ರಯಾಗವು ತೀರ್ಥಗಳಲ್ಲೆಲ್ಲ ಮೇಲಾದುದೇನೋ ನಿಜ. ಆದರೆ ಈ ವಾರಾಣಾಸೀಕ್ಷೇತ್ರವು ಅದಕ್ಕಿಂತ ಶ್ರೇಷ್ಠವಾದುದು. ಮಹಾತಪಸ್ವಿಯಾದ ಜೈಗಿಷವ್ಯನು ತನ್ನ ಯೋಗದ ಬಲದಿಂದ ಇಲ್ಲಿ ಅತ್ಯುತ್ತಮವಾದ ಸಿದ್ಧಿಯನ್ನು ಪಡೆದನು.

೫೮. ಈ ಕ್ಷೇತ್ರದ ಮಹಿಮೆಯಿಂದಲೂ ಭಕ್ತಿಯಿಂದ ನನ್ನನ್ನು ಧ್ಯಾನ ಮಾಡಿದುದರಿಂದಲೂ ಮಹಾಶ್ರೇಷ್ಠನಾದ ಜೈಗಿಷವ್ಯನು ಯೋಗಿಗಳ ಸ್ಥಾನವನ್ನು ಪಡೆದನು.

೫೯. ಈ ಕ್ಷೇತ್ರದಲ್ಲಿ ವಾಸಿಸುತ್ತ ನನ್ನನ್ನು ನಿತ್ಯವೂ ಧ್ಯಾನಮಾಡುವ ಭಕ್ತನಲ್ಲಿ ಯೋಗಾಗ್ನಿಯು ವಿಶೇಷವಾಗಿ ಪ್ರಜ್ವಲಿಸುವುದು. ಅದರಿಂದ ಆತನು ಅತ್ಯುತ್ತಮವಾದ ಗತಿಯನ್ನು ಪಡೆಯುವನು. ದೇವತೆಗಳಿಗೆ ಕೂಡ ಅದು ಲಭಿಸುವುದು ಕಷ್ಟ.

೬೦. ಇಂತಹುದೇ ಪಂಥಕ್ಕೆ ಸೇರಿದವರೆಂದು ಅರಿಯಲಾಗದ, ಆದರೆ ಸಕಲ ಸಿದ್ಧಾಂತಗಳನ್ನೂ ಬಲ್ಲ ಮುನಿಗಳು ದೇವದಾನವರಿಗೆ ಸಹ ದುರ್ಲಭವಾದ ಮೋಕ್ಷವನ್ನು ಇಲ್ಲಿನ ವಾಸದಿಂದ ಪಡೆಯುತ್ತಾರೆ.

ತೇಭ್ಯಶ್ಚಾಹಂ ಪ್ರಯಚ್ಛಾಮಿ ಭೋಗೈಶ್ವರ್ಯಮನುತ್ತಮಂ।
ಆತ್ಮನಶ್ಚೈವ ಸಾಯುಜ್ಯಮೀಪ್ಸಿತಂ ಸ್ಥಾನಮೇವ ಚ ||೬೧||

ಕುಬೇರಸ್ತು ಮಹಾಯಕ್ಷಸಥಾ ಸರ್ವಾರ್ಪಿತಕ್ರಿಯಃ।
ಕ್ಷೇತ್ರಸಂವಸನಾದೇವ ಗಣೇಶತ್ವಮವಾಪ ಹ ||೬೨||

ಸಂವರ್ತೋ ಭವಿತಾ ಯಶ್ಚ ಸೋಽಪಿ ಭಕ್ತ್ಯಾ ಮಮೈನ ತು।
ಇಹೈವಾರಾಧ್ಯ ಮಾಂ ದೇವಿ ಸಿದ್ಧಿಂ ಯಾಸ್ಯತ್ಯನುತ್ತಮಾಂ ||೬೩||

ಪರಾಶರಸುತೋ ಯೋಗೀ ಋಷಿರ್ವ್ಯಾಸೋ ಮಹಾತಪಾಃ।
ಧರ್ಮಕರ್ತಾ ಭವಿಷ್ಯಶ್ಚ ವೇದಸಂಸ್ಥಾಪ್ರವರ್ತಕಃ ||೬೪||

---

೬೧. ಅವರಿಗೆ ನಾನು ಅತಿಶ್ರೇಷ್ಠವಾದ ಭೋಗೈಶ್ವರ್ಯವನ್ನೂ, ನನ್ನ ಸಾಯುಜ್ಯರೂಪವಾದ ಮೋಕ್ಷವನ್ನೂ, ಅವರು ಅಪೇಕ್ಷಿಸಿದ ಸ್ಥಾನವನ್ನೂ ಕೊಡುತ್ತೇನೆ.

೬೨. ಯಕ್ಷಾಧಿಪತಿಯಾದ ಕುಬೇರನಾದರೋ ಸಕಲಕರ್ಮಗಳನ್ನೂ ನನ್ನಲ್ಲಿ ಅರ್ಪಣೆಮಾಡಿ ಈ ಕ್ಷೇತ್ರದಲ್ಲಿ ವಾಸಮಾಡಿದ ಮಾತ್ರದಿಂದಲೇ ಪ್ರಮಥ ಗಣಗಳ ಆಧಿಪತ್ಯವನ್ನು ಪಡೆದನು.

೬೩. ದೇವೀ, ಮುಂದೆ ಹುಟ್ಟಲಿರುವ ಸಂವರ್ತನೂ ಸಹ ನನ್ನನ್ನು ಭಕ್ತಿಯಿಂದ ಈ ಕ್ಷೇತ್ರದಲ್ಲಿ ಆರಾಧಿಸುವುದರಿಂದಲೇ ಅತಿಶ್ರೇಷ್ಠವಾದ ಸಿದ್ಧಿಯನ್ನೈದುವನು.

೬೪. ಪರಾಶರಮಹರ್ಷಿಯ ಪುತ್ರನೂ, ಯೋಗಿಗಳಲ್ಲಿ ಅಗ್ರೇಸರನೂ, ಮಹಾತಪಸ್ವಿಯೂ ಆದ ವ್ಯಾಸಮಹಾಮುನಿಯು ವೇದಗಳನ್ನು ಪ್ರಚಾರಪಡಿಸಿ ಧರ್ಮವನ್ನು ನೆಲೆಗೊಳಿಸುವನಷ್ಟೆ! ಎಲೌ ಕಮಲಲೋಚನೇ, ಆ ಮುನಿಪುಂಗವನೂ ಸಹ ಈ ಕ್ಷೇತ್ರದಲ್ಲಿಯೇ ಧ್ಯಾನಯೋಗದಲ್ಲಿ ತೊಡಗಿ ಆನಂದಮಗ್ನನಾಗುವನು.

ರಂಸ್ಯತೇ ಸೋಽಪಿ ಪದ್ಮಾಕ್ಷಿ ಕ್ಷೇತ್ರೇಽಸ್ಮಿನ್ ಮುನಿಪುಂಗವಃ ।
ಬ್ರಹ್ಮಾ ದೇವರ್ಷಿಭಿಃ ಸಾರ್ಧಂ ವಿಷ್ಣುರ್ವಾಯುರ್ದಿವಾಕರಃ ॥೬೫॥

ದೇವರಾಜಸ್ತಥಾ ಶಕ್ರೋ ಯೇಽಪಿ ಚಾನ್ಯೇ ದಿವೌಕಸಃ ।
ಉಪಾಸಂತೇ ಮಹಾತ್ಮಾನಃ ಸರ್ವೇ ಮಾಮೇವ ಸುವ್ರತೇ ॥೬೬॥

ಅನ್ಯೇಽಪಿ ಯೋಗಿನಃ ಸಿದ್ಧಾಶ್ಛನ್ನರೂಪಾ ಮಹಾವ್ರತಾಃ ।
ಅನನ್ಯಮನಸೋ ಭೂತ್ವಾ ಮಾಮಿಹೋಪಾಸತೇ ಸದಾ ॥೬೭॥

ಅಲರ್ಕಶ್ಚ ಪುರೀಮೇತಾಂ ಮತ್ಪ್ರಸಾದಾದವಾಪ್ಸ್ಯತಿ ।
ಸ ಚೈನಾಂ ಪೂರ್ವವತ್ಕೃತ್ವಾ ಚಾತುರ್ವರ್ಣ್ಯಾಶ್ರಮಾಕುಲಾಂ ॥೬೮॥

ಸ್ಫೀತಾಂ ಜನಸಮಾಕೀರ್ಣಾಂ ಭುಕ್ತ್ವಾ ಚ ಸುಚಿರಂ ನೃಪ ।
ಮಯಿ ಸರ್ವಾರ್ಪಿತಪ್ರಾಣೋ ಮಾಮೇವ ಪ್ರತಿಪತ್ಸ್ಯತೇ ॥೬೯॥

---

೬೫-೬೬. ಮಂಗಳಮಯವಾದ ವ್ರತಗಳನ್ನು ಆಚರಿಸುವ ಓ ಪಾರ್ವತೀ, ದೇವರ್ಷಿಗಳ ಸಹಿತನಾದ ಬ್ರಹ್ಮ, ವಿಷ್ಣು, ವಾಯು, ಸೂರ್ಯ, ದೇವರಾಜನಾದ ಇಂದ್ರ, ಅಲ್ಲದೆ ಮಹಾಮಹಿಮರಾದ ಇನ್ನೂ ಎಷ್ಟೋ ಜನ ದೇವತೆಗಳು ಇವರೆಲ್ಲರೂ ನನ್ನನ್ನೇ ಉಪಾಸನಮಾಡುವರು.

೬೭. ಮತ್ತು ಇನ್ನೂ ಉಳಿದ ಯೋಗಿಗಳೂ ಸಿದ್ಧರೂ ತಮ್ಮ ರೂಪವನ್ನು ಮರೆಮಾಡಿಕೊಂಡು, ವ್ರತಶೀಲರಾಗಿ ಏಕಾಗ್ರಚಿತ್ತದಿಂದ ಸದಾ ನನ್ನನ್ನೇ ಧ್ಯಾನಿಸುವರು.

೬೮-೬೯. ನನ್ನ ಅನುಗ್ರಹದಿಂದ ಅಲರ್ಕನೂ ಕೂಡ ಈ ಪಟ್ಟಣಕ್ಕೆ ಬರುವನು. ಆ ರಾಜನು ಇಲ್ಲಿ ಹಿಂದಿನಂತೆ ನಾಲ್ಕು ವರ್ಣಗಳ ಮತ್ತು ಆಶ್ರಮಗಳ ಧರ್ಮವನ್ನು ನೆಲೆಗೊಳಿಸಿ, ಈ ನಗರವನ್ನು ಸಂಪತ್ಸಮೃದ್ಧವಾಗಿಯೂ ಜನಬಹುಲವಾಗಿಯೂ ಮಾಡುವನು. ತನ್ನ ಪ್ರಾಣಗಳನ್ನೆಲ್ಲ ನನ್ನಲ್ಲಿಯೇ ಅರ್ಪಿಸಿ ಚಿರಕಾಲ ನನ್ನ ಭಕ್ತನಾಗಿರುವನು. ಕೊನೆಗೆ ಆತನು ನನ್ನನ್ನೇ ಸೇರುವನು.

ತತಃ ಪ್ರಭೃತಿ ಚಾರ್ವಂಗಿ ಯೇಽಪಿ ಕ್ಷೇತ್ರನಿವಾಸಿನಃ ।
ಗೃಹಿಣೋ ಲಿಂಗಿನೋ ವಾಪಿ ಮದ್ಭಕ್ತಾ ಮತ್ಪರಾಯಣಾಃ ॥೨೦॥

ಮತ್ಪ್ರಸಾದಾದ್ಭಜಿಷ್ಯಂತಿ ಮೋಕ್ಷಂ ಪರಮದುರ್ಲಭಂ ।
ವಿಷಯಾಸಕ್ತಚಿತ್ತೋಽಪಿ ತ್ಯಕ್ತಧರ್ಮರತಿರ್ನರಃ ॥೨೧॥

ಇಹ ಕ್ಷೇತ್ರೇ ಮೃತಃ ಸೋಽಪಿ ಸಂಸಾರಂ ನ ಪುನರ್ವಿಶೇತ್ ।
ಯೇ ಪುನರ್ನಿರ್ಮಮಾ ಧೀರಾಃ ಸತ್ವಸ್ಥಾ ವಿಜಿತೇಂದ್ರಿಯಾಃ ॥೨೨॥

ವ್ರತಿನಶ್ಚ ನಿರಾರಂಭಾಃ ಸರ್ವೇ ತೇ ಮಯಿ ಭಾವಿತಾಃ ।
ದೇಹಭಂಗಂ ಸಮಾಸಾದ್ಯ ಧೀಮಂತಃ ಸಂಗವರ್ಜಿತಾಃ
ಗತಾ ಏವ ಪರಂ ಮೋಕ್ಷಂ ಪ್ರಸಾದಾನ್ಮಮ ಸುವ್ರತೇ ॥೨೩॥

ಜನ್ಮಾಂತರಸಹಸ್ರೇಷು ಯುಂಜನ್ಯೋಗೀ ಯಮಾಪ್ನುಯಾತ್ ।
ತಮಿಹೈವ ಪರಂ ಮೋಕ್ಷಂ ಮರಣಾದಧಿಗಚ್ಛತಿ ॥೨೪॥

---

೨೦. ಓ ಸುಂದರಾಂಗೀ, ಅದು ಮೊದಲುಗೊಂಡು ಈ ಕ್ಷೇತ್ರದಲ್ಲಿ ವಾಸ ಮಾಡುತ್ತ ನನ್ನ ಭಕ್ತರಾಗಿ, ನನ್ನನ್ನೇ ಗತಿಯೆಂದು ನಂಬಿರುವ ಗೃಹಸ್ಥರೂ ಸಂನ್ಯಾಸಿಗಳೂ ನನ್ನ ಅನುಗ್ರಹದಿಂದ ಪರಮದುರ್ಲಭವಾದ ಮೋಕ್ಷವನ್ನು ಪಡೆಯುವರು.

೨೧. ವಿಷಯಸುಖಗಳಲ್ಲಿಯೇ ಮಗ್ನನಾಗಿ ಧರ್ಮದಲ್ಲಿ ಆಸಕ್ತಿಯನ್ನು ಬಿಟ್ಟಿರಲಿ, ಅಂತಹ ಮನುಷ್ಯನೂ ಕೂಡ ಈ ಕ್ಷೇತ್ರದಲ್ಲಿ ಮೃತನಾದರೆ ಮತ್ತೆ ಸಂಸಾರದಲ್ಲಿ ಪ್ರವೇಶಮಾಡನು.

೨೨-೨೩. ಎಲೌ ವ್ರತಶಾಲಿನೀ, ಹೀಗಿರುವಾಗ ಮಮತಾರಹಿತರೂ. ಧೀರರೂ, ಸತ್ವನಿಷ್ಠರೂ, ಜಿತೇಂದ್ರಿಯರೂ, ವ್ರತನಿಷ್ಠರೂ, ನಿಷ್ಕಾಮಕರ್ಮರೂ, ಪ್ರಾಜ್ಞರೂ, ನಿಸ್ಸಂಗರೂ ಆದವರ ವಿಚಾರದಲ್ಲಿ ಹೇಳಬೇಕಾದುದೇನು ? ದೇಹಾವ ಸಾನದಲ್ಲಿ ಅವರೆಲ್ಲರೂ ನನ್ನ ಅನುಗ್ರಹದಿಂದ ಮೋಕ್ಷವನ್ನು ಪಡೆದೇ ಪಡೆಯುವರು.

೨೪. ಯೋಗಿಯಾದವನು ಸಾವಿರಾರು ಜನ್ಮಗಳಲ್ಲಿ ಯೋಗಾಭ್ಯಾಸವನ್ನು ಮಾಡಿ ಪಡೆಯಬಹುದಾದ ಮೋಕ್ಷವು ಈ ದಿವ್ಯ ಕ್ಷೇತ್ರದಲ್ಲಿ ಮರಣಮಾತ್ರದಿಂದಲೇ ಲಭಿಸುವುದು.

ಏತತ್ಸಂಕ್ಷೇಪತೋ ದೇವಿ ಕ್ಷೇತ್ರಸ್ಯಾಸ್ಯ ಮಹತ್ಫಲಂ ।
ಅವಿಮುಕ್ತಸ್ಯ ಕಥಿತಂ ಮಯಾ ತೇ ಗುಹ್ಯಮುತ್ತಮಂ ॥೭೫॥

ಅತಃ ಪರತರಂ ನಾಸ್ತಿ ಸಿದ್ಧಿಗುಹ್ಯಂ ಮಹೇಶ್ವರಿ ।
ಏತದ್ಬುಧ್ಯಂತಿ ಯೋಗಜ್ಞಾ ಯೇ ಚ ಯೋಗೇಶ್ವರಾ ಭುವಿ ॥೭೬॥

ಏತದೇವ ಪರಂ ಸ್ಥಾನಮೇತದೇವ ಪರಂ ಶಿವಂ ।
ಏತದೇವ ಪರಂ ಬ್ರಹ್ಮ ಏತದೇವ ಪರಂ ಪದಂ ॥೭೭॥

ವಾರಾಣಸೀ ತು ಭುವನತ್ರಯಸಾರಭೂತಾ
ರಮ್ಯಾ ಸದಾ ಮಮ ಪುರೀ ಗಿರಿರಾಜಪುತ್ರಿ ।
ಅತ್ರಾಗತಾ ವಿವಿಧದುಷ್ಕೃತಕಾರಿಣೋಽಪಿ
ಪಾಪಕ್ಷಯಾದ್ವಿರಜಸಃ ಪ್ರತಿಭಾಂತಿ ಮರ್ತ್ಯಾಃ ॥೭೮॥

---

೭೫. ಎಲೌ ದೇವಿ, ಈ ಅವಿಮುಕ್ತಕ್ಷೇತ್ರದ ರಹಸ್ಯವೂ ಪ್ರಶಸ್ತವೂ ಆದ ಅನಂತಫಲವನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ.

೭೬. ಓ ಮಹೇಶ್ವರೀ, ಇದಕ್ಕಿಂತಲೂ ಉತ್ತಮವಾದ, ಸಿದ್ಧಿಯನ್ನು ಕೊಡುವ ಕ್ಷೇತ್ರವು ಲೋಕದಲ್ಲಿ ಮತ್ತೊಂದಿಲ್ಲ. ಯೋಗಜ್ಞಾನಿಗಳೂ ಯೋಗೇಶ್ವರರೂ ಆದವರಿಗೆ ಈ ವಿಚಾರವು ಗೊತ್ತುಂಟು.

೭೭. ಇದೇ ಶ್ರೇಷ್ಠವಾದ ಸ್ಥಾನ. ಅನಂತವಾದ ಮಂಗಳವನ್ನು ಕೊಡುವ ಸ್ಥಲವೂ ಇದೇ. ಪರಬ್ರಹ್ಮಪ್ರಾಪ್ತಿಗೆ ಸಾಧನವಾದ ಪ್ರದೇಶವೂ ಇದೇ. ಅಷ್ಟೇ ಅಲ್ಲ; ಸಾಕ್ಷಾತ್ಪರಮಪದವೂ ಇದೇ.

೭೮. ಕಾಶಿಯು ಮೂರುಲೋಕಗಳಲ್ಲಿಯೂ ಅತ್ಯಂತಶ್ರೇಷ್ಠವಾದುದು. ಓ ಪಾರ್ವತೀ, ರಮ್ಯವಾದ ಈ ನಗರವು ನನಗೆ ಯಾವಾಗಲೂ ಪ್ರಿಯವಾದುದು. ಬಗೆಬಗೆಯ ಪಾಪಗಳನ್ನು ಮಾಡಿದ ಜನರೂ ಕೂಡ ಇಲ್ಲಿಗೆ ಬಂದು, ತಮ್ಮ ಪಾತಕಗಳನ್ನು ಕಳೆದುಕೊಂಡು ನಿರ್ದೋಷಿಗಳಾಗಿ ಪ್ರಖ್ಯಾತರಾಗುತ್ತಾರೆ.

ಏತತ್ಸ್ಮೃತಂ ಪ್ರಿಯತಮಂ ಮಮ ದೇವಿ ನಿತ್ಯಂ
ಕ್ಷೇತ್ರಂ ವಿಚಿತ್ರತರುಗುಲ್ಮಲತಾಸುಪುಷ್ಪಂ ।
ಅಸ್ಮಿನ್ ಮೃತಾಸ್ತನುಭೃತಃ ಪದಮಾಪ್ನುವಂತಿ
ಮೂರ್ಖಾಗಮೇನ ರಹಿತಾಪಿ ನ ಸಂಶಯೋಽತ್ರ ॥೭೯॥

॥ ಸೂತ ಉವಾಚ ॥

ಏತಸ್ಮಿನ್ನಂತರೇ ದೇವೋ ದೇವೀಂ ಪ್ರಾಹ ಗಿರೀಂದ್ರಜಾಂ ।
ದಾತುಂ ಪ್ರಸಾದಾಧ್ಯಕ್ಷಾಯ ವರಂ ಭಕ್ತಾಯ ಭಾಮಿನಿ ॥೮೦॥

ಭಕ್ತೋ ಮಮ ವರಾರೋಹೇ ತಪಸಾ ಹತಕಿಲ್ಬಿಷಃ ।
ಅರ್ಹೋ ವರಮಸೌ ಲಬ್ಧುಮಸ್ಮತ್ತೋ ಭುವನೇಶ್ವರಿ ॥೮೧॥

ಏವಮುಕ್ತ್ವಾ ತತೋ ದೇವಃ ಸಹ ದೇವ್ಯಾ ಜಗತ್ಪತಿಃ ।
ಜಗಾಮ ಯಕ್ಷೋ ಯತ್ರಾಸ್ತೇ ಕೃಶೋ ಧಮನಿಸಂತತಃ ॥೮೨॥

---

೭೯. ಎಲೌ ದೇವಿ, ನಾನಾವಿಧವಾದ ಮರಗಳು, ಪೊದೆಗಳು, ಬಳ್ಳಿಗಳು ಮತ್ತು ಹೂಗಳಿಂದ ತುಂಬಿದ ಈ ಕ್ಷೇತ್ರವು ನನಗೆ ಯಾವಾಗಲೂ ಬಹಳ ಇಷ್ಟ ವಾಗಿದೆ. ಇಲ್ಲಿ ಮೃತರಾದ ಮಾನವರು ವೇದಶಾಸ್ತ್ರಜ್ಞಾನರಹಿತರಾದ ಮೂರ್ಖರೇ ಆಗಿದ್ದರೂ ಸದ್ಗತಿಯನ್ನು ಪಡೆಯುತ್ತಾರೆ. ಇದರಲ್ಲಿ ಸಂದೇಹವಿಲ್ಲ.

೮೦-೮೧. ಸೂತಪೌರಾಣಿಕನು ಹೇಳಿದನು.—ಇಷ್ಟರೊಳಗೆ ಪರಮೇಶ್ವರನು ತನ್ನ ಭಕ್ತನಾದ ಯಕ್ಷನ ಮೇಲೆ ಅನುಗ್ರಹವನ್ನು ಬೀರಿ, ಅವನಿಗೆ ವರವನು ಕೊಡಲೆಳಸಿ ಪಾರ್ವತಿಗಿಂತೆಂದನು. "ಎಲೌ ಸುಂದರೀ, ಇವನು ನನ್ನ ಭಕ್ತ; ತಪಸ್ಸಿನಿಂದ ಇವನ ಪಾಪಗಳೆಲ್ಲ ಹತವಾಗಿವೆ. ಓ ಭುವನೇಶ್ವರೀ, ನಮ್ಮಿಂದ ವರವನ್ನು ಪಡೆಯುವುದಕ್ಕೆ ಈತನು ಅರ್ಹನಾಗಿದ್ದಾನೆ.

೮೨. ಜಗತ್ಪತಿಯಾದ ಮಹಾದೇವನು ಹೀಗೆ ಹೇಳಿ ಯಕ್ಷನು ತಪಸ್ಸು ಮಾಡುತಿದ್ದ ಬಳಿಗೆ ಪಾರ್ವತಿಯೊಡನೆ ಹೋದನು. ಅವನು ಕೃಶನಾಗಿದ್ದನು. ಅವನ ನರಗಳೆಲ್ಲವೂ ಎದ್ದು ಕಾಣುತ್ತಿದ್ದುವು.

**ತತಸ್ತಂ ಗುಹ್ಯಕಂ ದೇವೀ ದೃಷ್ಟಿಪಾತೈರ್ನಿರೀಕ್ಷತೀ ।**
**ಶ್ವೇತವರ್ಣಂ ವಿಚರ್ಮಾಣಂ ಸ್ನಾಯುಬದ್ಧಾಸ್ಥಿಪಂಜರಂ ॥೬೩॥**

**ದೇವೀ ಪ್ರಾಹ ತದಾ ದೇವಂ ದರ್ಶಯಂತೀ ಚ ಗುಹ್ಯಕಂ ।**
**ಸತ್ಯಂ ನಾಮ ಭವಾನುಗ್ರೋ ದೇವೈರುಕ್ತಸ್ತು ಶಂಕರ ॥೬೪॥**

**ಈದೃಶೇ ಚಾಸ್ಯ ತಪಸಿ ನ ಪ್ರಯಚ್ಛಸಿ ಯದ್ವರಂ ।**
**ಅತ್ರ ಕ್ಷೇತ್ರೇ ಮಹಾದೇವ ಪುಣ್ಯೇ ಸಮ್ಯಗುಪಾಸಿತೇ ॥೬೫॥**

**ಕಥಮೇವಂ ಪರಿಕ್ಲೇಶಂ ಪ್ರಾಪ್ತೋ ಯಕ್ಷಕುಮಾರಕಃ ।**
**ಶೀಘ್ರಮಸ್ಯ ವರಂ ಯಚ್ಛ ಪ್ರಸಾದಾತ್ಪರಮೇಶ್ವರ ॥೬೬॥**

**ಏವಂ ಮನ್ವಾದಯೋ ದೇವ ವದಂತಿ ಪರಮರ್ಷಯಃ ।**
**ರುಷ್ಟಾದ್ವಾ ಚಾಥ ತುಷ್ಟಾದ್ವಾ ಸಿದ್ಧಿಸ್ತೂಭಯತೋ ಭವೇತ್**
**ಭೋಗಪ್ರಾಪ್ತಿಸ್ತಥಾ ರಾಜ್ಯಮಂತೇ ಮೋಕ್ಷಃ ಸದಾಶಿವಾತ್ ॥೬೭॥**

---

೬೩. ಬಳಿಕ ಪಾರ್ವತಿಯು ಆ ಯಕ್ಷನನ್ನು ದಿಟ್ಟಿಸಿ ನೋಡಿದಳು. ಅವನು ಬೆಳ್ಳಗಾಗಿದ್ದನು. ಮೈಯಲ್ಲಿ ಚರ್ಮವು ಸುಲಿದುಹೋಗಿತ್ತು. ನರಗಳು ಬಿಗಿದುಕೊಂಡಿದ್ದುವು. ಅವನ ಮೈ ಮೂಳೆಯಗೂಡಿನಂತಿತ್ತು.

೬೪. ಆಗ ಪಾರ್ವತಿಯು ಯಕ್ಷನನ್ನು ತೋರಿಸುತ್ತ ಪರಮೇಶ್ವರನಿಗೆ ಹೇಳಿದಳು " ಓ ಶಂಕರಾ, ದೇವತೆಗಳು ನಿನ್ನನ್ನು ಉಗ್ರನೆಂದು ಕರೆಯುತ್ತಾರಲ್ಲವೇ ! ಅದು ನಿಜವಾಗಿಯೂ ನಿನಗೆ ಒಪ್ಪುತ್ತದೆ.

೬೫. ಏಕೆಂದರೆ, ಎಲೈ ಮಹಾದೇವನೇ, ಪುಣ್ಯಮಯವಾದ ಈ ಕ್ಷೇತ್ರದಲ್ಲಿ ಇಷ್ಟೊಂದು ಘೋರವಾದ ತಪಸ್ಸನ್ನು ಮಾಡಿದರೂ ನೀನು ವರವನ್ನು ಇನ್ನೂ ಕೊಡದಿರುವೆಯಲ್ಲಾ !

೬೬. ಈ ಯಕ್ಷಕುಮಾರನು ಏತಕ್ಕಾಗಿ ಈ ಬಗೆಯ ಕ್ಲೇಶಕ್ಕೆ ಗುರಿಯಾದನು ? ಪರಮೇಶ್ವರಾ, ಅನುಗ್ರಹವನ್ನು ತೋರಿ ಬೇಗನೆ ಇವನಿಗೆ ವರವನ್ನು ನೀಡು.

೬೭. ದೇವಾ, " ಸದಾಶಿವನು ಸಿಟ್ಟುಗೊಳ್ಳಲಿ, ತೃಪ್ತಿಗೊಳ್ಳಲಿ ಎರಡರಿಂದಲೂ ಕಾರ್ಯಸಿದ್ಧಿಯಾಗುತ್ತದೆ. ಭೋಗಪ್ರಾಪ್ತಿಯೂ, ರಾಜ್ಯವೂ ಕೊನೆಗೆ ಮೋಕ್ಷವೂ ಆತನಿಂದಲೇ ಲಭಿಸುತ್ತವೆ " ಎಂದು ಮನ್ವಾದಿ ಪರಮರ್ಷಿಗಳು ಹೇಳುತ್ತಾರೆ.

ಏವಮುಕ್ತಸ್ತತೋ ದೇವಃ ಸಹ ದೇವ್ಯಾ ಜಗತ್ಪತಿಃ ।
ಜಗಾಮ ಯಕ್ಷ್ಮೋ ಯತ್ರಾಸ್ತೇ ಕೃಶೋ ಧಮನಿಸಂತತಃ ॥೮೮॥

ತಂ ದೃಷ್ಟ್ವಾ ಪ್ರಣತಂ ಭಕ್ತ್ಯಾ ಹರಿಕೇಶಂ ವೃಷಧ್ವಜಃ ।
ದಿವ್ಯಂ ಚಕ್ಷುರದಾತ್ತಸ್ಮೈ ಯೇನಾಪಶ್ಯತ್ಸ ಶಂಕರಂ ॥೮೯॥

ಅಥ ಯಕ್ಷಸ್ತದಾದೇಶಾಚ್ಛನೈರುನ್ಮೀಲ್ಯ ಚಕ್ಷುಷೀ ।
ಅಪಶ್ಯತ್ಸಗಣಂ ದೇವಂ ವೃಷಧ್ವಜಮುಪಸ್ಥಿತಂ ॥೯೦॥

॥ ದೇವದೇವ ಉವಾಚ ॥

ವರಂ ದದಾಮಿ ತೇ ಪೂರ್ವಂ ತ್ರೈಲೋಕ್ಯೇ ದರ್ಶನಂ ತಥಾ ।
ಸಾವರ್ಣ್ಯಂ ಚ ಶರೀರಸ್ಯ ಪಶ್ಯ ಮಾಂ ವಿಗತಜ್ವರಃ ॥೯೧॥

---

೮೮. ಪಾರ್ವತಿಯು ಹೀಗೆ ಹೇಳಿದ ಬಳಿಕ ಜಗತ್ಪತಿಯಾದ ಮಹಾದೇವನು ಅವಳೊಡಗೂಡಿ ಯಕ್ಷನು ತಪಸ್ಸು ಮಾಡುತ್ತಿದ್ದಲ್ಲಿಗೆ ಹೋದನು· ಆತನು ಬತ್ತಿ ಹೋಗಿದ್ದನು. ನರಗಳು ಮೈಮೇಲೆ ಎದ್ದು ಕಾಣುತ್ತಿದ್ದುವು.

೮೯. ಹರಿಕೇಶನೆಂಬ ಆ ಗುಹ್ಯಕನು ಪರಮೇಶ್ವರನನ್ನು ಕಂಡು ಭಕ್ತಿಯಿಂದ ನಮಸ್ಕರಿಸಿದನು. ಶಂಕರನು ಆತನಿಗೆ ದಿವ್ಯಚಕ್ಷುಸ್ಸನ್ನು ಕರುಣಿಸಿದನು. ಅದರ ಮೂಲಕ ಅವನು ಭಗವಂತನ ದಿವ್ಯರೂಪವನ್ನು ಕಂಡನು.

೯೦. ಪರಮೇಶ್ವರನ ಅಪ್ಪಣೆಯಂತೆ ಯಕ್ಷನು ಮೆಲ್ಲಗೆ ಕಣ್ಣುಗಳನ್ನು ತೆರೆದು ನೋಡಿದನು. ಪ್ರಮಥಗಣಗಳ ಸಹಿತನಾಗಿ ಆ ದೇವದೇವನು ತನ್ನ ಬಳಿಗೆ ಬಂದಿರುವುದನ್ನು ಕಂಡನು.

೯೧. ಪರಮೇಶ್ವರನು ಹೇಳಿದನು.—ಇಗೋ! ಮೊದಲು ನಿನಗೆ ವರವನ್ನು ಕೊಡುತ್ತೇನೆ. ನೀನು ಮೂರು ಲೋಕವನ್ನೂ ಕಾಣಬಲ್ಲೆ. ನಿನ್ನ ಶರೀರವು ನನ್ನ ಶರೀರವನ್ನೇ ವರ್ಣದಲ್ಲಿ ಹೋಲುವುದು. ವ್ಯಾಕುಲಗೊಳ್ಳದೆ ನನ್ನನ್ನು ನೋಡು.

|| ಸೂತ ಉವಾಚ ||

ತತಃ ಸ ಲಬ್ಧ್ವಾ ತು ವರಂ ಶರೀರೇಣಾಕ್ಷತೇನ ಚ ।
ಪಾದಯೋಃ ಪ್ರಣತಸ್ತಸ್ಥೌ ಕೃತ್ವಾ ಶಿರಸಿ ಚಾಂಜಲಿಂ ||೯೨||

ಉವಾಚಾಥ ತದಾ ತೇನ ವರದೋಽಸ್ಮೀತಿ ಚೋದಿತಃ ।
ಭಗವರ್ನ ಭಕ್ತಿಮವ್ಯಗ್ರಾಂ ತ್ವಯ್ಯನನ್ಯಾಂ ವಿಧತ್ಸ್ವ ಮೇ ||೯೩||

ಅನ್ನದತ್ವಂ ಚ ಲೋಕಾನಾಂ ಗಾಣಪತ್ಯಂ ತಥಾಕ್ಷಯಂ ।
ಅವಿಮುಕ್ತಂ ಚ ತೇ ಸ್ಥಾನಂ ಪಶ್ಯೇಯಂ ಸರ್ವದಾ ಯಥಾ ।
ಏತದಿಚ್ಛಾಮಿ ದೇವೇಶ ತ್ವತ್ತೋ ವರಮನುತ್ತಮಂ ||೯೪||

|| ದೇವದೇವ ಉವಾಚ ||

ಜರಾಮರಣಸಂತ್ಯಕ್ತಃ ಸರ್ವರೋಗವಿವರ್ಜಿತಃ ।
ಭವಿಷ್ಯಸಿ ಗಣಾಧ್ಯಕ್ಷೋ ಧನದಃ ಸರ್ವಪೂಜಿತಃ ||೯೫||

---

೯೨. ಸೂತಪೌರಾಣಿಕನು ಹೇಳಿದನು.—ಬಳಿಕ ಹರಿಕೇಶನು ವರವನ್ನು ಪಡೆದು ದೃಢಗಾತ್ರನಾಗಿ, ಮಹಾದೇವನ ಪಾದಗಳಿಗೆ ನಮಸ್ಕರಿಸಿ, ತಲೆಯ ಮೇಲೆ ಕೈಗಳನ್ನೆತ್ತಿ ಮುಗಿದುಕೊಂಡು ನಿಂತಿದ್ದನು.

೯೩-೯೪. ಮಹಾದೇವನು ವರವನ್ನು ಕೊಡುವುದಾಗಿ ಹೇಳಲು ಯಕ್ಷನು ಇಂತೆಂದನು. "ದೇವಾ, ನಿನ್ನಲ್ಲಿ ನನಗೆ ಭಕ್ತಿಯು ನಿಶ್ಚಲವೂ ಪೂರ್ಣವೂ ಆಗಿರಬೇಕು. ಲೋಕಗಳಿಗೆ ನಾನು ಅನ್ನವನ್ನು ಕೊಡಬೇಕು. ನಿನ್ನ ನೆಲೆಯೆನಿಸಿದ ಈ ಅವಿಮುಕ್ತಕ್ಷೇತ್ರವನ್ನು ಯಾವಾಗಲೂ ನೋಡುತ್ತಿರಬೇಕು. ದೇವೇಶಾ, ಇದೇ ನಿನ್ನಿಂದ ನಾನು ಅಪೇಕ್ಷಿಸುವ ಉತ್ತಮವಾದ ವರ. ಇದನ್ನು ಕರುಣಿಸು."

೯೫. ಪರಮೇಶ್ವರನು ಹೇಳಿದನು.—ನಿನಗೆ ಮುಪ್ಪೂ ಸಾವೂ ಬಾರವು. ಯಾವ ರೋಗವೂ ನಿನ್ನನ್ನು ಸೋಕದು. ಎಲ್ಲರಿಂದಲೂ ಪೂಜೆಯನ್ನು ಕೈಗೊಂಡು ಎಲ್ಲರಿಗೂ ಧನವನ್ನು ಕೊಡುತ್ತ ಗಣಾಧ್ಯಕ್ಷನಾಗಿ ಮೆರೆಯುವೆ.

ಅಜೇಯಶ್ಚಾಪಿ ಸರ್ವೇಷಾಂ ಯೋಗೈಶ್ವರ್ಯಂ ಸಮಾಶ್ರಿತಃ ।
ಅನ್ನದಶ್ಚಾಪಿ ಲೋಕೇಭ್ಯಃ ಕ್ಷೇತ್ರಪಾಲೋ ಭವಿಷ್ಯಸಿ ॥೯೬॥

ಮಹಾಬಲೋ ಮಹಾಸತ್ತ್ವೋ ಬ್ರಹ್ಮಣ್ಯೋ ಮಮ ಚ ಪ್ರಿಯಃ ।
ತ್ರ್ಯಕ್ಷಶ್ಚ ದಂಡಪಾಣಿಶ್ಚ ಮಹಾಯೋಗೀ ತಥೈವ ಚ ॥೯೭॥

ಉದ್ಭ್ರಮಃ ಸಂಭ್ರಮಶ್ಚೈವ ಗಣೌ ತೇ ಪರಿಚಾರಕೌ ।
ತವಾಜ್ಞಯಾ ಕರಿಷ್ಯೇತೇ ಲೋಕಸ್ಯೋದ್ಭ್ರಮಸಂಭ್ರಮೌ ॥೯೮॥

॥ ಸೂತ ಉವಾಚ ॥

ಏವಂ ಸ ಭಗವಾಂಸ್ತತ್ರ ಯಕ್ಷಂ ಕೃತ್ವಾ ಗಣೇಶ್ವರಂ ।
ಜಗಾಮ ವಾಸಂ ದೇವೇಶಃ ಸಹ ತೇನಾಮರೇಶ್ವರಃ ॥೯೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವಾರಾಣಸೀಮಾಹಾತ್ಮ್ಯೇ
ದಂಡಪಾಣಿವರಪ್ರದಾನಂ ನಾಮಾಶೀತ್ಯಧಿಕ ಶತತಮೋಽಧ್ಯಾಯಃ

---

೯೬. ನಿನ್ನನ್ನು ಯಾರೂ ಗೆಲ್ಲಲಾರರು. ಯೋಗೈಶ್ವರ್ಯವೂ ನಿನ್ನಲ್ಲಿ ಸ್ಥಿರವಾಗಿರುವುದು. ಲೋಕಗಳಿಗೆ ನೀನು ಅನ್ನವನ್ನು ಕೊಡುತ್ತ ಕ್ಷೇತ್ರಪಾಲಕನೆನಿಸುವೆ.

೯೭. ನೀನು ಬಹು ಶಕ್ತಿವಂತನೂ ಮಹಾವೀರನೂ ಆಗುವೆ. ಬ್ರಹ್ಮನಿಷ್ಠನಾಗಿ ನನಗೆ ಪ್ರಿಯನೆನಿಸುವೆ. ಮೂರು ಕಣ್ಣುಗಳೂ ಕೈಯಲ್ಲಿ ದಂಡಾಯುಧವೂ ವಿರಾಜಿಸುತ್ತಿರಲು ಯೋಗಿಗಳಲ್ಲಿ ಅಗ್ರೇಸರನೆಂದು ಪ್ರಖ್ಯಾತನಾಗುವೆ.

೯೮. ಉದ್ಭ್ರಮ ಮತ್ತು ಸಂಭ್ರಮ ಎಂಬ ಇಬ್ಬರು ಗಣಗಳು ನಿನ್ನ ಪರಿಚಾರಕರಾಗಿರುವರು. ಅವರು ನಿನ್ನ ಆಜ್ಞೆಯಿಂದ ಲೋಕಕ್ಕೆ ಭ್ರಮವನ್ನೂ ಸಂಭ್ರಮವನ್ನೂ ಉಂಟುಮಾಡುವರು.

೯೯. ಸೂತಪೌರಾಣಿಕನು ಹೇಳಿದನು.—ಷಡ್ಗುಣಪರಿಪೂರ್ಣನೂ ದೇವತೆಗಳ ಅಧಿಪತಿಯೂ ಆದ ಮಹಾದೇವನು ಹೀಗೆ ಯಕ್ಷನನ್ನು ಗಣೇಶ್ವರನನ್ನಾಗಿ ಮಾಡಿ ತನ್ನ ವಾಸಸ್ಥಾನಕ್ಕೆ ತೆರಳಿದನು.

## ಅಧ್ಯಾಯದ ಸಾರಾಂಶ

ಮಹಾದೇವನು ಒಬ್ಬಾನೊಬ್ಬ ಯಕ್ಷನಿಗೆ ಗಣೇಶ್ವರನ ಪದವಿಯನ್ನು ಅನುಗ್ರಹಿಸಿದ ವೃತ್ತಾಂತವು ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

ಪೂರ್ಣಭದ್ರನೆಂಬ ಯಕ್ಷನಿಗೆ ಹರಿಕೇಶನೆಂಬ ಮಗನಿದ್ದನು. ಬಾಲ್ಯದಿಂದಲೂ ಅವನಿಗೆ ಈಶ್ವರನಲ್ಲಿ ಬಹು ಭಕ್ತಿಯಿದ್ದಿತು. ಇದು ಯಕ್ಷರ ಜಾತಿ ಧರ್ಮಕ್ಕೆ ವಿರುದ್ಧವೆಂದೂ, ಅವರು ಹಿಂಸಾಚಾರಿಗಳೂ ಸ್ವೇಚ್ಛಾಹಾರಿಗಳೂ ಆಗಿರಬೇಕೆಂದೂ ಅವನ ತಂದೆ ಬಲಾತ್ಕರಿಸಿದನು. ಮಗನಿಗೆ ಇದು ಸರಿಹೋಗಲಿಲ್ಲ. ಅವನು ಮನೆಯಿಂದ ಹೊರಟು ವಾರಣಾಸಿಗೆ ಹೋಗಿ ಘೋರವಾದ ತಪಸ್ಸಿಗೆ ಕುಳಿತನು.

ಈ ವೇಳಗೆ ಪಾರ್ವತಿಯು ವಾರಾಣಸೀಕ್ಷೇತ್ರದ ಮಹಿಮೆಯನ್ನು ಹೇಳಬೇಕೆಂದು ಪರಮೇಶ್ವರನನ್ನು ಕೇಳಿದಳು. ಅವನು ಆಕೆಗೆ ಅಲ್ಲಿನ ದಿವ್ಯೋದ್ಯಾನವನ್ನು ತೋರಿಸಿ, ಆ ಕ್ಷೇತ್ರದಂತಹ ಪವಿತ್ರವಾದ ಕ್ಷೇತ್ರವು ಮತ್ತೊಂದಿಲ್ಲವೆಂದೂ. ಅಲ್ಲಿ ಮೋಕ್ಷವು ಬಹು ಶೀಘ್ರವಾಗಿ ಕೈಸೇರುವುದೆಂದೂ ಹೇಳಿದನು.

ಅತ್ತ ಹರಿಕೇಶನು ತಪಸ್ಸಿನಿಂದ ಕಂಗೆಟ್ಟನು. ಅವನ ದೇಹವು ಅಸ್ಥಿಪಂಜರದಂತಾಯಿತು. ಮಹಾದೇವನು ಪಾರ್ವತಿಯೊಡನೆ ಅವನ ಬಳಿಗೆ ಹೋಗಿ, ಅವನ ತಪಸ್ಸಿಗೆ ಮೆಚ್ಚಿ, ಅವನ ಕೋರಿಕೆಯಂತೆ ಗಣೇಶಪದವಿಯನ್ನೂ, ಅನ್ನದಾನ ಸಾಮರ್ಥ್ಯವನ್ನೂ, ವಾರಣಾಸೀ ಕ್ಷೇತ್ರದ ರಕ್ಷಣೆಯ ಭಾರವನ್ನೂ ಕರುಣಿಸಿ ಸ್ವಸ್ಥಾನಕ್ಕೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವಾರಾಣಸೀ ಮಾಹಾತ್ಮ್ಯದೊಳಗೆ ದಂಡಪಾಣಿ ವರಪ್ರದಾನವೆಂಬ ನೂರ ಎಂಬತ್ತನೆಯ ಅಧ್ಯಾಯವು ಮುಗಿದುದು.



# ಅಥೈಕಾಶೀತ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಇಮಾಂ ಪುಣ್ಯೋಽನ್ನವಾಂ ಸ್ನಿಗ್ಧಾಂ ಕಥಾಂ ಪಾಪಪ್ರಣಾಶಿನೀಂ ।
ಶೃಣ್ವಂತು ಋಷಯಃ ಸರ್ವೇ ಸುವಿಶುದ್ಧಾಸ್ತಪೋಧನಾಃ || ೧ ||

ಗಣೇಶ್ವರಪತಿಂ ದಿವ್ಯಂ ರುದ್ರತುಲ್ಯಪರಾಕ್ರಮಂ ।
ಸನತ್ಕುಮಾರೋ ಭಗವಾನಪೃಚ್ಛನ್ನಂದಿಕೇಶ್ವರಂ || ೨ ||

ಬ್ರೂಹಿ ಗುಹ್ಯಂ ಯಥಾತತ್ವಂ ಯತ್ರ ನಿತ್ಯಂ ಭವಃ ಸ್ಥಿತಃ ।
ಮಹಾತ್ಮಾ ಸರ್ವಭೂತಾನಾಂ ಪರಮಾತ್ಮಾ ಮಹೇಶ್ವರಃ || ೩ ||

ಘೋರರೂಪಂ ಸಮಾಸ್ಥಾಯ ದುಷ್ಕರಂ ದೇವದಾನವೈಃ ।
ಆಭೂತಸಂಪ್ಲವಂ ಯಾವತ್ಸ್ಥಾಣುಭೂತೋ ಮಹೇಶ್ವರಃ || ೪ ||

---

೧. ಸೂತಪೌರಾಣಿಕನು ಹೇಳಿದನು.—ಪರಿಶುದ್ಧರೂ ಮಹಾತಪಸ್ವಿಗಳೂ ಆದ ಎಲ್ಲೆ ಋಷಿಗಳಿರಾ, ಈಗ ನಾನು ಹೇಳುತ್ತಿರುವ ಕಥೆಯು ಬಹು ಪುಣ್ಯಕರವಾದುದು, ಮನೋಹರವಾದುದು, ಪಾಪಪರಿಹಾರಕವಾದುದು. ಅದನು ನೀವೆಲ್ಲರೂ ಕೇಳಿರಿ.

೨. ಗಣೇಶ್ವರರ ಅಧಿಪತಿಯೂ ಪರಾಕ್ರಮದಲ್ಲಿ ರುದ್ರನಿಗೆ ಸಮಾನನೂ ಆದ ನಂದಿಕೇಶ್ವರನನ್ನು ಪೂಜ್ಯನಾದ ಸನತ್ಕುಮಾರನು ಪ್ರಶ್ನಿಸಿದನು.

೩-೪. ಸರ್ವಕಾರಣನೂ, ಸರ್ವಭೂತಗಳ ಅಂತರ್ಯಾಮಿಯೂ ಆದ ಮಹೇಶ್ವರನು ದೇವದಾನವರಿಗೆ ದುಷ್ಕರವಾದ ಘೋರರೂಪವನ್ನು ತಾಳಿ ಮಹಾಪ್ರಳಯದ ವರೆಗೂ ಸ್ಥಿರವಾಗಿ ನೆಲಸಿರುವುದೆಲ್ಲಿ ? ಈ ರಹಸ್ಯವನ್ನು ಯಥಾರ್ಥವಾಗಿ ತಿಳಿಸು.

|| ನಂದಿಕೇಶ್ವರ ಉವಾಚ ||

**ಪುರಾ ದೇವೇನ ಯತ್ಪ್ರೋಕ್ತಂ ಪುರಾಣಂ ಪುಣ್ಯಮುತ್ತಮಂ |**
**ತತ್ಸರ್ವಂ ಸಂಪ್ರವಕ್ಷ್ಯಾಮಿ ನಮಸ್ಕೃತ್ಯ ಮಹೇಶ್ವರಂ || ೫ ||**

**ತತೋ ದೇವೇನ ತುಷ್ಟೇನ ಉಮಾಯಾಃ ಪ್ರಿಯಕಾಮ್ಯಯಾ |**
**ಕಥಿತಂ ಭುವಿ ವಿಖ್ಯಾತಂ ಯತ್ರ ನಿತ್ಯಂ ಸ್ವಯಂ ಸ್ಥಿತಃ || ೬ ||**

**ರುದ್ರಸ್ಯಾರ್ಧಾಸನಗತಾ ಮೇರುಶೃಂಗೇ ಯಶಸ್ವಿನೀ |**
**ಮಹಾದೇವಂ ತತೋ ದೇವೀ ಪ್ರಣತಾ ಪರಿಪೃಚ್ಛತಿ || ೭ ||**

**ಭಗವನ್ ದೇವದೇವೇಶ ಚಂದ್ರಾರ್ಧಕೃತಶೇಖರ |**
**ಧರ್ಮಂ ಪ್ರಬ್ರೂಹಿ ಮರ್ತ್ಯಾನಾಂ ಭುವಿ ಚೈವೋರ್ಧ್ವರೇತಸಾಂ || ೮ ||**

**ಜಪ್ತಂ ದತ್ತಂ ಹುತಂ ಚೇಷ್ಟಂ ತಪಸ್ತಪ್ತಂ ಕೃತಂ ಚ ಯತ್ |**
**ಧ್ಯಾನಾಧ್ಯಯನಸಂಪನ್ನಂ ಕಥಂ ಭವತಿ ಚಾಕ್ಷಯಂ || ೯ ||**

---

೫. ಮಹೇಶ್ವರನಿಗೆ ನಮಸ್ಕಾರಮಾಡಿ, ಹಿಂದೆ ಆ ಮಹಾದೇವನೇ ಹೇಳಿದ ಉತ್ತಮವೂ ಅತಿ ಪ್ರಾಚೀನವೂ ಆದ ಪುಣ್ಯಕಥೆಯನ್ನು ಸಾಂಗವಾಗಿ ಹೇಳುವೆನು.

೬. ಬಳಿಕ ಮಹಾದೇವನು ಸಂತುಷ್ಟನಾಗಿ ಪಾರ್ವತಿಯ ಕೋರಿಕೆಯನ್ನು ನಡೆಸಬೇಕೆಂದು ಯೋಚಿಸಿ ಎಡೆಬಿಡದೆ ತಾನು ನಿತ್ಯವೂ ವಾಸಿಸುವ ಸ್ಥಳವಾವುದೆಂಬುದನ್ನು ಹೇಳಿದನು. ಆ ವೃತ್ತಾಂತವು ಲೋಕದಲ್ಲಿ ಪ್ರಖ್ಯಾತವಾಗಿದೆ.

೭. ಕೀರ್ತಿಶಾಲಿನಿಯಾದ ಪಾರ್ವತಿಯು ಮೇರುಪರ್ವತದ ಶಿಖರದಲ್ಲಿ ಪರಮೇಶ್ವರನ ಅರ್ಧಾಸನದಲ್ಲಿ ಕುಳಿತುಕೊಂಡು ನಮಸ್ಕಾರಪೂರ್ವಕವಾಗಿ ಪ್ರಶ್ನಿಸಿದಳು.

೮. ಓ ದೇವದೇವಾ, ಭಗವಂತಾ, ಚಂದ್ರಶೇಖರಾ, ಜಿತೇಂದ್ರಿಯರಾದ ಯೋಗಿಗಳೂ ಮನುಷ್ಯರೂ ಭೂಮಿಯಲ್ಲಿ ಆಚರಿಸಬೇಕಾದ ಧರ್ಮವಾವುದು ಹೇಳು.

೯. ಮಾನವನು ಮಾಡಿದ ಜಪ, ದಾನ, ಹೋಮ, ಯಾಗ, ತಪಸ್ಸು, ನಿತ್ಯ ನೈಮಿತ್ತಿಕ ಕರ್ಮ, ಧ್ಯಾನ, ಅಧ್ಯಯನ, ಇವೆಲ್ಲವೂ ಅಕ್ಷಯವಾಗುವ ಬಗೆ ಹೇಗೆ ?

ಜನ್ಮಾಂತರಸಹಸ್ರೇಣ ಯತ್ಪಾಪಂ ಪೂರ್ವಸಂಚಿತಂ ।
ಕಥಂ ತತ್ಕ್ಷಯಮಾಯಾತಿ ತನ್ಮಮಾಚಕ್ಷ್ವ ಶಂಕರ ॥೧೦॥

ಯಸ್ಮಿಂಶ್ಚ ಪೂಜಿತೋ ಭಕ್ತ್ಯಾ ತುಷ್ಯಸೇ ಪರಮೇಶ್ವರ ।
ವ್ರತಾನಿ ನಿಯಮಾಶ್ಚೈವ ಆಚಾರೋ ಧರ್ಮ ಏವ ಚ ॥೧೧॥

ಸರ್ವಸಿದ್ಧಿಕರಂ ಯತ್ರ ಹ್ಯಕ್ಷಯ್ಯಗತಿದಾಯಕಂ ।
ವಕ್ತುಮರ್ಹಸಿ ತತ್ಸರ್ವಂ ಪರಂ ಕೌತೂಹಲಂ ಹಿ ಮೇ ॥೧೨॥

॥ ಮಹೇಶ್ವರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಗುಹ್ಯಾನಾಂ ಗುಹ್ಯಮುತ್ತಮಂ ।
ಸರ್ವಕ್ಷೇತ್ರೇಷು ವಿಖ್ಯಾತಮವಿಮುಕ್ತಂ ಪ್ರಿಯಂ ಮಮ ॥೧೩॥

ಅಷ್ಟಷಷ್ಟಿಃ ಪುರಾ ಪ್ರೋಕ್ತಾ ಸ್ಥಾನಾನಾಂ ಸ್ಥಾನಮುತ್ತಮಂ ।
ಯತ್ರ ಸಾಕ್ಷಾತ್ಸ್ವಯಂ ರುದ್ರಃ ಕೃತ್ತಿವಾಸಾಃ ಸ್ವಯಂ ಸ್ಥಿತಃ ॥೧೪॥

---

೧೦. ಓ ಶಂಕರಾ, ಸಾವಿರಾರು ಜನ್ಮಗಳಿಂದ ರಾಶಿರಾಶಿಯಾಗಿ ಕೂಡಿ ಹಾಕಿದ ಪಾಪವನ್ನು ಕಳೆದುಕೊಳ್ಳುವ ಮಾರ್ಗವನ್ನು ನನಗೆ ಉಪದೇಶಿಸು.

೧೧-೧೨. ಎಲೈ ಪರಮೇಶ್ವರಾ, ಯಾವ ಕ್ಷೇತ್ರದಲ್ಲಿ ಭಕ್ತಿಯಿಂದ ಪೂಜಿಸಿದರೆ ನೀನು ತುಷ್ಟನಾಗುವೆ? ವ್ರತಗಳು, ನಿಯಮಗಳು, ಆಚಾರ, ಧರ್ಮ ಇವೆಲ್ಲ ಸಿದ್ಧಿಯನ್ನು ಪಡೆದು ಅಕ್ಷಯ್ಯಗತಿಯನ್ನು ಕೊಡುವಂತಹ ಪುಣ್ಯಸ್ಥಳವಾವುದು? ಇದೆಲ್ಲವನ್ನೂ ತಿಳಿಯಹೇಳು; ನನಗೆ ಬಹಳ ಕುತೂಹಲವಿದೆ.

೧೩. ಪರಮೇಶ್ವರನು ಹೇಳಿದನು.—ಎಲೌ ದೇವೀ, ಅತ್ಯಂತರಹಸ್ಯವೂ ಶ್ರೇಷ್ಠವೂ ಆದ ವಿಷಯವನ್ನು ಹೇಳುವೆನು ಕೇಳು. ಕ್ಷೇತ್ರಗಳಲ್ಲೆಲ್ಲ ಅವಿಮುಕ್ತವು ಪ್ರಖ್ಯಾತವಾದುದು; ಮತ್ತು ನನಗೆ ಬಹು ಪ್ರಿಯವಾದುದು.

೧೪. ಲೋಕದಲ್ಲಿ ಸುಪ್ರಸಿದ್ಧವಾದ ಅರವತ್ತೆಂಟು ಪುಣ್ಯಸ್ಥಳಗಳುಂಟೆಂದು ಪ್ರಾಚೀನ ಮಹರ್ಷಿಗಳು ಹೇಳಿದ್ದಾರೆ. ಅವುಗಳಲ್ಲೆಲ್ಲ ಅವಿಮುಕ್ತಕ್ಷೇತ್ರವು ಅತಿ ಶ್ರೇಷ್ಠವಾದುದು. ಗಜಚರ್ಮಧಾರಿಯಾದ ಸಾಕ್ಷಾನ್ಮಹೇಶ್ವರನು ಅಲ್ಲಿ ನಿಯತವಾಗಿ ವಾಸಿಸುತ್ತಿರುವನು.

ಯತ್ರ ಸಂನಿಹಿತೋ ನಿತ್ಯಮವಿಮುಕ್ತೇ ನಿರಂತರಂ |
ತತ್ಕ್ಷೇತ್ರಂ ನ ಮಯಾ ಮುಕ್ತಮವಿಮುಕ್ತಂ ತತಃ ಸ್ಮೃತಂ ||೧೫||

ಅವಿಮುಕ್ತೇ ಪರಾ ಸಿದ್ಧಿರವಿಮುಕ್ತೇ ಪರಾ ಗತಿಃ |
ಜಪ್ತಂ ದತ್ತಂ ಹುತಂ ಚೇಷ್ಟಂ ತಪಸ್ತಪ್ತಂ ಕೃತಂ ಚ ಯತ್ ||೧೬||

ಧ್ಯಾನಮಧ್ಯಯನಂ ದಾನಂ ಸರ್ವಂ ಭವತಿ ಚಾಕ್ಷಯಂ |
ಜನ್ಮಾಂತರಸಹಸ್ರೇಣ ಯತ್ಪಾಪಂ ಪೂರ್ವಸಂಚಿತಂ ||೧೭||

ಅವಿಮುಕ್ತಂ ಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಂ |
ಅವಿಮುಕ್ತಾಗ್ನಿನಾ ದಗ್ಧಮಗ್ನೌ ತೂಲಮಿವಾಹಿತಂ ||೧೮||

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ವೈ ವರ್ಣಸಂಕರಾಃ |
ಸ್ತ್ರಿಯೋ ಮ್ಲೇಚ್ಛಾಶ್ಚ ಯೇ ಚಾನ್ಯೇ ಸಂಕೀರ್ಣಾಃ ಪಾಪಯೋನಯಃ ||೧೯||

---

೧೫. ಓ ದೇವೀ, ಅಲ್ಲಿ ನನ್ನ ಸಾನ್ನಿಧ್ಯವು ಎಡೆಬಿಡದೆ ನಿರಂತರವಾಗಿರುವುದು. ಅದನ್ನು ನಾನು ಎಂದಿಗೂ ಬಿಡುವುದಿಲ್ಲವಾದುದರಿಂದ ಆ ಕ್ಷೇತ್ರಕ್ಕೆ ಅವಿಮುಕ್ತವೆಂಬ ಪ್ರಸಿದ್ಧಿ ಬಂದಿದೆ.

೧೬. ಅವಿಮುಕ್ತ ಕ್ಷೇತ್ರದಲ್ಲಿ ಉತ್ತಮವಾದ ಸಿದ್ಧಿ ಲಭಿಸುವುದು; ಶ್ರೇಷ್ಠವಾದ ಗತಿ ದೊರಕುವುದು. ಅಲ್ಲಿ ಮಾಡಿದ ಜಪ, ಪಿತೃಗಳನ್ನು ಉದ್ದೇಶಿಸಿ ಕೊಟ್ಟ ತಿಲೋದಕಾದಿದಾನ, ಯಾಗ, ತಪಸ್ಸು, ಶಾಸ್ತ್ರೋಕ್ತವಾದ ನಿತ್ಯನೈಮಿತ್ತಿಕಕರ್ಮ, ಧ್ಯಾನ, ಅಧ್ಯಯನ, ದಾನ ಇವೆಲ್ಲವೂ ಅನಂತವಾದ ಫಲವನ್ನು ಕೊಡುವುವು.

೧೭-೧೮. ಸಾವಿರಾರು ಹಿಂದಿನಜನ್ಮಗಳಲ್ಲಿ ಮಾಡಿದ ಪಾಪದ ರಾಶಿಯು ಎಷ್ಟೇ ದೊಡ್ಡದಾಗಿರಲಿ; ಅವಿಮುಕ್ತಕ್ಷೇತ್ರವನ್ನು ಪ್ರವೇಶಮಾಡಿದ ಮಾತ್ರದಿಂದಲೇ ಅದೆಲ್ಲವೂ ಬೆಂಕಿಯಲ್ಲಿ ಬಿದ್ದ ಹತ್ತಿಯಂತೆ ಈ ಮಹಾಕ್ಷೇತ್ರವೆಂಬ ಅಗ್ನಿಯಿಂದ ದಗ್ಧವಾಗುವುದು.

೧೯-೨೧. ಎಲೌ ಪ್ರಿಯೇ, ಇಲ್ಲಿ ಕೇಳು; ಅವಿಮುಕ್ತಕ್ಷೇತ್ರದಲ್ಲಿ ಕಾಲವಶದಿಂದ ಮೃತಪಟ್ಟ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ಸಂಕರ

**ಕೀಟಾಃ ಪಿಪೀಲಿಕಾಶ್ಚೈವ ಯೇ ಚಾನ್ಯೇ ಮೃಗಪಕ್ಷಿಣಃ।**
**ಕಾಲೇನ ನಿಧನಂ ಪ್ರಾಪ್ತಾ ಅವಿಮುಕ್ತೇ ಶೃಣು ಪ್ರಿಯೇ ॥೨೦॥**

**ಚಂದ್ರಾರ್ಧಮೌಲಿನಃ ಸರ್ವೇ ಲಲಾಟಾಕ್ಷಾ ವೃಷಧ್ವಜಾಃ।**
**ಶಿವೇ ಮಮ ಪುರೇ ದೇವಿ ಮೋದಂತೇ ತತ್ರ ಮಾನವಾಃ ॥೨೧॥**

**ಅಕಾಮೋ ವಾ ಸಕಾಮೋ ವಾ ಹ್ಯಪಿ ತಿರ್ಯಗ್ಗತೋಽಪಿ ವಾ।**
**ಅವಿಮುಕ್ತೇ ತ್ಯಜನ್ ಪ್ರಾಣಾನ್ ಮಮ ಲೋಕೇ ಮಹೀಯತೇ ॥೨೨॥**

**ಅವಿಮುಕ್ತಂ ಯದಾ ಗಚ್ಛೇತ್ಕದಾಚಿತ್ಕಾಲಪರ್ಯಯಾತ್।**
**ಅಶ್ಮನಾ ಚರಣೌ ಬದ್ಧ್ವಾ ತತ್ರೈವ ನಿಧನಂ ವ್ರಜೇತ್ ॥೨೩॥**

**ಅವಿಮುಕ್ತಂ ಗತೋ ದೇವಿ ನ ನಿರ್ಗಚ್ಛೇತ್ತತಃ ಪುನಃ।**
**ಸೋಽಪಿ ಮತ್ಪದಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೨೪॥**

---

ವರ್ಣದವರು, ಸ್ತ್ರೀಯರು, ಮ್ಲೇಚ್ಛರು, ಇನ್ನೂ ಉಳಿದ ಮಿಶ್ರಜಾತಿಯವರು, ಪಾಪ ಜನ್ಮದವರು, ಕೀಟಗಳು, ಇರುವೆಗಳು, ಇತರ ಮೃಗಪಕ್ಷಿಗಳು, ಮನುಷ್ಯರು ಇವರೆಲ್ಲರೂ ನನ್ನಂತೆಯೇ ಮುಡಿಯಲ್ಲಿ ಚಂದ್ರನೂ, ಹಣೆಯಲ್ಲಿ ಕಣ್ಣೂ, ಧ್ವಜದಲ್ಲಿ ವೃಷಭವೂ ಆಗಿ ಮೆರೆಯುತ್ತ ಮಂಗಳಮಯವಾದ ನನ್ನ ದಿವ್ಯ ನಗರದಲ್ಲಿ ಆನಂದ ದಿಂದ ಕಾಲಕಳೆಯುವರು.

೨೨. ಮನುಷ್ಯನೋ, ತಿರ್ಯಕ್ಪ್ರಾಣಿಯೋ ಯಾವ ಜಂತುವೇ ಆಗಲಿ, ಇಷ್ಟವಿದ್ದೋ ಇಲ್ಲದೆಯೋ ಅವಿಮುಕ್ತಕ್ಷೇತ್ರದಲ್ಲಿ ದೇಹತ್ಯಾಗವನ್ನು ಮಾಡಿದರೆ ನನ್ನ ಲೋಕದಲ್ಲಿ ಮನ್ನಣೆ ದೊರೆಯುವುದು.

೨೩. ಯಾವಾಗಲಾದರೂ ಒಂದು ಸಾರಿ ಕಾಲವಶದಿಂದ ಅವಿಮುಕ್ತ ಕ್ಷೇತ್ರಕ್ಕೆ ಹೋದರೆ ಕಾಲಿಗೆ ಕಲ್ಲುಗಳನ್ನು ಬಿಗಿದುಕೊಂಡು ಅಲ್ಲೇ ಮರಣವನ್ನು ಹೊಂದಬೇಕು.

೨೪. ಎಲೌ ದೇವೀ, ಅವಿಮುಕ್ತಕ್ಷೇತ್ರಕ್ಕೆ ಹೋದವನು ಅಲ್ಲಿಂದ ಮತ್ತೆ ಹಿಂದಿರುಗಿ ಬರಬಾರದು. ಅಂತಹವನೂ ಕೂಡ ನನ್ನ ಸ್ಥಾನವನ್ನೈದುವನು. ಇದರಲ್ಲಿ ಸಂದೇಹವಿಲ್ಲ.

ವಸ್ತ್ರಪ್ರದಂ ರುದ್ರಕೋಟಿಂ ಸಿದ್ಧೇಶ್ವರಮಹಾಲಯಂ ।
ಗೋಕರ್ಣಂ ರುದ್ರಕರ್ಣಂ ಚ ಸುವರ್ಣಾಕ್ಷಂ ತಥೈವ ಚ ॥೨೫॥

ಅಮರಂ ಚ ಮಹಾಕಾಲಂ ತಥಾ ಕಾಯಾವರೋಹಣಂ ।
ಏತಾನೀಹ ಪವಿತ್ರಾಣಿ ಸಾನ್ನಿಧ್ಯಾತ್ಸಂಧ್ಯಯೋರ್ದ್ವಯೋಃ ॥೨೬॥

ಕಾಲಿಂಜರವನಂ ಚೈವ ಶಂಕುಕರ್ಣಂ ಸ್ಥಲೇಶ್ವರಂ ।
ಏತಾನಿ ಚ ಪವಿತ್ರಾಣಿ ಸಾನ್ನಿಧ್ಯಾದ್ಧಿ ಮಮ ಪ್ರಿಯೇ ।
ಅವಿಮುಕ್ತೇ ವರಾರೋಹೇ ತ್ರಿಸಂಧ್ಯಂ ನಾತ್ರ ಸಂಶಯಃ ॥೨೭॥

ಹರಿಶ್ಚಂದ್ರಂ ಪರಂ ಗುಹ್ಯಂ ಗುಹ್ಯಮಾಮ್ರಾತಕೇಶ್ವರಂ ।
ಜಲೇಶ್ವರಂ ಪರಂ ಗುಹ್ಯಂ ಗುಹ್ಯಂ ಶ್ರೀಪರ್ವತಂ ತಥಾ ॥೨೮॥

ಮಹಾಲಯಂ ತಥಾ ಗುಹ್ಯಂ ಕೃಮಿಚಂಡೇಶ್ವರಂ ಶುಭಂ ।
ಗುಹ್ಯಾತಿಗುಹ್ಯಂ ಕೇದಾರಂ ಮಹಾಭೈರವಮೇವ ಚ ॥೨೯॥

---

೨೫-೨೬. ವಸ್ತ್ರಪ್ರದ, ರುದ್ರಕೋಟಿ, ಸಿದ್ಧೇಶ್ವರ, ಮಹಾಲಯ, ಗೋಕರ್ಣ, ರುದ್ರಕರ್ಣ, ಸುವರ್ಣಾಕ್ಷ, ಅಮರ, ಮಹಾಕಾಲ, ಕಾಯಾವರೋಹಣ ಇವೆಲ್ಲವೂ ಪವಿತ್ರವಾದ ಕ್ಷೇತ್ರಗಳು. ಪ್ರಾತಃಕಾಲದಲ್ಲೂ ಸಾಯಂಕಾಲದಲ್ಲೂ ಇವುಗಳಲ್ಲಿ ಪರಮೇಶ್ವರನ ಸಾನ್ನಿಧ್ಯವುಂಟು.

೨೭. ಓ ಪ್ರಿಯೆ, ಕಾಲಿಂಜರವನ, ಶಂಕುಕರ್ಣ, ಸ್ಥಲೇಶ್ವರ ಇವು ನನ್ನ ಸಾನ್ನಿಧ್ಯದ ಕಾರಣದಿಂದ ಪವಿತ್ರಕ್ಷೇತ್ರಗಳಾಗಿವೆ. ಎಲೌ ಸುಂದರೀ, ಅವಿಮುಕ್ತ ಕ್ಷೇತ್ರದಲ್ಲಿ ದಿನದ ಮೂರು ಸಂಧ್ಯಾಕಾಲಗಳಲ್ಲಿಯೂ ನನ್ನ ಸಾನ್ನಿಧ್ಯವಿದೆ. ಇದರಲ್ಲಿ ಸಂಶಯವಿಲ್ಲ.

೨೮-೩೦. ಹರಿಶ್ಚಂದ್ರ, ಆಮ್ರಾತಕೇಶ್ವರ, ಜಲೇಶ್ವರ, ಶ್ರೀಪರ್ವತ, ಮಹಾಲಯ, ಕ್ರಿಮಿಚಂಡೇಶ್ವರ ಇವು ಪವಿತ್ರವಾದ ಕ್ಷೇತ್ರಗಳು. ಕೇದಾರವೂ

ಅಷ್ಟಾವೇತಾನಿ ಸ್ಥಾನಾನಿ ಸಾನ್ನಿಧ್ಯಾದ್ಧಿ ಮಮ ಪ್ರಿಯೇ ।
ಅವಿಮುಕ್ತೇ ವರಾರೋಹೇ ತ್ರಿಸಂಧ್ಯಂ ನಾತ್ರ ಸಂಶಯಃ ॥೩೦॥

ಯಾನಿ ಸ್ಥಾನಾನಿ ಶ್ರೂಯಂತೇ ತ್ರಿಷು ಲೋಕೇಷು ಸುವ್ರತೇ ।
ಅವಿಮುಕ್ತಸ್ಯ ಪಾದೇಷು ನಿತ್ಯಂ ಸಂನಿಹಿತಾನಿ ವೈ ॥೩೧॥

ಅಥೋತ್ತರಾಂ ಕಥಾಂ ದಿವ್ಯಾಮವಿಮುಕ್ತಸ್ಯ ಶೋಭನೇ ।
ಸ್ಕಂದೋ ವಕ್ಷ್ಯತಿ ಮಾಹಾತ್ಮ್ಯಮೃಷೀಣಾಂ ಭಾವಿತಾತ್ಮನಾಂ ॥೩೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಅವಿಮುಕ್ತಮಹಾತ್ಮ್ಯೇ
ಏಕಾಶೀತ್ಯಧಿಕಶತತಮೋಽಧ್ಯಾಯಃ

---

ಮಹಾಭೈರವವೂ ಅತ್ಯಂತ ಪಾವನವಾದುವು. ಎಲೌ ಪ್ರಿಯೇ, ಈ ಎಂಟು ಸ್ಥಾನಗಳೂ ನನ್ನ ಸಾನ್ನಿಧ್ಯದಿಂದ ಪರಿಶುದ್ಧವಾಗಿವೆ. ಓ ಸುಂದರೀ, ಅವಿಮುಕ್ತ ಕ್ಷೇತ್ರದಲ್ಲಿ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಈ ಮೂರು ವೇಳೆಗಳಲ್ಲಿಯೂ ನಾನು ವಾಸಿಸುವೆನು ; ಸಂದೇಹವಿಲ್ಲ.

೩೧. ಮಂಗಲವ್ರತನಿರತಳಾದ ಓ ದೇವೀ, ಮೂರು ಲೋಕಗಳಲ್ಲಿಯೂ ಯಾವ ಯಾವ ಪುಣ್ಯಸ್ಥಲಗಳುಂಟೆಂದು ಕೇಳಿರುವೆವೋ ಅವೆಲ್ಲವೂ ಅವಿಮುಕ್ತ ಕ್ಷೇತ್ರದ ಪಾದಗಳಲ್ಲಿ ನಿತ್ಯವೂ ನೆಲಸಿವೆ.

೩೨. ಎಲೌ ಕಲ್ಯಾಣೀ, ಅವಿಮುಕ್ತಕ್ಷೇತ್ರದ ಮುಂದಣ ಕಥೆಯನ್ನೂ, ಆತ್ಮಜ್ಞಾನನಿಷ್ಠರಾದ ಋಷಿಗಳ ಮಾಹಾತ್ಮ್ಯವನ್ನೂ ಇನ್ನು ಮುಂದೆ ಕುಮಾರ ಸ್ವಾಮಿ ಹೇಳುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅವಿಮುಕ್ತಕ್ಷೇತ್ರ ಮಾಹಾತ್ಮ್ಯದ ವರ್ಣನವು ಪ್ರಾರಂಭ ವಾಗಿದೆ.

ಕಾಶೀಕ್ಷೇತ್ರವನ್ನೇ ಅವಿಮುಕ್ತಕ್ಷೇತ್ರವೆನ್ನುವರು. ಪರಮೇಶ್ವರನ ಸಾನ್ನಿಧ್ಯವು ಇಲ್ಲಿ ನಿರಂತರವಾಗಿ ಇರುವ ಕಾರಣ ಈ ಹೆಸರು ಬಂದಿದೆ. ಈ ಕ್ಷೇತ್ರದಲ್ಲಿ ಮಾಡಿದ ಜಪ, ದಾನ, ಹೋಮ ಮುಂತಾದುವೆಲ್ಲವೂ ಅಕ್ಷಯವಾಗುವುವು. ಇಲ್ಲಿ ಮೃತಿ ಯನ್ನೈದಿದ ಸಕಲ ಪ್ರಾಣಿಗಳೂ ಶಿವನ ಸಾಯುಜ್ಯವನ್ನು ಪಡೆಯುವುವು. ರುದ್ರ ಕೋಟಿ, ಸಿದ್ಧೇಶ್ವರ ಮೊದಲಾದ ಪುಣ್ಯಕ್ಷೇತ್ರಗಳಿಗಿಂತ ಅವಿಮುಕ್ತವು ಅತ್ಯಂತ ಪಾವನವಾದುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅವಿಮುಕ್ತಕ್ಷೇತ್ರದ ಮಾಹಾತ್ಮ್ಯದಲ್ಲಿ
ನೂರ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವ್ಯಶೀತ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಕೈಲಾಸಪೃಷ್ಠಮಾಸೀನಂ ಸ್ಕಂದಂ ಬ್ರಹ್ಮವಿದಾಂ ವರಂ।
ಪಪ್ರಚ್ಛುರ್ಋಷಯಃ ಸರ್ವೇ ಸನಕಾದ್ಯಾಸ್ತಪೋಧನಾಃ || ೧ ||

ತಥಾ ರಾಜರ್ಷಯಃ ಸರ್ವೇ ಯೇ ಭಕ್ತಾಸ್ತು ಮಹೇಶ್ವರೇ।
ಬ್ರೂಹಿ ತ್ವಂ ಸ್ಕಂದ ಭೂಲೋಕೇ ಯತ್ರ ನಿತ್ಯಂ ಭವಃ ಸ್ಥಿತಃ || ೨ ||

|| ಸ್ಕಂದ ಉವಾಚ ||

ಮಹಾತ್ಮಾ ಸರ್ವಭೂತಾತ್ಮಾ ದೇವದೇವಃ ಸನಾತನಃ।
ಘೋರರೂಪಂ ಸಮಾಸ್ಥಾಯ ದುಷ್ಕರಂ ದೇವದಾನವೈಃ || ೩ ||

ಆಭೂತಸಂಪ್ಲವಂ ಯಾವತ್ಸ್ಥಾಣುಭೂತಃ ಸ್ಥಿತಃ ಪ್ರಭುಃ।
ಗುಹ್ಯಾನಾಂ ಪರಮಂ ಗುಹ್ಯಮವಿಮುಕ್ತಮಿತಿ ಸ್ಮೃತಂ || ೪ ||

---

೧-೨. ಸೂತಪೌರಾಣಿಕನು ಹೇಳಿದನು.—ಬ್ರಹ್ಮಜ್ಞಾನಿಗಳಲ್ಲಿ ಅಗ್ರೇಸರನಾದ ಕುಮಾರಸ್ವಾಮಿಯು ಕೈಲಾಸಪರ್ವತದ ಶಿಖರದಲ್ಲಿ ಕುಳಿತಿದ್ದನು. ಮಹಾತಪಸ್ವಿಗಳಾದ ಸನಕಾದಿಮುನಿಗಳೂ ಪರಮೇಶ್ವರನ ಭಕ್ತರಾದ ಎಲ್ಲ ರಾಜರ್ಷಿಗಳೂ ಅವನ ಸುತ್ತ ನೆರೆದಿದ್ದರು. "ಓ ಷಣ್ಮುಖಾ, ಮಹಾದೇವನು ನಿರಂತರವಾಗಿ ವಾಸಿಸುತ್ತಿರುವ ಸ್ಥಳವಾವುದು ? ಹೇಳು" ಎಂದು ಅವರು ಅವನನ್ನು ಪ್ರಶ್ನಿಸಿದರು.

೩-೪. ಕುಮಾರಸ್ವಾಮಿ ಹೇಳಿದನು.—ಮಹಾತ್ಮನೂ, ಸಕಲಜಂತುಗಳ ಅಂತರಾತ್ಮನೂ, ದೇವಾಧಿದೇವನೂ, ಶಾಶ್ವತನೂ ಆದ ಮಹಾದೇವನು ದೇವತೆಗಳಿಗೂ ದಾನವರಿಗೂ ಅಸಾಧ್ಯವಾದ ಘೋರರೂಪವನ್ನು ತಾಳಿ, ಕ್ಷೇತ್ರಗಳಲ್ಲೆಲ್ಲ ಅತಿಪವಿತ್ರವಾದ ಅವಿಮುಕ್ತಕ್ಷೇತ್ರದಲ್ಲಿ ಮಹಾಪ್ರಳಯದ ವರೆಗೂ ನಿಶ್ಚಲನಾಗಿ ನೆಲಸಿರುವನೆಂದು ತಿಳಿಯಬೇಕು.

ಅವಿಮುಕ್ತೇ ಸದಾ ಸಿದ್ಧಿರ್ಯತ್ರ ನಿತ್ಯಂ ಭವಃ ಸ್ಥಿತಃ ।
ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ಯದುಕ್ತಂ ತ್ವೀಶ್ವರೇಣ ತು ॥ ೫ ॥

ಸ್ಥಾನಂ ಪರಂ ಪವಿತ್ರಂ ಚ ತೀರ್ಥಮಾಯತನಂ ತಥಾ ।
ಶ್ಮಶಾನಸಂಸ್ಥಿತಂ ವೇಶ್ಮ ದಿವ್ಯಮಂತರ್ಹಿತಂ ಚ ಯತ್ ॥ ೬ ॥

ಭೂಲೋಕೇ ನೈವ ಸಂಯುಕ್ತಮಂತರಿಕ್ಷೇ ಶಿವಾಲಯಂ ।
ಅಯುಕ್ತಾಸ್ತು ನ ಪಶ್ಯಂತಿ ಯುಕ್ತಾಃ ಪಶ್ಯಂತಿ ಚೇತಸಾ ॥ ೭ ॥

ಬ್ರಹ್ಮಚರ್ಯಯುತಃ ಶಾಂತೋಽಪ್ಯಥ ವೇದಾಂತಗೋ ದ್ವಿಜಃ ।
ಆದೇಹಪತನಾದ್ಯಾವತ್ತತ್ಕ್ಷೇತ್ರಂ ಯೋ ನ ಮುಂಚತಿ ॥ ೮ ॥

ಬ್ರಹ್ಮಚರ್ಯವ್ರತೈಃ ಸಮ್ಯಕ್ಸಮ್ಯಗಿಷ್ಟಂ ಮಖೈರ್ಭವೇತ್ ।
ಅಪಾಪಾತ್ಮಾ ಗತಿಃ ಸರ್ವಾ ಯಾ ತೂಕ್ತಾ ಚ ಕ್ರಿಯಾವತಾಂ ॥ ೯ ॥

---

೫. ಪರಮೇಶ್ವರನ ನಿರಂತರವಾಸಸ್ಥಾನವೆನಿಸಿದ ಅವಿಮುಕ್ತಕ್ಷೇತ್ರದಲ್ಲಿ ತಪಸ್ಸಿದ್ಧಿಯು ಸದಾ ಲಭಿಸುವುದು. ಈ ಕ್ಷೇತ್ರದ ಮಹಿಮೆಯನ್ನು ಈಶ್ವರನು ತಾನೇ ಕೊಂಡಾಡಿರುವನು.

೬-೭. ಶ್ರೇಷ್ಠವಾದ ಈ ಸ್ಥಾನ, ಪವಿತ್ರವಾದ ತೀರ್ಥ, ಪುಣ್ಯಾಲಯ, ಶ್ಮಶಾನದಲ್ಲಿರುವ ಅದೃಶ್ಯವಾದ ದಿವ್ಯಮಂದಿರ, ಭೂಲೋಕದ ಸಂಬಂಧವೇ ಇಲ್ಲದೆ ಅಂತರಿಕ್ಷದಲ್ಲಿರುವ ಶಿವಾಲಯ ಇವುಗಳನ್ನು ಯೋಗಿಗಳಲ್ಲದವರು ಕಾಣಲಾರರು. ಯೋಗಿಗಳ ಮನಸ್ಸಿಗೆ ಮಾತ್ರವೇ ಇವು ಗೋಚರವಾಗುವುವು.

೮. ದೇಹಾವಸಾನದ ವರೆಗೂ ಆ ಕ್ಷೇತ್ರವನ್ನು ಬಿಡದೆ ಅಲ್ಲೇ ವಾಸಿಸುವ ಬ್ರಾಹ್ಮಣನು ಬ್ರಹ್ಮಚರ್ಯವ್ರತನಿಷ್ಠನೂ, ಶಾಂತನೂ, ವೇದಾಂತಪಾರಂಗತನೂ ಆಗುವನು.

೯. ಆತನು ಬ್ರಹ್ಮಚರ್ಯವ್ರತವನ್ನು ಸಾಂಗವಾಗಿ ನೆರವೇರಿಸಿ, ಬಗೆಬಗೆಯ ಯಾಗಗಳನ್ನು ಶಾಸ್ತ್ರೋಕ್ತವಾಗಿ ಮಾಡಿದವನಿಗೆ ಸಮಾನನಾಗುವನು. ವೇದೋಕ್ತವಾದ ಕರ್ಮಗಳನ್ನು ತಪ್ಪದೆ ನಡೆಸಿದವರಿಗೆ ದೊರಕುವಂತಹ ಪಾಪರಹಿತವಾದ ಸದ್ಗತಿಯು ಆತನಿಗೆ ಲಭಿಸುವುದು.

ಯಸ್ತತ್ರ ನಿವಸೇದ್ವಿಪ್ರೋಽಸಂಯುಕ್ತಾತ್ಮಾಽಸಮಾಹಿತಃ ।
ತ್ರಿಕಾಲಮಪಿ ಭುಂಜಾನೋ ವಾಯುಭಕ್ಷಸಮೋ ಭವೇತ್ ॥೧೦॥

ನಿಮೇಷಮಾತ್ರಮಪಿ ಯೋ ಹ್ಯವಿಮುಕ್ತೇ ತು ಭಕ್ತಿಮಾನ್ ।
ಬ್ರಹ್ಮಚರ್ಯಸಮಾಯುಕ್ತಃ ಪರಮಂ ಪ್ರಾಪ್ನುಯಾತ್ತಪಃ ॥೧೧॥

ಯೋಽತ್ರ ಮಾಸಂ ವಸೇದ್ಧೀರೋ ಲಘ್ವಾಹಾರೋ ಜಿತೇಂದ್ರಿಯಃ ।
ಸಮ್ಯಕ್ತೇನ ವ್ರತಂ ಚೀರ್ಣಂ ದಿವ್ಯಂ ಪಾಶುಪತಂ ಮಹತ್ ॥೧೨॥

ಜನ್ಮಮೃತ್ಯುಭಯಂ ತೀರ್ತ್ವಾ ಸ ಯಾತಿ ಪರಮಾಂ ಗತಿಂ ।
ನೈಶ್ರೇಯಸೀಂ ಗತಿಂ ಪುಣ್ಯಾಂ ತಥಾ ಯೋಗಗತಿಂ ವ್ರಜೇತ್ ॥೧೩॥

---

೧೦. ಯಾವನಾದರೊಬ್ಬ ಬ್ರಾಹ್ಮಣನು ಇಂದ್ರಿಯಗಳ ದಾಸನಾಗಿ, ಚಪಲ ಸ್ವಭಾವದವನಾಗಿ ದಿನಕ್ಕೆ ಮೂರುವೇಳೆ ಊಟಮಾಡುತ್ತ ಅಲ್ಲಿ ವಾಸಿಸುತ್ತಿರುವನೆಂದು ಇಟ್ಟುಕೊಳ್ಳೋಣ. ಅಂತಹವನೂ ಕೂಡ ವಾಯುವನ್ನೇ ಸೇವಿಸುತ್ತ ತಪಸ್ಸುಮಾಡುತ್ತಿರುವ ಯೋಗಿಗೆ ಸಮಾನನಾಗುವನು.

೧೧. ರೆಪ್ಪೆ ಬಡಿಯುವಷ್ಟು ಕಾಲವಾದರೂ ಅವಿಮುಕ್ತಕ್ಷೇತ್ರದಲ್ಲಿ ಭಕ್ತಿಯಿಂದ ವಾಸಿಸುವಾತನು ಬ್ರಹ್ಮಚರ್ಯನಿಷ್ಠನಾಗಿ ಉತ್ತಮವಾದ ತಪಸ್ಸಿದ್ಧಿಯನ್ನು ಪಡೆಯುವನು.

೧೨. ಜ್ಞಾನಿಯಾದವನು ಮಿತವಾಗಿ ಆಹಾರವನ್ನು ಸೇವಿಸುತ್ತ, ಜಿತೇಂದ್ರಿಯನಾಗಿ ಒಂದು ತಿಂಗಳ ಕಾಲ ಇಲ್ಲಿ ವಾಸಮಾಡಿದರೆ ಸಾಕು; ಆತನಿಗೆ ಅತಿಶ್ರೇಷ್ಠವಾದ ಪಾಶುಪತವ್ರತವನ್ನು ಶಾಸ್ತ್ರೋಕ್ತವಾಗಿ ಮಾಡಿದಂತಹ ಫಲವು ಬರುವುದು.

೧೩. ಅವನಿಗೆ ಹುಟ್ಟುಸಾವುಗಳ ಭಯವಿಲ್ಲ; ಉತ್ತಮವಾದ ಗತಿಯು ಲಭಿಸುವುದು. ಪುಣ್ಯಮಯವಾದ ಮೋಕ್ಷಪದವಿಯೂ, ಯೋಗದಿಂದ ಲಭ್ಯವಾಗುವ ಸದ್ಗತಿಯೂ ಕೈಸೇರುವುವು.

ನ ಹಿ ಯೋಗಗತಿರ್ದಿವ್ಯಾ ಜನ್ಮಾಂತರಶತೈರಪಿ ।
ಪ್ರಾಪ್ಯತೇ ಕ್ಷೇತ್ರಮಾಹಾತ್ಮ್ಯಾತ್ ಪ್ರಭಾವಾಚ್ಛಂಕರಸ್ಯ ತು ॥೧೪॥

ಬ್ರಹ್ಮಹಾ ಯೋಽಭಿಗಚ್ಛೇತ್ತು ಅವಿಮುಕ್ತಂ ಕದಾಚನ ।
ತಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಾದ್ಬ್ರಹ್ಮಹತ್ಯಾ ನಿವರ್ತತೇ ॥೧೫॥

ಆದೇಹಪತನಾದ್ಯಾವತ್ ಕ್ಷೇತ್ರಂ ಯೋ ನ ವಿಮುಂಚತಿ ।
ನ ಕೇವಲಂ ಬ್ರಹ್ಮಹತ್ಯಾ ಪ್ರಾಕ್ಕೃತಂ ಚ ನಿವರ್ತತೇ ॥೧೬॥

ಪ್ರಾಪ್ಯ ವಿಶ್ವೇಶ್ವರಂ ದೇವಂ ನ ಸ ಭೂಯೋಽಭಿಜಾಯತೇ ।
ಅನನ್ಯಮಾನಸೋ ಭೂತ್ವಾ ಯೋಽವಿಮುಕ್ತಂ ನ ಮುಂಚತಿ ॥೧೭॥

ತಸ್ಯ ದೇವಃ ಸದಾ ತುಷ್ಟಃ ಸರ್ವಾನ್ ಕಾಮಾನ್ ಪ್ರಯಚ್ಛತಿ ।
ದ್ವಾರಂ ಯತ್ಸಾಂಖ್ಯಯೋಗಾನಾಂ ಸ ತತ್ರ ವಸತಿ ಪ್ರಭುಃ ॥೧೮॥

---

೧೪. ನೂರಾರು ಜನ್ಮಗಳನ್ನು ಎತ್ತಿದರೂ ಯೋಗದಲ್ಲಿ ಸಿದ್ಧಿ ದೊರಕುವುದು ಕಷ್ಟ. ಆದರೆ ಅದು ಈ ಕ್ಷೇತ್ರದ ಮಹಿಮೆಯಿಂದಲೂ ಶಂಕರನ ಅನುಗ್ರಹದಿಂದಲೂ ಇಲ್ಲಿ ಶೀಘ್ರವಾಗಿ ಪ್ರಾಪ್ತವಾಗುವುದು.

೧೫. ಬ್ರಹ್ಮಹತ್ಯೆಮಾಡಿದವನು ಅವಿಮುಕ್ತಕ್ಷೇತ್ರಕ್ಕೆ ಎಂದಾದರೊಂದು ಸಾರಿ ಹೋದರೂ ಸಾಕು. ಆ ಕ್ಷೇತ್ರದ ಮಹಿಮೆಯಿಂದ ಅಂತಹ ಮಹಾ ಪಾತಕವೂ ಕೂಡ ಪರಿಹಾರವಾಗುತ್ತದೆ.

೧೬. ದೇಹಾವಸಾನದ ವರೆಗೆ ಈ ಕ್ಷೇತ್ರದಲ್ಲಿ ನಿರಂತರವಾಗಿ ವಾಸಮಾಡು ವವನ ಬ್ರಹ್ಮಹತ್ಯಾದೋಷವೊಂದೇ ಅಲ್ಲ; ಇನ್ನೂ ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪವೂ ಕೂಡ ತೊಲಗುತ್ತದೆ.

೧೭-೧೮. ವಿಶ್ವೇಶ್ವರಸ್ವಾಮಿಯನ್ನು ದರ್ಶನಮಾಡಿದಾತನಿಗೆ ಪುನರ್ಜನ್ಮ ವಿಲ್ಲ; ಏಕಾಂತಚಿತ್ತನಾಗಿ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುವವನ ವಿಷಯದಲ್ಲಿ ಪರಮೇಶ್ವರನು ಯಾವಾಗಲೂ ಸಂತುಷ್ಟನಾಗಿರುವನು; ಅಲ್ಲದೆ ಅವನಿಗೆ ಸಕಲೇ ಷ್ಟಾರ್ಥಗಳನ್ನೂ ಕರುಣಿಸುವನು. ಸಾಂಖ್ಯಯೋಗಿಗಳಿಗೆ ಮುಕ್ತಿದ್ವಾರವೆನಿಸಿದ ಈ ಕ್ಷೇತ್ರದಲ್ಲಿ ಭಕ್ತರ ಮೇಲೆ ಕರುಣೆಯಿಂದ ಜಗತ್ಪ್ರಭುವಾದ ಮಹಾದೇವನು ತನ್ನ ಪ್ರಮಥಗಣಗಳೊಡನೆ ಕೂಡಿ ವಾಸಿಸುವನು.

ಸಗಣೋ ಹಿ ಭವೋ ದೇವೋ ಭಕ್ತಾನಾಮನುಕಂಪಯಾ ।
ಅವಿಮುಕ್ತಂ ಪರಂ ಕ್ಷೇತ್ರಮವಿಮುಕ್ತೇ ಪರಾ ಗತಿಃ ||೧೯||

ಅವಿಮುಕ್ತೇ ಪರಾ ಸಿದ್ಧಿರವಿಮುಕ್ತೇ ಪರಂ ಪದಂ ।
ಅವಿಮುಕ್ತಂ ನಿಷೇವೇತ ದೇವರ್ಷಿಗಣಸೇವಿತಂ ||೨೦||

ಯ ಇಚ್ಛೇನ್ಮಾನವೋ ಧೀಮಾನ್ ಪುನರ್ಜನ್ಮ ನ ಚಾತ್ಮನಃ ।
ಮೇರೋಃ ಶಕ್ಯೋ ಗುಣಾನ್ ವಕ್ತುಂ ದ್ವೀಪಾನಾಂ ಚ ತಥೈವ ಚ ||೨೧||

ಸಮುದ್ರಾಣಾಂ ಚ ಸರ್ವೇಷಾಂ ನಾವಿಮುಕ್ತಸ್ಯ ಶಕ್ಯತೇ ।
ಅಂತಕಾಲೇ ಮನುಷ್ಯಾಣಾಂ ಛಿದ್ಯಮಾನೇಷು ಮರ್ಮಸು ||೨೨||

ವಾಯುನಾ ಪ್ರೇರ್ಯಮಾಣಾನಾಂ ಸ್ಮೃತಿರ್ನೈವೋಪಜಾಯತೇ ।
ಅವಿಮುಕ್ತೇ ಹ್ಯಂತಕಾಲೇ ಭಕ್ತಾನಾಮೀಶ್ವರಃ ಸ್ವಯಂ ||೨೩||

---

೧೯-೨೦. ಅವಿಮುಕ್ತವು ಉತ್ತಮವಾದ ಕ್ಷೇತ್ರ. ಅವಿಮುಕ್ತವು ಶ್ರೇಷ್ಠವಾದ ಗತಿಯನ್ನು ಕೊಡುತ್ತದೆ. ಅವಿಮುಕ್ತದಲ್ಲಿ ಉತ್ತಮವಾದ ಸಿದ್ಧಿ ಲಭಿಸುತ್ತದೆ. ಅವಿಮುಕ್ತವು ಪರಮಪದವನ್ನು ದೊರಕಿಸಿಕೊಡುತ್ತದೆ. ಪುನರ್ಜನ್ಮವನ್ನು ಅಪೇಕ್ಷಿಸದ ಜ್ಞಾನಿಯಾದ ಮಾನವನು ದೇವತೆಗಳಿಂದಲೂ ಋಷಿಗಳಿಂದಲೂ ಸೇವೆಯನ್ನು ಕೈಗೊಳ್ಳುವ ಅವಿಮುಕ್ತಕ್ಷೇತ್ರವನ್ನು ಆಶ್ರಯಿಸಬೇಕು.

೨೧. ಮೇರುವಿನ ಗುಣಗಳನ್ನೂ, ದ್ವೀಪಗಳ ಗುಣಗಳನ್ನೂ, ಎಲ್ಲ ಸಮುದ್ರಗಳ ಗುಣಗಳನ್ನೂ ಹೇಳಬಹುದು. ಆದರೆ ಅವಿಮುಕ್ತಕ್ಷೇತ್ರದ ಗುಣಗಳನ್ನು ಮಾತ್ರ ಹೇಳುವುದು ಸಾಧ್ಯವಿಲ್ಲ.

೨೨-೨೩. ಕೊನೆಗಾಲದಲ್ಲಿ ಪ್ರಾಣವಾಯುಗಳು ಶರೀರದಿಂದ ಹೊರಹೊರಡುವಾಗ ಮರ್ಮಸ್ಥಾನಗಳಲ್ಲಿ ಇರಿತವು ಕಾಣಿಸಿಕೊಳ್ಳುತ್ತದೆ. ಪ್ರಾಣಿಗಳಿಗೆ ಆಗ ಸ್ಮರಣೆಯೇ ಇರುವುದಿಲ್ಲ. ಅವಿಮುಕ್ತಕ್ಷೇತ್ರದಲ್ಲಿ ಕರ್ಮವಶದಿಂದ ದೇಹತ್ಯಾಗಮಾಡುವ ತನ್ನ ಭಕ್ತರ ಮೇಲೆ ಕನಿಕರಗೊಂಡು ಪರಮೇಶ್ವರನು ತಾನೇ ಅವರ ಕಿವಿಯಲ್ಲಿ ತಾರಕಮಂತ್ರವನ್ನು ಜಪಿಸುವನು.

**ಕರ್ಮಭಿಃ ಪ್ರೇರ್ಯಮಾಣಾನಾಂ ಕರ್ಣಜಾಪಂ ಪ್ರಯಚ್ಛತಿ ।**
**ಮಣಿಕರ್ಣ್ಯಾಂ ತ್ಯಜನ್ ದೇಹಂ ಗತಿಮಿಷ್ಟಾಂ ವ್ರಜೇನ್ನರಃ ॥೨೪॥**

**ಈಶ್ವರಪ್ರೇರಿತೋ ಯಾತಿ ದುಷ್ಪ್ರಾಪಮಕೃತಾತ್ಮಭಿಃ ।**
**ಅಶಾಶ್ವತಮಿದಂ ಜ್ಞಾತ್ವಾ ಮಾನುಷ್ಯಂ ಬಹುಕಿಲ್ಬಿಷಂ ॥೨೫॥**

**ಅವಿಮುಕ್ತಂ ನಿಷೇವೇತ ಸಂಸಾರಭಯಮೋಚನಂ ।**
**ಯೋಗಮೋಕ್ಷಪ್ರದಂ ಪುಣ್ಯಂ ಬಹುವಿಘ್ನವಿನಾಶನಂ ॥೨೬॥**

**ವಿಘ್ನೈರಾಲೋಡ್ಯಮಾನೋಽಪಿ ಯೋಽವಿಮುಕ್ತಂ ನ ಮುಂಚತಿ ।**
**ಸ ಮುಂಚತಿ ಜರಾಂ ಮೃತ್ಯುಂ ಜನ್ಮ ಚೈತದಶಾಶ್ವತಂ ।**
**ಅವಿಮುಕ್ತಪ್ರಸಾದಾತ್ತು ಶಿವಸಾಯುಜ್ಯಮಾಪ್ನುಯಾತ್ ॥೨೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽವಿಮುಕ್ತಮಾಹಾತ್ಮ್ಯೇ**
**ದ್ವ್ಯಶೀತ್ಯಧಿಕಶತತಮೋಽಧ್ಯಾಯಃ**

---

೨೪. ಮಣಿಕರ್ಣಿಕಾತೀರ್ಥದಲ್ಲಿ ದೇಹವನ್ನು ತ್ಯಾಗಮಾಡುವ ಮನುಜನು ತಾನು ಕೋರಿದ ಗತಿಯನ್ನು ಪಡೆಯುವನು. ಈಶ್ವರನ ಪ್ರೇರಣೆಯಿಂದ ಅವನು ಸದ್ಗತಿಯನ್ನೈದುವನು. ಆತ್ಮಜ್ಞಾನಿಗಳಲ್ಲದವರಿಗೆ ಅದು ದೊರಕತಕ್ಕುದಲ್ಲ.

೨೫-೨೬. "ಮನುಷ್ಯಜನ್ಮವು ದೋಷಭೂಯಿಷ್ಠವಾದುದು ; ಅಶಾಶ್ವತವಾದುದು'' ಎಂದು ಮನವರಿತು ಅವಿಮುಕ್ತಕ್ಷೇತ್ರವನ್ನು ಆಶ್ರಯಿಸಬೇಕು. ಅದು ಸಂಸಾರದ ಭೀತಿಯನ್ನು ದೂರಮಾಡುವುದು. ಯೋಗಸಿದ್ಧಿಯನ್ನೂ ಮೋಕ್ಷವನ್ನೂ ಕೊಡುವ ಪವಿತ್ರಕ್ಷೇತ್ರವದು. ವಿಘ್ನಗಳೆಷ್ಟೇ ಬರಲಿ, ಅವೆಲ್ಲವನ್ನೂ ಅದು ಪರಿಹರಿಸುವುದು.

೨೭. ಮೇಲೆ ಮೇಲೆ ಅಡ್ಡಿಗಳು ಪೀಡಿಸುತ್ತಿದ್ದರೂ ಗಮನಿಸದೆ ಅವಿಮುಕ್ತಕ್ಷೇತ್ರವನ್ನು ಬಿಡದೆ ಅಲ್ಲಿಯೇ ವಾಸಮಾಡುವಾತನು ಮುಪ್ಪುಸಾವುಗಳನ್ನೂ ಅಶಾಶ್ವತವಾದ ಈ ಜನ್ಮವನ್ನೂ ದೂರಮಾಡುವನು. ಅವಿಮುಕ್ತದ ಅನುಗ್ರಹದಿಂದ ಶಿವಸಾಯುಜ್ಯವನ್ನು ಪಡೆಯುವನು.

## ಅಧ್ಯಾಯ ೧೮೨

## ಅಧ್ಯಾಯದ ಸಾರಾಂಶ

ಕುಮಾರಸ್ವಾಮಿಯು ಸನಕಾದಿಮಹರ್ಷಿಗಳಿಗೆ ಅವಿಮುಕ್ತಕ್ಷೇತ್ರದ ಮಾಹಾತ್ಮ್ಯವನ್ನು ವರ್ಣಿಸುವನು.

ಅವಿಮುಕ್ತಕ್ಷೇತ್ರವಾಸದಿಂದ ಸಕಲ ವಿಧವಾದ ಪಾತಕಗಳೂ ಪರಿಹಾರವಾಗುವುವು. ಇಲ್ಲಿ ದೇಹವನ್ನು ತ್ಯಾಗಮಾಡುವ ಮಾನವರ ಕಿವಿಯಲ್ಲಿ ಭಕ್ತವತ್ಸಲನಾದ ಪರಮೇಶ್ವರನು ತಾರಕಮಹಾಮಂತ್ರವನ್ನು ಜಪಿಸುವನು. ಸಂಸಾರದ ಭಯದಿಂದ ಪಾರಾಗಬೇಕೆನ್ನುವವನು ಅವಿಮುಕ್ತಕ್ಷೇತ್ರವನ್ನು ಆಶ್ರಯಿಸಬೇಕು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅವಿಮುಕ್ತಮಾಹಾತ್ಮ್ಯದಲ್ಲಿ
ನೂರ ಎಂಬತ್ತೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರ್ಯಶೀತ್ಯಧಿಕಶತತಮೋಽಧ್ಯಾಯಃ

॥ ದೇವ್ಯುವಾಚ ॥

ಹಿಮವಂತಂ ಗಿರಿಂ ತ್ಯಕ್ತ್ವಾ ಮಂದರಂ ಗಂಧಮಾದನಂ ।
ಕೈಲಾಸಂ ನಿಷಧಂ ಚೈವ ಮೇರುಪೃಷ್ಠಂ ಮಹಾದ್ಯುತಿ ॥ ೧ ॥

ರಮ್ಯಂ ತ್ರಿಶಿಖರಂ ಚೈವ ಮಾನಸಂ ಸುಮಹಾಗಿರಿಂ ।
ದೇವೋದ್ಯಾನಾನಿ ರಮ್ಯಾಣಿ ನಂದನಂ ವನಮೇವ ಚ ॥ ೨ ॥

ಸುರಸ್ಥಾನಾನಿ ಮುಖ್ಯಾನಿ ತೀರ್ಥಾನ್ಯಾಯತನಾನಿ ಚ ।
ತಾನಿ ಸರ್ವಾಣಿ ಸಂತ್ಯಜ್ಯ ಅವಿಮುಕ್ತೇ ರತಿಃ ಕಥಂ ॥ ೩ ॥

ಕಿಮತ್ರ ಸುಮಹತ್ಪುಣ್ಯಂ ಪರಂ ಗುಹ್ಯಂ ವದಸ್ವ ಮೇ ।
ಯೇನ ತ್ವಂ ರಮಸೇ ನಿತ್ಯಂ ಭೂತಸಂಘಗಣೈರ್ಯುತಃ ॥ ೪ ॥

ಕ್ಷೇತ್ರಸ್ಯ ಪ್ರವರತ್ವಂ ಚ ಯೇ ಚ ತತ್ರ ನಿವಾಸಿನಃ ।
ತೇಷಾಮನುಗ್ರಹಃ ಕಶ್ಚಿತ್ತತ್ಸರ್ವಂ ಬ್ರೂಹಿ ಶಂಕರ ॥ ೫ ॥

---

೧-೩. ಪಾರ್ವತೀದೇವಿ ಹೇಳಿದಳು.—ಹಿಮಾಚಲ, ಮಂದರ, ಗಂಧಮಾದನ, ಕೈಲಾಸ, ನಿಷಧ, ಕಾಂತಿಯುಕ್ತವಾದ ಮೇರು, ರಮ್ಯವಾದ ತ್ರಿಶಿಖರ, ಮಾನಸೋತ್ತರ ಮುಂತಾದ ಮಹಾಪರ್ವತಗಳನ್ನೂ, ಮನೋಹರವಾದ ದೇವೋದ್ಯಾನಗಳನ್ನೂ, ಪುಣ್ಯತೀರ್ಥಗಳನ್ನೂ, ಪುಣ್ಯಾಲಯಗಳನ್ನೂ ಬಿಟ್ಟು ಅವಿಮುಕ್ತ ಕ್ಷೇತ್ರದಲ್ಲಿ ಮಾತ್ರ ಇಷ್ಟೊಂದು ಪ್ರೀತಿಯಿರುವುದಕ್ಕೆ ಕಾರಣವೇನು ?

೪-೫. ಇಲ್ಲಿ ಪುಣ್ಯವಿಶೇಷವೇನುಂಟು ? ಇಲ್ಲಿನ ಪರಮರಹಸ್ಯವಾವುದು ಹೇಳು. ಭೂತಸಂಘಗಳೊಡಗೂಡಿ ನೀನು ನಿತ್ಯವೂ ಇಲ್ಲಿ ವಾಸಿಸುತ್ತಿರುವೆಯಲ್ಲಾ ಅದಕ್ಕೇನು ಕಾರಣ ? ಶಂಕರಾ, ಈ ಕ್ಷೇತ್ರದ ಮೇಲ್ಮೆ, ಇಲ್ಲಿನ ನಿವಾಸಿಗಳು, ಅವರಲ್ಲಿ ನೀನು ತೋರಿಸುವ ಅನುಗ್ರಹ ಇವೆಲ್ಲವನ್ನೂ ನನಗೆ ತಿಳಿಯಹೇಳು.

॥ ಶಂಕರ ಉವಾಚ ॥

ಅತ್ಯದ್ಭುತಮಿದಂ ಪ್ರಶ್ನಂ ಯತ್ತ್ವಂ ಪೃಚ್ಛಸಿ ಭಾಮಿನಿ ।
ತತ್ಸರ್ವಂ ಸಂಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೬ ॥

ವಾರಾಣಸೀ ಪುರೀ ಪುಣ್ಯಾ ಸಿದ್ಧಗಂಧರ್ವಸೇವಿತಾ ।
ಪ್ರವಿಷ್ಟಾ ತ್ರಿಪಥಾ ಗಂಗಾ ತಸ್ಮಿನ್ ಕ್ಷೇತ್ರೇ ಮಮ ಪ್ರಿಯೇ ॥ ೭ ॥

ಮಮೈವ ಪ್ರೀತಿರತುಲಾ ಕೃತ್ತಿವಾಸೇ ಚ ಸುಂದರಿ ।
ಸರ್ವೇಷಾಂ ಚೈವ ಸ್ಥಾನಾನಾಂ ಸ್ಥಾನಂ ತತ್ತು ಯಥಾಧಿಕಂ ॥ ೮ ॥

ತೇನ ಕಾರ್ಯೇಣ ಸುಶ್ರೋಣಿ ತಸ್ಮಿನ್ ಸ್ಥಾನೇ ರತಿರ್ಮಮ ।
ತಸ್ಮಿಂಲ್ಲಿಂಗೇ ಚ ಸಾನ್ನಿಧ್ಯಂ ಮಮ ದೇವಿ ಸುರೇಶ್ವರಿ ॥ ೯ ॥

ಕ್ಷೇತ್ರಸ್ಯ ಚ ಪ್ರವಕ್ಷ್ಯಾಮಿ ಗುಣಾನ್ ಗುಣವತಾಂ ವರೇ ।
ಯಾಂಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೧೦॥

---

೬. ಪರಮೇಶ್ವರನು ಹೇಳಿದನು.—ಓ ನಾರೀಮಣೀ, ನೀನು ಕೇಳುವ ಈ ಪ್ರಶ್ನೆ ಅತ್ಯದ್ಭುತವಾದುದು. ಅದೆಲ್ಲವನ್ನೂ ವಿವರವಾಗಿ ಹೇಳುವೆನು ಕೇಳು.

೭. ವಾರಾಣಸಿಯು ಪುಣ್ಯಕರವಾದ ಪಟ್ಟಣ; ಸಿದ್ಧರಿಂದಲೂ ಗಂಧರ್ವರಿಂದಲೂ ಸೇವಿತವಾದುದು. ನನಗೆ ಅತ್ಯಂತಪ್ರಿಯವೆನಿಸಿದ ಕ್ಷೇತ್ರವದು. ಎಲೌ ಪ್ರಿಯೇ, ತ್ರಿಪಥಗಾಮಿನಿಯಾದ ಗಂಗಾನದಿ ಅಲ್ಲಿ ಪ್ರವಹಿಸುತ್ತದೆ.

೮. ಓ ಸುಂದರೀ, ನಾನು ಹೊದೆದಿರುವ ಗಜಚರ್ಮದಲ್ಲಿ ನನಗೆ ಎಷ್ಟು ಪ್ರೀತಿಯುಂಟೋ ಅಷ್ಟೇ ಪ್ರಿತಿಯು ಆ ಕ್ಷೇತ್ರದಲ್ಲಿಯೂ ಇದೆ. ಎಲ್ಲ ಸ್ಥಳಗಳಿಗಿಂತಲೂ ಅದು ನನಗೆ ಬಹಳ ಹೆಚ್ಚಿನದು.

೯. ಎಲೌ ಶೋಭನಾಂಗೀ, ಆದಕಾರಣ ಆ ಕ್ಷೇತ್ರದಲ್ಲಿ ನನಗೆ ಆಸಕ್ತಿ ಹೆಚ್ಚಾಗಿದೆ. ಓ ದೇವೀ, ಸುರೇಶ್ವರೀ, ಅಲ್ಲಿರುವ ಲಿಂಗದಲ್ಲಿ ನನ್ನ ಸಾನ್ನಿಧ್ಯವುಂಟು.

೧೦. ಗುಣವತಿಯರಲ್ಲಿ ಮೊತ್ತಮೊದಲಿಗಳಾದ ಓ ಪಾರ್ವತೀ, ಆ ಕ್ಷೇತ್ರದ ಗುಣಗಳನ್ನು ಹೇಳುವೆನು. ಅವುಗಳನ್ನು ಕೇಳಿದರೆ ಸಾಕು; ಸಕಲಪಾಪಗಳೂ ದೂರವಾಗುವುವು. ಸಂದೇಹವಿಲ್ಲ.

ಯದಿ ಪಾಪೋ ಯದಿ ಶಠೋ ಯದಿ ವಾಧಾರ್ಮಿಕೋ ನರಃ ।
ಮುಚ್ಯತೇ ಸರ್ವಪಾಪೇಭ್ಯೋ ಹ್ಯವಿಮುಕ್ತಂ ವ್ರಜೇದ್ಯದಿ ॥೧೧॥

ಪ್ರಲಯೇ ಸರ್ವಭೂತಾನಾಂ ಲೋಕೇ ಸ್ಥಾವರಜಂಗಮೇ ।
ನ ಹಿ ತ್ಯಕ್ಷ್ಯಾಮಿ ತತ್ಸ್ಥಾನಂ ಮಹಾಗಣಶತೈರ್ವೃತಃ ॥೧೨॥

ಯತ್ರ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ವಕ್ತ್ರಂ ಮಮ ಮಹಾಭಾಗೇ ಪ್ರವಿಶಂತಿ ಯುಗಕ್ಷಯೇ ॥೧೩॥

ತೇಷಾಂ ಸಾಕ್ಷಾದಹಂ ಪೂಜಾಂ ಪ್ರತಿಗೃಹ್ಣಾಮಿ ಪಾರ್ವತಿ ।
ಸರ್ವಗುಹ್ಯೋತ್ತಮಂ ಸ್ಥಾನಂ ಮಮ ಪ್ರಿಯತಮಂ ಶುಭಂ ॥೧೪॥

ಧನ್ಯಾಃ ಪ್ರವಿಷ್ಟಾಃ ಸುಶ್ರೋಣಿ ಮಮ ಭಕ್ತಾ ದ್ವಿಜಾತಯಃ ।
ಮದ್ಭಕ್ತಿಪರಮಾ ನಿತ್ಯಂ ಯೇ ಮದ್ಭಕ್ತಾಸ್ತು ತೇ ನರಾಃ ॥೧೫॥

---

೧೧. ಪಾಪಿಷ್ಠನಾಗಲಿ, ಶಠನಾಗಲಿ, ಅಧಾರ್ಮಿಕನಾಗಲಿ ವಾರಾಣಸೀ ಕ್ಷೇತ್ರಕ್ಕೆ ಹೋದ ಮನುಷ್ಯನು ಸಕಲವಿಧವಾದ ಪಾಪಗಳಿಂದಲೂ ಬಿಡುಗಡೆ ಹೊಂದುವನು.

೧೨. ಚರಾಚರಾತ್ಮಕವಾದ ಈ ಜಗತ್ತಿನಲ್ಲಿನ ಸಕಲಜೀವರಾಶಿಗಳೂ ವಿನಾಶವನ್ನೈದುವ ಪ್ರಲಯಕಾಲದಲ್ಲಿ ಸಹ ನಾನು ಅಸಂಖ್ಯಾಕರಾದ ಮಹಾಗಣಗಳೊಡಗೂಡಿ ಆ ಕ್ಷೇತ್ರವನ್ನು ಬಿಡದೆ ವಾಸಿಸುತ್ತಿರುವೆನು.

೧೩. ಮಹಾಮಹಿಮಳಾದ ಓ ದೇವೀ, ಯುಗಾವಸಾನದಲ್ಲಿ ದೇವತೆಗಳು, ಗಂಧರ್ವರು, ಯಕ್ಷರು, ನಾಗರು, ರಾಕ್ಷಸರು ಇವರೆಲ್ಲರೂ ಆ ಕ್ಷೇತ್ರದಲ್ಲಿ ನನ್ನ ಮುಖವನ್ನು ಪ್ರವೇಶಿಸುವರು.

೧೪-೧೫. ಎಲೌ ಪಾರ್ವತೀ, ಅವರಿಂದ ನಾನು ಸಾಕ್ಷಾತ್ತಾಗಿ ಪೂಜೆಯನ್ನು ಕೈಗೊಳ್ಳುವೆನು. ಸುಂದರೀ, ನನ್ನ ಭಕ್ತರಾದ ಬ್ರಾಹ್ಮಣರೂ, ನನ್ನಲ್ಲಿ ಭಕ್ತಿಯನ್ನೇ ವ್ರತವಾಗಿ ಕೈಗೊಂಡಿರುವ ಇನ್ನೂ ಉಳಿದ ಮನುಷ್ಯರೂ ಅತ್ಯಂತಪವಿತ್ರವೂ ನನಗೆ ಬಹುಪ್ರಿಯವೂ ಆದ ಆಕ್ಷೇತ್ರಕ್ಕೆ ಬರುವರು. ಅವರೇ ಧನ್ಯರು.

ತಸ್ಮಿನ್ ಪ್ರಾಣಾನ್ ಪರಿತ್ಯಜ್ಯ ಗಚ್ಛಂತಿ ಪರಮಾಂ ಗತಿಂ ।
ಸದಾ ಯಜತಿ ರುದ್ರೇಣ ಸದಾ ದಾನಂ ಪ್ರಯಚ್ಛತಿ ॥೧೬॥

ಸದಾ ತಪಸ್ವೀ ಭವತಿ ಅವಿಮುಕ್ತಸ್ಥಿತೋ ನರಃ ।
ಯೋ ಮಾಂ ಪೂಜಯತೇ ನಿತ್ಯಂ ತಸ್ಯ ತುಷ್ಯಾಮಹಂ ಪ್ರಿಯೇ ॥೧೭॥

ಸರ್ವದಾನಾನಿ ಯೋ ದದ್ಯಾತ್ಸರ್ವಯಜ್ಞೇಷು ದೀಕ್ಷಿತಃ ।
ಸರ್ವತೀರ್ಥಾಭಿಷಿಕ್ತಶ್ಚ ಸ ಪ್ರಪದ್ಯೇತ ಮಾಮಿಹ ॥೧೮॥

ಅವಿಮುಕ್ತಂ ಸದಾ ದೇವಿ ಯೇ ವ್ರಜಂತಿ ಸುನಿಶ್ಚಿತಾಃ ।
ತೇ ತಿಷ್ಠಂತೀಹ ಸುಶ್ರೋಣಿ ಮದ್ಭಕ್ತಾಶ್ಚ ತ್ರಿವಿಷ್ಟಪೇ ॥೧೯॥

ಮತ್ಪ್ರಸಾದಾತ್ತು ತೇ ದೇವಿ ದೀವ್ಯಂತಿ ಶುಭಲೋಚನೇ ।
ದುರ್ಧರಾಶ್ಚೈವ ದುರ್ಧರ್ಷಾ ಭವಂತಿ ವಿಗತಜ್ವರಾಃ ॥೨೦॥

---

೧೬-೧೭. ಅಲ್ಲಿ ಪ್ರಾಣವನ್ನು ನೀಗಿದವರು ಪರಮಪದವನ್ನು ಪಡೆಯುವರು. ಅವಿಮುಕ್ತಕ್ಷೇತ್ರದಲ್ಲಿ ವಾಸಿಸುವ ಮನುಜನು ನಿರಂತರವಾಗಿ ಪರಮೇಶ್ವರನನ್ನು ಪೂಜಿಸುವನು. ಎಡೆಬಿಡದೆ ದಾನವನ್ನು ಕೊಡುವನು. ಕಾಲವನ್ನೆಲ್ಲ ತಪಸ್ಸಿನಲ್ಲೇ ಕಳೆಯುವನು. ಎಲೌ ಪ್ರಿಯೇ, ನನ್ನನ್ನು ಬಿಡದೆ ಪೂಜಿಸುವವನನ್ನು ನಾನು ಮೆಚ್ಚುವೆನು ; ಅವನಿಗೆ ಒಲಿಯುವೆನು.

೧೮. ಸಕಲದಾನಗಳನ್ನೂ ಯಾವನು ಕೊಡುತ್ತಾನೋ, ಸಕಲ ಯಜ್ಞಗಳಲ್ಲಿಯೂ ಯಾವನು ದೀಕ್ಷೆಯನ್ನು ವಹಿಸುತ್ತಾನೋ, ಸಕಲ ತೀರ್ಥಗಳಲ್ಲಿಯೂ ಯಾವನು ಸ್ನಾನಮಾಡುತ್ತಾನೋ ಅಂತಹ ಪುಣ್ಯಶಾಲಿಗೆ ಮಾತ್ರವೇ ನನ್ನನ್ನು ಇಲ್ಲಿ ಸೇವಿಸುವಂತಹ ಭಾಗ್ಯವು ಲಭಿಸುವುದು.

೧೯. ದೇವೀ, ಕಲ್ಯಾಣೀ, ದೃಢಚಿತ್ತದಿಂದ ಅವಿಮುಕ್ತಕ್ಷೇತ್ರಯಾತ್ರೆಯನ್ನು ತಪ್ಪದೆ ಮಾಡತಕ್ಕವರು ನನ್ನ ಭಕ್ತರೆನಿಸಿಕೊಳ್ಳುವರು. ಅಷ್ಟೇ ಅಲ್ಲ ; ಅವರು ಸ್ವರ್ಗದಲ್ಲಿ ಸುಖದಿಂದ ನೆಲಸುವರು.

೨೦. ಓ ಶುಭಾಕ್ಷೀ, ಪಾರ್ವತೀ, ಅವರು ನನ್ನ ಅನುಗ್ರಹದಿಂದ ಸರ್ವೋತ್ಕೃಷ್ಟರಾಗುವರು. ಅವರನ್ನು ಯಾರೂ ಎದುರಿಸರು. ಅವರಿಗೆ ಕೊರಗೆಂಬುದೇ ಇಲ್ಲ.

ಅವಿಮುಕ್ತಂ ಶುಭಂ ಪ್ರಾಪ್ಯ ಮದ್ಭಕ್ತಾಃ ಕೃತನಿಶ್ಚಯಾಃ।
ನಿರ್ಧೂತಪಾಪಾ ವಿಮಲಾ ಭವಂತಿ ವಿಗತಜ್ವರಾಃ ॥೨೧॥

॥ ಪಾರ್ವತ್ಯುವಾಚ ॥

ದಕ್ಷಯಜ್ಞಸ್ತ್ವಯಾ ದೇವ ಮತ್ಪ್ರಿಯಾರ್ಥೇ ನಿಷೂದಿತಃ।
ಅವಿಮುಕ್ತಗುಣಾನಾಂ ತು ನ ತೃಪ್ತಿರಿಹ ಜಾಯತೇ ॥೨೨॥

॥ ಈಶ್ವರ ಉವಾಚ ॥

ಕ್ರೋಧೇನ ದಕ್ಷಯಜ್ಞಸ್ತು ತ್ವತ್ಪ್ರಿಯಾರ್ಥಂ ವಿನಾಶಿತಃ।
ಮಹಾಪ್ರಿಯೇ ಮಹಾಭಾಗೇ ನಾಶಿತೋಽಯಂ ವರಾನನೇ ॥೨೩॥

ಅವಿಮುಕ್ತೇ ಯಜಂತೇ ತು ಮದ್ಭಕ್ತಾಃ ಕೃತನಿಶ್ಚಯಾಃ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥೨೪॥

---

೨೧. ಮಂಗಲಮಯವಾದ ಅವಿಮುಕ್ತಕ್ಷೇತ್ರಕ್ಕೆ ದೃಢಸಂಕಲ್ಪದಿಂದ ಯಾತ್ರೆಯನ್ನು ಕೈಗೊಂಡು ನನ್ನ ಭಕ್ತರು ಪಾಪರಹಿತರೂ, ನಿರ್ಮಲರೂ, ನಿಶ್ಚಿಂತರೂ ಆಗುವರು.

೨೨. ಪಾರ್ವತಿ ಹೇಳಿದಳು.—ದೇವಾ, ನನ್ನ ಪ್ರೀತಿಗಾಗಿ ನೀನು ದಕ್ಷ ಬ್ರಹ್ಮನ ಯಜ್ಞವನ್ನು ನಾಶಗೊಳಿಸಿದೆ. ಆದರೆ ಅವಿಮುಕ್ತಕ್ಷೇತ್ರದ ಗುಣಗಳನ್ನು ಎಷ್ಟು ಕೇಳಿದರೂ ನನಗೆ ತೃಪ್ತಿಯೇ ಹುಟ್ಟದಲ್ಲಾ!

೨೩. ಪರಮೇಶ್ವರನು ಹೇಳಿದನು.—ಅತ್ಯಂತಪ್ರಿಯಳೂ ಮಹಾಮಹಿಮಳೂ ಆದ ಎಲೌ ಮಂಗಳಮುಖೀ, ನಿನಗೆ ಪ್ರೀತಿಯನ್ನುಂಟುಮಾಡುವ ಸಲುವಾಗಿ ನಾನು ದಕ್ಷಬ್ರಹ್ಮನ ಯಾಗವನ್ನು ಸಿಟ್ಟಿನಿಂದ ನಾಶಗೊಳಿಸಿದೆನು.

೨೪. ದೃಢಚಿತ್ತದಿಂದ ಅವಿಮುಕ್ತಕ್ಷೇತ್ರದಲ್ಲಿ ನನ್ನನ್ನು ಪೂಜಿಸುತ್ತ ವಾಸಿಸುವ ನನ್ನ ಭಕ್ತರು ಸದ್ಗತಿಯನ್ನು ಪಡೆಯುವರು. ನೂರಾರು ಕೋಟಿ ಕಲ್ಪಗಳು ಕಳೆದರೂ ಅವರು ಪುನರ್ಜನ್ಮವನ್ನೇ ಎತ್ತರು.

॥ ದೇವ್ಯುವಾಚ ॥

ದುರ್ಲಭಾಸ್ತು ಗುಣಾ ದೇವ ಅವಿಮುಕ್ತೇ ತು ಕೀರ್ತಿತಾಃ ।
ಸರ್ವಾಂಸ್ತಾನ್ಮಮ ತತ್ತ್ವೇನ ಕಥಯಸ್ವ ಮಹೇಶ್ವರ ॥೨೫॥

ಕೌತೂಹಲಂ ಮಹಾದೇವ ಹೃದಿಸ್ಥಂ ಮಮ ವರ್ತತೇ ।
ತತ್ಸರ್ವಂ ಮಮ ತತ್ತ್ವೇನ ಆಖ್ಯಾಹಿ ಪರಮೇಶ್ವರ ॥೨೬॥

॥ ಈಶ್ವರ ಉವಾಚ ॥

ಅಕ್ಷಯಾ ಹ್ಯಮರಾಶ್ಚೈವ ಹ್ಯದೇಹಾಶ್ಚ ಭವಂತಿ ತೇ ।
ಮತ್ಪ್ರಸಾದಾದ್ವರಾರೋಹೇ ಮಾಮೇವ ಪ್ರವಿಶಂತಿ ವೈ ॥೨೭॥

ಬ್ರೂಹಿ ಬ್ರೂಹಿ ವಿಶಾಲಾಕ್ಷಿ ಕಿಮನ್ಯಚ್ಛ್ರೋತುಮರ್ಹಸಿ ॥೨೮॥

॥ ದೇವ್ಯುವಾಚ ॥

ಅವಿಮುಕ್ತೇ ಮಹಾಕ್ಷೇತ್ರೇ ಅಹೋ ಪುಣ್ಯಮಹೋ ಗುಣಾಃ ।
ನ ತೃಪ್ತಿಮಧಿಗಚ್ಛಾಮಿ ಬ್ರೂಹಿ ದೇವ ಪುನರ್ಗುಣಾನ್ ॥೨೯॥

---

೨೫. ಪಾರ್ವತಿ ಹೇಳಿದಳು.—ಓ ದೇವಾ, ಅವಿಮುಕ್ತಕ್ಷೇತ್ರದ ವಿಷಯದಲ್ಲಿ ನೀನು ಹೇಳಿದ ಗುಣಗಳು ಸಾಮಾನ್ಯವಾದುವಲ್ಲ. ಮಹೇಶ್ವರಾ, ಅವೆಲ್ಲವನ್ನೂ ಯಥಾವತ್ತಾಗಿ ನನಗೆ ನಿರೂಪಿಸು.

೨೬. ದೇವಾಧಿದೇವಾ, ನನ್ನ ಮನಸ್ಸಿನಲ್ಲಿ ಕುತೂಹಲವು ಬಹಳವಾಗಿದೆ. ಪರಮೇಶ್ವರಾ, ಎಲ್ಲವನ್ನೂ ನನಗೆ ಸಾಂಗವಾಗಿ ಹೇಳು.

೨೭-೨೮. ಈಶ್ವರನು ಹೇಳಿದನು.—ಓ ಮಂಗಳಾಂಗೀ, ಅವಿಮುಕ್ತಕ್ಷೇತ್ರವಾಸಿಗಳು ನನ್ನ ಅನುಗ್ರಹದಿಂದ ಅಕ್ಷಯರೂ, ಅಮರರೂ, ಪುನರ್ಜನ್ಮರಹಿತರೂ ಆಗುವರು. ನನ್ನ ಸಾನ್ನಿಧ್ಯವನ್ನೇ ಅವರು ಸೇರುವರು. ಎಲೌ ವಿಶಾಲಾಕ್ಷೀ, ಮತ್ತೇನು ಕೇಳಬೇಕೆಂದಿರುವೆ? ಹೇಳು ಹೇಳು.

೨೯. ಪಾರ್ವತಿ ಹೇಳಿದಳು.—ಈ ಅವಿಮುಕ್ತಮಹಾಕ್ಷೇತ್ರವು ಎಂತಹ ಪುಣ್ಯಮಯವಾದುದು! ಎಷ್ಟೊಂದು ಗುಣಭರಿತವಾದುದು! ದೇವಾ, ನನಗೆ ತೃಪ್ತಿಯೇ ಹುಟ್ಟದು. ಇದರ ಗುಣಗಳನ್ನು ಮತ್ತೆ ಹೇಳು.

|| ಈಶ್ವರ ಉವಾಚ ||

ಮಹೇಶ್ವರಿ ವರಾರೋಹೇ ಶೃಣು ತಾಂಸ್ತು ಮಮ ಪ್ರಿಯೇ ।
ಅವಿಮುಕ್ತೇ ಗುಣಾ ಯೇ ತು ತಥಾನ್ಯಾನಪಿ ತಚ್ಛೃಣು ||೩೦||

ಶಾಕಪರ್ಣಾಶಿನೋ ದಾಂತಾಃ ಸಂಪ್ರಕ್ಷಾಲ್ಯಾ ಮರೀಚಿಪಾಃ ।
ದಂತೋಲೂಖಲಿನಶ್ಚಾನ್ಯೇ ಅಶ್ಮಕುಟ್ಟಾಸ್ತಥಾ ಪರೇ ||೩೧||

ಮಾಸಿ ಮಾಸಿ ಕುಶಾಗ್ರೇಣ ಜಲಮಾಸ್ವಾದಯಂತಿ ವೈ ।
ವೃಕ್ಷಮೂಲನಿಕೇತಾಶ್ಚ ಶಿಲಾಶಯ್ಯಾಸ್ತಥಾ ಪರೇ ||೩೨||

ಆದಿತ್ಯವಪುಷಃ ಸರ್ವೇ ಜಿತಕ್ರೋಧಾ ಜಿತೇಂದ್ರಿಯಾಃ ।
ಏವಂ ಬಹುವಿಧೈರ್ಧರ್ಮೈರನ್ಯತ್ರ ಚರಿತವ್ರತಾಃ ||೩೩||

---

೩೦. ಈಶ್ವರನು ಹೇಳಿದನು.—ಓ ಮಹೇಶ್ವರೀ, ಸುಂದರೀ, ಅವೆಲ್ಲವನ್ನೂ ಹೇಳುವೆನು. ಎಲೌ ಪ್ರಿಯೇ, ಅವಿಮುಕ್ತಕ್ಷೇತ್ರದ ಇನ್ನೂ ಉಳಿದ ಗುಣಗಳನ್ನು ಕೂಡ ಕೇಳು.

೩೧-೩೪. ಬೇರೆ ಕ್ಷೇತ್ರಗಳಲ್ಲಿ ಋಷಿಗಳು ಹಲವು ವಿಧವಾಗಿ ತಪಸ್ಸು ಮಾಡುವರು. ಕಾಯಿಪಲ್ಯಗಳನ್ನೂ ಎಲೆಗಳನ್ನೂ ಭಕ್ಷಿಸುತ್ತ, ಇಂದ್ರಿಯಗಳನ್ನು ನಿಗ್ರಹಿಸಿ, ಬಹು ಶ್ರದ್ಧೆಯಿಂದ ಸ್ನಾನಮಾಡುತ್ತ ಸೂರ್ಯನ ಕಿರಣಗಳನ್ನು ಪಾನ ಮಾಡುವರು. ಕೆಲವರಿಗೆ ಹಲ್ಲೇ ಒರಳು. ಎಂದರೆ ಸಿಕ್ಕಿದ ಆಹಾರಪದಾರ್ಥವನ್ನು ಹಾಗೆಯೇ ಅಗಿದು ತಿನ್ನುವರು. ಇನ್ನು ಕೆಲವರು ದೊರೆತುದನ್ನು ಕಲ್ಲಿನಿಂದ ಜಜ್ಜಿ ಭಕ್ಷಿಸುವರು. ಮತ್ತೆ ಕೆಲವರು ತಿಂಗಳಿಗೊಂದು ಸಾರಿ ದರ್ಭಾಗ್ರದಿಂದ ಜಲವನ್ನೆತ್ತಿ ಪಾನಮಾಡುವರು. ಮರದ ಬುಡವೇ ಅವರ ವಾಸಸ್ಥಳ. ಬೇರೆ ಕೆಲವರಿಗೆ ಕಲ್ಲು ಬಂಡೆಯೇ ಹಾಸಿಗೆ. ಅವರೆಲ್ಲರೂ ಸೂರ್ಯನಂತೆ ತೇಜೋಯುಕ್ತವಾದ ಶರೀರ ವುಳ್ಳವರು. ಕ್ರೋಧವನ್ನು ಬಿಟ್ಟವರು. ಇಂದ್ರಿಯಗಳನ್ನು ಗೆದ್ದವರು. ಇವರಲ್ಲದೆ ಇನ್ನೂ ಹಲವು ವಿಧದಲ್ಲಿ ತಪಸ್ಸನ್ನು ಮಾಡುವವರಿರಬಹುದು. ಆದರೆ ಇಂತಹ ಯೋಗಿಗಳು ಅವಿಮುಕ್ತಕ್ಷೇತ್ರದಲ್ಲಿ ವಾಸಿಸುತ್ತ ದಿನಕ್ಕೆ ಮೂರುಸಾರಿ ಊಟ

ತ್ರಿಕಾಲಮಪಿ ಭುಂಜಾನಾ ಯೇಽವಿಮುಕ್ತನಿವಾಸಿನಃ ।
ತಪಶ್ಚರಂತಿ ವಾನ್ಯತ್ರ ಕಲಾಂ ನಾರ್ಹಂತಿ ಷೋಡಶೀಂ ।
ಯೇಽವಿಮುಕ್ತೇ ವಸಂತೀಹ ಸ್ವರ್ಗೇ ಪ್ರತಿವಸಂತಿ ತೇ ॥೩೪॥

ಮತ್ಸಮಃ ಪುರುಷೋ ನಾಸ್ತಿ ತ್ವತ್ಸಮಾ ನಾಸ್ತಿ ಯೋಷಿತಾಂ ।
ಅವಿಮುಕ್ತಸಮಂ ಕ್ಷೇತ್ರಂ ನ ಭೂತಂ ನ ಭವಿಷ್ಯತಿ ॥೩೫॥

ಅವಿಮುಕ್ತೇ ಪರೋ ಯೋಗೋ ಹ್ಯವಿಮುಕ್ತೇ ಪರಾ ಗತಿಃ ।
ಅವಿಮುಕ್ತೇ ಪರೋ ಮೋಕ್ಷಃ ಕ್ಷೇತ್ರಂ ನೈವಾಸ್ತಿ ತಾದೃಶಂ ॥೩೬॥

ಪರಂ ಗುಹ್ಯಂ ಪ್ರವಕ್ಷ್ಯಾಮಿ ತತ್ತ್ವೇನ ವರವರ್ಣಿನಿ ।
ಅವಿಮುಕ್ತೇ ಮಹಾಕ್ಷೇತ್ರೇ ಯದುಕ್ತಂ ಹಿ ಮಯಾ ಪುರಾ ॥೩೭॥

ಜನ್ಮಾಂತರಶತೈರ್ದೇವಿ ಯೋಗೋಽಯಂ ಯದಿ ಲಭ್ಯತೇ ।
ಮೋಕ್ಷಃ ಶತಸಹಸ್ರೇಣ ಜನ್ಮನಾ ಲಭ್ಯತೇ ನ ವಾ ॥೩೮॥

---

ಮಾಡುತ್ತ ಕಾಲಕಳೆಯುವ ಸಾಮಾನ್ಯ ಮನುಷ್ಯನಿಗೆ ಬರುವ ಪುಣ್ಯದಲ್ಲಿ ಹದಿನಾರರಲ್ಲೊಂದು ಪಾಲನ್ನು ಸಹ ಪಡೆಯಲಾರರು. ಈ ಕ್ಷೇತ್ರದಲ್ಲಿ ವಾಸಿಸುವವರಿಗೆ ಸ್ವರ್ಗವು ತಪ್ಪದೆ ದೊರಕುವುದು.

೩೫. ನನಗೆ ಸಮನಾದ ಪುರುಷನು ಬೇರೊಬ್ಬನಿಲ್ಲ; ನಿನ್ನಂತಹ ಹೆಂಗಸು ಮತ್ತಾವಳೂ ಇಲ್ಲ. ಹಾಗೆಯೇ ಅವಿಮುಕ್ತದಂತಹ ಪವಿತ್ರವಾದ ಕ್ಷೇತ್ರವು ಬೇರೆ ಯಾವುದೂ ಹಿಂದೆ ಇರಲಿಲ್ಲ; ಮುಂದೆ ಇರುವುದೂ ಇಲ್ಲ.

೩೬. ಅವಿಮುಕ್ತಕ್ಷೇತ್ರದಲ್ಲಿ ಉತ್ತಮವಾದ ಯೋಗಸಿದ್ಧಿ ಲಭಿಸುವುದು. ಅವಿಮುಕ್ತದಲ್ಲಿ ಸದ್ಗತಿ ಕೈಸೇರುವುದು. ಅವಿಮುಕ್ತದಲ್ಲಿ ಪುನರಾವೃತ್ತಿಯಿಲ್ಲದ ಮೋಕ್ಷವು ಸಿಕ್ಕುವುದು. ಇಂತಹ ಕ್ಷೇತ್ರವು ಬೇರೆ ಇಲ್ಲವೇ ಇಲ್ಲ.

೩೭. ಓ ಸುಂದರೀ, ಅವಿಮುಕ್ತಕ್ಷೇತ್ರದ ವಿಷಯದಲ್ಲಿ ಹಿಂದೆ ನಾನು ಹೇಳಿದ ಪರಮರಹಸ್ಯವಾದ ವಿಷಯವನ್ನು ಯಥಾವತ್ತಾಗಿ ಮತ್ತೆ ಹೇಳುವೆನು ಕೇಳು.

೩೮. ದೇವೀ, ನೂರಾರು ಜನ್ಮಗಳಲ್ಲಿ ಯೋಗವು ಸಿದ್ಧಿಯನ್ನು ಪಡೆದೀತು. ಆದರೆ ಲಕ್ಷಾಂತರ ಜನ್ಮಗಳಿಂದಲಾದರೂ ಮೋಕ್ಷವು ದೊರಕುವುದೋ ಇಲ್ಲವೋ ಸಂದೇಹ.

ಅವಿಮುಕ್ತೇ ನ ಸಂದೇಹೋ ಮದ್ಭಕ್ತಃ ಕೃತನಿಶ್ಚಯಃ ।
ಏಕೇನ ಜನ್ಮನಾ ಸೋऽಪಿ ಯೋಗಂ ಮೋಕ್ಷಂ ಚ ವಿಂದತಿ ॥೩೯॥

ಅವಿಮುಕ್ತೇ ನರಾ ದೇವಿ ಯೇ ವ್ರಜಂತಿ ಸುನಿಶ್ಚಿತಾಃ ।
ತೇ ವಿಶಂತಿ ಪರಂ ಸ್ಥಾನಂ ಮೋಕ್ಷಂ ಪರಮದುರ್ಲಭಂ ॥೪೦॥

ಪೃಥಿವ್ಯಾಮೀದೃಶಂ ಕ್ಷೇತ್ರಂ ನ ಭೂತಂ ನ ಭವಿಷ್ಯತಿ ।
ಚತುರ್ಮೂರ್ತಿಃ ಸದಾ ಧರ್ಮಸ್ತಸ್ಮಿನ್ ಸಂನಿಹಿತಃ ಪ್ರಿಯೇ ।
ಚತುರ್ಣಾಮಪಿ ವರ್ಣಾನಾಂ ಗತಿಸ್ತು ಪರಮಾ ಸ್ಮೃತಾ ॥೪೧॥

॥ ದೇವ್ಯುವಾಚ ॥

ಶ್ರುತಾ ಗುಣಾಸ್ತೇ ಕ್ಷೇತ್ರಸ್ಯ ಇಹ ಚಾನ್ಯತ್ರ ಯೇ ಪ್ರಭೋ ।
ವದಸ್ವ ಭುವಿ ವಿಪ್ರೇಂದ್ರಾಃ ಕಂ ವಾ ಯಜ್ಞೈರ್ಯಜಂತಿ ತೇ ॥೪೨॥

---

೩೯. ದೃಢನಿಶ್ಚಯದಿಂದಿರುವ ನನ್ನ ಭಕ್ತನು ಅವಿಮುಕ್ತಕ್ಷೇತ್ರದಲ್ಲಿ ಒಂದೇ ಜನ್ಮದಿಂದ ಯೋಗಸಿದ್ಧಿಯನ್ನೂ ಮೋಕ್ಷವನ್ನೂ ಪಡೆಯುವನು.

೪೦. ಓ ಪಾರ್ವತೀ, ಸ್ಥಿರಸಂಕಲ್ಪದಿಂದ ಅವಿಮುಕ್ತಕ್ಷೇತ್ರದ ಯಾತ್ರೆಯನ್ನು ಯಾರು ಕೈಗೊಳ್ಳುವರೋ ಅವರು ಬಹು ದುರ್ಲಭವಾದ ಮೋಕ್ಷವನ್ನು ಸುಲಭವಾಗಿ ಪಡೆಯುವರು.

೪೧. ಭೂಮಿಯಲ್ಲಿ ಇಂತಹ ಪಾವನಕ್ಷೇತ್ರವು ಹಿಂದೆ ಇರಲಿಲ್ಲ; ಮುಂದೆ ಇರುವುದಿಲ್ಲ. ಎಲೌ ಪ್ರಿಯೇ, ಅಲ್ಲಿ ಧರ್ಮವು ನಾಲ್ಕುರೂಪಗಳಿಂದ ಅನವರತವೂ ನೆಲಸಿರುವುದು. ಆ ಕ್ಷೇತ್ರವು ನಾಲ್ಕು ವರ್ಣದವರಿಗೂ ಉತ್ತಮವಾದ ಗತಿಯನ್ನು ಕೊಡುವುದು.

೪೨. ಪಾರ್ವತಿ ಹೇಳಿದಳು.—ಸ್ವಾಮೀ, ಅವಿಮುಕ್ತಕ್ಷೇತ್ರದ ಮತ್ತು ಉಳಿದವುಗಳ ಗುಣಗಳನ್ನು ಕೇಳಿದೆನು. ಬ್ರಾಹ್ಮಣೋತ್ತಮರು ಯಜ್ಞಯಾಗಗಳನ್ನು ಮಾಡುತ್ತಾರೆ. ಅವುಗಳಿಂದ ಅವರು ಆರಾಧಿಸುವ ದೇವತೆ ಯಾರು ?

॥ ಈಶ್ವರ ಉವಾಚ ॥

ಇಜ್ಯಯಾ ಚೈವ ಮಂತ್ರೇಣ ಮಾಮೇವ ಹಿ ಯಜಂತಿ ಯೇ ।
ನ ತೇಷಾಂ ಭಯಮಸ್ತೀತಿ ಭವಂ ರುದ್ರಂ ಯಜಂತಿ ಯತ್ ॥೪೩॥

ಅಮಂತ್ರೋ ಮಂತ್ರತೋ ದೇವಿ ದ್ವಿವಿಧೋ ವಿಧಿರುಚ್ಯತೇ ।
ಸಾಂಖ್ಯಂ ಚೈವಾಥ ಯೋಗಶ್ಚ ದ್ವಿವಿಧೋ ಯೋಗ ಉಚ್ಯತೇ ॥೪೪॥

ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೪೫॥

ಆತ್ಮೌಪಮ್ಯೇನ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೪೬॥

---

೪೩. ಈಶ್ವರನು ಹೇಳಿದನು.—ಪೂಜೆಯಿಂದಲೂ ಮಂತ್ರದಿಂದಲೂ ನನ್ನನ್ನೇ ಯಾರು ಆರಾಧಿಸುತ್ತಾರೆಯೋ ಅಂತಹವರಿಗೆ ಭಯವೇ ಇಲ್ಲ. ಹೀಗೆ ತಿಳಿದು ಜನರು ಸರ್ವಾಶ್ರಯನೂ, ದುಷ್ಟಮರ್ದನನೂ, ಪರಮೇಶ್ವರನೂ ಆದ ನನ್ನನ್ನು ಪೂಜಿಸುತ್ತಾರೆ.

೪೪. ಎಲೌ ದೇವೀ, ಪೂಜಾವಿಧಿಯು ತಂತ್ರಪೂರ್ವಕವೆಂದೂ ಮಂತ್ರಪೂರ್ವಕವೆಂದೂ ಎರಡು ವಿಧ. ಉಪಾಸನವೂ ಸಹ ಸಾಂಖ್ಯವೆಂದೂ ಯೋಗವೆಂದೂ ಇಬ್ಬಗೆಯಿಂದಿರುವುದು.

೪೫. ಸಕಲಭೂತಗಳಲ್ಲಿಯೂ ಅಂತರ್ಯಾಮಿರೂಪದಿಂದಿರುವ ನನ್ನನ್ನು ಯಾವನು ಏಕನಿಷ್ಠನಾಗಿ ಸೇವಿಸುತ್ತಾನೋ ಅಂತಹ ಯೋಗಿಯು ಯಾವ ಯಾವ ಪ್ರಕಾರದಿಂದ ನಡೆಯುತ್ತಿದ್ದರೂ ನನ್ನಲ್ಲಿಯೇ ನೆಲಸಿರುವನು.

೪೬. ನಾನಾವಿಧವಾದ ದೇಹಗಳಲ್ಲಿ ಇದ್ದರೂ ಜ್ಞಾನೈಕಾಕಾರದಿಂದ ಆತ್ಮರೆಲ್ಲರೂ ಸಮಾನರು ಎಂಬ ತಿಳುವಳಿಕೆಯನ್ನು ದೃಢವಾಗಿ ಇಟ್ಟುಕೊಂಡು, ಚರಾಚರಾತ್ಮಕವಾದ ಸಕಲ ಜಗತ್ತು ನನ್ನನ್ನೇ ಆಶ್ರಯಿಸಿಕೊಂಡಿದೆ ಎಂದು ಯಾವನು ಅರಿತಿರುವನೋ ಅಂತಹವನಿಗೆ ನಾನು ದೂರವಾಗಿರುವುದಿಲ್ಲ. ಅವನೂ ಸಹ ನನ್ನಿಂದ ದೂರ ಸರಿಯುವುದಿಲ್ಲ.

ನಿರ್ಗುಣಃ ಸಗುಣೋ ವಾಪಿ ಯೋಗಶ್ಚ ಕಥಿತೋ ಭುವಿ ।
ಸಗುಣಶ್ಚೈವ ವಿಜ್ಞೇಯೋ ನಿರ್ಗುಣೋ ಮನಸಃ ಪರಃ ॥೪೭॥
ಏತತ್ತೇ ಕಥಿತಂ ದೇವಿ ಯನ್ಮಾಂ ತ್ವಂ ಪರಿಪೃಚ್ಛಸಿ ॥೪೮॥

॥ ದೇವ್ಯುವಾಚ ॥

ಯಾ ಭಕ್ತಿಸ್ತ್ರಿವಿಧಾ ಪ್ರೋಕ್ತಾ ಭಕ್ತಾನಾಂ ಬಹುಧಾ ತ್ವಯಾ ।
ತಾಮಹಂ ಶ್ರೋತುಮಿಚ್ಛಾಮಿ ತತ್ತ್ವತಃ ಕಥಯಸ್ವ ಮೇ ॥೪೯॥

॥ ಈಶ್ವರ ಉವಾಚ ॥

ಶೃಣು ಪಾರ್ವತಿ ದೇವೇಶಿ ಭಕ್ತಾನಾಂ ಭಕ್ತವತ್ಸಲೇ ।
ಪ್ರಾಪ್ಯ ಸಾಂಖ್ಯಂ ಚ ಯೋಗಂ ಚ ದುಃಖಾಂತಂ ಚ ನಿಯಚ್ಛತಿ ॥೫೦॥
ಸದಾ ಯಃ ಸೇವತೇ ಭಿಕ್ಷಾಂ ತತೋ ಭವತಿ ರಂಜಿತಃ ।
ರಂಜನಾತ್ತನ್ಮಯೋ ಭೂತ್ವಾ ಲೀಯತೇ ಸ ತು ಭಕ್ತಿಮಾರ್ಗೇ ॥೫೧॥

---

೪೭-೪೮. ಯೋಗವು ಸಗುಣವೆಂದೂ ನಿರ್ಗುಣವೆಂದೂ ಎರಡುವಿಧ. ಸಗುಣ ಅಥವಾ ಸಾಲಂಬನಯೋಗದಲ್ಲಿ ತಿಳಿಯುವವನು, ತಿಳಿಯಲ್ಪಡುವ ವಸ್ತು, ತಿಳುವಳಿಕೆ ಮುಂತಾದ ವಿಷಯಗಳು ಗೋಚರವಾಗುವುವು. ನಿರ್ಗುಣ ಅಥವಾ ನಿರಾಲಂಬನ ಯೋಗದಲ್ಲಾದರೋ ಇದಾವುದೂ ತಿಳಿಯುವುದಿಲ್ಲ. ಅದು ಮನೋ ವ್ಯಾಪಾರದ ಕ್ರಮವನ್ನು ಮೀರಿರುವುದು.

೪೯. ಪಾರ್ವತಿ ಹೇಳಿದಳು.—ಭಕ್ತರಲ್ಲಿ ವ್ಯಕ್ತವಾಗುವ ಭಕ್ತಿಯು ಮೂರು ವಿಧವಾಗಿರುವುದೆಂದು ನೀನು ಹಲವು ಸಾರಿ ಹೇಳಿರುವೆಯಷ್ಟೆ! ಅದರ ವಿವರವನ್ನು ಕೇಳಬಯಸುತ್ತೇನೆ. ಸಾಂಗವಾಗಿ ಅದನ್ನು ನನಗೆ ತಿಳಿಸು.

೫೦-೫೧. ಪರಮೇಶ್ವರನು ಹೇಳಿದನು.—ಓ ಪಾರ್ವತೀ, ದೇವೇಶ್ವರೀ, ಭಕ್ತವತ್ಸಲೇ, ಇಲ್ಲಿ ಕೇಳು. ಸಾಂಖ್ಯವನ್ನೂ ಯೋಗವನ್ನೂ ಕೈಗೊಂಡು ಅವುಗಳ ಸಿದ್ಧಿಗಾಗಿ ಯತ್ನಿಸುವಾತನು ದುಃಖದಿಂದ ಪಾರಾಗುತ್ತಾನೆ. ತನ್ನ ಆಹಾರಕ್ಕಾಗಿ ಚಿಂತಿಸದೆ ಅನವರತವೂ ಭಿಕ್ಷಾವ್ರತದಿಂದ ಜೀವಿಸುವವನಲ್ಲಿ ಭಕ್ತಿಯು ಕಳೆಯೇರು ವುದು. ಅದರಿಂದ ಅವನು ತನ್ನನ್ನೇ ಮರೆತು ಭಕ್ತಿಸಾಗರದಲ್ಲಿ ಮುಳುಗುವನು. ಅವನೇ ನಿಜವಾದ ಭಕ್ತ.

ಶಾಸ್ತ್ರಾಣಾಂ ತು ವರಾರೋಹೇ ಬಹುಕಾರಣದರ್ಶಿನಃ ।
ನ ಮಾಂ ಪಶ್ಯಂತಿ ತೇ ದೇವಿ ಜ್ಞಾನವಾಕ್ಯವಿವಾದಿನಃ ॥೫೨॥

ಪರಮಾರ್ಥಜ್ಞಾನತೃಪ್ತಾ ಯುಕ್ತಾ ಜಾನಂತಿ ಯೋಗಿನಃ ।
ವಿದ್ಯಯಾ ವಿದಿತಾತ್ಮಾನೋ ಯೋಗಸ್ಯ ಚ ದ್ವಿಜಾತಯಃ ॥೫೩॥

ಪ್ರತ್ಯಾಹಾರೇಣ ಶುದ್ಧಾತ್ಮಾ ನಾನ್ಯಥಾ ಚಿಂತಯೇಚ್ಚ ತತ್ ।
ತುಷ್ಟಿಂ ಚ ಪರಮಾಂ ಪ್ರಾಪ್ಯ ಯೋಗಂ ಮೋಕ್ಷಂ ಪರಂ ತಥಾ ।
ತ್ರಿಭಿರ್ಗುಣೈಃ ಸಮಾಯುಕ್ತೋ ಜ್ಞಾನವಾನ್ ಪಶ್ಯತೀಹ ಮಾಂ ॥೫೪॥

ಏತತ್ತೇ ಕಥಿತಂ ದೇವಿ ಕಿಮನ್ಯಚ್ಛ್ರೋತುಮಿಚ್ಛಸಿ ।
ಭೂಯ ಏವ ವರಾರೋಹೇ ಕಥಯಿಷ್ಯಾಮಿ ಸುವ್ರತೇ ॥೫೫॥

---

೫೨. ಎಲೌ ಸುಂದರೀ, ಶಾಸ್ತ್ರಗಳಿಗೆ ಹಲವು ಬಗೆಯ ಕಾರಣಗಳನ್ನು ತೋರಿಸುತ್ತ, ತಮ್ಮ ಪಾಂಡಿತ್ಯದಿಂದ ಶಾಸ್ತ್ರವಚನಗಳ ಮೇಲೆ ಚರ್ಚೆಯನ್ನು ಹೂಡುವವರು ನನ್ನನ್ನು ಕಾಣಲಾರರು.

೫೩. ಪರಮಾರ್ಥಜ್ಞಾನದಲ್ಲಿ ತೃಪ್ತರೂ, ಯೋಗನಿಷ್ಠರೂ; ಯೋಗ ವಿದ್ಯೆಯಿಂದ ಆತ್ಮವನ್ನು ಅರಿತವರೂ, ದ್ವಿಜೋತ್ತಮರೂ ಆದ ಯೋಗಿಗಳು ನನ್ನನ್ನು ತಿಳಿಯುವರು.

೫೪. ವಿಷಯಸುಖದ ಕಡೆಗೆ ಹೋಗದಂತೆ ಇಂದ್ರಿಯಗಳನ್ನು ಸೆಳೆದು ಮನಸ್ಸನ್ನು ಶುದ್ಧಿಗೊಳಿಸಬೇಕು. ಬೇರೆ ಯಾವ ವಿಧದಲ್ಲಿಯೂ ಇಂದ್ರಿಯ ಸುಖವನ್ನು ಚಿಂತಿಸಬಾರದು. ಹೀಗೆ ಜ್ಞಾನ, ಭಕ್ತಿ ಮತ್ತು ವೈರಾಗ್ಯಗಳೆಂಬ ಮೂರು ಗುಣಗಳಿಂದ ಕೂಡಿದ ಜ್ಞಾನಿಯು ಅತ್ಯಂತ ತೃಪ್ತನಾಗಿ ಯೋಗದಲ್ಲಿಯೂ ಮೋಕ್ಷದಲ್ಲಿಯೂ ಸಿದ್ಧಿಯನ್ನು ಪಡೆದು ನನ್ನನ್ನು ಇಲ್ಲಿ ಕಾಣುವನು.

೫೫. ದೇವೀ, ಇದನ್ನು ನಿನಗೆ ಹೇಳಿದೆನು. ಮತ್ತೇನನ್ನು ಕೇಳಬೇಕೆನ್ನುತ್ತೀಯೆ ? ಮಂಗಳವ್ರತಗಳಲ್ಲಿ ನಿರತಳಾದ ಎಲೌ ಪಾರ್ವತೀ, ಮರಳಿ ಹೇಳುವೆನು.

**ಗುಹ್ಯಂ ಪವಿತ್ರಮಥವಾ ಯಚ್ಚಾಪಿ ಹೃದಿ ವರ್ತತೇ ।**
**ತತ್ಸರ್ವಂ ಕಥಯಿಷ್ಯಾಮಿ ಶೃಣುಷ್ವೈಕಮನಾಃ ಪ್ರಿಯೇ ॥೫೬॥**

**॥ ದೇವ್ಯುವಾಚ ॥**

**ತ್ವದ್ರೂಪಂ ಕೀದೃಶಂ ದೇವ ಯುಕ್ತಾಃ ಪಶ್ಯಂತಿ ಯೋಗಿನಃ ।**
**ಏತಂ ಮೇ ಸಂಶಯಂ ಬ್ರೂಹಿ ನಮಸ್ತೇ ಸುರಸತ್ತಮ ॥೫೭॥**

**॥ ಶ್ರೀ ಭಗವಾನುವಾಚ ॥**

**ಅಮೂರ್ತಂ ಚೈವ ಮೂರ್ತಂ ಚ ಜ್ಯೋತೀರೂಪಂ ಹಿ ತತ್ಸ್ಮೃತಂ ।**
**ತಸ್ಯೋಪಲಬ್ಧಿಮನ್ವಿಚ್ಛನ್ಯತ್ನಃ ಕಾರ್ಯೋ ವಿಜಾನತಾ ॥೫೮॥**

**ಗುಣೈರ್ವಿಯುಕ್ತೋ ಭೂತಾತ್ಮಾ ಏವಂ ವಕ್ತುಂ ನ ಶಕ್ಯತೇ ।**
**ಶಕ್ಯತೇ ಯದಿ ವಕ್ತುಂ ವೈ ದಿವ್ಯೈರ್ವರ್ಷಶತೈರ್ನ ವಾ ॥೫೯॥**

---

೫೬. ರಹಸ್ಯವೂ ಪವಿತ್ರವೂ ಆದ ಯಾವ ಯಾವ ವಿಷಯವು ಮನಸ್ಸಿನಲ್ಲಿರುವುದೋ ಅದೆಲ್ಲವನ್ನೂ ಹೇಳುವೆನು. ಓ ಪ್ರಿಯೇ, ಒಂದೇ ಮನಸ್ಸಿನಿಂದ ಕೇಳು.

೫೭. ಪಾರ್ವತಿ ಹೇಳಿದಳು.—ಯೋಗನಿಷ್ಠರಾದ ತಪಸ್ವಿಗಳಿಗೆ ಗೋಚರವಾಗತಕ್ಕ ನಿನ್ನ ರೂಪವೆಂತಹುದು ? ದೇವೋತ್ತಮಾ, ನನಗೆ ಸಂದೇಹವಾಗಿರುವ ವಿಷಯವಿದು. ಇದನ್ನು ತಿಳಿಯಹೇಳು. ನಿನಗೆ ನಮಸ್ಕಾರ

೫೮. ಭಗವಂತನು ಹೇಳಿದನು.—ಅದು ನಿರಾಕಾರವೂ ಅಹುದು ; ಸಾಕಾರವೂ ಅಹುದು ; ಅದು ತೇಜೋರೂಪವಾದುದು. ಜ್ಞಾನಿಯಾದವನು ಈ ರೂಪದ ಸಾಕ್ಷಾತ್ಕಾರ ಲಾಭಕ್ಕಾಗಿ ಯತ್ನಿಸಬೇಕು.

೫೯. ಪ್ರಾಕೃತಗುಣರಹಿತನೂ, ಸಕಲಪ್ರಾಣಿಗಳ ಅಂತರಾತ್ಮನೂ ಆದ ಪರಮಾತ್ಮನ ರೂಪವನ್ನು ಹೀಗೆಯೇ ಸರಿಯೆಂದು ಹೇಳುವುದು ಸಾಧ್ಯವಿಲ್ಲ. ದೇವಮಾನದ ಅಸಂಖ್ಯಾತವಾದ ವರ್ಷಗಳಲ್ಲಿಯಾದರೂ ಒಂದು ವೇಳೆ ಬಣ್ಣಿಸುವುದು ಸಾಧ್ಯವೋ ಇಲ್ಲವೋ ತಿಳಿಯದು.

|| ದೇವ್ಯುವಾಚ ||

ಕಿಂಪ್ರಮಾಣಂ ತು ತತ್ಕ್ಷೇತ್ರಂ ಸಮಂತಾತ್ಸರ್ವತೋದಿಶಂ |
ಯತ್ರ ನಿತ್ಯಂ ಸ್ಥಿತೋ ದೇವೋ ಮಹಾದೇವೋ ಗಣೈರ್ಯುತಃ ||೬೦||

|| ಈಶ್ವರ ಉವಾಚ ||

ದ್ವಿಯೋಜನಂ ತು ತತ್ಕ್ಷೇತ್ರಂ ಪೂರ್ವಪಶ್ಚಿಮತಃ ಸ್ಮೃತಂ |
ಅರ್ಧಯೋಜನವಿಸ್ತೀರ್ಣಂ ತತ್ಕ್ಷೇತ್ರಂ ದಕ್ಷಿಣೋತ್ತರಂ ||೬೧||

ವಾರಾಣಸೀ ನದೀ ಯಾ ಚ ಯಾವಚ್ಛುಕ್ಲ ನದೀ ತು ವೈ |
ಭೀಷ್ಮಚಂಡಿಕಮಾರಭ್ಯ ಪರ್ವತೇಶ್ವರಮಂತಿಕೇ ||೬೨||

ಗಣಾ ಯತ್ರ ಚ ತಿಷ್ಠಂತಿ ತಥಾ ವಿಘ್ನವಿನಾಯಕಾಃ |
ಕೂಷ್ಮಾಂಡಗಜತುಂಡಶ್ಚ ಜಯಂತಶ್ಚ ಮದೋತ್ಕಟಾಃ ||೬೩||

ಸಿಂಹವ್ಯಾಘ್ರಮುಖಾಃ ಕೇಚಿದ್ವಿಕಟಾಃ ಕುಬ್ಜವಾಮನಾಃ |
ಯತ್ರ ನಂದೀ ಮಹಾಕಾಲಶ್ಚಂಡಘಂಟೋ ಮಹೇಶ್ವರಃ ||೬೪||

---

೬೦. ಪಾರ್ವತಿ ಹೇಳಿದಳು.—ಸಕಲ ಸದ್ಗುಣಗಳಿಂದಲೂ ಕೂಡಿದ ಮಹಾದೇವನು ಎಡೆಬಿಡದೆ ವಾಸಿಸುವ ಆ ಕ್ಷೇತ್ರದ ಪರಿಮಾಣವು ನಾಲ್ಕುದಿಕ್ಕುಗಳಲ್ಲಿಯೂ ಎಷ್ಟಿರುವುದು ?

೬೧-೬೨. ಈಶ್ವರನು ಹೇಳಿದನು.—ಭೀಷ್ಮಚಂಡಿಕವೆಂಬ ದೊಡ್ಡ ಪರ್ವತದಿಂದ ಪ್ರಾರಂಭಿಸಿ ಅದರ ಪಕ್ಕದಲ್ಲೇ ವಾರಾಣಸೀನದಿಯಿಂದ ಶುಕ್ಲನದಿಯವರೆಗೆ ಈ ಕ್ಷೇತ್ರವು ವ್ಯಾಪಿಸಿದೆ. ಪೂರ್ವಪಶ್ಚಿಮವಾಗಿ ಇದರ ಪರಿಮಾಣ ಎರಡು ಯೋಜನ; ದಕ್ಷಿಣೋತ್ತರವಾಗಿ ಅರ್ಧಯೋಜನ.

೬೩. ಅಲ್ಲಿ ಪ್ರಮಥಗಣಗಳೂ, ವಿಘ್ನಾಧಿಪತಿಗಳೂ, ಮದೋನ್ಮತ್ತರಾದ ಕೂಷ್ಮಾಂಡ, ಗಜತುಂಡ, ಜಯಂತ ಮುಂತಾದ ಗಣನಾಯಕರೂ ಇರುವರು.

೬೪-೬೫ ಕೆಲವರಿಗೆ ಸಿಂಹದಂತೆಯೂ ಹುಲಿಯಂತೆಯೂ ಮುಖವಿದೆ. ಕೆಲವರ ಆಕಾರವು ಭಯಂಕರವಾಗಿರುವುದು. ಮತ್ತೆ ಕೆಲವರು ಗೂನರು ; ಹಲವರು ಕುಳ್ಳರು. ನಂದಿ, ಮಹಾಕಾಲ, ಚಂಡಘಂಟ, ಮಹೇಶ್ವರ, ದಂಡಚಂಡೇಶ್ವರ,

ದಂಡಚಂಡೇಶ್ವರಶ್ಚೈವ ಘಂಟಾಕರ್ಣೋ ಮಹಾಬಲಃ ।
ಏತೇ ಚಾನ್ಯೇ ಚ ಬಹವೋ ಗಣಾಶ್ಚೈವ ಗಣೇಶ್ವರಾಃ ॥೬೫॥

ಮಹೋದರಾ ಮಹಾಕಾಯಾ ವಜ್ರಶಕ್ತಿಧರಾಸ್ತಥಾ ।
ರಕ್ಷಂತಿ ಸತತಂ ದೇವಿ ಹ್ಯವಿಮುಕ್ತಂ ತಪೋವನಂ ।
ದ್ವಾರೇ ದ್ವಾರೇ ಚ ತಿಷ್ಠಂತಿ ಶೂಲಮುದ್ಗರಪಾಣಯಃ ॥೬೬॥

ಸುವರ್ಣಶೃಂಗೀಂ ರೌಪ್ಯಖುರಾಂ ಚಲದ್ಘಂಟಾಂ ಪಯಸ್ವಿನೀಂ ।
ವಾರಾಣಸ್ಯಾಂ ತು ಯೋ ದದ್ಯಾತ್ಸವತ್ಸಾಂ ಕಾಂಸ್ಯಭಾಜನಾಂ ॥೬೭॥

ಗಾಂ ದತ್ವಾ ತು ವರಾರೋಹೇ ಬ್ರಾಹ್ಮಣೇ ವೇದಪಾರಗೇ ।
ಆಸಪ್ತಮಂ ಕುಲಂ ತೇನ ತಾರಿತಂ ನಾತ್ರ ಸಂಶಯಃ ॥೬೮॥

ಯೋ ದದ್ಯಾದ್ಬ್ರಾಹ್ಮಣೇ ಕಿಂಚಿತ್ತಸ್ಮಿನ್ ಕ್ಷೇತ್ರೇ ವರಾನನೇ ।
ಕನಕಂ ರಜತಂ ವಸ್ತ್ರಮನ್ನಾದ್ಯಂ ಬಹುವಿಸ್ತರಂ ।
ಅಕ್ಷಯ್ಯಂ ಚಾವ್ಯಯಂ ಚೈವ ಸ್ಯಾತಾಂ ತಸ್ಯ ಸುಲೋಚನೇ ॥೬೯॥

---

ಮಹಾಬಲಶಾಲಿಯಾದ ಘಂಟಾಕರ್ಣ ಮುಂತಾದ ಎಷ್ಟೋಜನ ಗಣಗಳೂ ಗಣೇಶ್ವರರೂ ವಾಸಿಸುವರು.

೬೬. ಎಲೌ ಪಾರ್ವತೀ, ಈ ಗಣೇಶ್ವರರ ಹೊಟ್ಟೆಯೂ ಶರೀರವೂ ಬಲು ದೊಡ್ಡವು. ಅವರು ವಜ್ರಾಯುಧ, ಶಕ್ತ್ಯಾಯುಧ ಇವುಗಳನ್ನು ಧರಿಸಿ ಅವಿಮುಕ್ತ ಕ್ಷೇತ್ರದ ತಪೋವನವನ್ನು ಎಡೆಬಿಡದೆ ರಕ್ಷಿಸುತ್ತಾರೆ. ಶೂಲ, ಮುದ್ಗರ ಮುಂತಾದ ಆಯುಧಗಳನ್ನು ಕೈಯಲ್ಲಿ ಹಿಡಿದು ಒಂದೊಂದು ಬಾಗಿಲಲ್ಲೂ ನಿಂತಿರುವರು.

೬೭-೬೮. ಎಲೌ ಸುಂದರೀ, ಚಿನ್ನದಿಂದ ಕೊಂಬೂ, ಬೆಳ್ಳಿಯಿಂದ ಗೊರಸೂ ಅಲಂಕೃತವಾಗಿರಲು, ಗಂಟೆಯು ಘಣಘಣಿಸುತ್ತಿರಲು, ಕರುವಿನ ಸಹಿತವಾದ ಹಸುವನ್ನು ಹಾಲುಕರೆಯುವ ಕಂಚಿನಪಾತ್ರೆಯ ಸಮೇತವಾಗಿ ವೇದಾಧ್ಯಯನ ಸಂಪನ್ನನಾದ ಬ್ರಾಹ್ಮಣನಿಗೆ ವಾರಾಣಸೀಕ್ಷೇತ್ರದಲ್ಲಿ ದಾನಮಾಡುವಾತನು ಏಳು ತಲೆಯವರೆಗೆ ತನ್ನ ವಂಶಜರನ್ನು ಉದ್ಧಾರಮಾಡುವನು. ಇದರಲ್ಲಿ ಸಂಶಯವಿಲ್ಲ.

೬೯. ಓ ಮಂಗಳಮುಖೀ, ಶುಭಾಕ್ಷೀ, ಚಿನ್ನ, ಬೆಳ್ಳಿ, ವಸ್ತ್ರ, ಸೋಪಸ್ಕರವಾದ ಅನ್ನ ಮುಂತಾದ ಯಾವುದನ್ನು ಬ್ರಾಹ್ಮಣನಿಗೆ ದಾನಮಾಡಿದರೂ ಅದು ಅಕ್ಷಯವೂ ಶಾಶ್ವತವೂ ಆಗುವುದು.

ಶೃಣು ತತ್ತ್ವೇನ ತೀರ್ಥಸ್ಯ ವಿಭೂತಿಂ ವ್ಯುಷ್ಟಿಮೇವ ಚ ।
ತತ್ರ ಸ್ನಾತ್ವಾ ಮಹಾಭಾಗೇ ಭವಂತಿ ನೀರುಜಾ ನರಾಃ ॥೭೦॥

ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ।
ತದವಾಪ್ನೋತಿ ಧರ್ಮಾತ್ಮಾ ತತ್ರ ಸ್ನಾತ್ವಾ ವರಾನನೇ ॥೭೧॥

ಬಹುಸ್ವಲ್ಪೇ ಚ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ಶುಭಾಂ ಗತಿಮವಾಪ್ನೋತಿ ಅಗ್ನಿವಚ್ಚೈವ ದೀಪ್ಯತೇ ॥೭೨॥

ವಾರಾಣಸೀಜಾಹ್ನವೀಭ್ಯಾಂ ಸಂಗಮೇ ಲೋಕವಿಶ್ರುತೇ ।
ದತ್ವಾನ್ನಂ ಚ ವಿಧಾನೇನ ನ ಸ ಭೂಯೋಽಭಿಜಾಯತೇ ॥೭೩॥

ಏತತ್ತೇ ಕಥಿತಂ ದೇವಿ ತೀರ್ಥಸ್ಯ ಫಲಮುತ್ತಮಂ ॥೭೪॥

ಉಪವಾಸಂ ತು ಯಃ ಕೃತ್ವಾ ವಿಪ್ರಾನ್ ಸಂತರ್ಪಯೇನ್ನರಃ ।
ಸೌತ್ರಾಮಣೇಶ್ಚ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೭೫॥

---

೭೦. ಆ ತೀರ್ಥದ ಮಾಹಾತ್ಮ್ಯವನ್ನೂ ಸಮೃದ್ಧಿಯನ್ನೂ ವಾಸ್ತವವಾಗಿ ಹೇಳುವೆನು ಕೇಳು. ಎಲೌ ಮಹಿಮಾನ್ವಿತೇ, ಅಲ್ಲಿ ಸ್ನಾನಮಾಡಿದ ಮನುಷ್ಯರು ರೋಗರಹಿತರಾಗುತ್ತಾರೆ.

೭೧. ಮಂಗಲಮುಖಿಯಾದ ಓ ದೇವೀ, ಅಲ್ಲಿ ಸ್ನಾನವನ್ನು ಮಾಡಿದ ಧರ್ಮಾತ್ಮನು ಹತ್ತು ಅಶ್ವಮೇಧಗಳ ಫಲವನ್ನು ಪಡೆಯುತ್ತಾನೆ.

೭೨. ವೇದಪಾರಂಗತನಾದ ಬ್ರಾಹ್ಮಣನಿಗೆ ಅಲ್ಲಿ ಬಹುವಾಗಿಯೋ ಸ್ವಲ್ಪವಾಗಿಯೋ ದಾನಮಾಡುವಾತನು ಸದ್ಗತಿಯನ್ನು ಪಡೆಯುತ್ತಾನೆ. ಅಗ್ನಿಯಂತೆ ತೇಜಸ್ವಿಯಾಗುತ್ತಾನೆ.

೭೩-೭೪. ಲೋಕಪ್ರಸಿದ್ಧವಾದ ವಾರಾಣಸಿ ಮತ್ತು ಗಂಗಾನದಿಗಳ ಸಂಗಮ ಕ್ಷೇತ್ರದಲ್ಲಿ ಶಾಸ್ತ್ರೋಕ್ತವಾಗಿ ಅನ್ನದಾನಮಾಡುವಾತನಿಗೆ ಪುನರ್ಜನ್ಮವಿಲ್ಲ. ಎಲೌ ದೇವೀ ! ಅವಿಮುಕ್ತತೀರ್ಥದ ದಿವ್ಯಫಲವೆಷ್ಟಿರುವುದೆಂಬುದನ್ನು ನಿನಗೆ ಹೇಳಿದೆನು.

೭೫. ಆ ಮಹಾಕ್ಷೇತ್ರದಲ್ಲಿ ತಾನು ಉಪವಾಸಮಾಡಿ ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಪಡಿಸುವ ಮನುಷ್ಯನು ಸೌತ್ರಾಮಣಿಯಾಗದ ಫಲವನ್ನು ಪಡೆಯುತ್ತಾನೆ.

ಏಕಾಹಾರಸ್ತು ಯಸ್ತಿಷ್ಠೇನ್ಮಾಸಂ ತತ್ರ ವರಾನನೇ ।
ಯಾವಜ್ಜೀವಕೃತಂ ಪಾಪಂ ಸಹಸಾ ತಸ್ಯ ನಶ್ಯತಿ ॥೭೬॥

ಅಗ್ನಿಪ್ರವೇಶಂ ಯೇ ಕುರ್ಯುರವಿಮುಕ್ತೇ ವಿಧಾನತಃ ।
ಪ್ರವಿಶಂತಿ ಮುಖಂ ತೇ ಮೇ ನಿಃಸಂದಿಗ್ಧಂ ವರಾನನೇ ॥೭೭॥

ಕುರ್ವಂತ್ಯನಶನಂ ಯೇ ತು ಮದ್ಭಕ್ತಾಃ ಕೃತನಿಶ್ಚಯಾಃ ।
ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ॥೭೮॥

ಅರ್ಚಯೇದ್ಯಸ್ತು ಮಾಂ ದೇವಿ ಅವಿಮುಕ್ತೇ ತಪೋವನೇ ।
ತಸ್ಯಂ ಧರ್ಮಂ ಪ್ರವಕ್ಷ್ಯಾಮಿ ಯದವಾಪ್ನೋತಿ ಮಾನವಃ ॥೭೯॥

ದಶಾಶ್ವಮೇಧಿಕಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೮೦॥

---

೭೬. ಓ ಮಂಗಳಮುಖೀ, ಒಂದೇ ಹೊತ್ತು ಊಟಮಾಡುತ್ತ ಆ ಕ್ಷೇತ್ರದಲ್ಲಿ ಒಂದು ತಿಂಗಳಕಾಲ ವಾಸಮಾಡುವಾತನು ಜೀವಮಾನದಲ್ಲಿ ತಾನು ಮಾಡಿದ ಪಾಪಗಳೆಲ್ಲವನ್ನೂ ಕಳೆದುಕೊಳ್ಳುತ್ತಾನೆ.

೭೭. ಎಲೌ ಸುಂದರೀ, ಅವಿಮುಕ್ತಕ್ಷೇತ್ರದಲ್ಲಿ ಶಾಸ್ತ್ರೋಕ್ತ ವಿಧಾನದಿಂದ ಅಗ್ನಿಪ್ರವೇಶವನ್ನು ಮಾಡುವವರು ನನ್ನ ಮುಖವನ್ನು ಪ್ರವೇಶಿಸುವರು. ಇದರಲ್ಲಿ ಸಂದೇಹವಿಲ್ಲ.

೭೮. ಆ ಪವಿತ್ರಭೂಮಿಯಲ್ಲಿ ದೃಢನಿಶ್ಚಯದಿಂದ ಪ್ರಾಯೋಪವೇಶವ್ರತವನ್ನು ನಡೆಸುವ ನನ್ನ ಭಕ್ತರು, ಕೋಟಿಗಟ್ಟಲೆ ಕಲ್ಪಗಳು ಕಳೆಯಲಿ ಮತ್ತೆ ಜನ್ಮವನ್ನು ಪಡೆಯುವುದಿಲ್ಲ.

೭೯-೮೦. ದೇವೀ, ಅವಿಮುಕ್ತಕ್ಷೇತ್ರದ ತಪೋವನದಲ್ಲಿ ನನ್ನನ್ನು ಆರಾಧಿಸುವ ಮಾನವನಿಗೆ ಬರುವ ಫಲವನ್ನು ಹೇಳುವೆನು ಕೇಳು. ಆತನು ಹತ್ತು ಅಶ್ವಮೇಧಗಳ ಪುಣ್ಯಫಲವನ್ನು ಪಡೆಯುವನು. ಸಂಶಯವಿಲ್ಲ.

ದಶ ಸೌವರ್ಣಿಕಂ ಪುಷ್ಪಂ ಯೋಽವಿಮುಕ್ತೇ ಪ್ರಯಚ್ಛತಿ ।
ಅಗ್ನಿಹೋತ್ರಫಲಂ ಧೂಪೇ ಗಂಧದಾನೇ ತಥಾ ಶೃಣು ।
ಭೂಮಿದಾನೇನ ತತ್ತುಲ್ಯಂ ಗಂಧದಾನಫಲಂ ಸ್ಮೃತಂ ॥೮೧॥

ಸಂಮಾರ್ಜನೇ ಪಂಚಶತಂ ಸಹಸ್ರಮನುಲೇಪನೇ ।
ಮಾಲಯಾ ಶತಸಾಹಸ್ರಮನಂತಂ ಗೀತವಾದ್ಯತಃ ॥೮೨॥

॥ ದೇವ್ಯುವಾಚ ॥

ಅತ್ಯದ್ಭುತಮಿದಂ ದೇವ ಸ್ಥಾನಮೇತತ್ಪ್ರಕೀರ್ತಿತಂ ।
ರಹಸ್ಯಂ ಶ್ರೋತುಮಿಚ್ಛಾಮಿ ಯದರ್ಥಂ ತ್ವಂ ನ ಮುಂಚಸಿ ॥೮೩॥

॥ ಈಶ್ವರ ಉವಾಚ ॥

ಆಸೀತ್ಪೂರ್ವಂ ವರಾರೋಹೇ ಬ್ರಹ್ಮಣಸ್ತು ಶಿರೋ ವರಂ ।
ಪಂಚಮಂ ಶೃಣು ಸುಶ್ರೋಣಿ ಜಾತಂ ಕಾಂಚನಸಪ್ರಭಂ ॥೮೪॥

---

೮೧. ಅವಿಮುಕ್ತಕ್ಷೇತ್ರದಲ್ಲಿ ಸುವರ್ಣ ನಿರ್ಮಿತವಾದ ಹತ್ತು ಹೂಗಳನ್ನು ನನಗೆ ಅರ್ಚನೆಮಾಡುವಾತನಿಗೆ ಅಗ್ನಿಹೋತ್ರದ ಫಲವು ಬರುತ್ತದೆ. ಇನ್ನು ಧೂಪವನ್ನೂ ಗಂಧವನ್ನೂ ಸಮರ್ಪಿಸುವುದರಿಂದ ಉಂಟಾಗುವ ಫಲವನ್ನು ಕೇಳು. ಭೂಮಿಯನ್ನು ದಾನಮಾಡಿದರೆ ಎಷ್ಟು ಪುಣ್ಯವು ಬರುತ್ತದೆಯೋ ಅಷ್ಟೇ ಪುಣ್ಯವು ನನಗೆ ಗಂಧವನ್ನು ಧರಿಸುವುದರಿಂದ ಬರುತ್ತದೆ.

೮೨. ನನ್ನ ದೇವಾಲಯವನ್ನು ಗುಡಿಸಿದರೆ ಐನೂರು ದಾನಗಳ ಫಲವುಂಟು. ಹೀಗೆಯೇ ಸಾರಿಸಿದರೆ ಸಾವಿರ, ನನಗೆ ಹೂಮಾಲೆಯನ್ನು ಧಾರಣ ಮಾಡಿದರೆ ಲಕ್ಷ, ನನ್ನ ಮೂರ್ತಿಯ ಮುಂದೆ ಗೀತವಾದ್ಯಗಳನ್ನು ನಡೆಸಿದರೆ ಲೆಕ್ಕವಿಲ್ಲವಷ್ಟು ದಾನಗಳ ಪುಣ್ಯಫಲವು ಪ್ರಾಪ್ತವಾಗುತ್ತದೆ.

೮೩. ಪಾರ್ವತಿ ಹೇಳಿದಳು.—ಸ್ವಾಮೀ, ಈ ಕ್ಷೇತ್ರವು ಅತ್ಯದ್ಭುತವಾದುದೆಂಬುದನ್ನೂ ನೀನು ವಿವರಿಸಿದೆ. ನೀನು ಇದನ್ನು ಅಗಲದಿರುವುದು ಏತಕ್ಕಾಗಿ? ಈ ರಹಸ್ಯವನ್ನು ಕೇಳಲು ಬಯಸುತ್ತೇನೆ.

೮೪. ಈಶ್ವರನು ಹೇಳಿದನು.—ಎಲೌ ವರಾಂಗೀ, ಕೇಳು. ಪೂರ್ವದಲ್ಲಿ ಬ್ರಹ್ಮನಿಗೆ ಐದನೆಯ ತಲೆಯೊಂದಿದ್ದಿತು. ಅದು ಅತಿಶ್ರೇಷ್ಠವಾಗಿ ಚಿನ್ನದಂತೆ ಹೊಳೆಯುತ್ತಿತ್ತು.

ಜ್ವಲತ್ತತ್ಪಂಚಮಂ ಶೀರ್ಷಂ ಜಾತಂ ತಸ್ಯ ಮಹಾತ್ಮನಃ ।
ತದೇವಮಬ್ರವೀದ್ದೇವಿ ಜನ್ಮ ಜಾನಾಮಿ ತೇ ಹ್ಯಹಂ ॥೮೫॥

ತತಃ ಕ್ರೋಧಪರೀತೇನ ಸಂರಕ್ತನಯನೇನ ಚ ।
ವಾಮಾಂಗುಷ್ಠನಖಾಗ್ರೇಣ ಛಿನ್ನಂ ತಸ್ಯ ಶಿರೋ ಮಯಾ ॥೮೬॥

॥ ಬ್ರಹ್ಮೋವಾಚ ॥

ಯದಾ ನಿರಪರಾಧಸ್ಯ ಶಿರಶ್ಛಿನ್ನಂ ತ್ವಯಾ ಮಮ ।
ತಸ್ಮಾಚ್ಛಾಪಸಮಾಯುಕ್ತಃ ಕಪಾಲೀ ತ್ವಂ ಭವಿಷ್ಯಸಿ ।
ಬ್ರಹ್ಮಹತ್ಯಾಕುಲೋ ಭೂತ್ವಾ ಚರ ತೀರ್ಥಾನಿ ಭೂತಲೇ ॥೮೭॥

ತತೋಽಹಂ ಗತವಾನ್ ದೇವಿ ಹಿಮವಂತಂ ಶಿಲೋಚ್ಚಯಂ ।
ತತ್ರ ನಾರಾಯಣಃ ಶ್ರೀಮಾನ್ ಮಯಾ ಭಿಕ್ಷಾಂ ಪ್ರಯಾಚಿತಃ ॥೮೮॥

ತತಸ್ತೇನ ಸ್ವಕಂ ಪಾರ್ಶ್ವಂ ನಖಾಗ್ರೇಣ ವಿದಾರಿತಂ ।
ಸ್ರವತೋ ಮಹತೀ ಧಾರಾ ತಸ್ಯ ರಕ್ತಸ್ಯ ನಿಃಸೃತಾ ॥೮೯॥

---

೮೫. ಓ ಪಾರ್ವತೀ, ಆ ಮಹಾತ್ಮನ ಹೊಳೆಹೊಳೆವ ಆ ಐದನೆಯ ತಲೆಯು "ನಿನ್ನ ಜನ್ಮವೃತ್ತಾಂತವನ್ನು ನಾನು ಬಲ್ಲೆ" ಎಂದು ನನಗೆ ಹೇಳಿತು.

೮೬. ಬಳಿಕ ನನಗೆ ಕೋಪವು ಉಕ್ಕೇರಿತು. ಕಣ್ಣುಗಳು ಕೆಂಪಾದುವು. ಎಡಗೈಯ ಹೆಬ್ಬೆರಳಿನ ತುದಿಯುಗುರಿನಿಂದ ಅವನ ತಲೆಯನ್ನು ಜಿಗುಟಿಹಾಕಿದೆನು.

೮೭. ಬ್ರಹ್ಮನು ಹೇಳಿದನು.—"ನಿರಪರಾಧಿಯಾದ ನನ್ನ ತಲೆಯನ್ನು ನೀನು ಕತ್ತರಿಸಿದೆ. ಆದುದರಿಂದ ಶಾಪಕ್ಕೆ ಗುರಿಯಾಗು. ಈ ಕಪಾಲವು ನಿನ್ನ ಕೈಗೆ ಹತ್ತಿಕೊಳ್ಳಲಿ. ನಿನಗೆ ಕಪಾಲಿಯೆಂಬ ಹೆಸರು ಬರಲಿ. ಬ್ರಹ್ಮಹತ್ಯಾ ದೋಷದಿಂದ ಪೀಡಿತನಾಗಿ ಭೂಲೋಕದಲ್ಲಿ ಪುಣ್ಯತೀರ್ಥಗಳ ಯಾತ್ರೆಮಾಡುತ್ತಿರು."

೮೮. ದೇವೀ, ಬಳಿಕ ನಾನು ಹಿಮವತ್ಪರ್ವತಕ್ಕೆ ಹೋದೆನು. ಅಲ್ಲಿ ತಪಸ್ಸುಮಾಡಿ ಶ್ರೀಮನ್ನಾರಾಯಣನನ್ನು ಭಿಕ್ಷೆಬೇಡಿದೆನು.

೮೯. ತರುವಾಯ ಆತನು ತನ್ನ ಪಾರ್ಶ್ವವನ್ನು ಉಗುರಿನ ತುದಿಯಿಂದ ಸೀಳಿದನು. ಆದರಿಂದ ರಕ್ತವು ದೊಡ್ಡ ಪ್ರವಾಹವಾಗಿ ಹರಿಯಿತು.

ಪ್ರಯಾತಾ ಸಾತಿವಿಸ್ತೀರ್ಣಾ ಯೋಜನಾರ್ಧಶತಂ ತದಾ ।
ನ ಸಂಪೂರ್ಣಂ ಕಪಾಲಂ ತು ಘೋರಮದ್ಭುತದರ್ಶನಂ ॥೯೦॥

ದಿವ್ಯಂ ವರ್ಷಸಹಸ್ರಂ ತು ಸಾ ಚ ಧಾರಾ ಪ್ರವಾಹಿಣೀ ।
ಪ್ರೋವಾಚ ಭಗವಾನ್ ವಿಷ್ಣುಃ ಕಪಾಲಂ ಕುತ ಈದೃಶಂ ॥೯೧॥

ಆಶ್ಚರ್ಯಭೂತಂ ದೇವೇಶ ಸಂಶಯೋ ಹೃದಿ ವರ್ತತೇ ।
ಕುತಶ್ಚ ಸಂಭವೋ ದೇವ ಸರ್ವಂ ಮೇ ಬ್ರೂಹಿ ಪೃಚ್ಛತಃ ॥೯೨॥

॥ ದೇವದೇವ ಉವಾಚ ॥

ಶ್ರೂಯತಾಮಸ್ಯ ಹೇ ದೇವ ಕಪಾಲಸ್ಯ ತು ಸಂಭವಃ ।
ಶತಂ ವರ್ಷಸಹಸ್ರಾಣಾಂ ತಪಸ್ತಪ್ತ್ವಾ ಸುದಾರುಣಂ ॥೯೩॥

ಬ್ರಹ್ಮಾಸೃಜದ್ವಪುರ್ದಿವ್ಯಮದ್ಭುತಂ ಲೋಮಹರ್ಷಣಂ ।
ತಪಸಶ್ಚ ಪ್ರಭಾವೇಣ ದಿವ್ಯಂ ಕಾಂಚನಸನ್ನಿಭಂ ॥೯೪॥

---

೯೦. ಅದು ಐವತ್ತು ಯೋಜನಗಳಷ್ಟು ಅಗಲವಾಗಿ ಪ್ರವಹಿಸಿತು. ನೋಡುವುದಕ್ಕೆ ಅತ್ಯದ್ಭುತಾಕಾರವಾಗಿಯೂ ಭಯಂಕರವಾಗಿಯೂ ಇದ್ದ ಆ ಕಪಾಲವು ಅಷ್ಟು ರಕ್ತದಿಂದಲೂ ತುಂಬಲಿಲ್ಲ.

೯೧-೯೨. ಆ ರಕ್ತಪ್ರವಾಹವು ದೇವಮಾನದ ಒಂದು ಸಾವಿರ ವರ್ಷಗಳ ಕಾಲ ಹರಿಯುತ್ತಲೇ ಇತ್ತು. ಆಗ ಪೂಜ್ಯನಾದ ವಿಷ್ಣು ಹೇಳಿದನು. "ಇಂತಹ ತಲೆಚಿಪ್ಪು ಎಲ್ಲಿದ ಬಂದಿತು ? ದೇವಾಧಿದೇವಾ, ಇದು ಬಹಳ ಆಶ್ಚರ್ಯಕರವಾಗಿದೆ. ಇದರಿಂದ ನನ್ನ ಮನಸ್ಸಿನಲ್ಲಿ ಸಂದೇಹ ಹುಟ್ಟಿದೆ. ದೇವಾ, ಇದರ ಉತ್ಪತ್ತಿಯೆಂತು? ಎಲ್ಲವನ್ನೂ ನನಗೆ ತಿಳಿಸು."

೯೩-೯೪. ಮಹಾದೇವನು ಹೇಳಿದನು.—ದೇವಾ, ಈ ಕಪಾಲದ ಉತ್ಪತ್ತಿಯನ್ನು ಕೇಳು. ಬ್ರಹ್ಮನು ಲಕ್ಷವರ್ಷಗಳ ಕಾಲ ಬಹು ಘೋರವಾದ ತಪಸ್ಸನ್ನು ಮಾಡಿ ಅದರ ಪ್ರಭಾವದಿಂದ ರೋಮಾಂಚವನ್ನೇಳಿಸುವ ಅದ್ಭುತವಾದ ದಿವ್ಯ ದೇಹವನ್ನು ಸೃಷ್ಟಿಸಿದನು. ಅದು ಸುವರ್ಣದಂತೆ ಕಾಂತಿಯುಕ್ತವಾಗಿತ್ತು.

**ಜ್ವಲತ್ತತ್ಪಂಚಮಂ ಶೀರ್ಷಂ ಜಾತಂ ತಸ್ಯ ಮಹಾತ್ಮನಃ ।**
**ನಿಕೃತ್ತಂ ತನ್ಮಯಾ ದೇವ ತದಿದಂ ಪಶ್ಯ ದುರ್ಜಯಂ ॥೯೫॥**

**ಯತ್ರ ಯತ್ರ ಚ ಗಚ್ಛಾಮಿ ಕಪಾಲಂ ತತ್ರ ಗಚ್ಛತಿ ।**
**ಏವಮುಕ್ತಸ್ತತೋ ದೇವಃ ಪ್ರೋವಾಚ ಪುರುಷೋತ್ತಮಃ ॥೯೬॥**

**॥ ಶ್ರೀಭಗವಾನುವಾಚ ॥**

**ಗಚ್ಛ ಗಚ್ಛ ಸ್ವಕಂ ಸ್ಥಾನಂ ಬ್ರಹ್ಮಣಸ್ತ್ವಂ ಪ್ರಿಯಂ ಕುರು ।**
**ತಸ್ಮಿನ್ ಸ್ಥಾಸ್ಯತಿ ಭದ್ರಂ ತೇ ಕಪಾಲಂ ತಸ್ಯ ತೇಜಸಾ ॥೯೭॥**

**ತತಃ ಸರ್ವಾಣಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।**
**ಗತೋಽಸ್ಮಿ ಪೃಥುಲಶ್ರೋಣಿ ನ ಕ್ವಚಿತ್ಪ್ರತ್ಯತಿಷ್ಠತ ॥೯೮॥**

**ತತೋಽಹಂ ಸಮನುಪ್ರಾಪ್ತೋ ಹ್ಯವಿಮುಕ್ತೇ ಮಹಾಶಯೇ ।**
**ಅವಸ್ಥಿತಃ ಸ್ವಕೇ ಸ್ಥಾನೇ ಶಾಪಶ್ಚ ವಿಗತೋ ಮಮ ॥೯೯॥**

---

೯೫. ಆ ಮಹಾತ್ಮನಿಗೆ ಅತಿತೇಜಸ್ವಿಯಾದ ಐದನೆಯ ತಲೆ ಹುಟ್ಟಿತು. ದೇವಾ, ಅದನ್ನು ನಾನು ಕತ್ತರಿಸಿದೆನು. ಇಗೋ! ನೋಡು. ಅದರಿಂದ ಈಗ ಬಿಡಿಸಿಕೊಳ್ಳುವುದು ಅಸಾಧ್ಯವಾಗಿದೆ.

೯೬. ನಾನು ಎಲ್ಲೆಲ್ಲಿಗೆ ಹೋಗಲಿ ಈ ಕಪಾಲವು ಅಲ್ಲಲ್ಲಿಗೆ ಬರುತ್ತದೆ." ಹೀಗೆಂದು ಮಹೇಶ್ವರನು ಹೇಳಲು ಪೂಜ್ಯನಾದ ಶ್ರೀಮನ್ನಾರಾಯಣನು ಉತ್ತರ ವಿತ್ತನು

೯೭. ಭಗವಂತನು ಹೇಳಿದನು.—ನಿನ್ನ ಸ್ಥಳಕ್ಕೆ ಹೊರಡು ಹೊರಡು. ಬ್ರಹ್ಮನಿಗೆ ಪ್ರಿಯವಾದುದನ್ನು ಮಾಡು. ಕಪಾಲವು ಆತನ ತೇಜಸ್ಸಿನಿಂದ ಅಲ್ಲಿ ನಿಂತುಬಿಡುವುದು. ನಿನಗೆ ಮಂಗಳವಾಗಲಿ.

೯೮. ಓ ವರಾಂಗೀ, ಬಳಿಕ ನಾನು ಎಲ್ಲ ತೀರ್ಥಗಳಿಗೂ ಪುಣ್ಯಾಲಯ ಗಳಿಗೂ ಹೋದೆನು. ಆ ಕಪಾಲವು ಎಲ್ಲಿಯೂ ನಿಲ್ಲದೆ ನನ್ನನ್ನು ಅನುಸರಿಸಿಕೊಂಡೇ ಬಂದಿತು.

೯೯. ಎಲೌ ಮಹಾಶಯಳೇ, ಬಳಿಕ ನಾನು ಅವಿಮುಕ್ತಕ್ಷೇತ್ರಕ್ಕೆ ಬಂದೆನು. ನನ್ನ ಸ್ವಸ್ಥಾನದಲ್ಲಿ ಬಂದು ನಿಂತನೋ ಇಲ್ಲವೋ ಆ ಶಾಪವೂ ಕೂಡ ತೊಲಗಿತು.

ವಿಷ್ಣುಪ್ರಸಾದಾತ್ಸುಶ್ರೋಣಿ ಕಪಾಲಂ ತತ್ಸಹಸ್ರಧಾ।
ಸ್ಫುಟಿತಂ ಬಹುಧಾ ಜಾತಂ ಸ್ವಪ್ನಲಬ್ಧಂ ಧನಂ ಯಥಾ ॥೧೦೦॥

ಬ್ರಹ್ಮಹತ್ಯಾಪಹಂ ತೀರ್ಥಂ ಕ್ಷೇತ್ರಮೇತನ್ಮಯಾ ಕೃತಂ।
ಕಪಾಲಮೋಚನಂ ದೇವಿ ದೇವಾನಾಂ ಪ್ರಥಿತಂ ಭುವಿ ॥೧೦೧॥

ಕಾಲೋ ಭೂತ್ವಾ ಜಗತ್ಸರ್ವಂ ಸಂಹರಾಮಿ ಸೃಜಾಮಿ ಚ।
ತತಸ್ತತ್ಪತಿತಂ ತತ್ರ ಶಾಪಶ್ಚ ವಿಗತೋ ಮಮ ॥೧೦೨॥

ಕಪಾಲಮೋಚನಂ ತೀರ್ಥಮಬ್ರಹ್ಮಹತ್ಯಾವಿನಾಶನಂ।
ತತ್ರಸ್ಥೋಽಸ್ಮಿ ಜಗತ್ಸರ್ವಂ ಸುಕರೋಮಿ ಸುರೇಶ್ವರಿ।
ದೇವೀತಿ ಸರ್ವಗುಹ್ಯಾನಾಂ ಸ್ಥಾನಂ ಪ್ರಿಯತರಂ ಮಮ ॥೧೦೩॥

---

೧೦೦. ಓ ಪಾರ್ವತೀ, ಮಹಾವಿಷ್ಣುವಿನ ಪ್ರಸಾದದಿಂದ ಆ ಕಪಾಲವು ಸಾವಿರಪಾಲಾಗಿ ಸಿಡಿದು, ಲೆಕ್ಕವಿಲ್ಲದಷ್ಟು ಚೂರುಗಳಾಗಿ ಕನಸಿನಲ್ಲಿ ಕಂಡ ಹಣದಂತಾಯಿತು.

೧೦೧. ಪವಿತ್ರವಾದ ಈ ಕ್ಷೇತ್ರವು ಬ್ರಹ್ಮಹತ್ಯಾದೋಷವನ್ನು ಕೂಡ ಪರಿಹರಿಸಬಲ್ಲುದೆಂಬ ವಿಷಯವು ನನ್ನ ದೃಷ್ಟಾಂತದಿಂದ ಪ್ರಸಿದ್ಧವಾಯಿತು. ಎಲೌ ದೇವೀ, ಈ ಪುಣ್ಯಸ್ಥಲವು ಕಪಾಲಮೋಚನಕ್ಷೇತ್ರವೆಂಬ ಪ್ರಖ್ಯಾತಿಯನ್ನು ಪಡೆಯಿತು. ದೇವತೆಗಳಿಗೆ ಸಹ ಮಾನ್ಯವಾದುದಾಯಿತು.

೧೦೨. ನಾನು ಕಾಲರೂಪನಾಗಿ ಜಗತ್ತೆಲ್ಲವನ್ನೂ ಸಂಹರಿಸುವೆನು. ಇಂತಹ ಸರ್ವಶಕ್ತನಾದ ನನಗೆ ಬಂದಿದ್ದ ಶಾಪವೂ ಕೂಡ ಅಲ್ಲಿ ಪರಿಹಾರವಾಯಿತು. ನನಗೆ ತಗುಲಿಕೊಂಡಿದ್ದ ಕಪಾಲವು ಅಲ್ಲಿ ಬಿದ್ದುಹೋಯಿತು.

೧೦೩. ಕಪಾಲಮೋಚನವೆಂಬ ತೀರ್ಥವು ಬ್ರಹ್ಮಹತ್ಯಾದೋಷವನ್ನು ಪರಿಹರಿಸತಕ್ಕುದಾಯಿತು. ಎಲೌ ದೇವೇಶ್ವರೀ, ಇಲ್ಲಿ ನಾನು ನೆಲಸಿ ಜಗತ್ತೆಲ್ಲವನ್ನೂ ವ್ಯವಸ್ಥೆಗೊಳಿಸುತ್ತೇನೆ. ಅತ್ಯಂತ ಪಾವನವೆನಿಸಿದ ಈ ಕ್ಷೇತ್ರವು ನನಗೆ ಬಹುಪ್ರಿಯವಾಗಿದೆ.

ಮದ್ಭಕ್ತಾಸ್ತತ್ರ ಗಚ್ಛಂತಿ ವಿಷ್ಣುಭಕ್ತಾಸ್ತಥೈವ ಚ ।
ಯೇ ಭಕ್ತಾ ಭಾಸ್ಕರೇ ದೇವಿ ಲೋಕನಾಥೇ ದಿವಾಕರೇ ।
ತತ್ರಸ್ಥೋ ಯಸ್ತ್ಯಜೇದ್ದೇಹಂ ಮಾಮೇವ ಪ್ರವಿಶೇತ್ತು ಸಃ ॥೧೦೪॥

॥ ದೇವ್ಯುವಾಚ ॥

ಅತ್ಯದ್ಭುತಮಿದಂ ದೇವ ಯದುಕ್ತಂ ಪದ್ಮಯೋನಿನಾ ।
ತ್ರಿಪುರಾಂತಕರಸ್ಥಾನಂ ಗುಹ್ಯಮೇತನ್ಮಹಾದ್ಯುತೇ ॥೧೦೫॥

ಸನ್ನಿಧಾನಾತ್ತು ತೇ ಸರ್ವೇ ಕಲಾಂ ನಾರ್ಹಂತಿ ಷೋಡಶೀಂ ।
ಯತ್ರ ತಿಷ್ಠತಿ ದೇವೇಶೋ ಯತ್ರ ತಿಷ್ಠತಿ ಶಂಕರಃ ॥೧೦೬॥

ಗಂಗಾ ತೀರ್ಥಸಹಸ್ರಾಣಾಂ ತುಲ್ಯಾ ಭವತಿ ವಾ ನ ವಾ ।
ತ್ವಮೇವ ಭಕ್ತಿರ್ದೇವೇಶ ತ್ವಮೇವ ಗತಿರುತ್ತಮಾ ॥೧೦೭॥

---

೧೦೪. ನನ್ನ ಭಕ್ತರೂ, ವಿಷ್ಣುವಿನ ಭಕ್ತರೂ, ಲೋಕನಾಥನಾದ ಸೂರ್ಯ ದೇವನ ಭಕ್ತರೂ ಈ ಕ್ಷೇತ್ರಕ್ಕೆ ಬರುತ್ತಾರೆ. ಇಲ್ಲಿ ವಾಸಮಾಡುತ್ತ ದೇಹವನ್ನು ತ್ಯಜಿಸುವಾತನು ನನ್ನನ್ನೇ ಪ್ರವೇಶಿಸುವನು.

೧೦೫. ಪಾರ್ವತಿ ಹೇಳಿದಳು.—ದೇವಾ, ಬ್ರಹ್ಮನು ಹೇಳಿದ ವಿಷಯವು ಅತ್ಯದ್ಭುತವಾದುದು. ಅತಿತೇಜಸ್ವಿಯಾದ ಓ ತ್ರಿಪುರಾಂತಕಾ, ಈ ಕ್ಷೇತ್ರವು ನನಗೆ ಬಹಳ ಪವಿತ್ರವಾದುದು.

೧೦೬. ಉಳಿದ ಕ್ಷೇತ್ರಗಳೆಲ್ಲ ಇದರ ಹದಿನಾರಲ್ಲೊಂದು ಪಾಲಿಗೆ ಸಹ ಸರಿ ಬರಲಾರವು. ಏಕೆಂದರೆ ನಿನ್ನ ನಿರಂತರ ಸಾನ್ನಿಧ್ಯವು ಇಲ್ಲಿದೆ. ಮಹಾದೇವನೂ ಶಂಕರನೂ ಆದ ನೀನು ಇಲ್ಲಿ ನೆಲಸಿರುವೆ.

೧೦೭. ಗಂಗಾನದಿಯು ಸಾವಿರಾರು ಪುಣ್ಯತೀರ್ಥಗಳಿಗೆ ಸಮನಾಗಲಿ ಅಥವಾ ಆಗದಿರಲಿ; ದೇವೇಶ್ವರಾ, ಭಕ್ತಿಯನ್ನು ಅನುಗ್ರಹಿಸುವವನೂ ನೀನೇ, ಉತ್ತಮವಾದ ಗತಿಯೂ ನೀನೇ.

**ಬ್ರಹ್ಮಾದೀನಾಂ ತು ದೇವಾನಾಂ ಗತಿರುಕ್ತಾ ಸನಾತನೀ ।**
**ಶ್ರಾವ್ಯಮೇತದ್ದ್ವಿಜಾತೀನಾಂ ಭಕ್ತಾನಾಮನುಕಂಪಯಾ ॥೧೦೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಅವಿಮುಕ್ತಮಹಾತ್ಮ್ಯೇ**
**ತ್ರ್ಯಶೀತ್ಯಧಿಕಶತತಮೋಽಧ್ಯಾಯಃ**

---

೧೦೮. ಬ್ರಹ್ಮಾದಿದೇವತೆಗಳಿಗೆ ಕೂಡ ಶಾಶ್ವತವಾದ ಗತಿಯಾವುದೆಂಬು ದನ್ನು ನೀನು ಹೇಳಿದೆ. ಭಗವದ್ಭಕ್ತರಾದ ಬ್ರಾಹ್ಮಣರು ಕನಿಕರದಿಂದ ಮಿಕ್ಕವರೆಲ್ಲ ರಿಗೂ ಹೇಳಲರ್ಹವಾದ ಉಪಾಖ್ಯಾನವಿದು.

## ಅಧ್ಯಾಯದ ಸಾರಾಂಶ

ವಾರಾಣಸೀ ಮಾಹಾತ್ಮ್ಯವನ್ನೇ ಪರಮೇಶ್ವರನು ಪುನಃ ಪಾರ್ವತಿಗೆ ವಿವರಿಸುವನು.

ಈ ಕ್ಷೇತ್ರದಲ್ಲಿ ಮಾಡಿದ ಸ್ನಾನ, ಪೂಜೆ, ದಾನ ಮುಂತಾದುವೆಲ್ಲ ಅಕ್ಷಯ ವಾಗುವುವು. ಈಶ್ವರನು ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿದುದರಿಂದ ಬಂದ ಬ್ರಹ್ಮಹತ್ಯಾದೋಷವು ಎಲ್ಲೆಲೂ ಹೋಗಲಿಲ್ಲ. ಈ ಕ್ಷೇತ್ರಕ್ಕೆ ಕಾಲಿಟ್ಟ ಕೂಡಲೆ ಅದು ಪರಿಹಾರವಾಯಿತು. ಆದುದರಿಂದ ಇದಕ್ಕೆ ಕಪಾಲಮೋಚನ ಕ್ಷೇತ್ರವೆಂದು ಪ್ರಸಿದ್ಧಿ ಬಂದಿತು. ಅಂದಿನಿಂದ ಮಹಾದೇವನು ಇಲ್ಲಿ ಎಡೆಬಿಡದೆ ವಾಸಿಸುತ್ತಿರುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅವಿಮುಕ್ತಮಾಹಾತ್ಮ್ಯದಲ್ಲಿ
ನೂರ ಎಂಬತ್ತಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುರಶೀತ್ಯಧಿಕಶತತಮೋಽಧ್ಯಾಯಃ

|| ಮಹೇಶ್ವರ ಉವಾಚ ||

ಸೇವಿತಂ ಬಹುಭಿಃ ಸಿದ್ಧೈರಪುನರ್ಭವಕಾಂಕ್ಷಿಭಿಃ ।
ವಿದಿತ್ವಾ ತು ಪರಂ ಕ್ಷೇತ್ರಮವಿಮುಕ್ತಂ ಸಮಾಶ್ರಯೇತ್ || ೧ ||

ತದ್ಗುಹ್ಯಂ ದೇವದೇವಸ್ಯ ತತ್ತೀರ್ಥಂ ತತ್ತಪೋವನಂ ।
ಪರಂ ಸ್ಥಾನಂ ತು ತೇ ಯಾಂತಿ ಸಂಭವಂತಿ ನ ತೇ ಪುನಃ || ೨ ||

ಜ್ಞಾನೇ ವಿಹಿತನಿಷ್ಠಾನಾಂ ಪರಮಾನಂದಮಿಚ್ಛತಾಂ ।
ಯಾ ಗತಿರ್ವಿಹಿತಾ ಸದ್ಭಿಃ ಸಾಽವಿಮುಕ್ತೇ ಮೃತಸ್ಯ ತು || ೩ ||

---

೧. ಮಹೇಶ್ವರನು ಹೇಳಿದನು.—ಕ್ಷೇತ್ರಗಳಲ್ಲೆಲ್ಲ ಅವಿಮುಕ್ತವೇ ಉತ್ತಮವಾದುದೆಂದು ದೃಢವಾಗಿ ನಂಬಿ ಪ್ರತಿಯೊಬ್ಬನೂ ಅದನ್ನು ಆಶ್ರಯಿಸಬೇಕು. ಪುನರ್ಜನ್ಮದ ಕೋಟಲೆಯಿಂದ ಪಾರಾಗಬೇಕೆಂಬ ಅಭಿಲಾಷೆ ಹೊಂದಿ ಎಷ್ಟೋ ಜನ ಸಿದ್ಧಪುರುಷರು ಅದನ್ನು ಓಲೈಸುತ್ತಿರುವರು.

೨. ಅವಿಮುಕ್ತಕ್ಷೇತ್ರದ ಮಹಿಮೆಯನ್ನು ಬಲ್ಲವರು ಮಹಾದೇವನ ನೆಲೆಯೆನಿಸಿದ ಆ ತೀರ್ಥವನ್ನೂ, ಆ ತಪೋವನವನ್ನೂ, ಅತಿಶ್ರೇಷ್ಠವಾದ ಆ ಸ್ಥಾನವನ್ನೂ ಕುರಿತು ತೆರಳುವರು. ಅವರು ಮತ್ತೆ ಈ ಲೋಕದಲ್ಲಿ ಹುಟ್ಟುವುದಿಲ್ಲ.

೩. ಪರಬ್ರಹ್ಮಾನುಭವರೂಪವಾದ ಆನಂದವನ್ನು ಅಪೇಕ್ಷಿಸಿ ನಿಷ್ಠೆಯಿಂದ ಜ್ಞಾನಯೋಗದಲ್ಲಿ ತೊಡಗಿದವರಿಗೆ ಯಾವ ಸದ್ಗತಿ ದೊರಕುವುದೆಂದು ಪ್ರಾಜ್ಞರು ಹೇಳುತ್ತಾರೋ, ಅದೇ ಸದ್ಗತಿಯು ಅವಿಮುಕ್ತಕ್ಷೇತ್ರದಲ್ಲಿ ಮೃತನಾದ ಸಾಮಾನ್ಯ ಮನುಷ್ಯನಿಗೆ ಪ್ರಾಪ್ತವಾಗುವುದು.

ಭವಸ್ಯ ಪ್ರೀತಿರತುಲಾ ಹ್ಯವಿಮುಕ್ತೇ ಹ್ಯನುತ್ತಮಾ ।
ಅಸಂಖ್ಯೇಯಂ ಫಲಂ ತತ್ರ ಹ್ಯಕ್ಷಯಾ ಚ ಗತಿರ್ಭವೇತ್ ॥ ೪ ॥

ಪರಂ ಗುಹ್ಯಂ ಸಮಾಖ್ಯಾತಂ ಶ್ಮಶಾನಮಿತಿ ಸಂಜ್ಞಿತಂ ।
ಅವಿಮುಕ್ತಂ ನ ಸೇವಂತೇ ವಂಚಿತಾಸ್ತೇ ನರಾ ಭುವಿ ॥ ೫ ॥

ಅವಿಮುಕ್ತೇ ಸ್ಥಿತೈಃ ಪುಣ್ಯೈಃ ಪಾಂಶುಭಿರ್ವಾಯುನೇರಿತೈಃ ।
ಅಪಿ ದುಷ್ಕೃತಕರ್ಮಾಣೋ ಯಾಸ್ಯಂತಿ ಪರಮಾಂ ಗತಿಂ ॥ ೬ ॥

ಅವಿಮುಕ್ತಗುಣಾನ್ ವಕ್ತುಂ ದೇವದಾನವಮಾನವೈಃ ।
ನ ಶಕ್ಯತೇಽಪ್ರಮೇಯತ್ವಾತ್ಸ್ವಯಂ ಯತ್ರ ಭವಃ ಸ್ಥಿತಃ ॥ ೭ ॥

ಅನಾಹಿತಾಗ್ನಿರ್ನೋ ಯಷ್ಟಾ ನೋ ಶುಚಿಸ್ತಸ್ಕರೋಽಪಿ ವಾ ।
ಅವಿಮುಕ್ತೇ ವಸೇದ್ಯಸ್ತು ಸ ವಸೇದೀಶ್ವರಾಲಯೇ ॥ ೮ ॥

---

೪. ಅವಿಮುಕ್ತಕ್ಷೇತ್ರದಲ್ಲಿ ಪರಮೇಶ್ವರನ ಅಸಮಾನವಾದ ಪ್ರೀತಿಯೂ, ಅಪರಿಮಿತವಾದ ಫಲವೂ, ಅಕ್ಷಯವಾದ ಗತಿಯೂ ಲಭಿಸುವುವು.

೫. ಶ್ಮಶಾನವೆಂಬ ನಾಮಾಂತರವನ್ನು ಪಡೆದ ವಾರಾಣಸೀಕ್ಷೇತ್ರವನ್ನು ಬಹುಪವಿತ್ರವಾದುದೆಂದು ಜ್ಞಾನಿಗಳು ಎಣಿಸಿದ್ದಾರೆ. ಈ ಕ್ಷೇತ್ರಯಾತ್ರೆಯನ್ನು ಮಾಡದ ಮನುಷ್ಯರು ಭೂಮಿಯಲ್ಲಿ ವಂಚಿತರಾದವರೇ ಸರಿ.

೬. ಅವಿಮುಕ್ತಕ್ಷೇತ್ರದ ಪವಿತ್ರವಾದ ಧೂಳಿಯನ್ನು ಗಾಳಿ ಹೊತ್ತುತಂದು ಮೈಮೇಲೆ ಬೀಳಿಸಿದರೂ ಸಾಕು; ಎತಹ ಪಾಪಿಷ್ಠನಾಗಿರಲಿ ಒಳ್ಳೆಯ ಗತಿಯನ್ನು ಪಡೆಯುತ್ತಾನೆ.

೭. ಸಾಕ್ಷಾತ್ಪರಮೇಶ್ವರನ ನಿವಾಸಸ್ಥಾನವಾದ ಅವಿಮುಕ್ತಕ್ಷೇತ್ರದ ಗುಣಗಳನ್ನು ವರ್ಣಿಸಲು ದೇವತೆಗಳು, ದಾನವರು, ಮಾನವರು ಇವರಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಅದು ಊಹಾತೀತವಾದುದು.

೮. ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುವ ಮನುಷ್ಯನು ಎಂತಹವನಾಗಿರಲಿ—ಆಹಿತಾಗ್ನಿಯಲ್ಲದಿರಲಿ, ಯಾಗಮಾಡದಿರಲಿ, ಅಶುಚಿಯಾಗಿರಲಿ, ಕಳ್ಳನೇ ಆಗಿರಲಿ, ಮರಣಾನಂತರ ಕೈಲಾಸವನ್ನು ಸೇರುವನು.

ತತ್ರ ನಾಪುಣ್ಯಕೃತ್ಕಶ್ಚಿತ್ಪ್ರಸಾದಾದೀಶ್ವರಸ್ಯ ಚ ।
ಅಜ್ಞಾನಾಜ್ಜ್ಞಾನತೋ ವಾಪಿ ಸ್ತ್ರಿಯಾ ವಾ ಪುರುಷೇಣ ವಾ ॥ ೯ ॥

ಯತ್ಕಿಂಚಿದಶುಭಂ ಕರ್ಮ ಕೃತಂ ಮಾನವಬುದ್ಧಿನಾ ।
ಅವಿಮುಕ್ತೇ ಪ್ರವಿಷ್ಟಸ್ಯ ತತ್ಸರ್ವಂ ಭಸ್ಮಸಾದ್ಭವೇತ್ ॥೧೦॥

ಸರಿತಃ ಸಾಗರಾಃ ಶೈಲಾಸ್ತೀರ್ಥಾನ್ಯಾಯತನಾನಿ ಚ ।
ಭೂತಪ್ರೇತಪಿಶಾಚಾಶ್ಚ ಗಣಾ ಮಾತೃಗಣಾಸ್ತಥಾ ॥೧೧॥

ಶ್ಮಶಾನಕಪರೀವಾರಾಃ ಪ್ರಿಯಾಸ್ತಸ್ಯ ಮಹಾತ್ಮನಃ ।
ನ ತೇ ಮುಂಚಂತಿ ಭೂತೇಶಂ ತಾಂ ಭವಸ್ತು ನ ಮುಂಚತಿ ॥೧೨॥

ರಮತೇ ಚ ಗಣೈಃ ಸಾರ್ಧಮವಿಮುಕ್ತೇ ಸ್ಥಿತಃ ಪ್ರಭುಃ ।
ದೃಷ್ಟ್ವಾ ತಾಂ ಭೀತಕೃಪಣಾಂ ಪಾಪದುಷ್ಕೃತಕಾರಿಣಃ ॥೧೩॥

---

೯-೧೦. ಆ ಪವಿತ್ರಕ್ಷೇತ್ರದಲ್ಲಿ ಪುಣ್ಯಕರ್ಮವನ್ನು ಆಚರಿಸದವನೊಬ್ಬನೂ ಇಲ್ಲ. ಅದು ಈಶ್ವರನ ಅನುಗ್ರಹ. ಅಜ್ಞಾನದಿಂದಲೋ, ಜ್ಞಾನದಿಂದಲೋ, ಹೆಂಗಸಾಗಲಿ ಗಂಡಸಾಗಲಿ, ಮನುಷ್ಯಸಹಜವಾದ ಬುದ್ಧಿದೋಷದಿಂದ ಪಾಪಕರ್ಮವನ್ನೇನಾದರೂ ಮಾಡಿದ್ದರೆ ಅವಿಮುಕ್ತಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದಲೇ ಅದು ಸಂಪೂರ್ಣವಾಗಿ ನಾಶವಾಗುವುದು.

೧೧-೧೨. ನದಿಗಳು, ಸಾಗರಗಳು, ಪರ್ವತಗಳು, ತೀರ್ಥಗಳು, ದೇವಾಲಯಗಳು, ಭೂತಪ್ರೇತಪಿಶಾಚಗಳು, ಗಣಗಳು ಇವೆಲ್ಲ ಆ ಮಹಾತ್ಮನಿಗೆ ಪ್ರಿಯವಾದುವು. ಅವು ಮಹಾದೇವನನ್ನು ಬಿಡುವುದಿಲ್ಲ ; ಅವನೂ ಕೂಡ ಅವುಗಳನ್ನು ತೊರೆಯುವುದಿಲ್ಲ.

೧೩. ಅವಿಮುಕ್ತಕ್ಷೇತ್ರದಲ್ಲಿ ನೆಲಸಿರುವ ಜಗತ್ಪ್ರಭುವಾದ ಮಹಾದೇವನು ಪಾಪವನ್ನೂ ಅಕಾರ್ಯವನ್ನೂ ಮಾಡಿ ದಿಕ್ಕಿಲ್ಲದೆ ಭೀತಿಯಿಂದಿರುವ ಈ ಪ್ರಾಣಿಗಳನ್ನೆಲ್ಲ ದಯೆಯಿಂದ ನೋಡುತ್ತಾನೆ. ಗಣಗಳೊಡನೆ ಅಲ್ಲಿ ಕ್ರೀಡಿಸುತ್ತಾನೆ.

ಅನುಕಂಪಯಾ ತು ದೇವಸ್ಯ ಪ್ರಯಾಂತಿ ಪರಮಾಂ ಗತಿಂ ।
ಭಕ್ತಾನುಕಂಪೀ ಭಗವಾಂಸ್ತಿರ್ಯಗ್ಯೋನಿಗತಾನಪಿ ||೧೪||

ನಯತ್ಯೇವ ಪರಂ ಸ್ಥಾನಂ ಯತ್ರ ಯಾಂತಿ ಚ ಯಾಜ್ಞಿಕಾಃ ।
ಭಾರ್ಗವಾಂಗಿರಸಃ ಸಿದ್ಧಾ ಋಷಯಶ್ಚ ಮಹಾವ್ರತಾಃ ||೧೫||

ಅವಿಮುಕ್ತಾಗ್ನಿನಾ ದಗ್ಧಾ ಅಗ್ನೌ ತೂಲಮಿವಾಹಿತಂ ।
ನ ಸಾ ಗತಿಃ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ||೧೬||

ಸಾ ಗತಿರ್ವಿಹಿತಾ ಪುಂಸಾಮವಿಮುಕ್ತನಿವಾಸಿನಾಂ ।
ತಿರ್ಯಗ್ಯೋನಿಗತಾಃ ಸತ್ವಾ ಯೇಽವಿಮುಕ್ತೇ ಕೃತಾಲಯಾಃ ।
ಕಾಲೇನ ನಿಧನಂ ಪ್ರಾಪ್ತಾಸ್ತೇ ಯಾಂತಿ ಪರಮಾಂ ಗತಿಂ ||೧೭||

ಮೇರುಮಂದರಮಾತ್ರೋಽಪಿ ರಾಶಿಃ ಪಾಪಸ್ಯ ಕರ್ಮಣಃ ।
ಅವಿಮುಕ್ತಂ ಸಮಾಸಾದ್ಯ ತತ್ಸರ್ವಂ ವ್ರಜತಿ ಕ್ಷಯಂ ||೧೮||

---

೧೪. ಮಹಾದೇವನ ಕರುಣೆಯಿಂದ ಅವರೆಲ್ಲ ಸದ್ಗತಿಯನ್ನು ಪಡೆಯುತ್ತಾರೆ. ಪರಮೇಶ್ವರನು ಭಕ್ತರಲ್ಲಿ ಕನಿಕರವುಳ್ಳವನು. ತಿರ್ಯಗ್ಜನ್ಮದಲ್ಲಿ ಹುಟ್ಟಿದ ಪ್ರಾಣಿಗಳಿಗೂ ಕೂಡ ಅವನು ಯಜ್ಞಮಾಡಿದವರಿಗೆ ಲಭ್ಯವಾಗುವಂತಹ ಉತ್ತಮ ಗತಿಯನ್ನು ಕರುಣಿಸುತ್ತಾನೆ. ಅದರಲ್ಲಿ ಸಂದೇಹವಿಲ್ಲ.

೧೫. ಭಾರ್ಗವರು, ಆಂಗಿರಸರು, ಸಿದ್ಧರು, ಮಹಾವ್ರತಶೀಲರಾದ ಋಷಿಗಳು ಇವರೆಲ್ಲರೂ ಬೆಂಕಿಯಲ್ಲಿ ಬಿದ್ದ ಹತ್ತಿಯಂತೆ ಅವಿಮುಕ್ತಕ್ಷೇತ್ರವೆಂಬ ಅಗ್ನಿಯಲ್ಲಿ ತಮ್ಮ ಪಾಪವನ್ನೆಲ್ಲ ಕಳೆದುಕೊಂಡಿದ್ದಾರೆ.

೧೬. ಕುರುಕ್ಷೇತ್ರ, ಗಂಗಾದ್ವಾರ, ಪುಷ್ಕರ ಈ ಪುಣ್ಯಸ್ಥಲಗಳಲ್ಲಿ ಸಹ ಲಭ್ಯವಾಗದಿರುವ ಉತ್ತಮವಾದ ಗತಿಯು ಅವಿಮುಕ್ತಕ್ಷೇತ್ರವಾಸಿಗಳಾದ ಜನರಿಗೆ ದೊರೆಯುವುದು.

೧೭. ವಾರಾಣಸೀಕ್ಷೇತ್ರದಲ್ಲಿ ವಾಸಮಾಡುವ ತಿರ್ಯಗ್ಜಂತುಗಳೂ ಕೂಡ ಮರಣಾನಂತರ ಉತ್ತಮಗತಿಯನ್ನು ಪಡೆಯುವುವು.

೧೮. ಪಾಪಕರ್ಮದ ರಾಶಿಯು ಮೇರುಪರ್ವತದಷ್ಟು ಅಥವಾ ಮಂದರ ಪರ್ವತದಷ್ಟು ದೊಡ್ಡದಾಗಿರಲಿ, ಅವಿಮುಕ್ತಕ್ಷೇತ್ರಕ್ಕೆ ಹೋದಕೂಡಲೇ ಅದೆಲ್ಲವೂ ಕ್ಷಯಿಸುವುದು.

ಶ್ಮಶಾನಮಿತಿ ವಿಖ್ಯಾತಮವಿಮುಕ್ತಂ ಶಿವಾಲಯಂ ।
ತದ್ಗುಹ್ಯಂ ದೇವದೇವಸ್ಯ ತತ್ತೀರ್ಥಂ ತತ್ತಪೋವನಂ ॥೧೯॥

ತತ್ರ ಬ್ರಹ್ಮಾದಯೋ ದೇವಾ ನಾರಾಯಣಪುರೋಗಮಾಃ ।
ಯೋಗಿನಶ್ಚ ತಥಾ ಸಾಧ್ಯಾ ಭಗವಂತಂ ಸನಾತನಂ ॥೨೦॥

ಉಪಾಸಂತೇ ಶಿವಂ ಮುಕ್ತಾ ಮದ್ಭಕ್ತಾ ಮತ್ಪರಾಯಣಾಃ ।
ಯಾ ಗತಿರ್ಜ್ಞಾನತಪಸಾಂ ಯಾ ಗತಿರ್ಯಜ್ಞಯಾಜಿನಾಂ ॥೨೧॥

ಅವಿಮುಕ್ತೇ ಮೃತಾನಾಂ ತು ಸಾ ಗತಿರ್ವಿಹಿತಾ ಶುಭಾ ।
ಸಂಹರ್ತಾರಶ್ಚ ಕರ್ತಾರಸ್ತಸ್ಮಿನ್ ಬ್ರಹ್ಮಾದಯಃ ಸುರಾಃ ॥೨೨॥

ಸಮ್ರಾಡ್ವಿರಾಣ್ಮಯಾ ಲೋಕಾ ಜಾಯಂತೇ ಹ್ಯಪುನರ್ಭವಾಃ ।
ಮಹರ್ಜನಸ್ತಪಶ್ಚೈವ ಸತ್ಯಲೋಕಸ್ತಥೈವ ಚ ॥೨೩॥

---

೧೯. ಪರಮೇಶ್ವರನ ವಾಸಸ್ಥಾನವಾದ ವಾರಾಣಸಿಗೆ ಶ್ಮಶಾನವೆಂದೂ ಪ್ರಸಿದ್ಧಿಯುಂಟು. ಮಹಾದೇವನ ಆ ಕ್ಷೇತ್ರವೂ ಪವಿತ್ರವಾದುದು. ತೀರ್ಥವೂ ಅದೇ, ತಪೋವನವೂ ಅದೇ.

೨೦. ಅಲ್ಲಿ ಬ್ರಹ್ಮ, ನಾರಾಯಣ ಮುಂತಾದ ದೇವತೆಗಳು, ಯೋಗಿಗಳು ಮತ್ತು ಸಾಧ್ಯರು ಪೂಜ್ಯನೂ ಸನಾತನನೂ ಆದ ಶಿವನನ್ನು ಉಪಾಸನ ಮಾಡುತ್ತಾರೆ. ಅವರೆಲ್ಲ ಮೋಕ್ಷವನ್ನು ಪಡೆದವರು; ನನ್ನ ಭಕ್ತರು; ನನ್ನಲ್ಲೇ ಮನಸ್ಸಿಟ್ಟವರು.

೨೧. ಜ್ಞಾನದಿಂದಲೂ ತಪಸ್ಸಿನಿಂದಲೂ ಯಾವ ಗತಿಯು ಲಭ್ಯವಾಗುವುದೋ, ಯಜ್ಞಗಳನ್ನು ಮಾಡಿದವರಿಗೆ ಯಾವ ಪುಣ್ಯಲೋಕವು ಪ್ರಾಪ್ತವಾಗುವುದೋ ಅಂತಹ ಸದ್ಗತಿಯು ಅವಿಮುಕ್ತಕ್ಷೇತ್ರದಲ್ಲಿ ಮೃತರಾದವರಿಗೆ ದೊರಕುವುದು.

೨೨-೨೩. ಜಗತ್ತಿನ ಸಂಹಾರಕರೂ ಸೃಷ್ಟಿಕರ್ತರೂ ಆದ ಬ್ರಹ್ಮಾದಿ ದೇವತೆಗಳು ಅಲ್ಲಿರುವರು. ಸಮ್ರಾಟ್, ವಿರಾಟ್, ಮಹ, ಜನ, ತಪ, ಸತ್ಯ ಮೊದಲಾದ ಲೋಕಗಳು ಆ ಕ್ಷೇತ್ರವಾಸಿಗಳಿಗೆ ಲಭ್ಯವಾಗುವುವು. ಇವು ಪುನರ್ಜನ್ಮವಿಲ್ಲದಂತಹ ಶುಭಸ್ಥಾನಗಳು.

ಮನಸಃ ಪರಮೋ ಯೋಗೋ ಭೂತಭವ್ಯಭವಸ್ಯ ಚ ।
ಬ್ರಹ್ಮಾದಿಸ್ಥಾವರಾಂತಸ್ಯ ಯೋನಿಃ ಸಾಂಖ್ಯವಿಮೋಕ್ಷಯೋಃ ॥೨೪॥
ಯೋಽವಿಮುಕ್ತಂ ನ ಮುಂಚಂತಿ ನರಾಸ್ತೇ ನೈವ ವಂಚಿತಾಃ ।
ಉತ್ತಮಂ ಸರ್ವತೀರ್ಥಾನಾಂ ಸ್ಥಾನಾನಾಮುತ್ತಮಂ ಚ ಯತ್ ॥೨೫॥
ಕ್ಷೇತ್ರಾಣಾಮುತ್ತಮಂ ಚೈವ ಶ್ಮಶಾನಾನಾಂ ತಥೈವ ಚ ।
ತಡಾಗಾನಾಂ ಚ ಸರ್ವೇಷಾಂ ಕೂಪಾನಾಂ ಸ್ರೋತಸಾಂ ತಥಾ ॥೨೬॥
ಶೈಲಾನಾಮುತ್ತಮಂ ಶೈಲಂ ತೀರ್ಥಾನಾಮುತ್ತಮಂ ತಥಾ ।
ಪುಣ್ಯಕೃದ್ಭವಭಕ್ತೈಶ್ಚ ಹ್ಯವಿಮುಕ್ತಂ ತು ಸೇವ್ಯತೇ ॥೨೭॥
ಬ್ರಹ್ಮಣಃ ಪರಮಂ ಸ್ಥಾನಂ ಬ್ರಹ್ಮಣಾಧ್ಯಾಸಿತಂ ಚ ಯತ್ ।
ಬ್ರಹ್ಮಣಾ ಸೇವಿತಂ ನಿತ್ಯಂ ಬ್ರಹ್ಮಣಾ ಚೈವ ರಕ್ಷಿತಂ ॥೨೮॥

---

೨೪. ಸಾಂಖ್ಯದ ಮತ್ತು ಮೋಕ್ಷದ ಸ್ಥಿತಿಗೆ ಸಾಧನವಾದ ಸ್ಥಾನವದು. ಈಗ ಇರುವ, ಹಿಂದೆ ಇದ್ದ, ಮತ್ತು ಮುಂದೆ ಹುಟ್ಟುವ, ಬ್ರಹ್ಮನಿಂದ ತೊಡಗಿ ಸ್ಥಾವರದ ವರಗಿರುವ ಎಲ್ಲ ಪ್ರಾಣಿಗಳ ಮನಸ್ಸಿಗೂ ಅಗೋಚರವಾದ ಯೋಗಸಿದ್ಧಿಯ ಪವಿತ್ರ ಸ್ಥಳವದು.

೨೫. ಅವಿಮುಕ್ತಕ್ಷೇತ್ರವನ್ನು ಬಿಟ್ಟು ಕದಲದಿರುವ ಮಾನವರಿಗೆ ಏನೇನೂ ಕೊರೆತೆಯಿಲ್ಲ. ಏಕೆಂದರೆ ಅದು ಸಕಲ ಪುಣ್ಯ ತೀರ್ಥಗಳಿಗಿಂತಲೂ, ಸಕಲ ಪುಣ್ಯಸ್ಥಲಗಳಿಗಿಂತಲೂ ಶ್ರೇಷ್ಠವಾದುದು.

೨೬. ಕ್ಷೇತ್ರಗಳು, ಯೋಗಿಗಳ ಬೃಂದಾವನಗಳು, ಕೆರೆಗಳು, ಬಾವಿಗಳು, ತೊರೆಗಳು ಇವೆಲ್ಲಕ್ಕಿಂತಲೂ ಅವಿಮುಕ್ತಕ್ಷೇತ್ರವು ಪಾವನವಾದುದು.

೨೭. ಪರ್ವತಗಳಲ್ಲಿ ಉತ್ತಮವಾದ ಪರ್ವತವಿದು; ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥವಿದು. ಪುಣ್ಯಶಾಲಿಗಳಾದ ಪರಮೇಶ್ವರನ ಭಕ್ತರಿಗೆ ಮಾತ್ರವೇ ಅವಿಮುಕ್ತಕ್ಷೇತ್ರವನ್ನು ಸೇವಿಸಬೇಕೆಂಬ ಬುದ್ಧಿ ಹುಟ್ಟುತ್ತದೆ.

೨೮. ಇದು ಬ್ರಹ್ಮನಿಗೆ ಅತಿಶ್ರೇಷ್ಠವೆನಿಸಿಕೊಂಡಿರುವ ಸ್ಥಳ. ಏಕೆಂದರೆ ಇಲ್ಲಿ ಬ್ರಹ್ಮನು ನೆಲಸಿದ್ದಾನೆ. ನಿತ್ಯವೂ ಇದನ್ನು ಸೇವಿಸುತ್ತಾನೆ; ಅಷ್ಟೇ ಅಲ್ಲ, ಇದನ್ನು ಎಡೆಬಿಡದೆ ರಕ್ಷಿಸುತ್ತಾನೆ.

**ಅತ್ರೈವ ಸಪ್ತಭುವನಂ ಕಾಂಚನೋ ಮೇರುಪರ್ವತಃ ।**
**ಮನಸಃ ಪರಮೋ ಯೋಗಃ ಪ್ರೀತ್ಯರ್ಥಂ ಬ್ರಹ್ಮಣಃ ಸ ತು ॥೨೯॥**

**ಬ್ರಹ್ಮಾ ತು ತತ್ರ ಭಗವಾಂಸ್ತ್ರಿಸಂಧ್ಯಂ ಚೇಶ್ವರೇ ಸ್ಥಿತಃ ।**
**ಪುಣ್ಯಾತ್ಪುಣ್ಯತಮಂ ಕ್ಷೇತ್ರಂ ಪುಣ್ಯಕೃದ್ಭಿರ್ನಿಷೇವಿತಂ ॥೩೦॥**

**ಆದಿತ್ಯೋಪಾಸನಂ ಕೃತ್ವಾ ವಿಪ್ರಾಶ್ಚಾಮರತಾಂ ಗತಾಃ ।**
**ಅನ್ಯೇಽಪಿ ಯೇ ತ್ರಯೋ ವರ್ಣಾ ಭವಭಕ್ತ್ಯಾ ಸಮಾಹಿತಾಃ ॥೩೧॥**

**ಅವಿಮುಕ್ತೇ ತನುಂ ತ್ಯಕ್ತ್ವಾ ಗಚ್ಛಂತಿ ಪರಮಾಂ ಗತಿಂ ।**
**ಅಷ್ಟೌ ಮಾಸಾನ್ವಿಹಾರಸ್ಯ ಯತೀನಾಂ ಸಂಯತಾತ್ಮನಾಂ ॥೩೨॥**

**ಏಕತ್ರ ಚತುರೋ ಮಾಸಾ ಮಾಸೌ ವಾ ನಿವಸೇತ್ಪುನಃ ।**
**ಅವಿಮುಕ್ತೇ ಪ್ರವಿಷ್ಟಾನಾಂ ವಿಹಾರಸ್ತು ನ ವಿದ್ಯತೇ ॥೩೩॥**

---

೨೯. ಏಳುಲೋಕಗಳೂ ಇಲ್ಲೇ ಇವೆ. ಸುವರ್ಣಮಯವಾದ ಮೇರು ಪರ್ವತವೂ ಇಲ್ಲೇ ಇದೆ. ಮನಸ್ಸಿಗೆ ಗೋಚರವಾಗಬಹುದಾದ ಅತಿಶ್ರೇಷ್ಠವಾದ ಯೋಗ ಇಲ್ಲೇ ಲಭಿಸುವುದು. ಇದು ಬ್ರಹ್ಮನಿಗೆ ಅತ್ಯಂತ ಪ್ರೀತಿಯನ್ನು ಹುಟ್ಟಿಸುತ್ತದೆ.

೩೦. ಪೂಜ್ಯನಾದ ಬ್ರಹ್ಮದೇವನು ಈಶ್ವರನ ಇಚ್ಛಾನುಸಾರವಾಗಿ ತ್ರಿಸಂಧ್ಯಾಕಾಲಗಳಲ್ಲಿಯೂ ಇಲ್ಲಿ ವಾಸಿಸುವನು. ಪುಣ್ಯಕ್ಷೇತ್ರಗಳೆಲ್ಲಕ್ಕಿಂತ ಅತಿ ಪುಣ್ಯಕರವಾದ ಈ ಕ್ಷೇತ್ರವನ್ನು ಸೇವಿಸಬೇಕಾದರೆ ಅದೃಷ್ಟವಿರಬೇಕು.

೩೧. ಬ್ರಾಹ್ಮಣರು ಇಲ್ಲಿ ಸೂರ್ಯೋಪಸ್ಥಾನವನ್ನು ಮಾಡಿ ದೇವತ್ವವನ್ನು ಪಡೆದಿರುವರು. ಇನ್ನು ಉಳಿದ ಮೂರು ವರ್ಣದವರು ಈಶ್ವರನಲ್ಲಿ ಅಚಲವಾದ ಭಕ್ತಿಯನ್ನಿಟ್ಟು ಅವಿಮುಕ್ತಕ್ಷೇತ್ರದಲ್ಲಿ ದೇಹತ್ಯಾಗಮಾಡಿ ಉತ್ಕೃಷ್ಟವಾದ ಪದವಿಯನ್ನು ಪಡೆಯುವರು.

೩೨-೩೩. ಜಿತೇಂದ್ರಿಯರಾದ ಸಂನ್ಯಾಸಿಗಳು ಆತ್ಮಾರಾಮರಾಗಿ ಸಂಚರಿಸುತ್ತ ಚಾತುರ್ಮಾಸ್ಯವ್ರತಕ್ಕಾಗಿ ಮಾತ್ರ ನಾಲ್ಕು ಅಥವಾ ಎರಡು ತಿಂಗಳಕಾಲ ಒಂದೆಡೆಯಲ್ಲಿ ವಾಸಮಾಡಬೇಕು; ಆದರೆ ಅವಿಮುಕ್ತಕ್ಷೇತ್ರವಾಸಿಗಳಾದ ಯತಿಗಳಿಗೆ ಸಂಚಾರದ ನಿಯಮವಿಲ್ಲ.

ನ ದೇಹೋ ಭವಿತಾ ತತ್ರ ದೃಷ್ಟಂ ಶಾಸ್ತ್ರೇ ಪುರಾತನೇ ।
ಮೋಕ್ಷೋ ಹ್ಯಸಂಶಯಸ್ತತ್ರ ಪಂಚತ್ವಂ ತು ಗತಸ್ಯ ವೈ ॥೩೪॥

ಸ್ತ್ರಿಯಃ ಪತಿವ್ರತಾ ಯಾಶ್ಚ ಭವಭಕ್ತಾಃ ಸಮಾಹಿತಾಃ ।
ಅವಿಮುಕ್ತೇ ವಿಮುಕ್ತಾಸ್ತಾ ಯಾಸ್ಯಂತಿ ಪರಮಾಂ ಗತಿಂ ॥೩೫॥

ಅನ್ಯಾ ಯಾಃ ಕಾಮಚಾರಿಣ್ಯಃ ಸ್ತ್ರಿಯೋ ಭೋಗಪರಾಯಣಾಃ ।
ಕಾಲೇನ ನಿಧನಂ ಪ್ರಾಪ್ತಾ ಗಚ್ಛಂತಿ ಪರಮಾಂ ಗತಿಂ ॥೩೬॥

ಯತ್ರ ಯೋಗಶ್ಚ ಮೋಕ್ಷಶ್ಚ ಪ್ರಾಪ್ಯತೇ ದುರ್ಲಭೋ ನರೈಃ ।
ಅವಿಮುಕ್ತಂ ಸಮಾಸಾದ್ಯ ನಾನ್ಯದ್ಗಚ್ಛೇತ್ತಪೋವನಂ ॥೩೭॥

ಸರ್ವಾತ್ಮನಾ ತಪಃ ಸೇವ್ಯಂ ಬ್ರಾಹ್ಮಣೈರ್ನಾತ್ರ ಸಂಶಯಃ ।
ಅವಿಮುಕ್ತೇ ವಸೇದ್ಯಸ್ತು ಮಮ ತುಲ್ಯೋ ಭವೇನ್ನರಃ ॥೩೮॥

---

೩೪. ಆ ಕ್ಷೇತ್ರದಲ್ಲಿ ಪುನರ್ಜನ್ಮವಿಲ್ಲವೆಂದು ಶಾಸ್ತ್ರದಲ್ಲಿ ಹೇಳಿದೆ. ಅಲ್ಲಿ ಮೃತನಾದವನಿಗೆ ಮೋಕ್ಷವು ಲಭಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

೩೫. ಪತಿವ್ರತೆಯರಾಗಿ ಈಶ್ವರನಲ್ಲಿ ನಿಶ್ಚಲವಾದ ಭಕ್ತಿಯನ್ನಿಟ್ಟಿರುವ ಸ್ತ್ರೀಯರು ಅವಿಮುಕ್ತಕ್ಷೇತ್ರದಲ್ಲಿ ದೇಹವನ್ನು ತ್ಯಜಿಸಿದರೆ ಉತ್ತಮವಾದ ಗತಿಯನ್ನು ಪಡೆಯುವರು.

೩೬. ಸ್ವೇಚ್ಛಾಚಾರಿಗಳಾಗಿ ಭೋಗದಲ್ಲೇ ಮನಸ್ಸಿಟ್ಟ ಸಾಮಾನ್ಯ ಸ್ತ್ರೀಯರೂ ಸಹ ಕಾಲವಶದಿಂದ ಅಲ್ಲಿ ಮೃತರಾಗಿ ಸದ್ಗತಿಯನ್ನೈದುವರು.

೩೭. ಬಹು ದುರ್ಲಭವಾದ ಯೋಗವೂ ಮೋಕ್ಷವೂ ಸಿದ್ಧಿಸುವ ಅವಿಮುಕ್ತಕ್ಷೇತ್ರವಿರುವಾಗ, ಅದನ್ನು ಬಿಟ್ಟು ಬೇರೆ ತಪೋವನಕ್ಕೆ ಹೋಗುವುದು ಯುಕ್ತವಲ್ಲ.

೩೮. ಬ್ರಾಹ್ಮಣರು ಸರ್ವವಿಧದಿಂದಲೂ ತಪಸ್ಸನ್ನು ಮಾಡಬೇಕು. ಅದೇ ಸದ್ಗತಿದಾಯಕವಾದುದು ; ಸಂಶಯವಿಲ್ಲ. ಆದರೆ ಅವಿಮುಕ್ತಕ್ಷೇತ್ರದಲ್ಲಿ ವಾಸ ಮಾಡಿದ ಮಾತ್ರದಿಂದಲೇ ಮಾನವನು ದೇವತ್ವವನ್ನು ಪಡೆದು ನನಗೆ ಸಮಾನನಾಗುತ್ತಾನೆ.

ಯತೋ ಮಯಾ ನ ಮುಕ್ತಂ ಹಿ ತ್ವವಿಮುಕ್ತಂ ತತಃ ಸ್ಮೃತಂ ।
ಅವಿಮುಕ್ತಂ ನ ಸೇವಂತೇ ಮೂಢಾ ಯೇ ತಮಸಾವೃತಾಃ ॥೪೯॥

ವಿಣ್ಮೂತ್ರರೇತಸಾಂ ಮಧ್ಯೇ ತೇ ವಸಂತಿ ಪುನಃಪುನಃ ।
ಕಾಮಃ ಕ್ರೋಧಶ್ಚ ಲೋಭಶ್ಚ ದಂಭಃ ಸ್ತಂಭೋಽತಿಮತ್ಸರಃ ॥೫೦॥

ನಿದ್ರಾ ತಂದ್ರಾ ತಥಾಲಸ್ಯಂ ಪೈಶುನ್ಯಮಿತಿ ತೇ ದಶ ।
ಅವಿಮುಕ್ತೇ ಸ್ಥಿತಾ ವಿಘ್ನಾಃ ಶಕ್ರೇಣ ವಿಹಿತಾಃ ಸ್ವಯಂ ॥೫೧॥

ವಿನಾಯಕೋಪಸರ್ಗಶ್ಚ ಸತತಂ ಮೂರ್ಧ್ನಿ ತಿಷ್ಠತಿ ।
ಪುಣ್ಯಮೇತದ್ಭವೇತ್ಸರ್ವಂ ಭಕ್ತಾನಾಮನುಕಂಪಯಾ ॥೫೨॥

ಪರಂ ಗುಹ್ಯಮಿತಿ ಜ್ಞಾತ್ವಾ ತತಃ ಶಾಸ್ತ್ರಾನುದರ್ಶನಾತ್ ।
ವ್ಯಾಹೃತಂ ದೇವದೇವೈಸ್ತು ಮುನಿಭಿಸ್ತತ್ತ್ವದರ್ಶಿಭಿಃ ॥೫೩॥

---

೪೯. ಇಲ್ಲಿಂದ ನಾನು ಅಗಲದಿರುವ ಕಾರಣದಿಂದ ಈ ಕ್ಷೇತ್ರಕ್ಕೆ ಅವಿಮುಕ್ತವೆಂಬ ಹೆಸರು ಬಂದಿತೆಂದು ಹೇಳಿದೆನಲ್ಲವೇ! ಇದನ್ನು ಯಾರು ಆಶ್ರಯಿಸುವುದಿಲ್ಲವೋ ಅವರು ಮಲಮೂತ್ರ ರೇತಸ್ಸುಗಳ ನಡುವೆ ಮತ್ತೆ ಮತ್ತೆ ಹುಟ್ಟಿ ವಾಸಿಸುವರು. ಎಂದರೆ ಪುನಃಪುನಃ ಜನ್ಮವನ್ನೆತ್ತುವರು.

೫೦-೫೧. ಕಾಮ, ಕ್ರೋಧ, ಲೋಭ, ದಂಭ, ಮದ, ಮತ್ಸರ, ನಿದ್ರೆ, ಜಾಡ್ಯ, ಆಲಸ್ಯ, ಚಾಡಿಕೋರತನ ಎಂಬ ಈ ಹತ್ತು ವಿಘ್ನಗಳನ್ನು ಅವಿಮುಕ್ತ ಕ್ಷೇತ್ರದಲ್ಲಿ ಇಂದ್ರನೇ ತಂದು ನಿಲ್ಲಿಸಿರುವನು. ಅಡ್ಡಿಯೂ ಉಪದ್ರವವೂ ಯಾವಾಗಲೂ ತಲೆಯ ಮೇಲೆಯೇ ಕುಳಿತಿರುವುವು.

೫೨-೫೩. ಆದರೂ ಭಕ್ತರ ಮೇಲೆ ಭಗವಂತನಿಗೆ ಅಪಾರವಾದ ಕರುಣೆಯಿರುವುದರಿಂದ ಈ ವಿಘ್ನಗಳೆಲ್ಲ ಶುಭಪ್ರದಗಳೇ ಆಗುವುವು. ತಮ್ಮ ಸ್ವಂತ ಅನುಭವದಿಂದಲೂ ಶಾಸ್ತ್ರಾವಲೋಕನದಿಂದಲೂ ದೇವ ಪ್ರಮುಖರು ಮತ್ತು ತತ್ವಜ್ಞರಾದ ಮುನಿಗಳು ಈ ಕ್ಷೇತ್ರವನ್ನು ಅತ್ಯಂತ ಪವಿತ್ರವಾದುದೆಂದು ಹೇಳಿರುವರು.

ಮೇದಸಾ ವಿಪ್ಲುತಾ ಭೂಮಿರವಿಮುಕ್ತೇ ತು ವರ್ಜಿತಾ ।
ಪೂತಾ ಸಮಭವತ್ಸರ್ವಾ ಮಹಾದೇವೇನ ರಕ್ಷಿತಾ ॥೪೪॥

ಸಂಸ್ಕಾರಸ್ತೇನ ಕ್ರಿಯತೇ ಭೂಮೇರನ್ಯತ್ರ ಸೂರಿಭಿಃ ।
ಯೋ ಭಕ್ತ್ಯಾ ವರದಂ ದೇವಮಕ್ಷರಂ ಪರಮಂ ಪದಂ ॥೪೫॥

ದೇವದಾನವಗಂಧರ್ವಯಕ್ಷರಕ್ಷೋಮಹೋರಗಾಃ ।
ಅವಿಮುಕ್ತಮುಪಾಸಂತೇ ತನ್ನಿಷ್ಠಾಸ್ತತ್ಪರಾಯಣಾಃ ॥೪೬॥

ತೇ ವಿಶಂತಿ ಮಹಾದೇವಮಾಜ್ಯಾಹುತಿರಿವಾನಲಂ ।
ತಂ ವೈ ಪ್ರಾಪ್ಯ ಮಹಾದೇವಮೀಶ್ವರಾಧ್ಯುಷಿತಂ ಶುಭಂ ॥೪೭॥

---

೪೪. ಭೂಮಿಯೆಲ್ಲವೂ ಮಧುಕೈಟಭರ ಮೇದಸ್ಸಿನಿಂದ ಆವೃತವಾದುದಷ್ಟೆ! ಆದರೆ ಅವಿಮುಕ್ತಕ್ಷೇತ್ರದ ನೆಲಕ್ಕೆ ಮಾತ್ರ ಈ ಸಂಬಂಧವಿಲ್ಲ. ಮಹಾದೇವನೇ ಸಾಕ್ಷಾತ್ತಾಗಿ ರಕ್ಷಿಸುತ್ತಿರುವ ಕಾರಣ ಅದು ಎಲ್ಲೆಡೆಯಲ್ಲೂ ಪವಿತ್ರವಾಗಿದೆ.

೪೫. ಮಧುಕೈಟಭರ ಮೇದಸ್ಸಿನ ಸಂಪರ್ಕವಿರುವ ಕಾರಣದಿಂದಲೇ, ಅವಿಮುಕ್ತಕ್ಷೇತ್ರವನ್ನು ಬಿಟ್ಟು ಉಳಿದ ಕಡೆಗಳಲ್ಲಿ ಶಾಸ್ತ್ರಜ್ಞರು ನೆಲವನ್ನು ಪ್ರೋಕ್ಷಣಾದಿಸಂಸ್ಕಾರಗಳಿಂದ ಶುದ್ಧಿಗೊಳಿಸುತ್ತಾರೆ. ವರಪ್ರದನೂ, ಪೂಜ್ಯನೂ, ನಿರ್ವಿಕಾರನೂ, ಪರಮಗತಿಯೂ ಆದ ಮಹಾದೇವನನ್ನು ಅವರು ಭಕ್ತಿಯಿಂದ ಇಲ್ಲಿ ಪೂಜಿಸುತ್ತಾರೆ.

೪೬. ದೇವತೆಗಳು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ನಾಗಶ್ರೇಷ್ಠರು ಇವರೆಲ್ಲ ಮಹಾದೇವನ ಭಕ್ತರಾಗಿ, ಅವನಲ್ಲೇ ಮನಸ್ಸನ್ನು ಸ್ಥಿರಗೊಳಿಸಿ ಅವಿಮುಕ್ತಕ್ಷೇತ್ರವನ್ನು ಸೇವಿಸುತ್ತಿರುವಗು.

೪೭. ಈಶ್ವರನ ವಾಸಸ್ಥಾನವೂ ಶುಭಕರವೂ ಆದ ಆ ದಿವ್ಯಕ್ಷೇತ್ರಕ್ಕೆ ಹೋಗಿ, ತುಪ್ಪದ ಆಹುತಿಯು ಅಗ್ನಿಯನ್ನು ಸೇರುವಂತೆ ಅವರು ಪರಮೇಶ್ವರನನ್ನು ಸೇರುತ್ತಾರೆ.

ಅವಿಮುಕ್ತೇ ಕೃತಾರ್ಥೋಽಸ್ಮೀತ್ಯಾತ್ಮಾನಮುಪಲಕ್ಷಯೇತ್ ।
ಋಷಿದೇವಾಸುರಗಣೈರ್ಜಪಹೋಮಪರಾಯಣೈಃ ॥೪೮॥

ಯತಿಭಿರ್ಮೋಕ್ಷಕಾಮೈಶ್ಚ ಹ್ಯವಿಮುಕ್ತಂ ನಿಷೇವ್ಯತೇ ।
ನಾವಿಮುಕ್ತೇ ಮೃತಃ ಕಶ್ಚಿನ್ನರಕಂ ಯಾತಿ ಕಿಲ್ಬಿಷೀ ॥೪೯॥

ಈಶ್ವರಾನುಗೃಹೀತಾ ಹಿ ಸರ್ವೇ ಯಾಂತಿ ಪರಾಂ ಗತಿಂ ।
ದ್ವಿಯೋಜನಮಥಾರ್ಧಂ ಚ ತತ್ಕ್ಷೇತ್ರಂ ಪೂರ್ವಪಶ್ಚಿಮಂ ॥೫೦॥

ಅರ್ಧಯೋಜನವಿಸ್ತೀರ್ಣಂ ದಕ್ಷಿಣೋತ್ತರತಃ ಸ್ಮೃತಂ ।
ವಾರಾಣಸೀ ತದೀಯಾ ಚ ಯಾವಚ್ಛುಕ್ಲನದೀ ತು ವೈ ॥೫೧॥

---

೪೮. ಅವಿಮುಕ್ತಕ್ಷೇತ್ರಕ್ಕೆ ಹೋಗಿ ತನ್ನ ಜನ್ಮವು ಸಾರ್ಥಕವಾಯಿತೆಂದು. ತಿಳಿದುಕೊಳ್ಳಬೇಕು. ಜಪಹೋಮನಿರತರಾದ ಋಷಿಗಳು, ದೇವತೆಗಳು, ಅಸುರರು, ಮೋಕ್ಷಾರ್ಥಿಗಳಾದ ಯತಿಗಳು ಇವರೆಲ್ಲರೂ ಈ ಕ್ಷೇತ್ರವನ್ನು ಸೇವಿಸುತ್ತಲಿರುವರು.

೪೯. ಅವಿಮುಕ್ತಕ್ಷೇತ್ರದಲ್ಲಿ ಮೃತನಾದ ಯಾವ ಪಾತಕಿಯೂ ಕೂಡ ನರಕದಲ್ಲಿ ಬೀಳುವುದಿಲ್ಲ. ಈಶ್ವರನ ಅನುಗ್ರಹಕ್ಕೆ ಪಾತ್ರರಾಗಿ ಎಲ್ಲರೂ ಉತ್ತಮ ಗತಿಯನ್ನು ಪಡೆಯುತ್ತಾರೆ.

೫೦-೫೧. ಆ ಕ್ಷೇತವು ಪೂರ್ವಪಶ್ಚಿಮವಾಗಿ ಎರಡುವರೆ ಯೋಜನವೂ, ದಕ್ಷಿಣೋತ್ತರವಾಗಿ ಅರ್ಧಯೋಜನವೂ ವಿಸ್ತಾರವಾಗಿದೆ. ವಾರಾಣಸೀ ನದಿಯಿಂದ ಶುಕ್ಲನದಿಯ ವರೆಗೆ ವ್ಯಾಪಿಸಿದೆ. ಸರ್ವಜ್ಞನಾದ ಮಹಾದೇವನು ಹೇಳಿದ ಕ್ಷೇತ್ರಪ್ರಮಾಣವಿದು.*

---

* ಹಿಂದಿನ ಅಧ್ಯಾಯದಲ್ಲಿ ಈ ಕ್ಷೇತ್ರದ ವಿಸ್ತಾರವು ಎರಡುಯೋಜನಗಳೆಂದು ಹೇಳಿದೆ. ಅದು ಭೀಷ್ಮಚಂಡಿಕ ಪರ್ವತದ ಒಳಮೈಯಿಂದ ಆಗುವ ಅಳತೆ. ಇಲ್ಲಾದರೋ ಆ ಪರ್ವತದ ಹೊರಮೈಯಿಂದ ಅಳತೆಯಿಟ್ಟುಕೊಂಡು ಎರಡುವರೆ ಯೋಜನವೆಂದು ಹೇಳಿದೆ.

ಏಷ ಕ್ಷೇತ್ರಸ್ಯ ವಿಸ್ತಾರಃ ಪ್ರೋಕ್ತೋ ದೇವೇನ ಧೀಮತಾ ।
ಲಬ್ಧ್ವಾ ಯೋಗಂ ಚ ಮೋಕ್ಷಂ ಚ ಕಾಂಕ್ಷಂತೋ ಜ್ಞಾನಮುತ್ತಮಂ ॥೫೨॥

ಅವಿಮುಕ್ತಂ ನ ಮುಂಚಂತಿ ತನ್ನಿಷ್ಠಾಸ್ತತ್ಪರಾಯಣಾಃ ।
ತಸ್ಮಿನ್ ವಸಂತಿ ಯೇ ಮರ್ತ್ಯಾ ನ ತೇ ಶೋಚ್ಯಾಃ ಕದಾಚನ ॥೫೩॥

ಯೋಗಕ್ಷೇತ್ರಂ ತಪಃಕ್ಷೇತ್ರಂ ಸಿದ್ಧಗಂಧರ್ವಸೇವಿತಂ ।
ಸರಿತಃ ಸಾಗರಾಃ ಶೈಲಾ ನಾವಿಮುಕ್ತಸಮಾ ಭುವಿ ॥೫೪॥

ಭೂರ್ಲೋಕೇ ಚಾಂತರಿಕ್ಷೇ ಚ ದಿವಿ ತೀರ್ಥಾನಿ ಯಾನಿ ಚ ।
ಅತೀತ್ಯ ವರ್ತತೇ ಚಾನ್ಯದವಿಮುಕ್ತಂ ಪ್ರಭಾವತಃ ॥೫೫॥

ಯೇ ತು ಧ್ಯಾನಂ ಸಮಾಸಾದ್ಯ ಯುಕ್ತಾತ್ಮಾನಃ ಸಮಾಹಿತಾಃ ।
ಸಂನಿಯಮ್ಯೇಂದ್ರಿಯಗ್ರಾಮಂ ಜಪಂತಿ ಶತರುದ್ರಿಯಂ ॥೫೬॥

---

೫೨-೫೩. ಯೋಗದಲ್ಲಿಯೂ ಮೋಕ್ಷದಲ್ಲಿಯೂ ಸಿದ್ಧಿಯನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಜ್ಞಾನಿಗಳು ಅವಿಮುಕ್ತಕ್ಷೇತ್ರವನ್ನು ಬಿಡದೆ ಶ್ರದ್ಧೆಯಿಂದ ಸೇವಿಸುವರು. ಅದೇ ಸದ್ಗತಿದಾಯಕವಾದುದೆಂದು ನಂಬಿರುವರು. ಆ ಕ್ಷೇತ್ರವಾಸಿಗಳಿಗೆ ಎಂದೆಂದಿಗೂ ದುರ್ಗತಿ ಬಾರದು.

೫೪. ಅದು ಯೋಗಸಿದ್ಧಿಯ ಕ್ಷೇತ್ರ; ತಪಸ್ಸಿದ್ಧಿಯ ಕ್ಷೇತ್ರ. ಸಿದ್ಧರೂ ಗಂಧರ್ವರೂ ಸೇವೆಮಾಡುವ ಕ್ಷೇತ್ರ. ಮಹಿಮೆಯಲ್ಲಿ ಅವಿಮುಕ್ತಕ್ಷೇತ್ರಕ್ಕೆ ಸಮಾನವಾದ ನದಿ, ಸಾಗರ, ಪರ್ವತ ಇವು ಯಾವುವೂ ಭೂಮಿಯಲ್ಲಿಲ್ಲ.

೫೫. ಭೂಲೋಕದಲ್ಲಿ, ಅಂತರಿಕ್ಷದಲ್ಲಿ ಮತ್ತು ಸ್ವರ್ಗದಲ್ಲಿ ಯಾವ ಯಾವ ತೀರ್ಥಗಳುಂಟೋ ಅವೆಲ್ಲವನ್ನೂ ಅವಿಮುಕ್ತಕ್ಷೇತ್ರವು ಪ್ರಭಾವದಲ್ಲಿ ಮೀರಿಸಿ ವಿರಾಜಿಸುತ್ತಿದೆ.

೫೬-೫೭. ಯಾರು ಧ್ಯಾನನಿಷ್ಠರಾಗಿ, ಮನಸ್ಸನ್ನು ಯೋಗದಲ್ಲಿ ನೆಲೆಗೊಳಿಸಿ, ಏಕಾಗ್ರಚಿತ್ತದಿಂದ ಇಂದ್ರಿಯಗಳನ್ನು ಜಯಿಸಿ, ಅವಿಮುಕ್ತಕ್ಷೇತ್ರದಲ್ಲಿ ಎಡೆಬಿಡದೆ ಶತರುದ್ರಿಯ ಜಪವನ್ನುಮಾಡುತ್ತಾರೋ ಅಂತಹ ದ್ವಿಜೋತ್ತಮರು

ಅವಿಮುಕ್ತೇ ಸ್ಥಿತಾ ನಿತ್ಯಂ ಕೃತಾರ್ಥಾಸ್ತೇ ದ್ವಿಜಾತಯಃ ।
ಭವಭಕ್ತಿಂ ಸಮಾಸಾದ್ಯ ರಮಂತೇ ತು ಸುನಿಶ್ಚಯಾಃ ॥೫೭॥

ಸಂಹೃತ್ಯ ಶಕ್ತಿತಃ ಕಾಮಾನ್ ವಿಷಯೇಭ್ಯೋ ಬಹಿಃ ಸ್ಥಿತಾಃ ।
ಶಕ್ತಿತಃ ಸರ್ವತೋ ಮುಕ್ತಾಃ ಶಕ್ತಿತಸ್ತಪಸಿ ಸ್ಥಿತಾಃ ॥೫೮॥

ಕರಣಾನೀಹ ಚಾತ್ಮಾನಮಪುನರ್ಭವಭಾವಿತಾಃ ।
ತಂ ವೈ ಪ್ರಾಪ್ಯ ಮಹಾತ್ಮಾನಮೀಶ್ವರಂ ನಿರ್ಭಯಾಃ ಸ್ಥಿತಾಃ ॥೫೯॥

ನ ತೇಷಾಂ ಪುನರಾವೃತ್ತಿಃ ಕಲ್ಪಕೋಟಿಶತೈರಪಿ ।
ಅವಿಮುಕ್ತೇ ತು ಗೃಹ್ಯಂತೇ ಭವೇನ ವಿಭುನಾ ಸ್ವಯಂ ॥೬೦॥

ಉತ್ಪಾದಿತಂ ಮಹಾಕ್ಷೇತ್ರಂ ಸಿಧ್ಯಂತೇ ಯತ್ರ ಮಾನವಾಃ ।
ಉದ್ದೇಶಮಾತ್ರಂ ಕಥಿತಾ ಅವಿಮುಕ್ತಗುಣಾಸ್ತಥಾ ॥೬೧॥

---

ಕೃತಾರ್ಥರೆನಿಸುವರು. ಅವರಿಗೆ ಪರಮೇಶ್ವರನಲ್ಲಿ ಭಕ್ತಿಯು ನಿಶ್ಚಲವಾಗಿರುವುದು. ದೃಢಸಂಕಲ್ಪರಾಗಿ ಅವರು ಆನಂದಮಗ್ನರಾಗುವರು.

೫೮-೫೯. ತಮ್ಮ ಶಕ್ತಿಯಿಂದ ಭೋಗಾಭಿಲಾಷೆಯನ್ನು ತಡೆದು, ವಿಷಯ ಸುಖಗಳಿಂದ ದೂರರಾಗಿ, ಆದಷ್ಟು ಮಟ್ಟಿಗೆ ಎಲ್ಲ ಬಗೆಯ ಸಂಗಗಳಿಂದಲೂ ಬಿಡಿಸಿಕೊಂಡು, ಯೋಗ್ಯತೆಗೆ ತಕ್ಕಂತೆ ತಪಸ್ಸಿನಲ್ಲಿ ತೊಡಗಿ, ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿದು, ಮೋಕ್ಷಸಾಧನದ ಚಿಂತೆಯಲ್ಲಿ ನಿರತರಾದ ಯೋಗಿಗಳು ಮಹಾತ್ಮನಾದ ಆ ಪರಮೇಶ್ವರನನ್ನು ಸೇರಿ ನಿರ್ಭಯರಾಗಿರುವರು.

೬೦. ಕೋಟಿಲೆಕ್ಕದಲ್ಲಿ ಕಲ್ಪಗಳು ಕಳೆದರೂ ಅವರಿಗೆ ಪುನರ್ಜನ್ಮ ವೆಂಬುದೇ ಇಲ್ಲ. ಅವಿಮುಕ್ತಕ್ಷೇತ್ರದಲ್ಲಿ ಪರಮೇಶ್ವರನು ತನ್ನ ಭಕ್ತರನ್ನು ಸಾಕ್ಷಾತ್ತಾಗಿ ಸ್ವೀಕರಿಸುತ್ತಾನೆ.

೬೧. ಮಾನವರು ಸಿದ್ಧಿಯನ್ನು ಪಡೆಯಲೆಂದು ಮಹೇಶ್ವರನು ಈ ಮಹಾ ಕ್ಷೇತ್ರವನ್ನು ನಿರ್ಮಿಸಿದನು. ಹೀಗೆ ಅವಿಮುಕ್ತಕ್ಷೇತ್ರದ ಗುಣಗಳನ್ನು ಸಂಗ್ರಹವಾಗಿ ಹೇಳಿದುದಾಯಿತು.

ಸಮುದ್ರಸ್ಯೇವ ರತ್ನಾನಾಮವಿಮುಕ್ತಸ್ಯ ವಿಸ್ತರಂ ।
ಮೋಹನಂ ತದಭಕ್ತಾನಾಂ ಭಕ್ತಾನಾಂ ಭಕ್ತಿವರ್ಧನಂ ॥೬೨॥

ಮೂಢಾಸ್ತೇ ತು ನ ಪಶ್ಯಂತಿ ಶ್ಮಶಾನಮಿತಿ ಮೋಹಿತಾಃ ।
ಹನ್ಯಮಾನೋಽಪಿ ಯೋ ವಿದ್ವಾನ್ ವಸೇದ್ವಿಘ್ನಶತೈರಪಿ ॥೬೩॥

ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ।
ಜನ್ಮಮೃತ್ಯುಜರಾಮುಕ್ತಃ ಪರಂ ಯಾತಿ ಶಿವಾಲಯಂ ॥೬೪॥

ಅಪುನರ್ಮರಣಾನಾಂ ಹಿ ಸಾ ಗತಿರ್ಮೋಕ್ಷಕಾಂಕ್ಷಿಣಾಂ ।
ಯಾಂ ಪ್ರಾಪ್ಯ ಕೃತಕೃತ್ಯಃ ಸ್ಯಾದಿತಿ ಮನ್ಯೇತ ಪಂಡಿತಃ ॥೬೫॥

ನ ದಾನೈರ್ನ ತಪೋಭಿರ್ವಾ ನ ಯಜ್ಞೈರ್ನಾಪಿ ವಿದ್ಯಯಾ ।
ಪ್ರಾಪ್ಯತೇ ಗತಿರಿಷ್ಟಾ ಯಾ ಹ್ಯವಿಮುಕ್ತೇ ತು ಲಭ್ಯತೇ ॥೬೬॥

---

೬೨. ಅವಿಮುಕ್ತಕ್ಷೇತ್ರದ ಗುಣಗಳನ್ನು ವಿಸ್ತರಿಸಿ ವರ್ಣಿಸುವುದೆಂದರೆ ಸಮುದ್ರದಲ್ಲಿನ ರತ್ನಗಳನ್ನೆಲ್ಲ ವರ್ಣಿಸುತ್ತೇನೆಂದ ಹಾಗೆ ಆಗುತ್ತದೆ. ಇದು ಭಕ್ತರಲ್ಲದವರಿಗೆ ಬುದ್ಧಿಮೋಹವನ್ನು ಉಂಟುಮಾಡುತ್ತದೆ. ಭಕ್ತರಿಗೆ ಭಕ್ತಿಯನ್ನು ಹೆಚ್ಚಿಸುತ್ತದೆ.

೬೩-೬೪. ಮೂಢರು ಶ್ಮಶಾನವೆಂಬ ಭ್ರಾಂತಿಯಿಂದ ಈ ಕ್ಷೇತ್ರದ ಮಹಿಮೆಯನ್ನು ಕಾಣಲಾರರು. ಜ್ಞಾನಿಯಾದವನು ತನ್ನನ್ನು ಯಾರಾದರೂ ಕೊಂದುಹಾಕಿದರೂ ಸರಿ; ನೂರಾರು ವಿಘ್ನಗಳು ಒದಗಿದರೂ ಸರಿ; ಅದನ್ನು ಲೆಕ್ಕಿಸದೆ ಈ ಕ್ಷೇತ್ರದಲ್ಲಿ ವಾಸಮಾಡಿದರೆ ದುಃಖದ ಸಂಬಂಧವೇ ಇಲ್ಲದ ದಿವ್ಯಸ್ಥಾನವನ್ನು ಸೇರುವನು. ಹುಟ್ಟು, ಸಾವು, ಮುಪ್ಪು ಇವುಗಳಿಂದ ದೂರನಾಗಿ ಪರಮಪವಿತ್ರವಾದ ಶಿವಲೋಕವನ್ನು ಸೇರುವನು.

೬೫. ಮರಳಿ ಮೃತ್ಯುಭಯಕ್ಕೆ ತುತ್ತಾಗದಂತೆ ಮೋಕ್ಷಸುಖವನ್ನು ಪಡೆಯಬೇಕೆಂದು ಬಯಸುವವರಿಗೆ ಆ ಕ್ಷೇತ್ರವೇ ಗತಿ. ಅಲ್ಲಿಗೆ ಹೋದ ವಿದ್ವಾಂಸನು ತನ್ನನ್ನು ಕೃತಾರ್ಥನೆಂದು ತಿಳಿಯಬೇಕು.

೬೬. ಅವಿಮುಕ್ತಕ್ಷೇತ್ರದಲ್ಲಿ ತಾನು ಕೋರಿದ ಗತಿಯನ್ನು ಪಡೆಯಬಹುದು. ಬೇರೆ ಕಡೆಯಲ್ಲಿ ಅದು ದಾನಗಳಿಂದಾಗಲಿ, ತಪಸ್ಸುಗಳಿಂದಾಗಲಿ, ಯಜ್ಞಗಳಿಂದಾಗಲಿ, ವಿದ್ಯೆಯಿಂದಲಾಗಲಿ ದೊರೆಯದು.

ನಾನಾವರ್ಣಾ ವಿವರ್ಣಾಶ್ಚ ಚಂಡಾಲಾ ಯೇ ಜುಗುಪ್ಸಿತಾಃ ।
ಕಿಲ್ಬಿಷೈಃ ಪೂರ್ಣದೇಹಾಶ್ಚ ಪ್ರಕೃಷ್ಟೈಃ ಪಾತಕೈಸ್ತಥಾ ॥೬೭॥

ಭೇಷಜಂ ಪರಮಂ ತೇಷಾಮವಿಮುಕ್ತಂ ವಿದುರ್ಬುಧಾಃ ।
ಜಾತ್ಯಂತರಸಹಸ್ರೇಷು ಹ್ಯವಿಮುಕ್ತೇ ಮ್ರಿಯೇತ ಯಃ ॥೬೮॥

ಭಕ್ತೋ ವಿಶ್ವೇಶ್ವರೇ ದೇವೇ ನ ಸ ಭೂಯೋಽಭಿಜಾಯತೇ ।
ಯತ್ರ ಚೇಷ್ಟಂ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ॥೬೯॥

ಸರ್ವಮಕ್ಷಯಮೇತಸ್ಮಿನ್ನವಿಮುಕ್ತೇ ನ ಸಂಶಯಃ ।
ಕಾಲೇನೋಪರತಾಂ ಯಾತಿ ಭವೇ ಸಾಯುಜ್ಯಮಕ್ಷಯಂ ॥೭೦॥

ಕೃತ್ವಾ ಪಾಪಸಹಸ್ರಾಣಿ ಪಶ್ಚಾತ್ಸಂತಾಪಮೇತ್ಯ ವೈ ।
ಯೋಽವಿಮುಕ್ತೇ ವಿಯುಜ್ಯೇತ ಸ ಯಾತಿ ಪರಮಾಂ ಗತಿಂ ॥೭೧॥

---

೬೭-೬೮. ಬಗೆಬಗೆಯ ಜಾತಿಗಳಲ್ಲಿ ಹುಟ್ಟಿದವರು, ಸಂಕರಜಾತಿಯವರು, ಜುಗುಪ್ಸೆಗೆ ಪಾತ್ರರಾಗಿರುವ ಚಂಡಾಲರು, ಇವರಿಗೆಲ್ಲ ಅವಿಮುಕ್ತಕ್ಷೇತ್ರವೇ ದಿವ್ಯೌಷಧವೆಂದು ಜ್ಞಾನಿಗಳು ತಿಳಿಯುತ್ತಾರೆ. ಇನ್ನೂ ಸಾವಿರಾರು ಬೇರೆ ಬೇರೆ ಜಾತಿಗಳುಂಟಷ್ಟೆ! ಅವುಗಳಲ್ಲಿ ಹುಟ್ಟಿದ ಯಾವನೇ ಆಗಲಿ ಅವಿಮುಕ್ತಕ್ಷೇತ್ರದಲ್ಲಿ ಮೃತನಾದರೆ ಅವನಿಗೂ ಸದ್ಗತಿಯುಂಟು.

೬೯-೭೦. ಭಗವಂತನಾದ ವಿಶ್ವೇಶ್ವರನ ಭಕ್ತನಾವನೋ ಅವನು ಮರಳಿ ಹುಟ್ಟನು. ಈ ಅವಿಮುಕ್ತಕ್ಷೇತ್ರದಲ್ಲಿ ಮಾಡಿದ ಯಾಗ, ಹೋಮ, ದಾನ, ತಪಸ್ಸು ಮತ್ತು ನಿತ್ಯನೈಮಿತ್ತಿಕಕರ್ಮ ಇವೆಲ್ಲವೂ ಅಕ್ಷಯವಾಗುವುವು. ಸಂಶಯವಿಲ್ಲ. ಇಲ್ಲಿ ಕಾಲವಶದಿಂದ ಮೃತಿಯನ್ನೈದಿದವರು ಪುನರಾವೃತ್ತಿಯಿಲ್ಲದ ಪರಮೇಶ್ವರನ ಸಾಯುಜ್ಯವನ್ನು ಪಡೆಯುವರು.

೭೧. ಸಾವಿರಾರು ಪಾಪಗಳನ್ನು ಮಾಡಿದ್ದರೂ ಪಶ್ಚಾತ್ತಾಪಗೊಂಡು ಅವಿಮುಕ್ತಕ್ಷೇತ್ರದಲ್ಲಿ ದೇಹತ್ಯಾಗಮಾಡುವಾತನು ಸದ್ಗತಿಯನ್ನೈದುವನು.

ಉತ್ತರಂ ದಕ್ಷಿಣಂ ಚಾಪಿ ಅಯನಂ ನ ವಿಕಲ್ಪಯೇತ್ ।
ಸರ್ವಸ್ತಸ್ಯ ಶುಭಃ ಕಾಲೋ ಹ್ಯವಿಮುಕ್ತೇ ಮ್ರಿಯೇತ ಯಃ ॥೭೨॥

ನ ತತ್ರ ಕಾಲೋ ಮೀಮಾಂಸ್ಯಃ ಶುಭೋ ವಾ ಯದಿ ವಾಽಶುಭಃ ।
ತಸ್ಯ ದೇವಸ್ಯ ಮಾಹಾತ್ಮ್ಯಾತ್ ಸ್ಥಾನಮದ್ಭುತಕರ್ಮಣಃ ।
ಸರ್ವೇಷಾಮೇವ ನಾಥಸ್ಯ ಸರ್ವೇಷಾಂ ಚ ವಿಭೋಃ ಸ್ವಯಂ ॥೭೩॥

ಶ್ರುತ್ವೇದಮೃಷಯಃ ಸರ್ವೇ ಸ್ಕಂದೇನ ಕಥಿತಂ ಪುರಾ ।
ಅವಿಮುಕ್ತಾಶ್ರಮಂ ಪುಣ್ಯಂ ಭಾವಯೇತ್ಕರಣೈಃ ಶುಭೈಃ ॥೭೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽವಿಮುಕ್ತಮಾಹಾತ್ಮ್ಯಂ
ನಾಮ ಚತುರಶೀತ್ಯಧಿಕಶತತಮೋಽಧ್ಯಾಯಃ

---

೭೨. ವಾರಾಣಸೀಕ್ಷೇತ್ರದಲ್ಲಿ ಮರಣಹೊಂದುವಾತನಿಗೆ ಉತ್ತರಾಯಣ ದಕ್ಷಿಣಾಯನಗಳೆಂಬ ಕಾಲಭೇದವಾವುದೂ ಇಲ್ಲ. ಎಲ್ಲಕಾಲವೂ ಆತನಿಗೆ ಸದ್ಗತಿ ದಾಯಕವಾದ ಶುಭಸಮಯವೇ ಆಗುವುದು.

೭೩. ಅವಿಮುಕ್ತಕ್ಷೇತ್ರವಾಸಿಯು ಮೃತಪಟ್ಟ ಕಾಲವು ಶುಭವೋ ಅಶುಭವೋ ಎಂದು ವಿಚಾರಮಾಡಬಾರದು. ಏಕೆಂದರೆ ಅದ್ಭುತಸಾಹಸಿಯೂ, ಸರ್ವಾಧಿಪತಿಯೂ, ಸಕಲ ಜಗತ್ಪ್ರಭುವೂ ಆದ ಮಹಾದೇವನು ಸಾಕ್ಷಾತ್ತಾಗಿ ನೆಲಸಿರುವ ಪವಿತ್ರಸ್ಥಾನವದು. ಅವನ ಮಾಹಾತ್ಮ್ಯದಿಂದ ಅದು ಸದಾ ಶುಭಕರವಾಗಿರುವುದು.

೭೪. ಪೂರ್ವದಲ್ಲಿ ಕುಮಾರಸ್ವಾಮಿಯು ಹೇಳಿದ ಈ ವೃತ್ತಾಂತವನ್ನು ಕೇಳಿ, ಋಷಿಗಳೆಲ್ಲರೂ ಇಂದ್ರಿಯ ಶುದ್ಧಿಯನ್ನು ತಳೆದು "ಪುಣ್ಯಮಯವಾದ ಅವಿಮುಕ್ತಾಶ್ರಮದ ಮಾಹಾತ್ಮ್ಯವನ್ನು ಅನುಸಂಧಾನಮಾಡಬೇಕು" ಎಂದು ನಿಶ್ಚಯಿಸಿದರು.

## ಅಧ್ಯಾಯದ ಸಾರಾಂಶ

ವಾರಾಣಸೀಕ್ಷೇತ್ರದ ಮಾಹಾತ್ಮ್ಯವನ್ನು ಪುನಃ ಈ ಅಧ್ಯಾಯದಲ್ಲಿ ವಿವರಿಸಿದೆ.

ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡಿದರೆ ಸಾಕು; ಬೇರೆ ಕಡೆಗಳಲ್ಲಿ ಯಜ್ಞಯಾಗಾದಿಸತ್ಕರ್ಮಗಳಿಂದ ಬರುವಷ್ಟು ಪುಣ್ಯವು ಲಭಿಸುವುದು. ಇಲ್ಲಿ ಮಾಡಿದ ಜಪ, ಯಜ್ಞ, ದಾನ ಮತ್ತು ಹೋಮಗಳು ಅಕ್ಷಯವೆನಿಸಿ ಅನಂತವಾದ ಫಲವನ್ನು ಕೊಡುತ್ತವೆ. ಬೇರೆ ಯಾವ ಪುಣ್ಯಕ್ಷೇತ್ರವೂ ಇದಕ್ಕೆ ಸರಿಬರಲಾರದು.

ಅವಿಮುಕ್ತಕ್ಷೇತ್ರದಲ್ಲಿ ಮರಣವೊದಗಿದಮಾತ್ರದಿಂದಲೇ ಸದ್ಗತಿಯು ದೊರಕುವುದು. ಎಂತಹ ಪಾಪಿಷ್ಠನಾಗಲಿ ಈ ಕ್ಷೇತ್ರದಲ್ಲಿ ವಾಸಮಾಡಿದರೆ ಎಂದಿಗೂ ನರಕಕ್ಕೆ ತುತ್ತಾಗನು. ಇಲ್ಲಿ ಮರಣಕ್ಕೆ ಉತ್ತರಾಯಣ ದಕ್ಷಿಣಾಯನ ವೆಂಬ ವ್ಯತ್ಯಾಸವಾಗಲಿ, ಶುಭಾಶುಭ ಸಮಯವೆಂಬ ವಿಚಾರವಾಗಲಿ ಇಲ್ಲ. ಪರಮೇಶ್ವರನ ಸಾನ್ನಿಧ್ಯಬಲದಿಂದ ಎಲ್ಲಕಾಲವೂ ಸದ್ಗತಿಪ್ರದವೇ ಆಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅವಿಮುಕ್ತಮಾಹಾತ್ಮ್ಯವೆಂಬ<br>ನೂರ ಎಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಾಶೀತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಅವಿಮುಕ್ತೇ ಮಹಾಪುಣ್ಯೇ ಚಾಸ್ತಿಕಾಃ ಶುಭದರ್ಶನಾಃ ।
ವಿಸ್ಮಯಂ ಪರಮಂ ಜಗ್ಮುರ್ಹರ್ಷಗದ್ಗದನಿಸ್ವನಾಃ ॥ ೧ ॥

ಊಚುಸ್ತೇ ಹೃಷ್ಟಮನಸಃ ಸ್ಕಂದಂ ಬ್ರಹ್ಮವಿದಾಂ ವರಂ ।
ಬ್ರಹ್ಮಣ್ಯೋ ದೇವಪುತ್ರಸ್ತ್ವಂ ಬ್ರಾಹ್ಮಣೋ ಬ್ರಾಹ್ಮಣಪ್ರಿಯಃ ॥ ೨ ॥

ಬ್ರಹ್ಮಿಷ್ಠೋ ಬ್ರಹ್ಮವಿದ್ಬೃಹ್ಮಾ ಬ್ರಹ್ಮೇಂದ್ರೋ ಬ್ರಹ್ಮಲೋಕಕೃತ್ ।
ಬ್ರಹ್ಮಕೃದ್ಬ್ರಹ್ಮಚಾರೀ ತ್ವಂ ಬ್ರಹ್ಮಾದಿರ್ಬ್ರಹ್ಮವತ್ಸಲಃ ॥ ೩ ॥

ಬ್ರಹ್ಮತುಲ್ಯೋದ್ಭವಕರೋ ಬ್ರಹ್ಮತುಲ್ಯ ನಮೋಽಸ್ತು ತೇ ।
ಋಷಯೋ ಭಾವಿತಾತ್ಮಾನಃ ಶ್ರುತ್ವೇದಂ ಪಾವನಂ ಮಹತ್ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಬಹುಪುಣ್ಯಕರವಾದ ಅವಿಮುಕ್ತ ಕ್ಷೇತ್ರದಲ್ಲಿ ಭಗವದ್ಭಕ್ತರೂ ಶುಭದರ್ಶನರೂ ಆದ ಮಹರ್ಷಿಗಳು ಬಹಳ ಆಶ್ಚರ್ಯ ಗೊಂಡರು. ಸಂತೋಷದಿಂದ ಅವರ ಧ್ವನಿ ಗದ್ಗದಿತವಾಯಿತು.

೨-೩. ಅವರು ಸಂತೋಷಗೊಂಡ ಮನಸ್ಸಿನಿಂದ ಬ್ರಹ್ಮಜ್ಞಾನಿಗಳಲ್ಲಿ ಅಗ್ರೇಸರನಾದ ಕುಮಾರಸ್ವಾಮಿಗೆ ಹೇಳಿದರು. ದೇವಾ, ನೀನು ತತ್ವನಿಷ್ಠ, ಮಹಾದೇವನ ಪುತ್ರ, ಬ್ರಾಹ್ಮಣ, ಬ್ರಾಹ್ಮಣಪ್ರಿಯ, ಅತ್ಯಂತ ಶ್ರೇಷ್ಠ, ಬ್ರಹ್ಮವನ್ನರಿತವ, ಬ್ರಹ್ಮಸ್ವರೂಪ, ಬ್ರಹ್ಮನಿಗೂ ಅಧಿಪತಿ, ಬ್ರಹ್ಮಲೋಕವನ್ನು ನಿರ್ಮಾಣಮಾಡಿದವ, ಯೋಗಾಭ್ಯಾಸನಿರತ, ಬ್ರಹ್ಮಚಾರಿ, ಬ್ರಹ್ಮನಿಗೂ ಕಾರಣ ಭೂತ, ವೇದಪ್ರಿಯ, ಬ್ರಹ್ಮನಂತೆ ಸೃಷ್ಟಿಮಾಡಬಲ್ಲವ, ಬ್ರಹ್ಮಸದೃಶ ಇಂತಹ ನಿನಗೆ ನಮಸ್ಕಾರ.

೪-೫. ಪರಿಶುದ್ಧಮನಸ್ಕರಾದ ಋಷಿಗಳು ಪವಿತ್ರವೂ ಶ್ರೇಷ್ಠವೂ ಆದ ಈ ವಾರಾಣಸೀಕ್ಷೇತ್ರದ ಮಹಿಮೆಯನ್ನು ಕೇಳಿ ಇಂತೆಂದರು.—“ಮೋಕ್ಷದಾಯಕವಾದ

ತತ್ತ್ವಂ ತು ಪರಮಂ ಜ್ಞಾತಂ ಯಜ್ಜ್ಞಾತ್ವಾಽಮೃತಮಶ್ನುತೇ ।
ಸ್ವಸ್ತಿ ತೇಽಸ್ತು ಗಮಿಷ್ಯಾಮೋ ಭೂರ್ಲೋಕಂ ಶಂಕರಾಲಯಂ ॥ ೫ ॥

ಯತ್ರಾಸೌ ಸರ್ವಭೂತಾತ್ಮಾ ಸ್ಥಾಣುಭೂತಃ ಸ್ಥಿತಃ ಪ್ರಭುಃ ।
ಸರ್ವಲೋಕಹಿತಾರ್ಥಾಯ ತಪಸ್ಯುಗ್ರೇ ವ್ಯವಸ್ಥಿತಃ ॥ ೬ ॥

ಸಂಯೋಜ್ಯ ಯೋಗೇನಾತ್ಮಾನಂ ರೌದ್ರೀಂ ತನುಮುಪಾಶ್ರಿತಃ ।
ಗುಹ್ಯಕೈರಾತ್ಮಭೂತಸ್ತು ಆತ್ಮತುಲ್ಯಗುಣೈರ್ವೃತಃ ॥ ೭ ॥

ತತೋ ಬ್ರಹ್ಮಾದಿಭಿರ್ದೇವೈಃ ಸಿದ್ಧೈಶ್ಚ ಪರಮರ್ಷಿಭಿಃ ।
ವಿಜ್ಞಪ್ತಃ ಪರಯಾ ಭಕ್ತ್ಯಾ ತ್ವತ್ಪ್ರಸಾದಾದ್ಗಣೇಶ್ವರ ॥ ೮ ॥

ವಸ್ತುಮಿಚ್ಛಾಮ ನಿಯತಮವಿಮುಕ್ತೇ ಸುನಿಶ್ಚಿತಾಃ ।
ಏವಂಗುಣೇ ತಥಾ ಮರ್ತ್ಯಾ ಹ್ಯವಿಮುಕ್ತೇ ವಸಂತಿ ಯೇ ॥ ೯ ॥

---

ಪರಮತತ್ತ್ವರಹಸ್ಯವು ಗೊತ್ತಾಯಿತು. ನಿನಗೆ ಮಂಗಳವಾಗಲಿ. ಪರಮೇಶ್ವರನು ವಾಸಿಸುತ್ತಿರುವ ಭೂಲೋಕಕ್ಕೆ ತೆರಳುವೆವು.

೬-೭. ಸರ್ವಭೂತಗಳಿಗೂ ಆತ್ಮನೆನಿಸಿದ ಜಗತ್ಪ್ರಭುವಾದ ಪರಮೇಶ್ವರನು ಅಲ್ಲಿ ಇದ್ದಾನೆ. ಅವನು ಸರ್ವಲೋಕಗಳ ಹಿತಕ್ಕಾಗಿ ಉಗ್ರವಾದ ತಪಸ್ಸಿನಲ್ಲಿ ತೊಡಗಿದ್ದಾನೆ. ರುದ್ರಶರೀರವನ್ನು ಧರಿಸಿ ಯೋಗದಲ್ಲಿ ಮನಸ್ಸನ್ನು ನೆಲೆಗೊಳಿಸಿದ್ದಾನೆ. ಗುಣಗಳಲ್ಲಿ ಅವನನ್ನೇ ಹೋಲುವ ಗುಹ್ಯಕರು ಅವನನ್ನು ಸುತ್ತುವರಿದಿದ್ದಾರೆ."

೮. ಬಳಿಕ ಬ್ರಹ್ಮಾದಿದೇವತೆಗಳೂ, ಸಿದ್ಧರೂ, ಪರಮರ್ಷಿಗಳೂ ಬಹಳ ಭಕ್ತಿಯಿಂದ ವಿಜ್ಞಾಪಿಸಿದರು. "ಗಣಾಧೀಶನಾದ ಓ ಕುಮಾರಸ್ವಾಮೀ, ನಿನ್ನ ಅನುಗ್ರಹದಿಂದ ಅವಿಮುಕ್ತಕ್ಷೇತ್ರದಲ್ಲಿ ಮನಸ್ಸನ್ನು ದೃಢಗೊಳಿಸಿ ಸ್ಥಿರವಾಗಿ ವಾಸ ಮಾಡಬೇಕೆಂದು ಇಚ್ಛಿಸುತ್ತೇವೆ

೯-೧೦. ಇಂತಹ ಗುಣಗಳಿಂದ ಕೂಡಿದ ಅವಿಮುಕ್ತಕ್ಷೇತ್ರದಲ್ಲಿ ಧರ್ಮಶೀಲರಾಗಿ, ಕ್ರೋಧವನ್ನು ಜಯಿಸಿ, ಅಭಿಮಾನವನ್ನು ತೊರೆದು, ಇಂದ್ರಿಯಗಳನ್ನು

ಧರ್ಮಶೀಲಾ ಜಿತಕ್ರೋಧಾ ನಿರ್ಮಮಾ ನಿಯತೇಂದ್ರಿಯಾಃ ।
ಧ್ಯಾನಯೋಗಪರಾಃ ಸಿದ್ಧಿಂ ಗಚ್ಛಂತಿ ಪದಮವ್ಯಯಂ ॥೧೦॥

ಯೋಗಿನೋ ಯೋಗಸಿದ್ಧಾಶ್ಚ ಯೋಗಮೋಕ್ಷಪ್ರದಂ ವಿಭುಂ ।
ಉಪಾಸತೇ ಭಕ್ತಿಯುಕ್ತಾ ಗುಹ್ಯಂ ದೇವಂ ಸನಾತನಂ ॥೧೧॥

ಅವಿಮುಕ್ತಂ ಸಮಾಸಾದ್ಯ ಪ್ರಾಪ್ತಯೋಗಾ ಮಹೇಶ್ವರಾತ್ ।
ಪರೇ ಬ್ರಹ್ಮಣಿ ಸಂಲೀನಾ ಭವಸಾಯುಜ್ಯತಾಂ ಗತಾಃ ॥೧೨॥

ಏತತ್ತು ಪರಮಂ ಕ್ಷೇತ್ರಮವಿಮುಕ್ತಂ ವಿದುರ್ಬುಧಾಃ ।
ಅಪ್ರಬುದ್ಧಾ ನ ಪಶ್ಯಂತಿ ಭವಮಾಯಾವಿಮೋಹಿತಾಃ ॥೧೩॥

ತೇನೈವ ಚಾಭ್ಯನುಜ್ಞಾತಾಸ್ತನ್ನಿಷ್ಠಾಸ್ತತ್ಪರಾಯಣಾಃ ।
ಅವಿಮುಕ್ತೇ ತನುಂ ತ್ಯಕ್ತ್ವಾ ಶಾಂತಾ ಯೋಗಗತಿಂ ಗತಾಃ ॥೧೪॥

---

ಗೆದ್ದು, ಧ್ಯಾನಯೋಗಪರರಾಗಿ ವಾಸಮಾಡುವ ಮನುಷ್ಯರು ಸಿದ್ಧಿಯನ್ನು ಪಡೆಯುವರು. ಶಾಶ್ವತವಾದ ಸ್ಥಾನವನ್ನೈದುವರು.

೧೧. ಯೋಗಿಗಳೂ ಯೋಗಸಿದ್ಧರೂ ಭಕ್ತಿಯಿಂದ ಕೂಡಿ, ಯೋಗವನ್ನೂ ಮೋಕ್ಷವನ್ನೂ ಕರುಣಿಸುವ ಇಂದ್ರಿಯಾತೀತನೂ ಸನಾತನನೂ ಆದ ಪರಮೇಶ್ವರನನ್ನು ಉಪಾಸನೆ ಮಾಡುತ್ತಾರೆ.

೧೨. ಜ್ಞಾನಿಗಳು ಅವಿಮುಕ್ತಕ್ಷೇತ್ರಕ್ಕೆ ಹೋಗಿ, ಮಹೇಶ್ವರನ ಅನುಗ್ರಹದಿಂದ ಯೋಗಸಿದ್ಧಿಯನ್ನು ಪಡೆದು, ಶಿವಸಾಯುಜ್ಯವನ್ನು ಹೊಂದಿ ಪರಬ್ರಹ್ಮದಲ್ಲಿ ಐಕ್ಯರಾದರು.

೧೩. ಈ ಅವಿಮುಕ್ತಕ್ಷೇತ್ರವನ್ನು ಅತಿಪವಿತ್ರವಾದುದೆಂದು ಪ್ರಾಜ್ಞರು ತಿಳಿಯುತ್ತಾರೆ. ಮೂಢರಾದರೋ ಈಶ್ವರನ ಮಾಯೆಯಿಂದ ಮೋಹಿತರಾಗಿ ಈ ಸಂಗತಿಯನ್ನು ತಿಳಿಯದೆ ಹೋಗುವರು.

೧೪. ಆ ಮಹೇಶ್ವರನಿಂದಲೇ ಅನುಜ್ಞಾತರಾಗಿ, ನಿಷ್ಠೆಯಿಂದ ಅವನನ್ನೇ ಗತಿಯೆಂದು ನಂಬಿ, ಅವಿಮುಕ್ತಕ್ಷೇತ್ರದಲ್ಲಿ ಶರೀರತ್ಯಾಗವನ್ನು ಮಾಡಿ ಶಾಂತಿಯಿಂದ ಯೋಗಮಾರ್ಗವನ್ನೈದುವರು.

ಸ್ಥಾನಂ ಗುಹ್ಯಂ ಶ್ಮಶಾನಾನಾಂ ಸರ್ವೇಷಾಮೇತದುಚ್ಯತೇ ।
ನ ಹಿ ಯೋಗಾದೃತೇ ಮೋಕ್ಷಃ ಪ್ರಾಪ್ಯತೇ ಭುವಿ ಮಾನವೈಃ ॥೧೫॥

ಅವಿಮುಕ್ತೇ ನಿವಸತಾಂ ಯೋಗೋ ಮೋಕ್ಷಶ್ಚ ಸಿಧ್ಯತಿ ।
ಏಕ ಏವ ಪ್ರಭಾವೋಽಸ್ತಿ ಕ್ಷೇತ್ರಸ್ಯ ಪರಮೇಶ್ವರಿ ।
ಅನೇನ ಜನ್ಮನೈವೇಹ ಪ್ರಾಪ್ಯತೇ ಗತಿರುತ್ತಮಾ ॥೧೬॥

ಅವಿಮುಕ್ತೇ ನಿವಸತಾ ವ್ಯಾಸೇನಾಮಿತತೇಜಸಾ ।
ನೈವ ಲಬ್ಧಾ ಕ್ವಚಿದ್ಭಿಕ್ಷಾ ಭ್ರಮಮಾಣೇನ ಯತ್ನತಃ ॥೧೭॥

ಕ್ಷುಧಾವಿಷ್ಟಸ್ತತಃ ಕ್ರುದ್ಧೋಽಚಿಂತಯಚ್ಛಾಪಮುತ್ತಮಂ ।
ದಿನಂ ದಿನಂ ಪ್ರತಿ ವ್ಯಾಸಃ ಷಣ್ಮಾಸಂ ಯೋಽವತಿಷ್ಠತಿ ॥೧೮॥

ಕಥಂ ಮಮೇದಂ ನಗರಂ ಭಿಕ್ಷಾದೋಷಾದ್ಧತಂ ತ್ವಿದಂ ।
ವಿಪ್ರೋ ವಾ ಕ್ಷತ್ರಿಯೋ ವಾಪಿ ಬ್ರಾಹ್ಮಣೀ ವಿಧವಾಪಿ ವಾ ॥೧೯॥

---

೧೫. ಎಲ್ಲ ಶ್ಮಶಾನಗಳಿಂತಲೂ ಈ ಸ್ಥಾನವು ಅತಿ ರಹಸ್ಯವಾದುದೆಂದು ಹೇಳುತ್ತಾರೆ. ಲೋಕದಲ್ಲಿ ಯೋಗದಿಂದಲ್ಲದೆ ಮಾನವರಿಗೆ ಮೋಕ್ಷವು ಲಭಿಸದು.

೧೬. ಅವಿಮುಕ್ತಕ್ಷೇತ್ರನಿವಾಸಿಗಳಿಗೆ ಯೋಗವೂ ಮೋಕ್ಷವೂ ಸಿದ್ಧಿಸುವುವು ಎಲೌ ಪರಮೇಶ್ವರಿ, ಈ ಕ್ಷೇತ್ರದ ಒಂದೇ ಒಂದು ಪ್ರಭಾವವೆಂದರೆ ಈ ಜನ್ಮದಲ್ಲೇ ಅತ್ಯಂತ ಶ್ರೇಷ್ಠವಾದ ಗತಿಯು ಪ್ರಾಪ್ತವಾಗುವುದು.

೧೭. ಅಪರಿಮಿತ ತೇಜಸ್ವಿಯಾದ ವ್ಯಾಸಮುನಿಯು ಅವಿಮುಕ್ತಕ್ಷೇತ್ರದಲ್ಲಿ ವಾಸಿಸುತ್ತಿದ್ದನು. ಅವನು ಎಷ್ಟು ಶ್ರಮಪಟ್ಟು ಅಲೆದರೂ ಒಂದು ಕಡೆಯಾದರೂ ಭಿಕ್ಷೆ ಸಿಕ್ಕಲೇ ಇಲ್ಲ.

೧೮. ದಿನದಿನವೂ ಹೀಗೆಯೇ ನಡೆಯಿತು. ಆರು ತಿಂಗಳ ಕಾಲ ಕಳೆಯಿತು. ವ್ಯಾಸಮಹಾಮುನಿಗೆ ಹಸಿವು ಹೆಚ್ಚಿ ಕೋಪ ಬಂದಿತು. ಅವನು ಭಯಂಕರವಾದ ಶಾಪವನ್ನು ಮನಸ್ಸಿನಲ್ಲಿ ಯೋಚಿಸಿದನು.

೧೯-೨೦. "ಇದೇನು? ನನಗೆ ಭಿಕ್ಷೆ ಕೂಡ ಸಿಕ್ಕದಂತೆ ಈ ನಗರವು ಹಾಳಾಗಿ ಹೋಗಿದೆ! ಬ್ರಾಹ್ಮಣ, ಕ್ಷತ್ರಿಯ, ಬ್ರಾಹ್ಮಣಿತಿ, ವಿಧವೆ, ನಾಗರಿಕ,

ಸಂಸ್ಕೃತಾಽಸಂಸ್ಕೃತಾ ವಾಽಪಿ ಪರಿಪಕ್ವಾಃ ಕಥಂ ನು ಮೇ।
ನ ಪ್ರಯಚ್ಛಂತಿ ವೈ ಲೋಕಾ ಬ್ರಾಹ್ಮಣಾಶ್ಚರ‍್ಯಕಾರಕಂ ||೨೦||

ಏಷಾಂ ಶಾಪಂ ಪ್ರದಾಸ್ಯಾಮಿ ತೀರ್ಥಸ್ಯ ನಗರಸ್ಯ ತು।
ತೀರ್ಥಂ ಚಾತೀರ್ಥತಾಂ ಯಾತು ನಗರಂ ಶಾಪಯಾಮ್ಯಹಂ ||೨೧||

ಮಾಭೂತ್ತ್ರಿಪೌರುಷೀ ವಿದ್ಯಾ ಮಾಭೂತ್ತ್ರಿಪೌರುಷಂ ಧನಂ।
ಮಾಭೂತ್ತ್ರಿಪೌರುಷಂ ಸಖ್ಯಂ ವ್ಯಾಸೋ ವಾರಾಣಸೀಂ ಶಪೇತ್ ||೨೨||

ಅವಿಮುಕ್ತೇ ನಿವಸತಾಂ ಜನಾನಾಂ ಪುಣ್ಯಕರ್ಮಣಾಂ।
ವಿಘ್ನಂ ಸೃಜಾಮಿ ಸರ್ವೇಷಾಂ ಯೇನ ಸಿದ್ಧಿರ್ನ ವಿದ್ಯತೇ ||೨೩||

ವ್ಯಾಸಚಿತ್ತಂ ತದಾ ಜ್ಞಾತ್ವಾ ದೇವದೇವ ಉಮಾಪತಿಃ।
ಭೀತಭೀತಸ್ತದಾ ಗೌರೀಂ ತಾಂ ಪ್ರಿಯಾಂ ಪರ್ಯಭಾಷತ ||೨೪||

---

ಅನಾಗರಿಕ, ಜ್ಞಾನಿಗಳು ಇವರಾರೂ ನನಗೆ ಭಿಕ್ಷೆ ಹಾಕುವುದಿಲ್ಲವಲ್ಲಾ! ಇದು ಬ್ರಾಹ್ಮಣನಾದ ನನಗೆ ಬಹು ಆಶ್ಚರ‍್ಯವನ್ನು ಹುಟ್ಟಿಸುತ್ತದೆ.

೨೧. ಈ ಜನರಿಗೂ ಈ ತೀರ್ಥಕ್ಕೂ, ಈ ಪಟ್ಟಣಕ್ಕೂ ಶಾಪವನ್ನು ಕೊಡುವೆನು. ಈ ತೀರ್ಥವು ಇನ್ನು ಮುಂದೆ ಪುಣ್ಯತೀರ್ಥವಾಗದಿರಲಿ. ಇನ್ನು ನಗರಕ್ಕೆ ಶಾಪವನ್ನು ಕೊಡುವೆನು.

೨೨. ವಿದ್ಯೆ, ಧನ, ಸ್ನೇಹ ಇವೊಂದೂ ಇಲ್ಲಿ ಮೂರು ತಲೆಮಾರಿನವರೆಗೆ ಅನುಸರಿಸಿ ಬಾರದಿರಲಿ. ಇದೇ ವ್ಯಾಸನು ವಾರಾಣಸಿಗೆ ಕೊಡುವ ಶಾಪ.

೨೩. ಪುಣ್ಯಕರ್ಮದ ಫಲದಿಂದ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುತ್ತಿರುವ ಜನರಿಗೆ ಯಾರಿಗೂ ಸಿದ್ಧಿಯುಂಟಾಗದಂತೆ ವಿಘ್ನವನ್ನು ನಿರ್ಮಾಣ ಮಾಡುವೆನು" ಎಂದು ಆ ತಪೋಧನನು ಚಿಂತಿಸಿದನು.

೨೪. ಆಗ ದೇವದೇವನಾದ ಪರಮೇಶ್ವರನು ವ್ಯಾಸರ ಮನಸ್ಸನ್ನು ಅರಿತು, ಬಲು ಹೆದರಿಕೆಯಿಂದ ತನ್ನ ಪ್ರಿಯಳಾದ ಗೌರಿಗಿಂತೆಂದನು.

ಶೃಣು ದೇವಿ ವಚೋ ಮಹ್ಯಂ ಯಾದೃಶಂ ಪ್ರತ್ಯುಪಸ್ಥಿತಂ।
ಕೃಷ್ಣದ್ವೈಪಾಯನಃ ಕೋಪಾಚ್ಛಾಪಂ ದಾತುಂ ಸಮುದ್ಯತಃ ॥೨೫॥

॥ ದೇವ್ಯುವಾಚ ॥

ಕಿಮರ್ಥಂ ಶಪತೇ ಕ್ರುದ್ಧೋ ವ್ಯಾಸಃ ಕೇನ ಪ್ರಕೋಪಿತಃ।
ಕಿಂ ಕೃತಂ ಭಗವಂಸ್ತಸ್ಯ ಯೇನ ಶಾಪಂ ಪ್ರಯಚ್ಛತಿ ॥೨೬॥

॥ ದೇವದೇವ ಉವಾಚ ॥

ಅನೇನ ಸುತಪಸ್ತಪ್ತಂ ಬಹೂರ್ವರ್ಷಗಣಾನ್ ಪ್ರಿಯೇ।
ಮೌನಿನಾ ಧ್ಯಾನಯುಕ್ತೇನ ದ್ವಾದಶಾಬ್ದಾನ್ ವರಾನನೇ ॥೨೭॥

ತತಃ ಕ್ಷುಧಾ ಸುಸಂಜಾತಾ ಭಿಕ್ಷಾಮಟಿತುಮಾಗತಃ।
ನೈವಾಸ್ಯ ಕೇನಚಿದ್ಭಿಕ್ಷಾ ಗ್ರಾಸಾರ್ಧಮಪಿ ಭಾಮಿನಿ ॥೨೮॥

---

೨೫. ಓ ದೇವೀ, ಈಗ ಎಂತಹ ಸಂಗತಿಯೊದಗಿದೆ ಕೇಳು. ವ್ಯಾಸಮಹಾಮುನಿಯು ಕೋಪದಿಂದ ಶಾಪವನ್ನು ಕೊಡಲು ಸಿದ್ಧನಾಗಿದ್ದಾನೆ.

೨೬. ಪಾರ್ವತಿ ಹೇಳಿದಳು.—ವ್ಯಾಸನು ಕೋಪದಿಂದ ಶಾಪಕೊಡುವುದು ಏಕೆ? ಅವನನ್ನು ರೇಗಿಸಿದವರಾರು? ದೇವಾ, ಶಾಪಕೊಡುವಂತೆ ಮನಸ್ಸು ಮಾಡಲು ಅವನಿಗೆ ಆದ ಅಪಕಾರವಾವುದು?

೨೭. ಮಹಾದೇವನು ಹೇಳಿದನು.—ಪ್ರಿಯೇ, ಈತನು ಅನೇಕ ವರ್ಷಗಳ ಕಾಲ ಘೋರವಾದ ತಪಸ್ಸನ್ನು ಮಾಡಿದನು. ಎಲೌ ಶುಭಮುಖೀ, ಹನ್ನೆರಡು ವರ್ಷಗಳಕಾಲ ಇವನು ಮೌನವ್ರತದಿಂದ ಧ್ಯಾನದಲ್ಲಿ ತೊಡಗಿದ್ದನು.

೨೮. ಬಳಿಕ ಬಹಳ ಹಸಿವಾಗಲು ಭಿಕ್ಷೆಬೇಡುವುದಕ್ಕಾಗಿ ಬಂದನು. ಎಲೌ ನಾರೀಮಣೀ, ಅರೆತುತ್ತಿನಷ್ಟಾದರೂ ಭಿಕ್ಷೆಯನ್ನು ಇವನಿಗೆ ಯಾರೂ ಹಾಕಲಿಲ್ಲ.

ಏವಂ ಭಗವತಃ ಕಾಲ ಆಸೀತ್ಷಾಣ್ಮಾಸಿಕೋ ಮುನೇಃ ।
ತತಃ ಕ್ರೋಧಪರೀತಾತ್ಮಾ ಶಾಪಂ ದಾಸ್ಯತಿ ಸೋಽಧುನಾ ॥೨೯॥

ಯಾವನ್ನೈಷ ಶಪೇತ್ತಾವದುಪಾಯಸ್ತತ್ರ ಚಿಂತ್ಯತಾಂ ।
ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಿಯೇ ॥೩೦॥

ಕೋಽಸ್ಯ ಶಾಪಾನ್ನ ಬಿಭೇತಿ ಹ್ಯಪಿ ಸಾಕ್ಷಾತ್ಪಿತಾಮಹಃ ।
ಅದೈವಂ ದೈವತಂ ಕುರ್ಯಾದ್ದೈವಂ ಚಾಪ್ಯಪದೈವತಂ ॥೩೧॥

ಆವಾಂ ತು ಮಾನುಷೌ ಭೂತ್ವಾ ಗೃಹಸ್ಥಾವಿಹ ವಾಸಿನೌ ।
ತಸ್ಯ ತೃಪ್ತಿಕರೀಂ ಭಿಕ್ಷಾಂ ಪ್ರಯಚ್ಛಾವೋ ವರಾನನೇ ॥೩೨॥

ಏವಮುಕ್ತಾ ತತೋ ದೇವೀ ದೇವೇನ ಶಂಭುನಾ ತದಾ ।
ವ್ಯಾಸಸ್ಯ ದರ್ಶನಂ ದತ್ವಾ ಕೃತ್ವಾ ವೇಷಂ ತು ಮಾನುಷಂ ॥೩೩॥

---

೨೯. ಹೀಗೆ ಪೂಜ್ಯನಾದ ಮುನಿಗೆ ಆರುತಿಂಗಳು ಕಳೆದುವು. ಬಳಿಕ ಆತನಿಗೆ ಸಿಟ್ಟೇರಿತು. ಈಗ ಶಾಪಕೊಡುವುದರಲ್ಲಿದ್ದಾನೆ.

೩೦. ಇವನು ಶಾಪಕೊಡುವುದರೊಳಗಾಗಿ ಉಪಾಯವೊಂದನ್ನು ಯೋಚಿಸು. ಎಲೌ ಪ್ರಿಯೇ, ವ್ಯಾಸಮಹಾಮುನಿಯನ್ನು ನಾರಾಯಣನೆಂದು ತಿಳಿ.

೩೧. ಸಾಕ್ಷಾದ್ಬ್ರಹ್ಮನೇ ಆಗಲಿ ಈತನ ಶಾಪಕ್ಕೆ ಹೆದರದೆ ಇರುವವರು ಯಾರು? ಇವನು ದೇವರಲ್ಲದವರನ್ನು ದೇವರೆಂದೆನಿಸುವನು; ದೇವರನ್ನು ದೇವರಲ್ಲವೆಂದೆನಿಸುವನು.

೩೨. ಓ ದೇವೀ, ನಾವು ಮನುಷ್ಯರೂಪವನ್ನು ಧರಿಸಿ ಇಲ್ಲೇ ಗೃಹಸ್ಥರಾಗಿ ವಾಸಿಸುತ್ತ ಅವನಿಗೆ ತೃಪ್ತಿಯಾಗುವಂತೆ ಭಿಕ್ಷೆಯನ್ನು ನೀಡುವಾ.

೩೩-೩೪. ಪೂಜ್ಯನಾದ ಪರಮೇಶ್ವರನು ಪಾರ್ವತೀದೇವಿಗೆ ಹೀಗೆ ಹೇಳಲು, ಆಕೆ ಮನುಷ್ಯ ಸ್ತ್ರೀರೂಪವನ್ನು ತಾಳಿ, ವ್ಯಾಸಮಹರ್ಷಿಗೆ ದರ್ಶನವನ್ನು ಕೊಟ್ಟು

ಏಹ್ಯೇಹಿ ಭಗವನ್ ಸದ್ಯೋ ಭಿಕ್ಷಾಂ ಗ್ರಾಹಯ ಸತ್ತಮ ।
ಅಸ್ಮದ್ಗೃಹೇ ಕದಾಚಿತ್ತ್ವಂ ನಾಗತೋಽಸಿ ಮಹಾಮುನೇ ॥೩೪॥

ಏತಚ್ಛ್ರುತ್ವಾ ಪ್ರೀತಮನಾ ಭಿಕ್ಷಾಂ ಗ್ರಹೀತುಮಾಗತಃ ।
ಭಿಕ್ಷಾಂ ದತ್ವಾ ತು ವ್ಯಾಸಾಯ ಷಡ್ರಸಾಮಮೃತೋಪಮಾಂ ॥೩೫॥

ಅನಾಸ್ವಾದಿತಪೂರ್ವಾ ಸಾ ಭಕ್ಷಿತಾ ಮುನಿನಾ ತದಾ ।
ಭಿಕ್ಷಾಂ ವ್ಯಾಸಸ್ತತೋ ಭುಕ್ತ್ವಾ ಚಿಂತಯನ್ ಹೃಷ್ಟಮಾನಸಃ ॥೩೬॥

ವವಂದೇ ವರದಂ ದೇವಂ ದೇವೀಂ ಚ ಗಿರಿಜಾಂ ತದಾ ।
ವ್ಯಾಸಃ ಕಮಲಪತ್ರಾಕ್ಷ ಇದಂ ವಚನಮಬ್ರವೀತ್ ॥೩೭॥

ದೇವೋ ದೇವೀ ನದೀ ಗಂಗಾ ಮಿಷ್ಟಮನ್ನಂ ಶುಭಾ ಗತಿಃ ।
ವಾರಾಣಸ್ಯಾಂ ವಿಶಾಲಾಕ್ಷಿ ವಾಸಃ ಕಸ್ಯ ನ ರೋಚತೇ ॥೩೮॥

---

ಪೂಜ್ಯನಾದ "ಓ ಋಷಿವರ್ಯಾ, ಬಾಬಾ. ಈಗಲೇ ಭಿಕ್ಷೆಯನ್ನು ಸ್ವೀಕರಿಸು. ಓ ಮಹಾಮುನೀ, ನಮ್ಮ ಮನಗೆ ನೀನು ಎಂದೂ ಬರಲಿಲ್ಲ" ಎಂದು ಹೇಳಿದಳು.

೩೫. ಇದನ್ನು ಕೇಳಿ, ಮನಸ್ಸಿನಲ್ಲಿ ಪ್ರೀತಿಗೊಂಡು ವ್ಯಾಸಮಹರ್ಷಿಯು ಭಿಕ್ಷೆಯನ್ನು ತೆಗೆದುಕೊಳ್ಳುವುದಕ್ಕಾಗಿ ಬಂದನು. ಆಕೆ ಷಡ್ರಸಭರಿತವಾದ, ಅಮೃತಸಮಾನವಾದ ಭಿಕ್ಷೆಯನ್ನು ಆತನಿಗೆ ಕೊಟ್ಟಳು. ಮುನಿಯು ಅದನ್ನು ಭಕ್ಷಿಸಿದನು. ಅವನು ಹಿಂದೆ ಎಂದೂ ಅಂತಹುದನ್ನು ಸವಿದಿರಲಿಲ್ಲ.

೩೬-೩೭. ತರುವಾಯ ವ್ಯಾಸನು ಭಿಕ್ಷೆಯನ್ನು ಭುಂಜಿಸಿ, ಮನಸ್ಸಿನಲ್ಲಿ ಆಲೋಚಿಸಿ, ಸಂತೋಷದಿಂದ ವರಪ್ರದನಾದ ಮಹಾದೇವನನ್ನೂ ಪಾರ್ವತೀ ದೇವಿಯನ್ನೂ ನಮಸ್ಕರಿಸಿದನು. ತಾವರೆಯಂತೆ ಕಣ್ಣುಗಳು ಶೋಭಿಸುತ್ತಿರಲು ಆತನು ಇಂತೆಂದನು.

೩೮. ವಿಸ್ತಾರವಾದ ಕಣ್ಣುಗಳುಳ್ಳ ಓ ದೇವೀ, ಪರಮೇಶ್ವರ, ಪಾರ್ವತಿ, ಗಂಗಾನದಿ, ಮೃಷ್ಟಾನ್ನ, ಸದ್ಗತಿ ಇವಿಷ್ಟೂ ಸುಲಭವಾಗಿರುವಾಗ ವಾರಾಣಸಿಯಲ್ಲಿ ವಾಸಮಾಡಲು ಯಾರಿಗೆ ತಾನೆ ಮನಸ್ಸು ಬಾರದು ?

ಏವಮುಕ್ತ್ವಾ ತತೋ ವ್ಯಾಸೋ ನಗರೀಮವಲೋಕಯನ್ |
ಚಿಂತಯಾನಸ್ತತೋ ಭಿಕ್ಷಾಂ ಹೃದಯಾನಂದಕಾರಿಣೀಂ ||೩೯||

ಅಪಶ್ಯತ್ಪುರತೋ ದೇವಂ ದೇವೀಂ ಚ ಗಿರಿಜಾಂ ತದಾ |
ಗೃಹಾಂಗಣಸ್ಥಿತಂ ವ್ಯಾಸಂ ದೇವದೇವೋಽಬ್ರವೀದಿದಂ ||೪೦||

ಇಹ ಕ್ಷೇತ್ರೇ ನ ವಸ್ತವ್ಯಂ ಕ್ರೋಧನಸ್ತ್ವಂ ಮಹಾಮುನೇ |
ಏವಂ ವಿಸ್ಮಯಮಾಪನ್ನೋ ದೇವಂ ವ್ಯಾಸೋಽಬ್ರವೀದ್ವಚಃ ||೪೧||

|| ವ್ಯಾಸ ಉವಾಚ ||

ಚತುರ್ದಶ್ಯಾಮಥಾಷ್ಟಮ್ಯಾಂ ಪ್ರವೇಶಂ ದಾತುಮರ್ಹಸಿ |
ಏವಮಸ್ತ್ವಿತ್ಯನುಜ್ಞಾಯ ತತ್ರೈವಾಂತರಧೀಯತ ||೪೨||

ನ ತದ್ಗೃಹಂ ನ ಸಾ ದೇವೀ ನ ದೇವೋ ಜ್ಞಾಯತೇ ಕ್ವಚಿತ್ |
ಏವಂ ತ್ರೈಲೋಕ್ಯವಿಖ್ಯಾತಃ ಪುರಾ ವ್ಯಾಸೋ ಮಹಾತಪಾಃ ||೪೩||

---

೩೯-೪೦. ಹೀಗೆ ಹೇಳಿ ವ್ಯಾಸಮುನಿಯು ನಗರಿಯನ್ನು ನೋಡುತ್ತ ಮನಸ್ಸಿನಲ್ಲಿ ಆಹ್ಲಾದವನ್ನುಂಟುಮಾಡುವ ಭಿಕ್ಷೆಯನ್ನು ಕುರಿತು ಯೋಚಿಸುತ್ತಿದ್ದನು. ಪರಮೇಶ್ವರನೂ ಪಾರ್ವತೀದೇವಿಯೂ ಮುಂದೆ ಕಣ್ಣಿಗೆ ಬಿದ್ದರು. ಮನೆಯ ಅಂಗಳದಲ್ಲಿ ನಿಂತಿದ್ದ ವ್ಯಾಸಮುನೀಂದ್ರನನ್ನು ನೋಡಿ ಮಹಾದೇವನು ಇಂತೆಂದನು.

೪೧. "ಎಲೈ ಮಹಾಮುನೀ, ನೀನು ಬಹಳ ಕೋಪಿಷ್ಠ; ಆದುದರಿಂದ ಈ ಕ್ಷೇತ್ರದಲ್ಲಿ ನೀನು ವಾಸಮಾಡಕೂಡದು." ಈ ಮಾತನ್ನು ಕೇಳಿ ಆಶ್ಚರ್ಯಗೊಂಡ ಮುನೀಂದ್ರನು ಮಹಾದೇವನಿಗಿಂತೆಂದನು.

೪೨. ವ್ಯಾಸನು ಹೇಳಿದನು.—"ದೇವಾ, ಚತುರ್ದಶಿ ಮತ್ತು ಅಷ್ಟಮಿಗಳಲ್ಲಿ ನನಗೆ ಇಲ್ಲಿ ಪ್ರವೇಶಕ್ಕೆ ಅನುಮತಿಯನ್ನು ಕೊಡು" ಎಂದು ಬೇಡಲು, ಹಾಗೆಯೇ ಆಗಲೆಂದು ಅಪ್ಪಣೆಕೊಟ್ಟು ಪರಮೇಶ್ವರನು ಅಲ್ಲೇ ಅದೃಶ್ಯನಾದನು.

೪೩-೪೪. ಆ ಮನೆ, ಆ ದೇವಿ, ಆ ಮಹಾದೇವ ಎಲ್ಲರೂ ಮಾಯವಾದರು. ಎಲ್ಲಿ ಹೋದರೋ ಗೊತ್ತಾಗಲಿಲ್ಲ. ಹೀಗೆ ಮೂರುಲೋಕದಲ್ಲಿಯೂ ಪ್ರಸಿದ್ಧಿಯನ್ನು

**ಜ್ಞಾತ್ವಾ ಕ್ಷೇತ್ರಗುಣಾನ್ ಸರ್ವಾಂಸ್ಥಿತಸ್ತಸ್ಯೈವ ಪಾರ್ಶ್ವತಃ ।**
**ಏವಂ ವ್ಯಾಸಂ ಸ್ಥಿತಂ ಜ್ಞಾತ್ವಾ ಕ್ಷೇತ್ರಂ ಶಂಸಂತಿ ಪಂಡಿತಾಃ ॥೪೪॥**

**ಅವಿಮುಕ್ತಗುಣಾನಾಂ ತು ಕಃ ಸಮರ್ಥೋ ವದಿಷ್ಯತಿ ।**
**ದೇವಬ್ರಾಹ್ಮಣವಿದ್ವಿಷ್ಟಾ ದೇವಭಕ್ತವಿಡಂಬಕಾಃ ॥೪೫॥**

**ಬ್ರಹ್ಮಘ್ನಾಶ್ಚ ಕೃತಘ್ನಾಶ್ಚ ತಥಾ ನೈಷ್ಕೃತಿಕಾಶ್ಚ ಯೇ ।**
**ಲೋಕದ್ವಿಷೋ ಗುರುದ್ವಿಷಸ್ತೀರ್ಥಾಯತನದೂಷಕಾಃ ॥೪೬॥**

**ಸದಾ ಪಾಪರತಾಶ್ಚೈವ ಯೇ ಚಾನ್ಯೇ ಕುತ್ಸಿತಾ ಭುವಿ ।**
**ತೇಷಾಂ ನಾಸ್ತೀತಿ ವಾಸೋ ವೈ ಸ್ಥಿತೋಽಸೌ ದಂಡನಾಯಕಃ ॥೪೭॥**

**ರಕ್ಷಣಾರ್ಥಂ ನಿಯುಕ್ತಂ ವೈ ದಂಡನಾಯಕಮುತ್ತಮಂ ।**
**ಪೂಜಯಿತ್ವಾ ಯಥಾಶಕ್ತ್ಯಾ ಗಂಧಪುಷ್ಪಾದಿಧೂಪಕೈಃ ॥೪೮॥**

---

ಪಡೆದ, ಮಹಾತಪಸ್ವಿಯಾದ ವ್ಯಾಸಮಹರ್ಷಿಯು ಆ ಕ್ಷೇತ್ರದ ಗುಣಗಳೆಲ್ಲವನ್ನೂ ತಿಳಿದು ಅದರ ಪಕ್ಕದಲ್ಲೇ ನೆಲಸಿದನು. ಅಲ್ಲಿ ಈ ವಿಷಯವನ್ನು ಅರಿತು ವಿದ್ವಾಂಸರು ಆ ಕ್ಷೇತ್ರವನ್ನು ಶ್ಲಾಘಿಸುವರು.

೪೫-೪೭. ವಾರಾಣಸೀ ಕ್ಷೇತ್ರದ ಗುಣಗಳನ್ನು ವರ್ಣಿಸಿ ಹೇಳಲು ಯಾರಿಗೆ ಸಾಮರ್ಥ್ಯವಿದೆ? ದೇವತೆಗಳನ್ನೂ ಬ್ರಾಹ್ಮಣರನ್ನೂ ದ್ವೇಷಿಸುವವರು, ದೈವಭಕ್ತರಂತೆ ನಟಿಸುವವರು, ಬ್ರಹ್ಮಹತ್ಯೆಮಾಡಿದವರು, ಉಪಕಾರಸ್ಮರಣೆಯಿಲ್ಲದವರು, ಪ್ರಾಯಶ್ಚಿತ್ತಾರ್ಹರು, ಜನಗಳನ್ನೂ ಗುರುಗಳನ್ನೂ ದ್ವೇಷಿಸುವವರು, ಪುಣ್ಯತೀರ್ಥಗಳನ್ನೂ ಪುಣ್ಯಾಲಯಗಳನ್ನೂ ನಿಂದಿಸುವವರು, ಯಾವಾಗಲೂ ಪಾಪದಲ್ಲೇ ತೊಡಗಿರುವವರು, ಇನ್ನೂ ಇತರ ದುಷ್ಕೃತ್ಯಗಳನ್ನು ಮಾಡುವವರು ಇಂತಹವರಿಗೆ ಈ ಕ್ಷೇತ್ರದಲ್ಲಿ ವಾಸವು ದೊರೆಯುವುದಿಲ್ಲ. ಅದನ್ನು ನೋಡಿಕೊಳ್ಳುವುದಕ್ಕಾಗಿಯೇ ಈ ದಂಡನಾಯಕನು ಇಲ್ಲಿ ಇದ್ದಾನೆ.

೪೮-೫೧. ಕ್ಷೇತ್ರದ ರಕ್ಷಣೆಗಾಗಿ ನಿಯಮಿಸಲ್ಪಟ್ಟಿರುವ ಶ್ರೇಷ್ಠನಾದ ದಂಡನಾಯಕನನ್ನು ಶಕ್ತಿಗೆ ತಕ್ಕಂತೆ ಗಂಧಪುಷ್ಪಾದಿ ಪರಿಮಳವಸ್ತುಗಳಿಂದ ಪೂಜಿಸಿ, ಶಾಸ್ತ್ರಜ್ಞನಾದ ಯಾತ್ರಿಕನು ಬಳಿಕ ನಮಸ್ಕಾರಮಾಡಬೇಕು. ಸಕಲ ವರ್ಣದವರಿಂದಲೂ, ಬಗೆಬಗೆಯ ಸರ್ಪಗಳಿಂದಲೂ ಆವೃತವಾದ ಈ ಕ್ಷೇತ್ರದಲ್ಲಿ

ನಮಸ್ಕಾರಂ ತತಃ ಕೃತ್ವಾ ನಾಯಕಸ್ಯ ತು ಮಂತ್ರವಿತ್ ।
ಸರ್ವವರ್ಣಾವೃತೇ ಕ್ಷೇತ್ರೇ ನಾನಾವಿಧಸರೀಸೃಪೇ ||೪೯||

ಈಶ್ವರಾನುಗೃಹೀತಾ ಹಿ ಗತಿಂ ಗಾಣೇಶ್ವರೀಂ ಗತಾಃ ।
ನಾನಾರೂಪಧರಾ ದಿವ್ಯಾ ನಾನಾವೇಷಧರಾಸ್ತಥಾ ||೫೦||

ಸುರಾ ವೈ ಯೇ ತು ಸರ್ವೇ ಚ ತನ್ನಿಷ್ಠಾಸ್ತತ್ಪರಾಯಣಾಃ ।
ಯದಿಚ್ಛಂತಿ ಪರಂ ಸ್ಥಾನಮಕ್ಷಯಂ ತದವಾಪ್ನುಯುಃ ||೫೧||

ಪರಂ ಪುರಂ ದೈವಪುರಾದ್ವಿಶಿಷ್ಯತೇ
ತದುತ್ತರಂ ಬ್ರಹ್ಮಪುರಾತ್ಪರಃ ಸ್ಥಿತಂ ।
ತಪೋಬಲಾದೀಶ್ವರಯೋಗನಿರ್ಮಿತಂ
ನ ತತ್ಸಮಂ ಬ್ರಹ್ಮದಿವೌಕಸಾಲಯಂ ।
ಮನೋರಮಂ ಕಾಮಗಮಂ ಹ್ಯನಾಮಯ
ಮತೀತ್ಯ ತೇಜಾಂಸಿ ತಪಾಂಸಿ ಯೋಗವತ್ ||೫೨||

ಅಧಿಷ್ಠಿತಸ್ತು ತತ್ಸ್ಥಾನೇ ದೇವದೇವೋ ವಿರಾಜತೇ ।
ತಪಾಂಸಿ ಯಾನಿ ತಪ್ಯಂತೇ ವ್ರತಾನಿ ನಿಯಮಾಶ್ಚ ಯೇ ||೫೩||

---

ಭಕ್ತರು ಈಶ್ವರನ ಅನುಗ್ರಹಕ್ಕೆ ಪಾತ್ರರಾಗಿ, ಗಣೇಶ್ವರ ಪದವಿಯನ್ನು ಪಡೆಯುವರು. ದೇವತೆಗಳೂ ಇನ್ನೂ ಉಳಿದವರೂ ಬಗೆಬಗೆಯ ರೂಪಗಳನ್ನೂ ನಾನಾವಿಧವಾದ ವೇಷಗಳನ್ನೂ ಧರಿಸಿ, ಏಕನಿಷ್ಠೆಯಿಂದ ಪರಮೇಶ್ವರನನ್ನೇ ಗತಿಯೆಂದು ನಂಬಿ ತಾವು ಕೋರಿದ ಅಕ್ಷಯವಾದ ಶುಭಸ್ಥಾನಗಳನ್ನೈದುವರು.

೫೨. ಶ್ರೇಷ್ಠವಾದ ವಾರಾಣಸೀ ನಗರವು ಅಮರಾವತಿಗಿಂತಲೂ ಅತಿಶಯವಾದುದು. ಬ್ರಹ್ಮನ ನಗರಕ್ಕಿಂತ ಮೇಲೆನಿಸಿ ಅದು ಮುಂದೆ ಗೋಚರವಾಗುತ್ತಿದೆ. ಈಶ್ವರನ ತಪೋಬಲದಿಂದಲೂ ಯೋಗಬಲದಿಂದಲೂ ಅದು ನಿರ್ಮಿತವಾಯಿತು. ಬ್ರಹ್ಮಾದಿದೇವತೆಗಳ ಪಟ್ಟಣಗಳು ಅದಕ್ಕೆ ಸರಿಬಾರವು. ಅದು ಸುಂದರವಾಗಿದೆ. ಇಷ್ಟಬಂದಂತೆ ಸಂಚರಿಸಬಲ್ಲುದು. ರೋಗರಹಿತವಾದುದು. ಎಲ್ಲರ ತೇಜಸ್ಸಿಗೂ ತಪಸ್ಸುಗಳಿಗೂ ನಿಲುಕದೆ ಇರುವುದು. ಯೋಗಬಲದಿಂದ ಪೂರ್ಣವಾಗಿರುವುದು.

೫೩-೫೪. ಆ ಸ್ಥಳದಲ್ಲಿ ದೇವದೇವನಾದ ಪರಮೇಶ್ವರನು ಬೀಡುಬಿಟ್ಟು ಕಂಗೊಳಿಸುತ್ತಿರುವನು. ಲೋಕದಲ್ಲಿ ಯಾವಯಾವ ತಪಸ್ಸುಗಳುಂಟೋ,

**ಸರ್ವತೀರ್ಥಾಭಿಷೇಕಂ ತು ಸರ್ವದಾನಫಲಾನಿ ತು ।**
**ಸರ್ವಯಜ್ಞೇಷು ಯತ್ಪುಣ್ಯಮವಿಮುಕ್ತೇ ತದಾಪ್ನುಯಾತ್ ॥೫೪॥**

**ಅತೀತಂ ವರ್ತಮಾನಂ ಚ ಅಜ್ಞಾನಾಜ್ಞಾನತೋಽಪಿ ವಾ ।**
**ಸರ್ವಂ ತಸ್ಯ ಚ ಯತ್ಪಾಪಂ ಕ್ಷೇತ್ರಂ ದೃಷ್ಟ್ವಾ ವಿನಶ್ಯತಿ ॥೫೫॥**

**ಶಾಂತೈರ್ದಾಂತೈಸ್ತಪಸ್ತಪ್ತಂ ಯತ್ಕಿಂಚಿದ್ಧರ್ಮಸಂಜ್ಞಿತಂ ।**
**ಸರ್ವಂ ಚ ತದವಾಪ್ನೋತಿ ಅವಿಮುಕ್ತೇ ಜಿತೇಂದ್ರಿಯಃ ॥೫೬॥**

**ಅವಿಮುಕ್ತಂ ಸಮಾಸಾದ್ಯ ಲಿಂಗಮರ್ಚಯತೇ ನರಃ ।**
**ಕಲ್ಪಕೋಟಿಶತೈಶ್ಚಾಪಿ ನಾಸ್ತಿ ತಸ್ಯ ಪುನರ್ಭವಃ ॥೫೭॥**

**ಅಮರಾ ಹ್ಯಕ್ಷಯಾಶ್ಚೈವ ಕ್ರೀಡಂತಿ ಭವಸನ್ನಿಧೌ ।**
**ಕ್ಷೇತ್ರತೀರ್ಥೋಪನಿಷದಮವಿಮುಕ್ತಂ ನ ಸಂಶಯಃ ॥೫೮॥**

---

ನಿಯಮಗಳುಂಟೋ, ಪುಣ್ಯತೀರ್ಥ ಸ್ನಾನಗಳುಂಟೋ, ಯಜ್ಞಗಳುಂಟೋ ಅವುಗಳಿಂದ ಬರುವ ಪುಣ್ಯಫಲವು ಅವಿಮುಕ್ತಕ್ಷೇತ್ರವಾಸದಿಂದ ಬರುವುದು.

೫೫. ಈ ಕ್ಷೇತ್ರದ ದರ್ಶನವಾದ ಕೂಡಲೇ ಮಾನವನ ಪಾಪವೆಲ್ಲವೂ ನಾಶವಾಗುವುದು. ಅದು ಹಿಂದಿನದಾಗಿರಬಹುದು. ಈಗಿನದಾಗಿರಬಹುದು. ಅಜ್ಞಾನದಿಂದ ಬಂದಿರಬಹುದು ; ಇಲ್ಲವೇ ಜ್ಞಾನದಿಂದ ಬಂದಿರಬಹುದು.

೫೬. ಜಿತೇಂದ್ರಿಯನಾಗಿ ಅವಿಮುಕ್ತಕ್ಷೇತ್ರದಲ್ಲಿ ವಾಸಮಾಡುವಾತನಿಗೆ, ಶಾಂತರೂ ಜಿತೇಂಧ್ರಿಯರೂ ಆದವರು ಆಚರಿಸಿದ ತಪಸ್ಸುಗಳ ಫಲವೂ, ಸಕಲ ವಿಧವಾದ ಧರ್ಮದ ಫಲವೂ ಬರುವುವು.

೫೭. ಅವಿಮುಕ್ತಕ್ಷೇತ್ರಕ್ಕೆ ಹೋಗಿ ಲಿಂಗಪೂಜೆಯನ್ನು ಮಾಡುವ ಮನುಷ್ಯನಿಗೆ ಕೋಟಿಗಟ್ಟಲೆ ಕಲ್ಪಗಳು ಕಳೆದರೂ ಪುನರ್ಜನ್ಮವಿಲ್ಲ.

೫೮. ಪುಣ್ಯತೀರ್ಥಗಳಲ್ಲೆಲ್ಲ ಅತ್ಯಂತ ರಹಸ್ಯವೆನಿಸಿದ ಅವಿಮುಕ್ತಕ್ಷೇತ್ರವನ್ನು ಸೇವಿಸುವವರು ಅಮರರೂ ಅಕ್ಷಯರೂ ಆಗಿ ಈಶ್ವರನ ಸನ್ನಿಧಿಯಲ್ಲಿ ಕ್ರೀಡಿಸುತ್ತಾರೆ.

ಅವಿಮುಕ್ತೇ ಮಹಾದೇವಮರ್ಚಯಂತಿ ಸ್ತುವಂತಿ ವೈ ।
ಸರ್ವಪಾಪವಿನಿರ್ಮುಕ್ತಾಸ್ತೇ ತಿಷ್ಠಂತ್ಯಜರಾಮರಾಃ ॥೫೯॥

ಸರ್ವಕಾಮಾಶ್ಚ ಯೇ ಯಜ್ಞಾಃ ಪುನರಾವೃತ್ತಿಕಾಃ ಸ್ಮೃತಾಃ ।
ಅವಿಮುಕ್ತೇ ಮೃತಾ ಯೇ ಚ ಸರ್ವೇ ತೇ ಹ್ಯನಿವರ್ತಕಾಃ ॥೬೦॥

ಗ್ರಹನಕ್ಷತ್ರತಾರಾಣಾಂ ಕಾಲೇನ ಪತನಾದ್ಭಯಂ ।
ಅವಿಮುಕ್ತೇ ಮೃತಾನಾಂ ತು ಪತನಂ ನೈವ ವಿದ್ಯತೇ ॥೬೧॥

ಕಲ್ಪಕೋಟಿಸಹಸ್ರೈಸ್ತು ಕಲ್ಪಕೋಟಿಶತೈರಪಿ ।
ನ ತೇಷಾಂ ಪುನರಾವೃತ್ತಿರ್ಮೃತಾ ಯೇ ಕ್ಷೇತ್ರ ಉತ್ತಮೇ ॥೬೨॥

ಸಂಸಾರಸಾಗರೇ ಘೋರೇ ಭ್ರಮಂತಃ ಕಾಲಪರ್ಯಯಾತ್ ।
ಅವಿಮುಕ್ತಂ ಸಮಾಸಾಧ್ಯ ಗಚ್ಛಂತಿ ಪರಮಾಂ ಗತಿಂ ॥೬೩॥

---

೫೯. ವಾರಾಣಸಿಯಲ್ಲಿ ಮಹಾದೇವನನ್ನು ಅರ್ಚನೆಮಾಡಿ ಸ್ತುತಿಸತಕ್ಕವರು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದಿ ಮುಪ್ಪೂ ಮರಣವೂ ಇಲ್ಲದವರಾಗುತ್ತಾರೆ.

೬೦. ಯಜ್ಞಗಳು ಎಲ್ಲಬಗೆಯ ಇಷ್ಟಾರ್ಥಗಳನ್ನು ಸಲ್ಲಿಸಿದರೂ ಪುನರ್ಜನ್ಮವನ್ನು ಕೊಡುವುವು. ಅವಿಮುಕ್ತಕ್ಷೇತ್ರದಲ್ಲಿ ಮೃತರಾದವರಾದರೋ ಮರಳಿ ಸಂಸಾರಕ್ಕೆ ಬಾರರು.

೬೧. ಗ್ರಹಗಳು, ನಕ್ಷತ್ರಗಳು, ತಾರೆಗಳು ಇವುಗಳಿಗೆ ಭೂಮಿಗೆಲ್ಲಿ ಬಿದ್ದೇವೋ ಎಂಬ ಹೆದರಿಕೆಯುಂಟು. ಅವಿಮುಕ್ತದಲ್ಲಿ ದೇಹತ್ಯಾಗಮಾಡಿದವರಿಗಾದರೋ ಪತನವೆಂಬುವುದೇ ಇಲ್ಲ.

೬೨. ಪ್ರಳಯುಗಳು ನೂರಾರು ಕೋಟಿ ಕಳೆಯಲಿ, ಸಾವಿರಾರು ಕೋಟಿ ಕಳೆಯಲಿ ಈ ಉತ್ತಮಕ್ಷೇತ್ರದಲ್ಲಿ ಮೃತಪಟ್ಟವರಿಗೆ ಪುನರಾವೃತ್ತಿಯಿಲ್ಲ.

೬೩. ಭಯಂಕರವಾದ ಸಂಸಾರಸಾಗರದಲ್ಲಿ ಅಲೆಯುತ್ತ ಕಾಲಗತಿಯಿಂದ ಅವಿಮುಕ್ತಕ್ಷೇತ್ರವನ್ನು ಸೇರಿದವರು ಉತ್ತಮವಾದ ಪದವಿಯನ್ನು ಪಡೆಯುವರು.

ಜ್ಞಾತ್ವಾ ಕಲಿಯುಗಂ ಘೋರಂ ಹಾಹಾಭೂತಮಚೇತನಂ ।
ಅವಿಮುಕ್ತಂ ನ ಮುಂಚಂತಿ ಕೃತಾರ್ಥಾಸ್ತೇ ನರಾ ಭುವಿ ||೬೪||

ಅವಿಮುಕ್ತಂ ಪ್ರವಿಷ್ಟಸ್ತು ಯದಿ ಗಚ್ಛೇತ್ತತಃ ಪುನಃ ।
ತದಾ ಹಸಂತಿ ಭೂತಾನಿ ಅನ್ಯೋನ್ಯಕರತಾಡನೈಃ ||೬೫||

ಕಾಮಕ್ರೋಧೇನ ಲೋಭೇನ ಗ್ರಸ್ತಾ ಯೇ ಭುವಿ ಮಾನವಾಃ ।
ನಿಷ್ಕ್ರಮಂತೇ ನರಾ ದೇವಿ ದಂಡನಾಯಕಮೋಹಿತಾಃ ||೬೬||

ಜಪಧ್ಯಾನವಿಹೀನಾನಾಂ ಜ್ಞಾನವರ್ಜಿತಚೇತಸಾಂ ।
ತತೋ ದುಃಖಹತಾನಾಂ ಚ ಗತಿರ್ವಾರಾಣಸೀ ನೃಣಾಂ ||೬೭||

---

೬೪. ಕಲಿಯುಗವು ಘೋರವಾದುದು; ಹಾಹಾಕಾರದಿಂದ ತುಂಬಿರತಕ್ಕುದು; ಚೇತನರಹಿತವಾದುದು. ಇದನ್ನರಿತು ಅವಿಮುಕ್ತಕ್ಷೇತ್ರದಲ್ಲಿ ಬಿಡದೆ ಯಾರು ವಾಸಿಸುವರೋ ಅಂತಹ ಮನುಜರೇ ಲೋಕದಲ್ಲಿ ಧನ್ಯರು.

೬೫. ಅವಿಮುಕ್ತಕ್ಷೇತ್ರವನ್ನು ಪ್ರವೇಶಿಸಿ ಅಲ್ಲಿಂದ ಮತ್ತೆ ಬೇರೆಕಡೆಗೆ ಹೋದವನನ್ನು ನೋಡಿ ಎಲ್ಲ ಭೂತಗಳೂ ಒಂದಕ್ಕೊಂದು ಕೈ ಕೈ ಹೊಡೆಯುತ್ತ ನಗುವುವು.

೬೬. ಎಲೌ ದೇವಿ, ಕಾಮ, ಕ್ರೋಧ, ಲೋಭ ಇವುಗಳಿಗೆ ತುತ್ತಾದ ಮನುಜರು ಕ್ಷೇತ್ರಪಾಲಕನಾದ ದಂಡನಾಯಕನ ಮೋಹಕ್ಕೊಳಗಾಗಿ ಈ ಕ್ಷೇತ್ರದಿಂದ ಹೊರಕ್ಕೆ ಹೋಗುವರು.

೬೭. ಜಪವೂ ಧ್ಯಾನವೂ ಇಲ್ಲದೆ ಮನಸ್ಸು ಜ್ಞಾನಶೂನ್ಯವಾಗಿ ದುಃಖದಲ್ಲಿ ಬಿದ್ದು ತೊಳಲುವ ಮನುಷ್ಯರಿಗೆ ವಾರಾಣಸಿಯೇ ಗತಿ.

ತೀರ್ಥಾನಾಂ ಪಂಚಕಂ ಸಾರಂ ವಿಶ್ವೇಶಾನಂದಕಾನನೇ।
ದಶಾಶ್ವಮೇಧಂ ಲೋಲಾರ್ಕಃ ಕೇಶವೋ ಬಿಂದುಮಾಧವಃ ॥೬೮॥

ಪಂಚಮೀ ತು ಮಹಾಶ್ರೇಷ್ಠಾ ಪ್ರೋಚ್ಯತೇ ಮಣಿಕರ್ಣಿಕಾ।
ಏಭಿಸ್ತು ತೀರ್ಥವರ್ಯೈಶ್ಚ ವರ್ಣ್ಯತೇ ಹ್ಯವಿಮುಕ್ತಕಂ ॥೬೯॥

ಏಕ ಏವ ಪ್ರಭಾವೋಽಸ್ತಿ ಕ್ಷೇತ್ರಸ್ಯ ಪರಮೇಶ್ವರಿ।
ಏಕೇನ ಜನ್ಮನಾ ದೇವಿ ಮೋಕ್ಷಂ ಪಶ್ಯಂತ್ಯನುತ್ತಮಂ ॥೭೦॥

ಏತದ್ವೈ ಕಥಿತಂ ಸರ್ವಂ ದೇವ್ಯೈ ದೇವೇನ ಭಾಷಿತಂ।
ಅವಿಮುಕ್ತಸ್ಯ ಕ್ಷೇತ್ರಸ್ಯ ತತ್ಸರ್ವಂ ಕಥಿತಂ ದ್ವಿಜಾಃ ॥೭೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇಽವಿಮುಕ್ತಮಾಹಾತ್ಮ್ಯಂ
ನಾಮ ಪಂಚಾಶೀತ್ಯಧಿಕಶತತಮೋಽಧ್ಯಾಯಃ

---

೬೮-೬೯. ತೀರ್ಥಗಳಲ್ಲಿ ಸಾರಭೂತವೆನಿಸಿಕೊಂಡಿರತಕ್ಕುವು ಈ ಐದು. ವಿಶ್ವೇಶ್ವರ, ಆನಂದವನ, ದಶಾಶ್ವಮೇಧ, ಲೋಲಾರ್ಕ, ಬಿಂದುಮಾಧವನೆಂದು ಪ್ರಸಿದ್ಧನಾದ ಕೇಶವ, ಐದನೆಯದೂ ಅತ್ಯಂತಶ್ರೇಷ್ಠವೂ ಎನಿಸಿದ ಮಣಿಕರ್ಣಿಕಾತೀರ್ಥ. ಈ ಉತ್ತಮತೀರ್ಥಗಳಿಂದ ಕೂಡಿ ಅವಿಮುಕ್ತಕ್ಷೇತ್ರವು ಎಲ್ಲರಿಂದಲೂ ಶ್ಲಾಘಿಸಲ್ಪಡುತ್ತಿದೆ.

೭೦. ಎಲೌ ಪರಮೇಶ್ವರೀ, ಈ ಕ್ಷೇತ್ರದ ಅತಿ ಮುಖ್ಯವಾದ ಪ್ರಭಾವವೆಂದರೆ ಒಂದೇ ಜನ್ಮದಲ್ಲಿ ಇಲ್ಲಿನ ನಿವಾಸಿಗಳು ಅತ್ಯುತ್ತಮವಾದ ಮೋಕ್ಷವನ್ನು ಪಡೆಯುವರು.

೭೧. ಓ ಬ್ರಾಹ್ಮಣೋತ್ತಮರೇ, ಮಹಾದೇವನು ಪಾರ್ವತಿಗೆ ಹೇಳಿದ ಅವಿಮುಕ್ತಕ್ಷೇತ್ರದ ವಿಷಯವೆಲ್ಲವನ್ನೂ ನಿಮಗೆ ನಾನು ಹೇಳಿದೆನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವೂ ಸಹ ವಾರಾಣಸೀ ಕ್ಷೇತ್ರದ ಮಹಿಮೆಯನ್ನೇ ವಿವರಿಸುತ್ತದೆ.

ವ್ಯಾಸಮಹಾಮುನಿಗೆ ಅವಿಮುಕ್ತಕ್ಷೇತ್ರದಲ್ಲಿ ಆರು ತಿಂಗಳಕಾಲ ಭಿಕ್ಷೆಹುಟ್ಟದೆ ಹೋಯಿತು. ಅವನು ಕ್ಷುಧಾರ್ತನಾಗಿ ಸಿಟ್ಟಿನಿಂದ ಕ್ಷೇತ್ರಕ್ಕೇ ಶಾಪಕೊಡಲು ಸಿದ್ಧನಾದನು. ಆಗ ಪಾರ್ವತೀ ಪರಮೇಶ್ವರರು ಮನುಷ್ಯರೂಪದಿಂದ ಗೃಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸಿ, ಆ ಮುನಿಯನ್ನು ಕರೆದು ಷಡ್ರಸಾನ್ನದಿಂದ ತೃಪ್ತಿಪಡಿಸಿದರು. ಮಹರ್ಷಿಗೆ ಇವರ ನಿಜಸ್ವರೂಪವು ಗೊತ್ತಾಯಿತು. ಅವನು ನಮಸ್ಕರಿಸಿ ಆ ಕ್ಷೇತ್ರದಲ್ಲೇ ವಾಸಮಾಡಲು ಅಪ್ಪಣೆಬೇಡಿದನು. ಕೋಪಿಷ್ಠನಾದವನು ಅಲ್ಲಿ ವಾಸಮಾಡುವುದಕ್ಕೆ ಅರ್ಹನಲ್ಲವೆಂದು ಪರಮೇಶ್ವರನು ಹೇಳಲು, ವ್ಯಾಸಮುನಿ ದೇವದೇವನ ಅಪ್ಪಣೆಯನ್ನು ಬೇಡಿ ವಾರಾಣಸಿಯ ಪಕ್ಕದಲ್ಲಿ ನೆಲಸಿದನು.

ಅವಿಮುಕ್ತಕ್ಷೇತ್ರದ ರಕ್ಷಣೆಗಾಗಿ ಪರಮೇಶ್ವರನು ದಂಡನಾಯಕನನ್ನು ಗೊತ್ತುಮಾಡಿರುವನು. ಕ್ಷೇತ್ರವಾಸಕ್ಕೆ ಅನರ್ಹರಾದವರನ್ನು ಮೋಹಗೊಳಿಸಿ ಅವನು ಹೊರಹೊರಡಿಸುವನು. ಯಾತ್ರಿಕರು ಅವನನ್ನು ಮೊದಲು ಪೂಜಿಸಬೇಕು. ವಿಶ್ವೇಶ್ವರ, ಆನಂದವನ, ದಶಾಶ್ವಮೇಧ, ಲೋಲಾರ್ಕ, ಬಿಂದುಮಾಧವ ಮತ್ತು ಮಣಿಕರ್ಣಿಕೆಗಳೆಂಬ ಪಂಚತೀರ್ಥಗಳು ಅವಿಮುಕ್ತಕ್ಷೇತ್ರದಲ್ಲಿ ಸಾರಭೂತವಾದವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಅವಿಮುಕ್ತಮಾಹಾತ್ಮ್ಯವೆಂಬ<br>ನೂರ ಎಂಬತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಡಶೀತ್ಯಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಮಾಹಾತ್ಮ್ಯಮವಿಮುಕ್ತಸ್ಯ ಯಥಾವತ್ಕಥಿತಂ ತ್ವಯಾ ।
ಇದಾನೀಂ ನರ್ಮದಾಯಾಸ್ತು ಮಾಹಾತ್ಮ್ಯಂ ವದ ಸತ್ತಮ || ೧ ||

ಯತ್ರೋಂಕಾರಸ್ಯ ಮಾಹಾತ್ಮ್ಯಂ ಕಪಿಲಾಸಂಗಮಸ್ಯ ಚ ।
ಅಮರೇಶಸ್ಯ ಚೈವಾಽಽಹುರ್ಮಾಹಾತ್ಮ್ಯಂ ಪಾಪನಾಶನಂ || ೨ ||

ಕಥಂ ಪ್ರಲಯಕಾಲೇ ತು ನ ನಷ್ಟಾ ನರ್ಮದಾ ಪುರಾ ।
ಮಾರ್ಕಂಡೇಯಶ್ಚ ಭಗವಾನ್ನವಿನಷ್ಟಸ್ತದಾ ಕಿಲ ।
ತ್ವಯೋಕ್ತಂ ತದಿದಂ ಸರ್ವಂ ಪುನರ್ವಿಸ್ತರತೋ ವದ || ೩ ||

|| ಸೂತ ಉವಾಚ ||

ಏತದೇವ ಪುರಾ ಪೃಷ್ಟಃ ಪಾಂಡವೇನ ಮಹಾತ್ಮನಾ ।
ನರ್ಮದಾಯಾಸ್ತು ಮಾಹಾತ್ಮ್ಯಂ ಮಾರ್ಕಂಡೇಯೋ ಮಹಾಮುನಿಃ ||

---

೧. ಋಷಿಗಳು ಹೇಳಿದರು.—ಎಲೈ ಪೂಜ್ಯನೇ, ವಾರಾಣಸೀಕ್ಷೇತ್ರದ ಮಹಿಮೆಯನ್ನು ವಿವರವಾಗಿ ಹೇಳಿದೆ. ಈಗ ನರ್ಮದಾನದಿಯ ಮಾಹಾತ್ಮ್ಯವನ್ನು ತಿಳಿಸು.

೨. ಓಂಕಾರ, ಕಪಿಲಾಸಂಗಮ, ಮತ್ತು ಅಮರೇಶ ಇವುಗಳ ಮಾಹಾತ್ಮ್ಯವು ನರ್ಮದಾ ಮಾಹಾತ್ಮ್ಯ ಪ್ರಕರಣದಲ್ಲಿ ಬರುವುದಷ್ಟೆ! ಇವೆಲ್ಲವೂ ಪಾಪಪರಿಹಾರಕ ವಾದುವು.

೩. ಹಿಂದೆ ಪ್ರಲಯಕಾಲದಲ್ಲಿ ನರ್ಮದಾನದಿಯು ನಾಶವಾಗದಿದ್ದುದು ಹೇಗೆ? ಪೂಜ್ಯನಾದ ಮಾರ್ಕಂಡೇಯನೂ ಸಹ ಆಗ ನಷ್ಟವಾಗಲಿಲ್ಲವಷ್ಟೆ! ಇದನ್ನು ನೀನೇ ಹೇಳಿದ್ದೆ. ಮತ್ತೊಮ್ಮೆ ವಿಸ್ತಾರವಾಗಿ ತಿಳಿಸು.

೪-೫. ಸೂತಪೌರಾಣಿಕನು ಹೇಳಿದನು.—ಪೂರ್ವದಲ್ಲಿ ಮಾರ್ಕಂಡೇಯ ಮಹಾಮುನಿಯು ಘೋರವಾದ ತಪಸ್ಸನ್ನು ಮಾಡುತ್ತ ಅರಣ್ಯದಲ್ಲಿರಲು, ವನವಾಸ

ಉಗ್ರೇಣ ತಪಸಾ ಯುಕ್ತೋ ವನಸ್ಥೋ ವನವಾಸಿನಾ ।
ಪೃಷ್ಟಃ ಪೂರ್ವಾಂ ಮಹಾಗಾಥಾಂ ಧರ್ಮಪುತ್ರೇಣ ಧೀಮತಾ ॥ ೫ ॥

॥ ಯುಧಿಷ್ಠಿರ ಉವಾಚ ॥

ಶ್ರುತಾ ಮೇ ವಿವಿಧಾ ಧರ್ಮಾಸ್ತ್ವತ್ಪ್ರಸಾದಾದ್ದ್ವಿಜೋತ್ತಮ ।
ಭೂಯಶ್ಚ ಶ್ರೋತುಮಿಚ್ಛಾಮಿ ತನ್ಮೇ ಕಥಯ ಸುವ್ರತ ॥ ೬ ॥

ಕಥಮೇಷಾ ಮಹಾಪುಣ್ಯಾ ನದೀ ಸರ್ವತ್ರ ವಿಶ್ರುತಾ ।
ನರ್ಮದಾ ನಾಮ ವಿಖ್ಯಾತಾ ತನ್ಮೇ ಬ್ರೂಹಿ ಮಹಾಮುನೇ ॥ ೭ ॥

॥ ಮಾರ್ಕಂಡೇಯ ಉವಾಚ ॥

ನರ್ಮದಾ ಸರಿತಾಂ ಶ್ರೇಷ್ಠಾ ಸರ್ವಪಾಪಪ್ರಣಾಶಿನೀ ।
ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೮ ॥

---

ದಲ್ಲಿದ್ದ ಪ್ರಾಜ್ಞನಾದ ಧರ್ಮರಾಜನು ಇದೇ ನರ್ಮದಾಮಾಹಾತ್ಮ್ಯವನ್ನು, ಪ್ರಶ್ನಿಸಿದನು, ಅಷ್ಟೇ ಅಲ್ಲದೆ ಹಿಂದಿನಿಂದ ಬಳಕೆಗೆ ಬಂದಿದ್ದ ನರ್ಮದಾ ವಿಷಯಕವಾದ ಪ್ರಖ್ಯಾತವಾದ ಗೀತೆಯ ವಿಚಾರವನ್ನೂ ಕೇಳಿದನು.

೬. ಧರ್ಮರಾಜನು ಹೇಳಿದನು.—ಎಲೈ ಬ್ರಾಹ್ಮಣೋತ್ತಮನೇ, ನಿನ್ನಿಂದ ನಾನು ಬಗೆಬಗೆಯ ಧರ್ಮಗಳನ್ನು ಕೇಳಿದೆನು. ಇನ್ನೂ ಕೇಳಬೇಕೆಂದಿದ್ದೇನೆ. ಓ ಸುವ್ರತಾ, ಅದನ್ನು ನನಗೆ ಹೇಳು,

೭. ಮಹಾಪುಣ್ಯಕರವಾದ ಈ ನದಿಯು ಎಲ್ಲೆಲ್ಲೂ ಪ್ರಖ್ಯಾತಿಗೆ ಬಂದುದು ಹೇಗೆ ? ನರ್ಮದೆಯೆಂಬ ಪ್ರಸಿದ್ಧಿ ಹೇಗೆ ಬಂತು ? ಎಲೈ ಮಹರ್ಷೀ, ಅದನ್ನು ನನಗೆ ಹೇಳು.

೮. ಮಾರ್ಕಂಡೇಯಮುನಿ ಹೇಳಿದನು.—ನರ್ಮದೆಯು ನದಿಗಳಲ್ಲೆಲ್ಲ ಶ್ರೇಷ್ಠವಾದುದು. ಸಕಲ ಪಾಪಗಳನ್ನೂ ಪರಿಹರಿಸತಕ್ಕದ್ದು. ಅದು ಸ್ಥಾವರ ಜಂಗಮರೂಪವಾದ ಸಕಲ ಜಂತುಗಳನ್ನೂ ಉದ್ಧಾರಮಾಡುವುದು.

ನರ್ಮದಾಯಾಸ್ತು ಮಾಹಾತ್ಮ್ಯಂ ಪುರಾಣೇ ಯನ್ಮಯಾ ಶ್ರುತಂ ।
ತದೇತದ್ಧಿ ಮಹಾರಾಜ ತತ್ಸರ್ವಂ ಕಥಯಾಮಿ ತೇ ॥ ೯ ॥

ಪುಣ್ಯಾ ಕನಖಲೇ ಗಂಗಾ ಕುರುಕ್ಷೇತ್ರೇ ಸರಸ್ವತೀ ।
ಗ್ರಾಮೇ ವಾ ಯದಿ ವಾಽರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ॥೧೦॥

ತ್ರಿಭಿಃ ಸಾರಸ್ವತಂ ತೋಯಂ ಸಪ್ತಾಹೇನ ತು ಯಾಮುನಂ ।
ಸದ್ಯಃ ಪುನಾತಿ ಗಾಂಗೇಯಂ ದರ್ಶನಾದೇವ ನಾರ್ಮದಂ ॥೧೧॥

ಕಲಿಂಗದೇಶೇ ಪಶ್ಚಾರ್ಧೇ ಪರ್ವತೇಽಮರಕಂಟಕೇ ।
ಪುಣ್ಯಾ ಚ ತ್ರಿಷು ಲೋಕೇಷು ರಮಣೀಯಾ ಮನೋರಮಾ ॥೧೨॥

ಸದೇವಾಸುರಗಂಧರ್ವಾ ಋಷಯಶ್ಚ ತಪೋಧನಾಃ ।
ತಪಸ್ತಪ್ತ್ವಾ ಮಹಾರಾಜ ಸಿದ್ಧಿಂ ಚ ಪರಮಾಂ ಗತಾಃ ॥೧೩॥

---

೯. ಓ ಮಹಾರಾಜಾ, ಪುರಾಣದಲ್ಲಿ ಕೇಳಿರುವ ನರ್ಮದಾನದಿಯ ಮಾಹಾತ್ಮ್ಯವೆಲ್ಲವನ್ನೂ ನಿನಗೆ ಹೇಳುವೆನು.

೧೦. ಗಂಗಾನದಿಯು ಕನಖಲಕ್ಷೇತ್ರದಲ್ಲಿ ಪುಣ್ಯಕರವಾದುದು. ಸರಸ್ವತಿಯು ಕುರುಕ್ಷೇತ್ರದಲ್ಲಿ ಪಾವನವೆನಿಸಿರುವುದು. ನರ್ಮದಾನದಿಯಾದರೋ ಗ್ರಾಮದಲ್ಲಾಗಲಿ ಅರಣ್ಯದಲ್ಲಾಗಲಿ ಎಲ್ಲೆಡೆಯಲ್ಲೂ ಪವಿತ್ರವಾಗಿರುವುದು.

೧೧. ಸರಸ್ವತೀನದಿಯ ಜಲವು ಮೂರುದಿನಗಳಲ್ಲೂ, ಯಮುನಾಸಲಿಲವು ಏಳುದಿನಗಳಲ್ಲಿಯೂ, ಗಂಗೋದಕವು ತತ್‌ಕ್ಷಣದಲ್ಲೂ ಮನುಷ್ಯನನ್ನು ಪರಿಶುದ್ಧಗೊಳಿಸುವುವು. ನರ್ಮದಾಜಲವಾದರೋ ದರ್ಶನ ಮಾತ್ರದಿಂದಲೇ ಶುದ್ಧಿಮಾಡುವುದು.

೧೨. ನರ್ಮದಾನದಿಯು ಮೂರುಲೋಕಗಳಲ್ಲಿಯೂ ರಮಣೀಯವೆಂದೂ ಮನೋಹರವೆಂದೂ ಪ್ರಖ್ಯಾತವಾಗಿದೆ. ಕಲಿಂಗದೇಶದ ಪಶ್ಚಿಮಾರ್ಧದಲ್ಲೂ, ಅಮರಕಂಟಕ ಪರ್ವತದಲ್ಲೂ ಅದು ಇನ್ನೂ ಅತಿಶಯವಾಗಿ ಪುಣ್ಯಕರವೆನಿಸಿದೆ.

೧೩. ಓ ಮಹಾರಾಜಾ, ದೇವತೆಗಳು, ಅಸುರರು, ಗಂಧರ್ವರು, ತಪಸ್ಸನ್ನೇ ದ್ರವ್ಯವೆಂದೆಣಿಸಿರುವ ಋಷಿಗಳು ಇವರೆಲ್ಲರೂ ತಪಸ್ಸನ್ನು ಮಾಡಿ ಉತ್ತಮವಾದ ಸಿದ್ಧಿಯನ್ನು ಪಡೆದರು.

ತತ್ರ ಸ್ನಾತ್ವಾ ನರೋ ರಾಜನ್ನಿಯಮಸ್ಥೋ ಜಿತೇಂದ್ರಿಯಃ ।
ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಂ ॥೧೪॥

ಜಲೇಶ್ವರೇ ನರಃ ಸ್ನಾತ್ವಾ ಪಿಂಡಂ ದತ್ವಾ ಯಥಾವಿಧಿ ।
ಪಿತರಸ್ತಸ್ಯ ತೃಪ್ಯಂತಿ ಯಾವದಾಭೂತಸಂಪ್ಲವಂ ॥೧೫॥

ಪರ್ವತಸ್ಯ ಸಮಂತಾತ್ತು ರುದ್ರಕೋಟಿಃ ಪ್ರತಿಷ್ಠಿತಾ ।
ಸ್ನಾತ್ವಾ ಯಃ ಕುರುತೇ ತತ್ರ ಗಂಧಮಾಲ್ಯಾನುಲೇಪನೈಃ ॥೧೬॥

ಪ್ರೀತಸ್ತಸ್ಯ ಭವೇಚ್ಛರ್ವೋ ರುದ್ರಕೋಟಿರ್ನ ಸಂಶಯಃ ।
ಪಶ್ಚಿಮೇ ಪರ್ವತಸ್ಯಾಂತೇ ಸ್ವಯಂ ದೇವೋ ಮಹೇಶ್ವರಃ ॥೧೭॥

ತತ್ರ ಸ್ನಾತ್ವಾ ಶುಚಿರ್ಭೂತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ ।
ಪಿತೃಕಾರ್ಯಂ ಚ ಕುರ್ವೀತ ವಿಧಿವನ್ನಿಯತೇಂದ್ರಿಯಃ ॥೧೮॥

---

೧೪. ರಾಜಾ, ಅಲ್ಲಿ ನಿಯಮದಿಂದ ಸ್ನಾನಮಾಡಿ, ಜಿತೇಂದ್ರಿಯನಾಗಿ ಒಂದು ರಾತ್ರಿ ಉಪವಾಸವಿರುವ ಮನುಷ್ಯನು ನೂರು ಕುಲಗಳನ್ನು ಉದ್ಧರಿಸುವನು.

೧೫. ಜಲೇಶ್ವರತೀರ್ಥದಲ್ಲಿ ಸ್ನಾನಮಾಡಿ ಶಾಸ್ತ್ರೋಕ್ತವಾಗಿ ಪಿಂಡವನ್ನಿತ್ತರೆ ಪಿತೃಗಳಿಗೆ ಮಹಾಪ್ರಳಯದ ವರೆಗೂ ತೃಪ್ತಿಯುಂಟಾಗುತ್ತದೆ.

೧೬. ಅಮರಕಂಟಕಪರ್ವತದ ಸುತ್ತಲೂ ಕೋಟಿಗಟ್ಟಲೆ ರುದ್ರಮೂರ್ತಿಗಳನ್ನು ಪ್ರತಿಷ್ಠಿಸಿರುವರು. ಅಲ್ಲಿ ಸ್ನಾನಮಾಡಿ ಗಂಧಪುಷ್ಪಾದಿಗಳಿಂದ ಪೂಜಿಸಿದರೆ ರುದ್ರಕೋಟಿರೂಪನಾದ ಪರಮೇಶ್ವರನು ತೃಪ್ತನಾಗುವನು ; ಸಂಶಯವಿಲ್ಲ.

೧೭-೧೮. ಅಮರಕಂಟಕಪರ್ವತದ ಪಶ್ಚಿಮಭಾಗದ ತುದಿಯಲ್ಲಿ ಸಾಕ್ಷಾನ್ಮಹೇಶ್ವರನೇ ನೆಲಸಿರುವನು. ಅಲ್ಲಿ ಸ್ನಾನಮಾಡಿ, ಶುಚಿಯಾಗಿ ಬ್ರಹ್ಮಚರ್ಯದಿಂದ ಜಿತೇಂದ್ರಿಯನಾಗಿ, ಪಿತೃಕಾರ್ಯಗಳನ್ನು ಶಾಸ್ತ್ರಕ್ರಮದಂತೆ ಮಾಡಬೇಕು.

ತಿಲೋದಕೇನ ಯತ್ನೇನ ತರ್ಪಯೇತ್ಪಿತೃದೇವತಾಃ ।
ಆಸಪ್ತಮಂ ಕುಲಂ ತಸ್ಯ ಸ್ವರ್ಗೇ ಮೋದೇತ ಪಾಂಡವ ॥೧೯॥

ಷಷ್ಟಿರ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಅಪ್ಸರೋಗಣಸಂಕೀರ್ಣೇ ಸಿದ್ಧಚಾರಣಸೇವಿತೇ ॥೨೦॥

ದಿವ್ಯಗಂಧಾನುಲಿಪ್ತಶ್ಚ ದಿವ್ಯಾಲಂಕಾರಭೂಷಿತಃ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಾಯತೇ ವಿಪುಲೇ ಕುಲೇ ॥೨೧॥

ಧನವಾ ದಾನಶೀಲಶ್ಚ ಧಾರ್ಮಿಕಶ್ಚೈವ ಜಾಯತೇ ।
ಪುನಃ ಸ್ಮರತಿ ತತ್ತೀರ್ಥಂ ಗಮನಂ ತತ್ರ ರೋಚತೇ ॥೨೨॥

ಕುಲಾನಿ ತಾರಯೇತ್ಸಪ್ತ ರುದ್ರಲೋಕಂ ಸ ಗಚ್ಛತಿ ।
ಯೋಜನಾನಾಂ ಶತಂ ಸಾಗ್ರಂ ಶ್ರೂಯತೇ ಸರಿದುತ್ತಮಾ ॥೨೩॥

---

೧೯. ಓ ಧರ್ಮರಾಜಾ, ಅಲ್ಲೇ ಪಿತೃದೇವತೆಗಳನ್ನುದ್ದೇಶಿಸಿ ತಿಲತರ್ಪಣ ವನ್ನು ಕೊಡಬೇಕು. ಅದರಿಂದ ಏಳುತಲೆಯುವರೆಗೆ ಆತನ ಕುಲದವರು ಸ್ವರ್ಗದಲ್ಲಿ ಸುಖಿಸುವರು.

೨೦. ಅಪ್ಸರಸ್ತ್ರೀಯರಿಂದ ಪೂರ್ಣವಾದ, ಸಿದ್ಧಚಾರಣದಿಂದ ಸೇವಿತವಾದ ಸ್ವರ್ಗಲೋಕದಲ್ಲಿ ದಿವ್ಯಗಂಧವನ್ನು ಧರಿಸಿ, ದಿವ್ಯಾಲಂಕಾರಶೋಭಿತನಾಗಿ ಅರವತ್ತು ಸಾವಿರ ವರ್ಷಗಳ ಕಾಲ ಮನ್ನಣೆಯನ್ನು ಪಡೆಯುವನು.

೨೧-೨೨. ಬಳಿಕ ಸ್ವರ್ಗದಿಂದ ಜಾರಿಬಿದ್ದು ಉನ್ನತವಾದ ವಂಶದಲ್ಲಿ ಹುಟ್ಟುತ್ತಾನೆ. ಧನವಂತನೂ, ದಾನಶೀಲನೂ, ಧಾರ್ಮಿಕನೂ ಆಗುತ್ತಾನೆ. ಮತ್ತೆ ಆವನಿಗೆ ಆ ತೀರ್ಥದ ನೆನಪು ಬಂದು ಅಲ್ಲಿಗೆ ಹೋಗಬೇಕೆಂದೆನಿಸುತ್ತದೆ. ಅವನು ವಿಳು ತಲೆಗಳ ವರೆಗೆ ತನ್ನ ವಂಶವನ್ನು ಉದ್ಧಾರಮಾಡುವನು; ಮತ್ತು ರುದ್ರಲೋಕ ವನ್ನೈದುವನು.

೨೩. ಈ ಶ್ರೇಷ್ಠವಾದ ನದಿಯು ಸಂಪೂರ್ಣವಾಗಿ ಒಂದುನೂರು ಯೋಜನ ಉದ್ದವಿದೆಯೆಂದು ಹೇಳುತ್ತಾರೆ. ರಾಜೇಂದ್ರಾ, ಇದರ ವಿಸ್ತಾರವಾದರೋ ಎರಡು ಯೋಜನವಿರುವುದು.

ವಿಸ್ತಾರೇಣ ತು ರಾಜೇಂದ್ರ ಯೋಜನದ್ವಯಮಾಯತಾ ।
ಷಷ್ಟಿಸ್ತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥೈವ ಚ ॥೨೪॥

ಸರ್ವಂ ತಸ್ಯ ಸಮಂತಾತ್ತು ತಿಷ್ಠತ್ಯಮರಕಂಟಕೇ ।
ಬ್ರಹ್ಮಚಾರೀ ಶುಚಿರ್ಭೂತ್ವಾ ಜಿತಕ್ರೋಧೋ ಜಿತೇಂದ್ರಿಯಃ ॥೨೫॥

ಸರ್ವಹಿಂಸಾನಿವೃತ್ತಸ್ತು ಸರ್ವಭೂತಹಿತೇ ರತಃ ।
ಏವಂ ಸರ್ವಸಮಾಚಾರೋ ಯಸ್ತು ಪ್ರಾಣಾನ್ ಪರಿತ್ಯಜೇತ್ ॥೨೬॥

ತಸ್ಯ ಪುಣ್ಯಫಲಂ ರಾಜಞ್ಶೃಣುಷ್ವಾವಹಿತೋ ಮಮ ।
ಶತಂ ವರ್ಷಸಹಸ್ರಾಣಾಂ ಸ್ವರ್ಗೇ ಮೋದೇತ ಪಾಂಡವ ॥೨೭॥

ಅಪ್ಸರೋಗಣಸಂಕೀರ್ಣೇ ಸಿದ್ಧಚಾರಣಸೇವಿತೇ ।
ದಿವ್ಯಗಂಧಾನುಲಿಪ್ತಶ್ಚ ದಿವ್ಯಪುಷ್ಪೋಪಶೋಭಿತಃ ॥೨೮॥

---

೨೪. ಅಮರಕಂಟಕಪರ್ವತದ ಸುತ್ತಲೂ ಅರವತ್ತುಕೋಟಿ ಅರವತ್ತು ಸಾವಿರ ಪುಣ್ಯತೀರ್ಥಗಳಿವೆ.

೨೫-೨೬. ಓ ರಾಜಾ, ಬ್ರಹ್ಮಚರ್ಯದಿಂದ ಪರಿಶುದ್ಧನಾಗಿ, ಕೋಪವನ್ನು ಬಿಟ್ಟು, ಇಂದ್ರಿಯಗಳನ್ನು ನಿಗ್ರಹಿಸಿ, ಎಲ್ಲ ಬಗೆಯ ಹಿಂಸಾಕಾರ್ಯಗಳಿಂದಲೂ ದೂರನಾಗಿ, ಸಕಲಜಂತುಗಳ ಹಿತದಲ್ಲಿ ಆಸಕ್ತನಾಗಿ, ಉತ್ತಮವಾದ ನಡತೆಯಿಂದ ಕೂಡಿ, ಯಾವನು ಇಲ್ಲಿ ಪ್ರಾಣಗಳನ್ನು ಬಿಡುತ್ತಾನೋ ಆತನಿಗೆ ಬರುವ ಪುಣ್ಯ ಫಲವನ್ನು ಹೇಳುವೆನು. ಗಮನದಿಂದ ಕೇಳು.

೨೭-೨೮. ಓ ಧರ್ಮಪುತ್ರಾ, ಅಪ್ಸರಸ್ತ್ರೀಯರು ಕೂಡಿರಲು, ಸಿದ್ಧರೂ ಚಾರಣರೂ ಸೇವಿಸುತ್ತಿರಲು, ದಿವ್ಯಗಂಧವನ್ನು ಲೇಪಿಸಿಕೊಂಡು, ದಿವ್ಯವಾದ ಪುಷ್ಪಮಾಲೆಗಳಿಂದಲಂಕೃತನಾಗಿ ಆತನು ಒಂದು ಲಕ್ಷ ವರ್ಷಗಳ ಕಾಲ ಸ್ವರ್ಗದಲ್ಲಿ ಸುಖಪಡುವನು.

ಕ್ರೀಡತೇ ದೇವಲೋಕಸ್ಥೋ ದೈವತೈಃ ಸಹ ಮೋದತೇ ।
ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ವೀರ್ಯವಾನ್ ॥೨೯॥

ಗೃಹಂ ತು ಲಭತೇ ವೈ ಸ ನಾನಾರತ್ನವಿಭೂಷಿತಂ ।
ಸ್ತಂಭೈರ್ಮಣಿಮಯೈರ್ದಿವ್ಯೈರ್ವಜ್ರವೈಡೂರ್ಯಭೂಷಿತೈಃ ॥೩೦॥

ಆಲೇಖ್ಯಸಹಿತಂ ದಿವ್ಯಂ ದಾಸೀದಾಸಸಮನ್ವಿತಂ ।
ಮತ್ತಮಾತಂಗಶಬ್ದೈಶ್ಚ ಹಯಾನಾಂ ಹ್ರೇಷಿತೇನ ಚ ॥೩೧॥

ಕ್ಷುಭ್ಯತೇ ತಸ್ಯ ತದ್ದ್ವಾರಮಿಂದ್ರಸ್ಯ ಭವನಂ ಯಥಾ ।
ರಾಜರಾಜೇಶ್ವರಃ ಶ್ರೀಮಾನ್ ಸರ್ವಸ್ತ್ರೀಜನವಲ್ಲಭಃ ॥೩೨॥

ತಸ್ಮಿನ್ ಗೃಹೇ ಉಷಿತ್ವಾ ತು ಕ್ರೀಡಾಭೋಗಸಮನ್ವಿತೇ ।
ಜೀವೇದ್ವರ್ಷಶತಂ ಸಾಗ್ರಂ ಸರ್ವರೋಗವಿವರ್ಜಿತಃ ॥೩೩॥

---

೨೯. ದೇವಲೋಕದಲ್ಲಿದ್ದುಕೊಂಡು ಅವನು ದೇವತೆಗಳೊಡನೆ ಕ್ರೀಡಿಸುತ್ತ ಆನಂದಿಸುವನು. ಬಳಿಕ ಸ್ವರ್ಗದಿಂದ ಭೂಮಿಗೆ ಜಾರಿಬಂದು ಪ್ರತಾಪಶಾಲಿಯಾದ ರಾಜನಾಗುವನು.

೩೦-೩೧. ಅವನು ಬಗೆಬಗೆಯ ರತ್ನಗಳಿಂದಲಂಕೃತವಾದ ದಿವ್ಯಭವನದಲ್ಲಿ ವಾಸಿಸುವನು. ಅದರ ಕಂಬಗಳು ದಿವ್ಯರತ್ನಮಯವಾದುವು. ವಜ್ರವೈಡೂರ್ಯಗಳಿಂದ ಶೋಭಿತವಾದುವು. ಅದು ಚಿತ್ರಪಟಗಳಿಂದ ವಿರಾಜಿಸುವುದು. ದಾಸದಾಸೀಜನರು ಅಲ್ಲಿ ತುಂಬಿರುವರು. ಮದಿಸಿದ ಆನೆಗಳು ಘೀಂಕರಿಸುವುವು. ಕುದುರೆಗಳು ಕೆನೆಯುತ್ತಿರುವುವು.

೩೨-೩೩. ಅವನ ಮನೆಯ ಬಾಗಿಲು ಇಂದ್ರನ ಅರಮನೆಯ ಬಾಗಿಲಿನಂತೆ ಜನರಿಂದ ಕಿಕ್ಕಿರಿಯುತ್ತಿರುವುದು. ಎಲ್ಲರಾಜರ ಅಧೀಶ್ವರನಾಗಿ, ಶ್ರೀಮಂತನಾಗಿ, ಸಕಲಸ್ತ್ರೀಜನರ ವಲ್ಲಭನಾಗಿ ಕ್ರೀಡಾಸಾಮಗ್ರಿಗಳಿಂದ ಸಮೃದ್ಧವಾದ ಆ ಮನೆಯಲ್ಲಿ ಅವನು ವಾಸಮಾಡುವನು. ಯಾವರೋಗವೂ ಇಲ್ಲದೆ ಪೂರ್ಣವಾಗಿ ನೂರು ವರ್ಷಗಳಕಾಲ ಜೀವಿಸುವನು.

ಏವಂ ಭೋಗೋ ಭವೇತ್ತಸ್ಯ ಯೋ ಮೃತೋಽಮರಕಂಟಕೇ ।
ಅಗ್ನೌ ವಿಷಜಲೇ ವಾಽಪಿ ತಥಾ ಚೈವ ಹ್ಯನಾಶಕೇ ||೩೪||

ಅನಿವರ್ತಿಕಾ ಗತಿಸ್ತಸ್ಯ ಪವನಸ್ಯಾಂಬರೇ ಯಥಾ ।
ಪಾತನಂ ಕುರುತೇ ಯಸ್ತು ಅಮರೇಶೇ ನರಾಧಿಪ ||೩೫||

ಕನ್ಯಾನಾಂ ತ್ರಿಸಹಸ್ರಾಣಿ ಏಕೈಕಸ್ಯಾಪಿ ಚಾಪರೇ ।
ತಿಷ್ಠಂತಿ ತಸ್ಯ ಭವನೇ ಪ್ರೇಷಣಂ ಪ್ರಾರ್ಥಯಂತಿ ಚ ।
ದಿವ್ಯಭೋಗೈಃ ಸುಸಂಪನ್ನಃ ಕ್ರೀಡತೇ ಕಾಲಮಕ್ಷಯಂ ||೩೬||

ಪೃಥಿವ್ಯಾಮಾಸಮುದ್ರಾಯಾಮೀದೃಶೋ ನೈವ ಜಾಯತೇ ।
ಯಾದೃಶೋಽಯಂ ನೃಪಶ್ರೇಷ್ಠ ಪರ್ವತೇಽಮರಕಂಟಕೇ ||೩೭||

ತಾವತ್ತೀರ್ಥಂ ತು ವಿಜ್ಞೇಯಂ ಪರ್ವತಸ್ಯ ತು ಪಶ್ಚಿಮೇ ।
ಹ್ರದೋ ಜಲೇಶ್ವರೋ ನಾಮ ತ್ರಿಷು ಲೋಕೇಷು ವಿಶ್ರುತಃ ||೩೮||

---

೩೪. ಅಮರಕಂಟಕದಲ್ಲಿ ಮೃತನಾದವನಿಗೆ ದೊರೆಯುವ ಭೋಗವು ಈ ತೆರನಾದುದು. ಬೆಂಕಿಯಲ್ಲಿ ಬಿದ್ದೋ, ವಿಷಜಲವನ್ನು ಕುಡಿದೋ, ಉಪವಾಸವನ್ನು ಮಾಡಿಯೋ ಯಾವನು ಸಾಯುತ್ತಾನೋ ಅವನಿಗೆ ಆಕಾಶದಲ್ಲಿ ವಾಯುವಿಗಿರುವಂತೆ ಪುನರಾವೃತ್ತಿರಹಿತವಾದ ಸದ್ಗತಿ ಲಭಿಸುವುದು.

೩೫-೩೬. ಓ ಧರ್ಮರಾಜಾ, ಅಮರೇಶತೀರ್ಥದಲ್ಲಿ ಬಿದ್ದು ಪ್ರಾಣವನ್ನು ಬಿಡುವ ಒಬ್ಬೊಬ್ಬನ ವಾಸಸ್ಥಾನದಲ್ಲೂ ಮೂರುಸಾವಿರ ಕನ್ಯೆಯರು ಸೇವೆಮಾಡುತ್ತ ಅಪ್ಪಣೆಗಾಗಿ ಕಾದಿರುತ್ತಾರೆ. ಅವನು ಸ್ವರ್ಗಭೋಗಗಳನ್ನು ಅನುಭವಿಸುತ್ತ ಅನಂತಕಾಲ ಸುಖವಾಗಿರುವನು.

೩೭. ಎಲೈ ರಾಜೋತ್ತಮಾ, ಅಮರಕಂಟಕಪರ್ವತದಲ್ಲಿರುವಂತಹ ಉತ್ತಮತೀರ್ಥವು ಸಮುದ್ರದವರೆಗಿನ ಈ ಭೂಮಿಯಲ್ಲಿ ಮತ್ತೆಲ್ಲಿಯೂ ಖಂಡಿತವಾಗಿ ಗೋಚರಿಸದು.

೩೮-೩೯. ಪರ್ವತದ ಪಶ್ಚಿಮಭಾಗದಲ್ಲಿಯೂ ಸಹ ಅಷ್ಟೇ ಸಂಖ್ಯೆಯ ತೀರ್ಥಗಳಿವೆಯೆಂದು ತಿಳಿಯಬೇಕು. ಜಲೇಶ್ವರವೆಂಬ ಮಡು ಮೂರು ಲೋಕಗಳಲ್ಲಿಯೂ

ತತ್ರ ಪಿಂಡಪ್ರದಾನೇನ ಸಂಧ್ಯೋಪಾಸನಕರ್ಮಣಾ ।
ಪಿತರೋ ದಶವರ್ಷಾಣಿ ತರ್ಪಿತಾಸ್ತು ಭವಂತಿ ವೈ ॥೩೯॥

ದಕ್ಷಿಣೇ ನರ್ಮದಾಕೂಲೇ ಕಪಿಲೇತಿ ಮಹಾನದೀ ।
ಸಕಲಾರ್ಜುನಸಂಛನ್ನಾ ನಾತಿದೂರೇ ವ್ಯವಸ್ಥಿತಾ ॥೪೦॥

ಸಾಪಿ ಪುಣ್ಯಾ ಮಹಾಭಾಗಾ ತ್ರಿಷು ಲೋಕೇಷು ವಿಶ್ರುತಾ ।
ತತ್ರ ಕೋಟಿಶತಂ ಸಾಗ್ರಂ ತೀರ್ಥಾನಾಂ ತು ಯುಧಿಷ್ಠಿರ ॥೪೧॥

ಪುರಾಣೇ ಶ್ರೂಯತೇ ರಾಜನ್ ಸರ್ವಂ ಕೋಟಿಗುಣಂ ಭವೇತ್ ।
ತಸ್ಯಾಸ್ತೀರೇ ತು ಯೇ ವೃಕ್ಷಾಃ ಪತಿತಾಃ ಕಾಲಪರ್ಯಯಾತ್ ॥೪೨॥

ನರ್ಮದಾತೋಯಸಂಸ್ಪೃಷ್ಟಾಸ್ತೇಽಪಿ ಯಾಂತಿ ಪರಾಂ ಗತಿಂ ।
ದ್ವಿತೀಯಾ ತು ಮಹಾಭಾಗಾ ವಿಶಲ್ಯಕರಣೀ ಶುಭಾ ॥೪೩॥

---

ಪ್ರಸಿದ್ಧವಾಗಿದೆ. ಅಲ್ಲಿ ಪಿಂಡಪ್ರದಾನಮಾಡಿದರೂ, ಸಂಧ್ಯಾವಂದನಾದಿಕರ್ಮ ವನ್ನು ಮಾಡಿದರೂ ಪಿತೃಗಳಿಗೆ ಹತ್ತು ವರ್ಷಗಳ ಕಾಲ ತೃಪ್ತಿಯಾಗುವದು.

೪೦. ನರ್ಮದಾನದಿಯ ಬಲದಡದಲ್ಲಿ ಸಮೀಪದಲ್ಲಿಯೇ ಕಪಿಲೆಯೆಂಬ ಶ್ರೇಷ್ಠವಾದ ನದಿಯುಂಟು. ಎರಡುಪಾರ್ಶ್ವಗಳಲ್ಲಿಯೂ ಸಾಲವೃಕ್ಷಗಳು ಬೆಳೆದು ಕೊಂಡು ಆ ನದಿಯನ್ನು ಮುಚ್ಚಿರುವುವು.

೪೧. ಮಹಾಮಹಿಮೆಯುಳ್ಳ ಆ ನದಿಯೂ ಕೂಡ ಪುಣ್ಯಕರವಾದುದು. ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದುದು. ಎಲೈ ಯುಧಿಷ್ಠಿರಾ, ಅಲ್ಲಿ ಒಂದು ನೂರುಕೋಟಿಗಿಂತ ಹೆಚ್ಚುಸಂಖ್ಯೆಯ ಪುಣ್ಯತೀರ್ಥಗಳಿವೆಯೆಂದು ಪುರಾಣದಲ್ಲಿ ಹೇಳಿದೆ. ಅವುಗಳ ಗುಣವೂ ಕೋಟಿಪಾಲು ವಿಶೇಷವಾಗಿದೆ.

೪೨. ಅದರ ದಡದಲ್ಲಿರುವ ಮರಗಳೂ ಕೂಡ ಕಾಲವಶದಿಂದ ಕೆಳಗೆ ಬಿದ್ದು ನರ್ಮದಾನದಿಯ ಜಲದ ಸಂಪರ್ಕದಿಂದ ಸದ್ಗತಿಯನ್ನು ಹೊಂದುತ್ತವೆ.

೪೩. ಅತಿಶಯವಾದ ಪ್ರಭಾವವುಳ್ಳ, ಶುಭಮಯವಾದ ವಿಶಲ್ಯಕರಣೀ ತೀರ್ಥವು ಎರಡನೆಯದು. ಮನುಷ್ಯನು ಅಲ್ಲಿ ಸ್ನಾನಮಾಡಿದ ತತ್‌ಕ್ಷಣವೇ ನೋವಿನಿಂದ ಪಾರಾಗುವನು.

ತತ್ರ ತೀರ್ಥೇ ನರಃ ಸ್ನಾತ್ವಾ ವಿಶಲ್ಯೋ ಭವತಿ ಕ್ಷಣಾತ್ ।
ತತ್ರ ದೇವಗಣಾಃ ಸರ್ವೇ ಸಕಿನ್ನರಮಹೋರಗಾಃ ॥೪೪॥

ಯಕ್ಷರಾಕ್ಷಸಗಂಧರ್ವಾ ಋಷಯಶ್ಚ ತಪೋಧನಾಃ ।
ಸರ್ವೇ ಸಮಾಗತಾಸ್ತತ್ರ ಪರ್ವತೇಽಮರಕಂಟಕೇ ॥೪೫॥

ತೈಶ್ಚ ಸರ್ವೈಃ ಸಮಾಗಮ್ಯ ಮುನಿಭಿಶ್ಚ ತಪೋಧನೈಃ ।
ನರ್ಮದಾಮಾಶ್ರಿತಾ ಪುಣ್ಯಾ ವಿಶಲ್ಯಾ ನಾಮ ನಾಮತಃ ॥೪೬॥

ಉತ್ಪಾದಿತಾ ಮಹಾಭಾಗಾ ಸರ್ವಪಾಪಪ್ರಣಾಶಿನೀ ।
ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಚಾರೀ ಜಿತೇಂದ್ರಿಯಃ ॥೪೭॥

ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಂ ।
ಕಪಿಲಾ ಚ ವಿಶಲ್ಯಾ ಚ ಶ್ರೂಯತೇ ರಾಜಸತ್ತಮ ॥೪೮॥

ಅವತೀರ್ಣಾ ಮಹಾಪುಣ್ಯಾ ಮನುಷ್ಯಾಣಾಂ ಹಿತಾರ್ಥತಃ ।
ತತ್ರ ಸ್ನಾತ್ವಾ ನರೋ ರಾಜನ್ನಶ್ವಮೇಧಫಲಂ ಲಭೇತ್ ॥೪೯॥

---

೪೪-೪೫. ಅಮರಕಂಟಕಪರ್ವತದಲ್ಲಿರುವ ಆ ಕ್ಷೇತ್ರಕ್ಕೆ ದೇವಗಣಗಳು, ಕಿನ್ನರರು, ಮಹಾಸರ್ಪಗಳು, ಯಕ್ಷರು, ರಾಕ್ಷಸರು, ಗಂಧರ್ವರು, ತಪೋಧನರೆನಿಸಿದ ಋಷಿಗಳು ಎಲ್ಲರೂ ಬಂದು ಸೇರಿದರು.

೪೬. ತಪೋನಿಷ್ಠರಾದ ಆ ಎಲ್ಲ ಮುನಿಗಳೂ ಅಲ್ಲಿ ಬಂದು ಸೇರಿ ನರ್ಮದಾನದಿಯನ್ನು ಆಶ್ರಯಿಸಿರುವ ವಿಶಲ್ಯೆಯೆಂಬ ಆ ಪುಣ್ಯತೀರ್ಥವನ್ನು ಏರ್ಪಡಿಸಿದರು. ಮಹಾಪ್ರಭಾವವುಳ್ಳ ಆ ತೀರ್ಥವು ಸಕಲಪಾಪಗಳನ್ನೂ ಕಳೆಯುವುದು.

೪೭. ರಾಜಾ, ಮನುಷ್ಯನು ಅಲ್ಲಿ ಸ್ನಾನಮಾಡಿ ಬ್ರಹ್ಮಚಾರಿಯೂ ಜಿತೇಂದ್ರಿಯನೂ ಆಗಿ ಒಂದು ರಾತ್ರಿ ಉಪವಾಸವಿದ್ದರೆ ಒಂದು ನೂರು ಕುಲಗಳು ಅವನಿಂದ ಉದ್ಧಾರವಾಗುವುವು.

೪೮-೪೯. ಕಪಿಲೆ ಮತ್ತು ವಿಶಲ್ಯೆಯೆಂಬ ಎರಡು ಮಹಾಪುಣ್ಯತೀರ್ಥಗಳೂ ಮನುಷ್ಯರ ಹಿತಕ್ಕೋಸ್ಕರ ಉತ್ಪನ್ನವಾದುವೆಂದು ಪುರಾಣಗಳಲ್ಲಿ ಹೇಳಿದೆ. ಎಲೈ ಭೂಪಾಲಕಾ, ಅಲ್ಲಿ ಸ್ನಾನಮಾಡಿದ ಮನುಷ್ಯನಿಗೆ ಅಶ್ವಮೇಧದ ಫಲವು ಬರುತ್ತದೆ.

ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ಸ ಗಚ್ಛತಿ ॥೫೦॥

ನರ್ಮದಾಯಾಸ್ತು ರಾಜೇಂದ್ರ ಪುರಾಣೇ ಯನ್ಮಯಾ ಶ್ರುತಂ ।
ಯತ್ರ ಯತ್ರ ನರಃ ಸ್ನಾತ್ವಾ ಚಾಶ್ವಮೇಧಫಲಂ ಲಭೇತ್ ॥೫೧॥

ಯೇ ವಸಂತ್ಯುತ್ತರೇ ಕೂಲೇ ರುದ್ರಲೋಕೇ ವಸಂತಿ ತೇ ।
ಸರಸ್ವತ್ಯಾಂ ಚ ಗಂಗಾಯಾಂ ನರ್ಮದಾಯಾಂ ಯುಧಿಷ್ಠಿರ ॥೫೨॥

ಸಮಂ ಸ್ನಾನಂ ಚ ದಾನಂ ಚ ಯಥಾ ಮೇ ಶಂಕರೋಽಬ್ರವೀತ್ ।
ಪರಿತ್ಯಜತಿ ಯಃ ಪ್ರಾಣಾನ್ ಪರ್ವತೇಽಮರಕಂಟಕೇ ॥೫೩॥

ವರ್ಷಕೋಟಿಶತಂ ಸಾಗ್ರಂ ರುದ್ರಲೋಕೇ ಮಹೀಯತೇ ।
ನರ್ಮದಾಯಾ ಜಲಂ ಪುಣ್ಯಂ ಫೇನೋರ್ಮಿಭಿರಲಂಕೃತಂ ॥೫೪॥

---

೫೦. ಓ ರಾಜೇಂದ್ರಾ, ಆ ತೀರ್ಥದಲ್ಲಿ ಪ್ರಾಯೋಪವೇಶವ್ರತವನ್ನು ಕೈಗೊಳ್ಳುವಾತನು ಸಕಲಪಾಪಗಳಿಂದಲೂ ಶುದ್ಧನಾಗಿ ರುದ್ರಲೋಕವನ್ನೈದುವನು.

೫೧. ಎಲೈ ಧರ್ಮರಾಜಾ, ನರ್ಮದಾನದಿಯ ಮಹಿಮೆಯನ್ನು ನಾನು ಪುರಾಣದಲ್ಲಿ ಕೇಳಿದ್ದೇನೆ. ಆ ನದಿಯಲ್ಲಿ ಯಾವಯಾವ ಕಡೆ ಸ್ನಾನಮಾಡಿದರೂ ಮಾನವನಿಗೆ ಅಶ್ವಮೇಧದ ಫಲವು ಬರುತ್ತದೆ.

೫೨. ಈ ನದಿಯ ಉತ್ತರದ ದಡದಲ್ಲಿ ವಾಸಮಾಡುವವರಿಗೆ ರುದ್ರಲೋಕ ವಾಸವು ಲಭಿಸುವುದು. ಸರಸ್ವತಿ, ಗಂಗೆ, ನರ್ಮದೆ ಈ ಮೂರು ನದಿಗಳಲ್ಲಿಯೂ ಸ್ನಾನದಾನಗಳಿಂದ ಸಮಾನವಾದ ಫಲವು ಬರುವುದೆಂದು ಪರಮೇಶ್ವರನು ನನಗೆ ಹೇಳಿದನು.

೫೩. ಅಮರಕಂಟಕಪರ್ವತದಲ್ಲಿ ಪ್ರಾಣಗಳನ್ನು ಬಿಡುವಾತನು ಕೋಟಿ ವರ್ಷಗಳಿಗಿಂತಲೂ ಅಧಿಕಕಾಲ ರುದ್ರಲೋಕದಲ್ಲಿ ಗೌರವಿಸಲ್ಪಡುವನು.

೫೪. ನೊರೆಯಿಂದಲೂ ಅಲೆಗಳಿಂದಲೂ ಶೋಭಿತವಾದ ನರ್ಮದಾನದಿಯ ಜಲವು ಪುಣ್ಯಕರವಾದುದು. ಪವಿತ್ರವಾದುದು. ಸಾಷ್ಟಾಂಗ ಪ್ರಣಾಮಕ್ಕೆ ಅರ್ಹವಾದುದು. ಅದನ್ನು ಸೇವಿಸುವಾತನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು.

**ಪವಿತ್ರಂ ಶಿರಸಾ ವಂದ್ಯಂ ಸರ್ವಪಾಪೈಃ ಪ್ರಮುಚ್ಯತೇ ।**
**ನರ್ಮದಾ ಚ ಸದಾ ಪುಣ್ಯಾ ಬ್ರಹ್ಮಹತ್ಯಾಪಹಾರಿಣೀ ॥೫೫॥**

**ಅಹೋರಾತ್ರೋಪವಾಸೇನ ಮುಚ್ಯತೇ ಬ್ರಹ್ಮಹತ್ಯಯಾ ।**
**ಏವಂ ರಮ್ಯಾ ಚ ಪುಣ್ಯಾ ಚ ನರ್ಮದಾ ಪಾಂಡುನಂದನ ॥೫೬॥**

**ತ್ರಯಾಣಾಮಪಿ ಲೋಕಾನಾಂ ಪುಣ್ಯಾ ಹ್ಯೇಷಾ ಮಹಾನದೀ ।**
**ವಟೇಶ್ವರೇ ಮಹಾಪುಣ್ಯೇ ಗಂಗಾದ್ವಾರೇ ತಪೋವನೇ ॥೫೭॥**

**ಏತೇಷು ಸರ್ವಸ್ಥಾನೇಷು ದ್ವಿಜಾಃ ಸ್ಯುಃ ಸಂಶಿತವ್ರತಾಃ ।**
**ಶ್ರುತಂ ದಶಗುಣಂ ಪುಣ್ಯಂ ನರ್ಮದೋದಧಿಸಂಗಮೇ ॥೫೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ**
**ಷಡಶೀತ್ಯಧಿಕಶತತಮೋಽಧ್ಯಾಯಃ**

---

೫೫. ನರ್ಮದಾನದಿಯು ಯಾವಾಗಲೂ ಪುಣ್ಯಪ್ರದವಾದುದು. ಬ್ರಹ್ಮ ಹತ್ಯಾದೋಷವನ್ನು ಪರಿಹರಿಸತಕ್ಕುದು. ಇದರ ತೀರದಲ್ಲಿ ಒಂದು ಹಗಲೂ ರಾತ್ರಿ ಉಪವಾಸಮಾಡಿದರೆ ಸಾಕು ; ಬಹ್ಮಹತ್ಯಾಪಾತಕ ತೊಲಗುವುದು.

೫೬. ಓ ಧರ್ಮರಾಜಾ, ನರ್ಮದೆಯು ರಮ್ಯವೂ ಪುಣ್ಯವೂ ಆಗಿದೆ. ಮೂರು ಲೋಕಗಳಲ್ಲಿಯೂ ಈ ಮಹಾನದಿಯು ಪವಿತ್ರವಾದುದೆಂದು ಪ್ರಖ್ಯಾತವಾಗಿದೆ.

೫೭-೫೮. ವಟೇಶ್ವರ, ಮಹಾಪುಣ್ಯಪ್ರದವಾದ ಗಂಗಾದ್ವಾರ, ತಪೋವನ ಈ ಎಲ್ಲ ಪವಿತ್ರಸ್ಥಲಗಳಲ್ಲಿಯೂ ದ್ವಿಜರು ಆಚರಿಸುವ ವ್ರತವು ಅತಿ ಶ್ರೇಷ್ಠವೆನಿಸುವುದು. ನರ್ಮದಾನದಿಯು ಸಮುದ್ರಕ್ಕೆ ಸೇರುವ ಸಂಗಮಕ್ಷೇತ್ರವು ಮಹಿಮೆಯಲ್ಲಿ ಇವು ಗಳಿಗಿಂತ ಹತ್ತುಪಾಲು ಅಧಿಕವೆಂದು ಪ್ರಸಿದ್ಧವಾಗಿದೆ.

ಅಧ್ಯಾಯ ೧೮೬

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನರ್ಮದಾನದಿಯ ಮಹಿಮೆಯ ವರ್ಣನವು ಪ್ರಾರಂಭ ವಾಗುವುದು.

ಸರಸ್ವತಿ, ಯಮುನೆ ಮತ್ತು ಗಂಗೆ ಈ ನದಿಗಳಿಗಿಂತ ನರ್ಮದೆಯು ಪ್ರಭಾವದಲ್ಲಿ ಅತಿಶಯವಾದುದು. ಇದು ದರ್ಶನಮಾತ್ರದಿಂದಲೇ ಮನುಷ್ಯನನ್ನು ಪರಿಶುದ್ಧಿಗೊಳಿಸುವುದು. ಅಮರಕಂಟಕಪರ್ವತವು ಅತ್ಯಂತ ಪವಿತ್ರವಾದುದು. ಸಾಕ್ಷಾತ್ಪರಮೇಶ್ವರನೇ ಇಲ್ಲಿ ನೆಲಸಿದ್ದಾನೆ. ಇದರ ಸುತ್ತಲೂ ಲೆಕ್ಕವಿಲ್ಲದಷ್ಟು ಪುಣ್ಯತೀರ್ಥಗಳಿವೆ. ಇಲ್ಲಿ ಸ್ನಾನಮಾಡಿ ತಿಲೋದಕವನ್ನಿತ್ತರೆ ಪಿತೃಗಳಿಗೆ ಅನಂತವಾದ ತೃಪ್ತಿಯು ಲಭಿಸುವುದು. ಪರಮೇಶ್ವರನೂ ಪ್ರಸನ್ನನಾಗುವನು. ಈ ಪರ್ವತದಲ್ಲಿ ಮೃತರಾಗುವವರಿಗೆ ರುದ್ರಸಾನ್ನಿಧ್ಯವು ಲಭಿಸುವುದು.

ಜಲೇಶ್ವರ ಮತ್ತು ವಿಶಲ್ಯ ತೀರ್ಥಗಳೂ, ಕಪಿಲಾನದಿಯೂ ಲೋಕ ಹಿತಕ್ಕಾಗಿ ಸೃಷ್ಟಿಸಲ್ಪಟ್ಟುವು. ಇವುಗಳಲ್ಲಿ ಸ್ನಾನಮಾಡಿದರೆ ಅಶ್ವಮೇಧದ ಫಲವು ಬರುವುದು. ನರ್ಮದಾನದಿ ಸಮುದ್ರಕ್ಕೆ ಸೇರುವ ಸಂಗಮಕ್ಷೇತ್ರವು ಗಂಗಾ ದ್ವಾರಾದಿ ಪುಣ್ಯಸ್ಥಲಗಳಿಗಿಂತ ಮಹಿಮೆಯಲ್ಲಿ ಹತ್ತುಪಾಲು ಅಧಿಕವಾದುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರ ಎಂಬತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತಾಶೀತ್ಯಧಿಕಶತತಮೋಽಧ್ಯಾಯಃ

|| ಮಾರ್ಕಂಡೇಯ ಉವಾಚ ||

ನರ್ಮದಾ ತು ನದೀ ಶ್ರೇಷ್ಠಾ ಪುಣ್ಯಾತ್ಪುಣ್ಯತಮಾ ಹಿ ಸಾ |
ಮುನಿಭಿಸ್ತು ಮಹಾಭಾಗೈರ್ವಿಭಕ್ತಾ ಮೋಕ್ಷಕಾಂಕ್ಷಿಭಿಃ || ೧ ||

ಯಜ್ಞೋಪವೀತಮಾತ್ರಾಣಿ ಪ್ರವಿಭಕ್ತಾನಿ ಪಾಂಡವ |
ತೇಷು ಸ್ನಾತ್ವಾ ತು ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ || ೨ ||

ಜಲೇಶ್ವರಂ ಪರಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಂ |
ತಸ್ಯೋತ್ಪತ್ತಿಂ ಕಥಯತಃ ಶೃಣು ತ್ವಂ ಪಾಂಡುನಂದನ || ೩ ||

ಪುರಾ ಸುರಗಣಾಃ ಸರ್ವೇ ಸೇಂದ್ರಾಶ್ಚೈವ ಮರುದ್ಗಣಾಃ |
ಸ್ತುವಂತಿ ತೇ ಮಹಾತ್ಮಾನಂ ದೇವದೇವಂ ಮಹೇಶ್ವರಂ |
ಸ್ತುವಂತಸ್ತೇ ತು ಸಂಪ್ರಾಪ್ತಾ ಯತ್ರ ದೇವೋ ಮಹೇಶ್ವರಃ || ೪ ||

---

೧. ಮಾರ್ಕಂಡೇಯಮುನಿ ಹೇಳಿದನು.—ಶ್ರೇಷ್ಠವೂ ಪುಣ್ಯಕರವೂ ಆದ ಆ ನರ್ಮದಾನದಿಯು ಅತ್ಯಂತಪಾವನವಾದುದೆನಿಸಿದೆ. ಮಹಾಮಹಿಮರೂ ಮೋಕ್ಷಾಭಿಲಾಷಿಗಳೂ ಆದ ಮುನಿಗಳು ಅದನ್ನು ಬೇರೆಬೇರೆ ಪ್ರವಾಹಗಳಾಗಿ ವಿಭಾಗಿಸುವರು.

೨. ಪಾಂಡುಪುತ್ರನಾದ ಓ ಧರ್ಮರಾಜಾ, ಆ ಪ್ರವಾಹಗಳು ಯಜ್ಞೋಪವೀತದಷ್ಟು ಸೂಕ್ಷ್ಮವಾಗಿ ಒಡೆದಿವೆ. ಅವುಗಳಲ್ಲಿ ಸ್ನಾನಮಾಡಿದರೆ ಸಕಲ ಪಾಪಗಳೂ ದೂರವಾಗುವುವು.

೩. ಜಲೇಶ್ವರವು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಉತ್ತಮ ತೀರ್ಥ. ಪಾಂಡುನಂದನಾ, ಅದರ ಉತ್ಪತ್ತಿಯನ್ನು ಹೇಳುವೆನು ಕೇಳು.

೪. ಹಿಂದೆ ಇಂದ್ರಾದಿ ಸಕಲ ದೇವತೆಗಳೂ ಮರುದ್ಗಣಗಳೂ ಕೂಡ ಮಹಾತ್ಮನೂ ದೇವದೇವನೂ ಆದ ಪರಮೇಶ್ವರನನ್ನು ಸ್ತುತಿಸುತ್ತ ಆತನಿದ್ದ ಕಡೆಗೆ ಬಂದರು.

ವಿಜ್ಞಾಪಯಂತಿ ದೇವೇಶಂ ಸೇಂದ್ರಾಶ್ಚೈವ ಮರುದ್ಗಣಾಃ।
ಭಯೋದ್ವಿಗ್ನಾ ವಿರೂಪಾಕ್ಷಂ ಪರಿತ್ರಾಯಸ್ವ ನಃ ಪ್ರಭೋ ॥ ೫ ॥

॥ ಭಗವಾನುವಾಚ ॥

ಸ್ವಾಗತಂ ತು ಸುರಶ್ರೇಷ್ಠಾಃ ಕಿಮರ್ಥಮಿಹ ಚಾಗತಾಃ।
ಕಿಂ ದುಃಖಂ ಕೋ ನು ಸಂತಾಪಃ ಕುತೋ ವಾ ಭಯಮಾಗತಂ ॥ ೬ ॥

ಕಥಯಧ್ವಂ ಮಹಾಭಾಗಾ ಏವಮಿಚ್ಛಾಮಿ ವೇದಿತುಂ।
ಏವಮುಕ್ತಾಸ್ತು ರುದ್ರೇಣಾಽಕಥರ್ಯ ಸಂಶಿತವ್ರತಾಃ ॥ ೭ ॥

॥ ಋಷಯ ಊಚುಃ ॥

ಅತಿವೀರ್ಯೋ ಮಹಾಘೋರೋ ದಾನವೋ ಬಲದರ್ಪಿತಃ।
ಬಾಣೋ ನಾಮೇತಿ ವಿಖ್ಯಾತೋ ಯಸ್ಯ ವೈ ತ್ರಿಪುರಂ ಪುರಂ ॥ ೮ ॥

---

೫. ಇಂದ್ರಾದಿ ದೇವತೆಗಳು ಭಯದಿಂದ ಗಾಬರಿಗೊಂಡು, "ಓ ದೇವಾ, ನಮ್ಮನ್ನು ಕಾಪಾಡು" ಎಂದು ವಿರೂಪಾಕ್ಷನಲ್ಲಿ ಮೊರೆಯಿಟ್ಟರು.

೬. ಪರಮೇಶ್ವರನು ಹೇಳಿದನು.—ಎಲೈ ದೇವಪ್ರಮುಖರಿರಾ, ನಿಮಗೆ ಸುಖಾಗಮನ. ಇಲ್ಲಿಗೇಕೆ ಬಂದಿರಿ? ನಿಮ್ಮ ದುಃಖವೇನು? ಇದೇನು ಈ ಸಂತಾಪ? ನಿಮಗೆ ಭಯವೆಲ್ಲಿಂದ ಬಂತು?

೭. ಓ ಮಹಾಮಹಿಮರೇ ಹೇಳಿರಿ. ಇದೆಲ್ಲವನ್ನೂ ತಿಳಿಯಲಿಚ್ಛಿಸುತ್ತೇನೆ. ಎಂದು ಈಶ್ವರನು ನಡಿಯಲು ತೀಕ್ಷ್ಣವಾದ ವ್ರತಗಳನ್ನಾಚರಿಸಿದ ದೇವತೆಗಳು ಉತ್ತರವಿತ್ತರು.

೮. ಋಷಿಗಳು ಹೇಳಿದರು.—ಅತ್ಯಂತ ವೀರನೂ, ಬಹು ಭಯಂಕರನೂ ಬಲದಿಂದ ಗರ್ವಿತನೂ ಆದ ಬಾಣನೆಂಬ ಪ್ರಖ್ಯಾತನಾದ ದೈತ್ಯನೊಬ್ಬನುಂಟು. ಅವನ ಪಟ್ಟಣವು ತ್ರಿಪುರ.

ಗಗನೇ ಸತತಂ ದಿವ್ಯಂ ಭ್ರಮತೇ ತಸ್ಯ ತೇಜಸಾ ।
ತತೋ ಭೀತಾ ವಿರೂಪಾಕ್ಷ ತ್ವಾಮೇವ ಶರಣಂ ಗತಾಃ ॥ ೯ ॥

ತ್ರಾಯಸ್ವ ಮಹತೋ ದುಃಖಾತ್ತ್ವಂ ಹಿ ನಃ ಪರಮಾ ಗತಿಃ ।
ಏವಂ ಪ್ರಸಾದಂ ದೇವೇಶ ಸರ್ವೇಷಾಂ ಕರ್ತುಮರ್ಹಸಿ ॥೧೦॥

ಯೇನ ದೇವಾಃ ಸಗಂಧರ್ವಾಃ ಸುಖಮೇಧಂತಿ ಶಂಕರ ।
ಪರಾಂ ನಿರ್ವೃತಿಮಾಯಾಂತಿ ತತ್ಪ್ರಭೋ ಕರ್ತುಮರ್ಹಸಿ ॥೧೧॥

॥ ಭಗವಾನುವಾಚ ॥

ಏತತ್ಸರ್ವಂ ಕರಿಷ್ಯಾಮಿ ಮಾ ವಿಷಾದಂ ಗಮಿಷ್ಯಥ ।
ಅಚಿರೇಣೈವ ಕಾಲೇನ ಕುರ್ಯಾಂ ಯುಷ್ಮತ್ಸುಖಾವಹಂ ॥೧೨॥

ಆಶ್ವಾಸ್ಯ ಸ ತು ತಾನ್ ಸರ್ವಾನ್ ನರ್ಮದಾತಟಮಾಶ್ರಿತಃ ।
ಚಿಂತಯಾಮಾಸ ದೇವೇಶಸ್ತದ್ವಧಂ ಪ್ರತಿ ಮಾನದ ॥೧೩॥

---

೯. ಆ ದಿವ್ಯನಗರವು ಅವನ ತೇಜಸ್ಸಿನಿಂದ ಯಾವಾಗಲೂ ಆಕಾಶದಲ್ಲಿ ತಿರುಗಾಡುತ್ತಿದೆ. ಓ ವಿರೂಪಾಕ್ಷಾ, ಆದರಿಂದ ಹೆದರಿ ನಿನ್ನನ್ನು ಮರೆಹೊಕ್ಕಿರುವೆವು.

೧೦-೧೧. ಈ ಮಹಾದುಃಖದಿಂದ ನಮ್ಮನ್ನು ಕಾಪಾಡು. ನಮಗೆ ನೀನೇ ಪರಮಗತಿ. ಓ ದೇವಾಧಿದೇವಾ, ಹೀಗೆ ನಮ್ಮೆಲ್ಲರಲ್ಲಿ ಅನುಗ್ರಹವನ್ನು ತೋರಿಸು. ಪ್ರಭೂ, ದೇವತೆಗಳೂ ಗಂಧರ್ವರೂ ಸುಖಗೊಂಡು ಅತಿಶಯವಾದ ಶಾಂತಿಯನ್ನು ಪಡೆಯುವಂತೆ ಕೃಪೆಮಾಡು.

೧೨. ಭಗವಂತನು ಹೇಳಿದನು.—ಇದೆಲ್ಲವನ್ನೂ ಮಾಡುವೆನು. ವಿಷಾದ ಗೊಳ್ಳಬೇಡಿ. ಅತಿಶೀಘ್ರದಲ್ಲೇ ನಿಮಗೆ ಸುಖವಾಗುವ ಕಾರ್ಯವನ್ನು ನೆರವೇರಿಸುವೆನು.

೧೩. ಶತ್ರುಗಳ ದರ್ಪವನ್ನು ಅಡಗಿಸುವ ಓ ಯುಧಿಷ್ಠಿರಾ, ಪರಮೇಶ್ವರನು ದೇವತೆಗಳೆಲ್ಲರನ್ನೂ ಸಮಾಧಾನಪಡಿಸಿ, ನರ್ಮದಾನದಿಯ ತೀರವನ್ನು ಸೇರಿ ಆ ದಾನವನ ವಧೋಪಾಯವನ್ನು ಚಿಂತಿಸಿದನು.

**ಅಥ ಕೇನ ಪ್ರಕಾರೇಣ ಹಂತವ್ಯಂ ತ್ರಿಪುರಂ ಮಯಾ।**
**ಪರಂ ಸಂಚಿಂತ್ಯ ಭಗವಾನ್ನಾರದಂ ಚಾಸ್ಮರತ್ತದಾ।**
**ಸ್ಮರಣಾದೇವ ಸಂಪ್ರಾಪ್ತೋ ನಾರದಃ ಸಮುಪಸ್ಥಿತಃ ॥೧೪॥**

**॥ ನಾರದ ಉವಾಚ ॥**

**ಆಜ್ಞಾಪಯ ಮಹಾದೇವ ಕಿಮರ್ಥಂ ಚ ಸ್ಮೃತೋ ಹ್ಯಹಂ।**
**ಕಿಂ ಕಾರ್ಯಂ ತು ಮಯಾ ದೇವ ಕರ್ತವ್ಯಂ ಕಥಯಸ್ವ ಮೇ ॥೧೫॥**

**॥ ಭಗವಾನುವಾಚ ॥**

**ಗಚ್ಛ ನಾರದ ತತ್ರೈವ ಯತ್ರ ತತ್ತ್ರಿಪುರಂ ಮಹತ್ ।**
**ಬಾಣಸ್ಯ ದಾನವೇಂದ್ರಸ್ಯ ಶೀಘ್ರಂ ಗತ್ವಾ ಚ ತತ್ಕುರು ॥೧೬॥**

**ತಾ ಭರ್ತೃದೇವತಾಸ್ತತ್ರ ಸ್ತ್ರಿಯಶ್ಚಾಪ್ಸರಸಾಂ ಸಮಾಃ।**
**ತಾಸಾಂ ವೈ ತೇಜಸಾ ವಿಪ್ರ ಭ್ರಮತೇ ತ್ರಿಪುರಂ ದಿವಿ ॥೧೭॥**

---

೧೪. "ತ್ರಿಪುರವನ್ನು ನಾನು ಧ್ವಂಸಮಾಡುವ ಬಗೆಯೆಂತು" ಎಂದು ಮಹಾದೇವನು ಬಹಳಹೊತ್ತು ಯೋಚಿಸಿ ತರುವಾಯ ನಾರದನನ್ನು ಸ್ಮರಿಸಿದನು. ಕೂಡಲೇ ಆ ಮಹರ್ಷಿಯು ಎದುರಿಗೆ ಬಂದು ನಿಂತನು.

೧೫. ನಾರದನು ಹೇಳಿದನು.—ಓ ಮಹಾದೇವಾ, ನನ್ನನ್ನು ನೆನೆಸಿಕೊಂಡುದೇಕೆ ? ಅಪ್ಪಣೆಮಾಡು. ದೇವಾ, ನಾನು ಮಾಡಬೇಕಾಗಿರುವ ಕಾರ್ಯವಾವುದು ತಿಳಿಸು.

೧೬. ಭಗವಂತನು ಹೇಳಿದನು.—ಓ ನಾರದಾ, ದಾನವೇಂದ್ರನಾದ ಬಾಣಾಸುರನ ರಾಜಧಾನಿಯಾದ ಆ ತ್ರಿಪುರ ನಗರಕ್ಕೆ ನೀನು ನಡೆ. ಬೇಗನೆ ಹೋಗಿ ನಾನು ಹೇಳುವಂತೆ ಮಾಡು.

೧೭. ಆ ಬಾಣಾಸುರನ ಸ್ತ್ರೀಯರು ಅಪ್ಸರಸ್ತ್ರೀಯರಿಗೆ ಸಮಾನರಾದವರು. ತಮ್ಮ ಪತಿಯನ್ನೇ ದೇವರೆಂದು ತಿಳಿದಿರುವರು. ಎಲೈ ದ್ವಿಜೋತ್ತಮಾ, ಅವರ ತೇಜಸ್ಸಿನಿಂದ ತ್ರಿಪುರವು ಅಂತರಿಕ್ಷದಲ್ಲಿ ತಿರುಗುತ್ತಿದೆ. ಅಲ್ಲಿಗೆ ಹೋಗಿ ಅವರ ಬುದ್ಧಿಯು ವ್ಯತ್ಯಾಸವಾಗುವಂತೆ ಪ್ರೇರಿಸು.

ತತ್ರ ಗತ್ವಾ ತು ವಿಪ್ರೇಂದ್ರ ಮತಿಮನ್ಯಾಂ ಪ್ರಚೋದಯ ।
ದೇವಸ್ಯ ವಚನಂ ಶ್ರುತ್ವಾ ಮುನಿಸ್ತ್ವರಿತವಿಕ್ರಮಃ ॥೧೮॥

ಸ್ತ್ರೀಣಾಂ ಹೃದಯನಾಶಾಯ ಪ್ರವಿಷ್ಟಸ್ತತ್ಪುರಂ ಪ್ರತಿ ।
ಶೋಭತೇ ಯತ್ಪುರಂ ದಿವ್ಯಂ ನಾನಾರತ್ನೋಪಶೋಭಿತಂ ॥೧೯॥

ಶತಯೋಜನವಿಸ್ತೀರ್ಣಂ ತತೋ ದ್ವಿಗುಣಮಾಯತಂ ।
ತತೋಽಪಶ್ಯದ್ಧಿ ತತ್ರೈವ ಬಾಣಂ ತು ಬಲದರ್ಪಿತಂ ॥೨೦॥

ಮಣಿಕುಂಡಲಕೇಯೂರಮುಕಟೇನ ವಿರಾಜಿತಂ ।
ಹೇಮಹಾರಶತೈ ರತ್ನೈಶ್ಚಂದ್ರಕಾಂತವಿಭೂಷಿತಂ ॥೨೧॥

ರಶನಾ ತಸ್ಯ ರತ್ನಾಢ್ಯಾ ಬಾಹೂ ಕನಕಮಂಡಿತೌ ।
ಚಂದ್ರಕಾಂತಮಹಾವಜ್ರಮಣಿವಿದ್ರುಮಭೂಷಿತೇ ॥೨೨॥

---

೧೮-೧೯. ಮಹಾದೇವನ ಮಾತನ್ನು ಕೇಳಿ ನಾರದಮುನಿಯು ಬೇಗ ಬೇಗನೆ ಹೆಜ್ಜೆಯಿಡುತ್ತ ಆ ಸ್ತ್ರೀಯರ ಮನಸ್ಸನ್ನು ಕೆಡಿಸುವುದಕ್ಕಾಗಿ ತ್ರಿಪುರವನ್ನು ಹೊಕ್ಕನು. ಆ ದಿವ್ಯ ನಗರವು ಬಗೆಬಗೆಯ ರತ್ನಗಳಿಂದ ಒಪ್ಪುತ್ತಿತ್ತು. ನೂರು ಯೋಜನ ವಿಸ್ತಾರವಾಗಿಯೂ ಅದರ ಎರಡರಷ್ಟು ಉದ್ದವಾಗಿಯೂ ಇತ್ತು.

೨೦-೨೧. ತರುವಾಯ ಮುನಿಯು ಬಲದರ್ಪಿತನಾದ ಬಾಣಾಸುರನನ್ನೂ ಅಲ್ಲೇ ನೋಡಿದನು. ರತ್ನದ ಕಡಕುಗಳು, ತೋಳುಬಳೆಗಳು, ಕಿರೀಟ ಇವುಗಳಿಂದ ಅವನು ಶೋಭಿಸುತ್ತಿದ್ದನು. ಹಲವು ಚಿನ್ನದ ಹಾರಗಳನ್ನೂ ರತ್ನಗಳನ್ನೂ ಧರಿಸಿ ಚಂದ್ರಕಾಂತಮಣಿಗಳಿಂದ ಅಲಂಕೃತನಾಗಿದ್ದನು.

೨೨-೨೩. ಅವನ ನಡುಪಟ್ಟಿಯು ರತ್ನಮಯವಾಗಿತ್ತು. ತೋಳುಗಳು ಸುವರ್ಣಭೂಷಣಗಳಿಂದ ಕಂಗೊಳಿಸುತ್ತಿದ್ದುವು. ಅವನು ಚಂದ್ರಕಾಂತ, ವಜ್ರ, ರತ್ನ ಮತ್ತು ಹವಳಗಳನ್ನು ಕೆತ್ತಿದ ದ್ವಾದಶಾದಿತ್ಯರ ತೇಜಸ್ಸಿನಿಂದ ಬೆಳಗುವ

ದ್ವಾದಶಾರ್ಕದ್ಯುತಿನಿಭೇ ನಿವಿಷ್ಟಂ ಪರಮಾಸನೇ |
ಉತ್ಥಿತೋ ನಾರದಂ ದೃಷ್ಟ್ವಾ ದಾನವೇಂದ್ರೋ ಮಹಾಬಲಃ ||೨೩||

|| ಬಾಣ ಉವಾಚ ||

ದೇವರ್ಷೇ ತ್ವಂ ಸ್ವಯಂ ಪ್ರಾಪ್ತೋ ಹ್ಯರ್ಘ್ಯಂ ಪಾದ್ಯಂ ನಿವೇದಯೇ |
ಸೋಽಭಿವಾದ್ಯ ಯಥಾನ್ಯಾಯಂ ಕ್ರಿಯತಾಂ ಕಿಂ ದ್ವಿಜೋತ್ತಮ ||೨೪||

ಚಿರಾತ್ತ್ವಮಾಗತೋ ವಿಪ್ರ ಸ್ಥೀಯತಾಮಿದಮಾಸನಂ |
ಏವಂ ಸಂಭಾಷಯಿತ್ವಾ ತು ನಾರದಮೃಷಿಸತ್ತಮಂ |
ತಸ್ಯ ಭಾರ್ಯಾ ಮಹಾದೇವೀ ಹ್ಯನೌಪಮ್ಯಾ ತು ನಾಮತಃ ||೨೫||

|| ಅನೌಪಮ್ಯೋವಾಚ ||

ಭಗವನ್ ಮಾನುಷೇ ಲೋಕೇ ಕೇನ ತುಷ್ಯತಿ ಕೇಶವಃ |
ವ್ರತೇನ ನಿಯಮೇನಾಥ ದಾನೇನ ತಪಸಾಪಿ ವಾ ||೨೬||

---

ಉತ್ಕೃಷ್ಟವಾದ ಆಸನದಲ್ಲಿ ಕುಳಿತಿದ್ದನು. ಮಹಾಬಲನಾದ ಆ ದಾನವೇಂದ್ರನು ನಾರದನನ್ನು ನೋಡಿ ಎದ್ದು ನಿಂತನು.

೨೪-೨೫. ಬಾಣಾಸುರನು ಹೇಳಿದನು.—"ಎಲೈ ದೇವರ್ಷೀ, ನೀನಾಗಿಯೇ ಇಲ್ಲಿ ಬಂದಿರುವೆ. ನಿನಗೆ ಅರ್ಘ್ಯವನ್ನೂ ಪಾದ್ಯವನ್ನೂ ಒಪ್ಪಿಸುವೆನು ಎಂದು ಹೇಳಿ ದಾನವೇಂದ್ರನು ಶಾಸ್ತ್ರದಲ್ಲಿ ಹೇಳಿರುವಂತೆ ಅಭಿವಂದಿಸಿದನು. "ಓ ಬ್ರಾಹ್ಮಣೋತ್ತಮಾ, ನಾನೇನು ಮಾಡಲಿ? ಬಹುಕಾಲ ಕಳೆದು ನೀನು ನಮ್ಮಲ್ಲಿಗೆ ಬಂದೆ. ಇಗೋ ಈ ಆಸನದಲ್ಲಿ ಕುಳಿತುಕೋ" ಎಂದು ಮಹರ್ಷಿಗೆ ಬಿನ್ನವಿಸಿದನು. ಅವನ ಪಟ್ಟದ ರಾಣಿಯಾದ ಅನೌಪಮ್ಯೆಯೆಂಬಾಕೆಯು ನಾರದನನ್ನು ಇಂತು ಕೇಳಿದಳು.

೨೬. ಅನೌಪಮ್ಯೆ ಹೇಳಿದಳು.—ಎಲೈ ಪೂಜ್ಯನೇ, ಲೋಕದಲ್ಲಿ ಕೇಶವನು ಏತರಿಂದ ತೃಪ್ತನಾಗುವನು? ವ್ರತದಿಂದಲೋ, ನಿಯಮದಿಂದಲೋ ಅಥವಾ ತಪಸ್ಸಿನಿಂದಲೋ?

|| ನಾರದ ಉವಾಚ ||

ತಿಲಧೇನುಂ ಚ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ಸಸಾಗರವನದ್ವೀಪಾ ದತ್ತಾ ಭವತಿ ಮೇದಿನೀ ||೨೭||

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಸ್ಸಾರ್ವಕಾಮಿಕೈಃ ।
ಮೋದತೇ ಸುಚಿರಂ ಕಾಲಮುಕ್ಷಯಂ ಕೃತಶಾಸನಂ ||೨೮||

ಆಮ್ರಾಮಲಕಪಿತ್ಥಾನಿ ಬದರಾಣಿ ತಥೈವ ಚ ।
ಕದಂಬಚಂಪಕಾಶೋಕಪುನ್ನಾಗವಿವಿಧದ್ರುಮಾಃ ||೨೯||

ಅಶ್ವತ್ಥಪಿಪ್ಪಿಲಾಂಶ್ಚೈವ ಕದಲೀವಟದಾಡಿಮಾಃ ।
ಪಿಚುಮಂದಂ ಮಧೂಕಂ ಚ ಉಪೋಷ್ಯ ಸ್ತ್ರೀ ದದಾತಿ ಯಾ ||೩೦||

ಸ್ತನೌ ಕಪಿತ್ಥಸದೃಶಾವೂರೂ ಚ ಕದಲೀಸಮೌ ।
ಅಶ್ವತ್ಥೇ ವಂದನೀಯಾ ಚ ಪಿಚುಮಂದೇ ಸುಗಂಧಿನೀ ||೩೧||

---

೨೭. ನಾರದನು ಹೇಳಿದನು.—ವೇದಪಾರಂಗತನಾದ ಬ್ರಾಹ್ಮಣನಿಗೆ ಎಳ್ಳಿನಿಂದ ಮಾಡಿದ ಹಸುವನ್ನು ದಾನಕೊಟ್ಟರೆ ಸಾಗರಗಳು, ವನಗಳು ಮತ್ತು ದ್ವೀಪಗಳು ಇವುಗಳಿಂದ ಪೂರ್ಣವಾದ ಭೂಮಂಡಲವನ್ನು ದಾನಮಾಡಿದಷ್ಟು ಫಲ ಬರುವುದು.

೨೮. ಆತನು ಕೋಟಿಸೂರ್ಯರಷ್ಟು ತೇಜಸ್ಸಿನಿಂದ ಕೂಡಿದ, ಸಕಲ ಮನೋರಥಗಳನ್ನೂ ಸಲ್ಲಿಸುವ ವಿಮಾನಗಳಲ್ಲಿ ಅನಂತಕಾಲ ಎಲ್ಲರ ಮೇಲೂ ತನ್ನ ಆಜ್ಞೆಯನ್ನು ನಡೆಸುತ್ತ ಸುಖಿಸುವನು.

೨೯-೩೧. ಹೆಂಗಸು ಉಪವಾಸಮಾಡಿ ಮಾವು, ನೆಲ್ಲಿ, ಬೇಲ ಮತ್ತು ಚಂಪಕ, ಅಶೋಕ, ಪುನ್ನಾಗ, ಅರಳಿ, ಬಸರಿ, ಬಾಳೆ, ಆಲ, ದಾಡಿಂಬ, ಬೇವು ಮತ್ತು ಹಿಪ್ಪೆ ಈ ಫಲಪುಷ್ಪಗಳನ್ನು ದಾನಮಾಡಬೇಕು. ಅವಳ ಸ್ತನಗಳು ಬೇಲದ ಹಣ್ಣಿನಂತೆಯೂ, ತೊಡೆಗಳು ಬಾಳೆಯ ಗಿಡದಂತೆಯೂ ಆಗುವುವು. ಅರಳೀ ಮರದ ದಾನದಿಂದ ಆಕೆ ಎಲ್ಲರಿಂದಲೂ ಪೂಜಿತಳಾಗುವಳು. ಬೇವಿನ ಮರದಿಂದ ಸುಗಂಧವುಳ್ಳವಳಾಗುವಳು.

ಚಂಪಕೇ ಚಂಪಕಾಭಾ ಸ್ಯಾದಶೋಕೇ ಶೋಕವರ್ಜಿತಾ ।
ಮಧೂಕೇ ಮಧುರಂ ವಕ್ತಿ ವಟೇ ಚ ಮೃದುಗಾತ್ರಿಕಾ ॥೩೨॥

ಬದರೀ ಸರ್ವದಾ ಸ್ತ್ರೀಣಾಂ ಮಹಾಸೌಭಾಗ್ಯದಾಯಿನೀ ।
ಕುರ್ಕುಟೀ ಕರ್ಕಟೀ ಚೈವ ದ್ರವ್ಯಷಷ್ಟೀ ನ ಶಸ್ಯತೇ ॥೩೩॥

ಕದಂಬಮಿಶ್ರಕನಕಮಂಜರೀಪೂಜನಂ ತಥಾ ।
ಅನಗ್ನಿಪಕ್ವಮನ್ನಂ ಚ ಪಕ್ವಾನ್ನಾನಾಮಭಕ್ಷಣಂ ॥೩೪॥

ಫಲಾನಾಂ ಚ ಪರಿತ್ಯಾಗಃ ಸಂಧ್ಯಾಮೌನಂ ತಥೈವ ಚ ।
ಪ್ರಥಮಂ ಕ್ಷೇತ್ರಪಾಲಸ್ಯ ಪೂಜಾ ಕಾರ್ಯಾ ಪ್ರಯತ್ನತಃ ॥೩೫॥

---

೩೨. ಸಂಪಗೆಯಿಂದ ಆಕೆಯ ಮೈಬಣ್ಣವು ಸಂಪಗೆ ಹೂವಿನಂತಾಗುವುದು. ಅಶೋಕದಿಂದ ಶೋಕವರ್ಜಿತಳಾಗುವಳು. ಹಿಪ್ಪೆಯ ಹೂವಿನಿಂದ ಮಧುರವಾಗಿ ಮಾತಾಡುವಳು. ಆಲದಿಂದ ಅವಳ ಅವಯವಗಳು ಮೃದುವಾಗುವುವು.

೩೩. ಎಲಚಿಯು ಸ್ತ್ರೀಯರಿಗೆ ಯಾವಾಗಲೂ ಉತ್ತಮವಾದ ಸೌಭಾಗ್ಯ ವನ್ನು ಕೊಡುವುದು. ಕುರ್ಕುಟಿಯೂ, ಸೌತೆಯೂ ಇಂಥಹವೇ. ಅರವತ್ತು ಪದಾರ್ಥಗಳನ್ನು ದಾನಮಾಡಿದರೂ ಇವುಗಳನ್ನು ದಾನಮಾಡಿದಷ್ಟು ಫಲವು ಬರುವುದಿಲ್ಲ.

೩೪-೩೫. ಓ ಕಲ್ಯಾಣೀ, ಕಡಹದ ಹೂವಿನೊಡನೆ ಮಿಶ್ರವಾದ ಚಿನ್ನದ ಹೂಗೊಂಚಲುಗಳಿಂದ ಪೂಜೆಮಾಡುವುದು, ಬೆಂಕಿಯಿಂದಲ್ಲದೆ ಬೇರೆ ವಿಧವಾಗಿ ಬೆಂದ ಅನ್ನವನ್ನು ತಿನ್ನುವುದು. ಅಗ್ನಿಪಕ್ವವಾದ ಅನ್ನವನ್ನು ತಿನ್ನದಿರುವುದು, ಹಣ್ಣುಗಳನ್ನು ತಿನ್ನದಿರುವುದು, ಹಣ್ಣುಗಳನ್ನು ಬಿಡುವುದು, ಸಂಜೆಯಲ್ಲಿ ಮೌನ ದಿಂದಿರುವುದು, ಎಲ್ಲಕ್ಕಿಂತಲೂ ಮೊದಲು ಕ್ಷೇತ್ರಪಾಲಕನ ಪೂಜೆಯನ್ನು ಮಾಡುವುದು ಇವುಗಳನ್ನು ಆಚರಿಸಿದರೆ ಪತಿಯು ಅವಳಲ್ಲಿ ಪ್ರೀತನಾಗಿ ಅವಳನ್ನು ಅಗಲದೆ ಯಾವಾಗಲೂ ಆಕೆಯ ಮುಖವನ್ನೇ ನೋಡುತ್ತಿರುವನು.

ತಸ್ಯಾ ಭವತಿ ವೈ ಭರ್ತಾ ಮುಖಪ್ರೇಕ್ಷೀ ಸದಾನಘೇ ।
ಅಷ್ಟಮೀ ಚ ಚತುರ್ಥೀ ಚ ಪಂಚಮೀ ದ್ವಾದಶೀ ತಥಾ ॥೩೬॥

ಸಂಕ್ರಾಂತಿರ್ವಿಷುವಚ್ಚೈವ ದಿನಚ್ಛಿದ್ರಮುಖಂ ತಥಾ ।
ಏತಾಂಸ್ತು ದಿವಸಾನ್ ದಿವ್ಯಾನುಪವಾಸಂತಿ ಯಾಃ ಸ್ತ್ರಿಯಃ ।
ತಾಸಾಂ ತು ಧರ್ಮಯುಕ್ತಾನಾಂ ಸ್ವರ್ಗವಾಸೋ ನ ಸಂಶಯಃ ॥೩೭॥

ಕಲಿಕಾಲುಷ್ಯನಿರ್ಮುಕ್ತಾಃ ಸರ್ವಪಾಪವಿವರ್ಜಿತಾಃ ।
ಉಪವಾಸರತಾಂ ನಾರೀಂ ನೋಪಸರ್ಪತಿ ತಾಂ ಯಮಃ ॥೩೮॥

॥ ಅನೌಪಮ್ಯೋವಾಚ ॥

ಅಸತ್ಕೃತೇನ ಪುಣ್ಯೇನ ಪುರಾಜನ್ಮಕೃತೇನ ಚ ।
ಭವದಾಗಮನಂ ಭೂತಂ ಕಿಂಚಿತ್ಪೃಚ್ಛಾಮ್ಯಹಂ ವ್ರತಂ ॥೩೯॥

ಅಸ್ತಿ ವಿಂಧ್ಯಾವಲಿರ್ನಾಮ ಬಲಿಪತ್ನೀ ಯಶಸ್ವಿನೀ ।
ಶ್ವಶ್ರೂರ್ಮಮಾಪಿ ವಿಪ್ರೇಂದ್ರ ನ ತುಷ್ಯತಿ ಕದಾಚನ ॥೪೦॥

---

೩೬-೩೭. ಅಷ್ಟಮಿ, ಚತುರ್ಥಿ, ಪಂಚಮಿ, ದ್ವಾದಶಿ, ಸಂಕ್ರಮಣ, ವಿಷುವತ್ಪುಣ್ಯಕಾಲ, ಮತ್ತು ದಿನಚ್ಛಿದ್ರ ಇಂತಹ ದಿವಸಗಳೆಲ್ಲವೂ ಪುಣ್ಯಕರವಾದುವು. ಇವುಗಳಲ್ಲಿ ಉಪವಾಸಮಾಡುವ ಧರ್ಮಶೀಲರಾದ ಸ್ತ್ರೀಯರಿಗೆ ಸ್ವರ್ಗವಾಸವು ಲಭಿಸುವುದು. ಸಂದೇಹವಿಲ್ಲ.

೩೮. ಆ ಸ್ತ್ರೀಯರು ಕಲಿದೋಷದಿಂದ ದೂರವಾಗುವರು. ಸಕಲ ಪಾಪಗಳಿಂದಲೂ ಬಿಡುಗಡೆಹೊಂದುವರು. ಉಪವಾಸ ನಿಷ್ಠಳಾದ ಆ ನಾರಿಯ ಬಳಿಗೆ ಯಮನು ಸುಳಿಯಲಾರನು.

೩೯. ಅನೌಪಮ್ಯೆ ಹೇಳಿದಳು.—ಹಿಂದಿನ ಜನ್ಮದಲ್ಲಿ ನಾವು ಮಾಡಿದ ಪುಣ್ಯದಿಂದ ತಾವು ಇಲ್ಲಿಗೆ ದಯಮಾಡಿಸಿದಿರಿ. ನಾನು ಒಂದಾನೊಂದು ವ್ರತವನ್ನು ಕೇಳುತ್ತೇನೆ.

೪೦. ಬಲಿಚಕ್ರವರ್ತಿಯ ಪತ್ನಿಯೂ ಕೀರ್ತಿಶಾಲಿನಿಯೂ ಆದ ವಿಂಧ್ಯಾವಲಿಯೆಂಬಾಕೆಯು ನನ್ನ ಅತ್ತೆ. ಅವಳಿಗೆ ನನ್ನಮೇಲೆ ಎಂದಿಗೂ ಪ್ರೀತಿ ಹುಟ್ಟದು.

ಶ್ವಶುರೋಽಪಿ ಚ ಮಾಂ ದೃಷ್ಟ್ವಾ ಸರ್ವಕಾಲಂ ನ ತುಷ್ಯತಿ ।
ಅಸ್ತಿ ಕುಂಭೀನಸೀ ನಾಮ ನನಾಂದಾ ಪಾಪಕಾರಿಣೀ ॥೪೧॥

ದೃಷ್ಟ್ವಾ ಚೈವಾಂಗುಲೀಭಂಗಂ ಸದಾಕಾಲಂ ಕರೋತಿ ಚ ।
ದಿವ್ಯೇನ ತು ಪಥಾ ಯಾತಿ ಮಮ ಸೌಖ್ಯಂ ಕಥಂ ವದ ॥೪೨॥

ಊಷರೇ ನ ಪ್ರರೋಹಂತಿ ಬೀಜಾಂಕೂರಾಃ ಕಥಂಚನ ।
ಯೇನ ವ್ರತೇನ ಚೀರ್ಣೇನ ಭವಂತಿ ವಶಗಾ ಮಮ ।
ತದ್ವ್ರತಂ ಬ್ರೂಹಿ ವಿಪ್ರೇಂದ್ರ ದಾಸಭಾವಂ ವ್ರಜಾಮಿ ತೇ ॥೪೩॥

॥ ನಾರದ ಉವಾಚ ॥

ಯದೇತತ್ತೇ ಮಯಾ ಪೂರ್ವಂ ವ್ರತಮುಕ್ತಂ ಶುಭಾನನೇ ।
ಅನೇನ ಪಾರ್ವತೀ ದೇವೀ ಚೀರ್ಣೇನ ವರವರ್ಣಿನಿ ॥೪೪॥

ಶಂಕರಸ್ಯ ಶರೀರಸ್ಥಾ ವಿಷ್ಣೋರ್ಲಕ್ಷ್ಮೀಸ್ತಥೈವ ಚ ।
ಸಾವಿತ್ರೀ ಬ್ರಹ್ಮಣಶ್ಚೈವ ವಸಿಷ್ಠಸ್ಯಾಪ್ಯರುಂಧತೀ ॥೪೫॥

---

೪೧-೪೨. ನಮ್ಮ ಮಾವನೂ ಹಾಗೆಯೇ. ಯಾವಾಗ ನನ್ನನ್ನು ನೋಡಿದರೂ ಸಂತೋಷವನ್ನೇ ತೋರಿಸುವುದಿಲ್ಲ. ಪಾಪಿಷ್ಠೆಯಾದ ಕುಂಭೀನಸಿಯೆಂಬ ನಾದಿನಿಯೊಬ್ಬಳಿರುವಳು. ಅವಳು ಸದಾ ನನ್ನನ್ನು ನೋಡಿ ನಟಿಕೆ ಮುರಿಯುತ್ತಿರುವಳು. ಯಾವ ಸನ್ಮಾರ್ಗದಿಂದ ನನಗೆ ಸುಖವಾಗುವುದು ಹೇಳು.

೪೩. ಬಂಜರು ನೆಲದಲ್ಲಿ ನೆಟ್ಟ ಬೀಜಗಳು ಮೊಳೆಯುವುದಿಲ್ಲವಷ್ಟೆ. ಓ ವಿಪ್ರೋತ್ತಮಾ, ನಾನು ಯಾವ ವ್ರತವನ್ನು ಮಾಡಿದರೆ ಇವರೆಲ್ಲರೂ ನನ್ನ ವಶರಾಗುವರು? ಆ ವ್ರತವನ್ನು ಹೇಳು; ನಿನ್ನ ಅಡಿಯಾಳಾಗುವೆನು.

೪೪-೪೭. ನಾರದನು ಹೇಳಿದನು.—ಓ ಮಂಗಳಮುಖೀ, ನಾನು ನಿನಗೆ ಹಿಂದೆ ಹೇಳಿದ ವ್ರತವನ್ನು ಮಾಡಿ ಪಾರ್ವತೀದೇವಿಯು ಈಶ್ವರನ ಅರ್ಧದೇಹದಲ್ಲಿ ನೆಲಸಿದಳು. ಲಕ್ಷ್ಮಿಯೂ ಹಾಗೆಯೇ ವಿಷ್ಣುವಿನ ಎದೆಯಲ್ಲಿ ನಿಂತಳು. ಸಾವಿತ್ರಿಯು ಬ್ರಹ್ಮನ ಮುಖವನ್ನಾಕ್ರಮಿಸಿದಳು. ಅರುಂಧತಿಯೂ ಸಹ ವಸಿಷ್ಠಮಹರ್ಷಿಯನ್ನು

ಏತೇನೋಪೋಷಿತೇನೇಹ ಭರ್ತಾ ಸ್ಥಾಸ್ಯತಿ ತೇ ವಶೇ ।
ಶ್ವಶ್ರೂಶ್ವಶುರಯೋಶ್ಚೈವ ಮುಖಬಂಧೋ ಭವಿಷ್ಯತಿ ॥೪೬॥

ಏವಂ ಶ್ರುತ್ವಾ ತು ಸುಶ್ರೋಣಿ ಯಥೇಷ್ಟಂ ಕರ್ತುಮರ್ಹಸಿ ।
ನಾರದಸ್ಯ ವಚಃ ಶ್ರುತ್ವಾ ರಾಜ್ಞೀ ವಚನಮಬ್ರವೀತ್ ॥೪೭॥

ಪ್ರಸಾದಂ ಕುರು ವಿಪ್ರೇಂದ್ರ ದಾನಂ ಗ್ರಾಹ್ಯಂ ಯಥೇಪ್ಸಿತಂ ।
ಸುವರ್ಣಮಣಿರತ್ನಾನಿ ವಸ್ತ್ರಾಣ್ಯಾಭರಣಾನಿ ಚ ॥೪೮॥

ತವ ದಾಸ್ಯಾಮ್ಯಹಂ ವಿಪ್ರ ಯಚ್ಚಾನ್ಯದಪಿ ದುರ್ಲಭಂ ।
ಪ್ರಗೃಹಾಣ ದ್ವಿಜಶ್ರೇಷ್ಠ ಪ್ರೀಯೇತಾಂ ಹರಿಶಂಕರೌ ॥೪೯॥

॥ ನಾರದ ಉವಾಚ ॥

ಅನ್ಯಸ್ಮೈ ದೀಯತಾಂ ಭದ್ರೇ ಕ್ಷೀಣವೃತ್ತಿಸ್ತು ಯೋ ದ್ವಿಜಃ ।
ಅಹಂ ತು ಸರ್ವಸಂಪನ್ನೋ ಮದ್ಭಕ್ತಿಃ ಕ್ರಿಯತಾಮಿತಿ ॥೫೦॥

---

ಎಡೆಬಿಡದಿರುವಳು. ಈ ಉಪವಾಸವ್ರತದಿಂದ ನಿನ್ನ ಪತಿಯು ನಿನ್ನ ಅಧೀನನಾಗುವನು. ಅತ್ತೆಮಾವಂದಿರ ಬಾಯಿಗೆ ಬೀಗ ಬೀಳುವುದು.

೪೭. ಸುಂದರೀ, ನಾನು ಹೇಳಿದುದನ್ನು ಕೇಳಿ ನಿನಗೆ ತೋರಿದಂತೆ ಮಾಡು ಎಂದು ನಾರದಮುನಿಯು ಹೇಳಲು ಅದನ್ನು ಕೇಳಿ ರಾಣಿಯು ಇಂತೆಂದಳು.

೪೮-೪೯. ಓ ಬ್ರಾಹ್ಮಣೋತ್ತಮಾ, ಕೃಪೆಮಾಡು. ನಿನ್ನ ಮನಸ್ಸಿಗೆ ಇಷ್ಟವಾದ ದಾನವನ್ನು ಸ್ವೀಕರಿಸು. ಎಲೈ ದ್ವಿಜವರ್ಯಾ, ಚಿನ್ನ, ರತ್ನ, ವಸ್ತ್ರ ಮತ್ತು ಆಭರಣಗಳನ್ನೂ ಇನ್ನೂ ದುರ್ಲಭವಾದ ಇತರ ವಸ್ತುಗಳನ್ನೂ ನಿನಗೆ ಕೊಡುವೆನು. ಓ ದ್ವಿಜಪುಂಗವಾ, ಅವುಗಳನ್ನು ತೆಗೆದುಕೋ. ವಿಷ್ಣುವೂ ಈಶ್ವರನೂ ತೃಪ್ತರಾಗಲಿ.

೫೦. ನಾರದನು ಹೇಳಿದನು.—ಎಲೌ ಕಲ್ಯಾಣೀ, ಜೀವನಕ್ಕೆ ಮಾರ್ಗವಿಲ್ಲದ ಮತ್ತಾವ ಬ್ರಾಹ್ಮಣನಿಗಾದರೂ ಇವುಗಳನ್ನು ದಾನಮಾಡು. ನನಗಾದರೋ ಎಲ್ಲವೂ ಸಮೃದ್ಧಿಯಾಗಿವೆ. ನನ್ನಲ್ಲಿ ಭಕ್ತಿಯನ್ನಿಟ್ಟು ನಡೆ.

**ಏವಂ ತಾಸಾಂ ಮನೋ ಹೃತ್ವಾ ಸರ್ವಾಸಾಂ ತು ಪತಿವ್ರತಾತ್ ।**
**ಜಗಾಮ ಭರತಶ್ರೇಷ್ಠ ಸ್ವಕೀಯಂ ಸ್ಥಾನಕಂ ಪುನಃ ॥೫೧॥**

**ತತೋ ಹ್ಯಹೃಷ್ಟಹೃದಯಾ ಅನ್ಯತೋ ಗತಮಾನಸಾಃ ।**
**ಪುರೇ ಚ್ಛಿದ್ರಂ ಸಮುತ್ಪನ್ನಂ ಬಾಣಸ್ಯ ತು ಮಹಾತ್ಮನಃ ॥೫೨॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ**
**ಸಪ್ತಾಶೀತ್ಯಧಿಕಶತತಮೋಽಧ್ಯಾಯಃ**

---

೫೧. ಭರತವಂಶದಲ್ಲಿ ಶ್ರೇಷ್ಠನಾದ ಎಲೈ ಧರ್ಮರಾಜಾ, ಹೀಗೆ ಅವರೆಲ್ಲರ ಮನಸ್ಸನ್ನೂ ಪತಿಭಕ್ತಿಯಿಂದ ಕದಲಿಸಿ ನಾರದಮಹರ್ಷಿಯು ಮತ್ತೆ ತನ್ನ ಸ್ಥಾನಕ್ಕೆ ಹೋದನು.

೫೨. ಬಳಿಕ ಆ ಹೆಂಗಸರಿಗೆ ಹರ್ಷವು ಹೋಯಿತು. ಮನಸ್ಸು ಪತಿಭಕ್ತಿಯನ್ನು ಬಿಟ್ಟು ಬೇರೆಕಡೆಗೆ ಕದಲಿತು. ಮಹಾತ್ಮನಾದ ಬಾಣಾಸುರನ ಪಟ್ಟಣದಲ್ಲಿ ಛಿದ್ರವೇರ್ಪಟ್ಟಿತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಬಾಣಾಸುರನ ವೃತ್ತಾಂತವನ್ನು ಹೇಳಿದೆ.

ಮಹಾಶೂರನಾದ ಬಾಣಾಸುರನ ರಾಜಧಾನಿಯಾದ ತ್ರಿಪುರವು ಅಂತರಿಕ್ಷದಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿತ್ತು. ಆದರಿಂದ ಭೀತರಾಗಿ ಇಂದ್ರಾದಿದೇವತೆಗಳು ಶಂಕರನಲ್ಲಿ ಮೊರೆಯಿಟ್ಟರು. ಪರಮೇಶ್ವರನು ಅವರಿಗೆ ಅಭಯವನ್ನಿತ್ತು ಸಂತೈಸಿದನು. ತರುವಾಯ ನಾರದನನ್ನು ಬರಮಾಡಿ, ಬಾಣಾಸುರನ ಪತ್ನಿಯರ ಪಾತಿವ್ರತ್ಯದ ಮಹಿಮೆಯಿಂದ ಆ ನಗರವು ಹಾಗೆ ಚಲಿಸುತ್ತಿದೆಯೆಂದೂ ಅವರ ಮನಸ್ಸನ್ನು ಬೇರೆಕಡೆಗೆ ಕದಲಿಸಬೇಕೆಂದೂ ಹೇಳಿಕಳುಹಿಸಿದನು. ದೇವರ್ಷಿಯು

ತ್ರಿಪುರ ನಗರಕ್ಕೆಹೋದನು. ದೈತ್ಯೇಂದ್ರನು ಅವನಿಗೆ ಷೋಡಶೋಪಚಾರಗಳನ್ನು ಸಲ್ಲಿಸಿ ಆಸನದ ಮೇಲೆ ಕುಳ್ಳಿರಿಸಿದನು.

ಬಾಣಾಸುರನ ಪತ್ನಿಯಾದ ಅನೌಪಮ್ಯೆಯೆಂಬಾಕೆಯು ನಾರದನಿಗೆ ಗೌರವದಿಂದ ನಮಸ್ಕಾರಮಾಡಿ ಅತ್ತೆ, ಮಾವ, ನಾದಿನಿ ಮುಂತಾದವರು ತನ್ನ ಅಧೀನರಾಗುವಂತೆ ಯಾವುದಾದರೊಂದು ವ್ರತವನ್ನು ಹೇಳಬೇಕೆಂದು ಬೇಡಿದಳು. ಮಹರ್ಷಿಯು ತಿಲಧೇನುದಾನವೆಂಬ ವ್ರತವನ್ನು ಹೇಳಿ ಅದರ ಆಚರಣೆಯಿಂದಲೇ ಪಾರ್ವತಿ, ಲಕ್ಷ್ಮಿ, ಸಾವಿತ್ರಿ, ಅರುಂಧತಿ ಮುಂತಾದವರು ಪತಿವಾಲ್ಲಭ್ಯವನ್ನು ಪಡೆದರೆಂದು ಅದರ ಮಹಿಮೆಯನ್ನು ತಿಳಿಸಿ ತನ್ನ ಸ್ಥಳಕ್ಕೆಹೋದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರ ಎಂಬತ್ತೇಳನೆಯ ಅಧ್ಯಾಯವು ಮುಗಿದುದು.



## ಅಥಾಷ್ಟಾಶೀತ್ಯಧಿಕಶತತಮೋಽಧ್ಯಾಯಃ

|| ಮಾರ್ಕಂಡೇಯ ಉವಾಚ ||

ಯನ್ಮಾಂ ಪೃಚ್ಛಸಿ ಕೌಂತೇಯ ತನ್ಮೇ ಕಥಯತಃ ಶೃಣು ।
ಏತಸ್ಮಿನ್ನಂತರೇ ರುದ್ರೋ ನರ್ಮದಾತಟಮಾಸ್ಥಿತಃ || ೧ ||

ನಾಮ್ನಾ ಮಾಹೇಶ್ವರಂ ಸ್ಥಾನಂ ತ್ರಿಷು ಲೋಕೇಷು ವಿಶ್ರುತಂ ।
ತಸ್ಮಿನ್ ಸ್ಥಾನೇ ಮಹಾದೇವೋಽಚಿಂತಯತ್ತ್ರಿಪುರಕ್ಷಯಂ || ೨ ||

ಗಾಂಡೀವಂ ಮಂದರಂ ಕೃತ್ವಾ ಗುಣಂ ಕೃತ್ವಾ ಚ ವಾಸುಕಿಂ ।
ಸ್ಥಾನಂ ಕೃತ್ವಾ ತು ವೈಶಾಖಂ ವಿಷ್ಣುಂ ಕೃತ್ವಾ ಶರೋತ್ತಮಂ || ೩ ||

ಶಲ್ಯೇ ಚಾಗ್ನಿಂ ಪ್ರತಿಷ್ಠಾಪ್ಯ ಮುಖೇ ವಾಯುಂ ಸಮರ್ಪಯತ್ ।
ಹಯಾಂಶ್ಚ ಚತುರೋ ವೇದಾನ್ ಸರ್ವದೇವಮಯಂ ರಥಂ || ೪ ||

ಅಭೀಷವೋಽಶ್ವಿನೌ ದೇವಾವಕ್ಷೋ ವಜ್ರಧರಃ ಸ್ವಯಂ ।
ಸ ತಸ್ಯಾಜ್ಞಾಂ ಸಮಾದಾಯ ತೋರಣೇ ಧನದಃ ಸ್ಥಿತಃ || ೫ ||

---

೧-೨. ಮಾರ್ಕಂಡೇಯನು ಹೇಳಿದನು.—ಓ ಧರ್ಮರಾಜಾ, ನಿನ್ನ ಪ್ರಶ್ನೆಗೆ ಉತ್ತರವನ್ನು ಹೇಳುವೆನು ಕೇಳು. ಈ ನಡುವೆ ಪರಮೇಶ್ವರನು ನರ್ಮದಾನದಿಯ ತೀರದಲ್ಲಿ ಹೋಗಿ ನಿಂತನು. ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಆ ಸ್ಥಳಕ್ಕೆ ಮಾಹೇಶ್ವರ ಸ್ಥಾನವೆಂದು ಹೆಸರು. ಮಹಾದೇವನು ಅಲ್ಲಿ ಕುಳಿತು ತ್ರಿಪುರನಗರವನ್ನು ನಾಶಗೊಳಿಸುವ ಉಪಾಯವನ್ನು ಚಿಂತಿಸಿದನು.

೩-೫. ಮಂದರ ಪರ್ವತವನ್ನು ಬಿಲ್ಲಾಗಿಯೂ ವಾಸುಕಿಯನ್ನು ಹೆದೆಯಾಗಿಯೂ ಮಾಡಿದನು. ಕುಮಾರಸ್ವಾಮಿಯು ಬಾಣವನ್ನು ಹೂಡುವ ಸ್ಥಳವಾದನು. ವಿಷ್ಣುವು ಉತ್ತಮವಾದ ಬಾಣವಾದನು. ಅದರ ಮೊನೆಯಲ್ಲಿ ಅಗ್ನಿಯನ್ನೂ ಮುಖದಲ್ಲಿ ವಾಯುವನ್ನೂ ಪರಮೇಶ್ವರನು ನಿಲ್ಲಿಸಿದನು. ನಾಲ್ಕು ವೇದಗಳೂ ಕುದುರೆಗಳಾದುವು. ರಥವು ಸಕಲದೇವಮಯವಾಯಿತು. ಅಶ್ವಿನೀ ದೇವತೆಗಳು ಕಡಿವಾಣವಾದರು. ಇಂದ್ರನೇ ಅಚ್ಚಿನಮರವಾದನು. ಕುಬೇರನು ಮಹಾದೇವನ ಅಪ್ಪಣೆಯಂತೆ ಹೆಬ್ಬಾಗಿಲಲ್ಲಿ ನಿಂತನು.

ಯಮಸ್ತು ದಕ್ಷಿಣೇ ಹಸ್ತೇ ವಾಮೇ ಕಾಲಸ್ತು ದಾರುಣಃ ।
ಚಕ್ರೇ ತ್ವಮರಕೋಟ್ಯಸ್ತು ಗಂಧರ್ವಾ ಲೋಕವಿಶ್ರುತಾಃ ॥ ೬ ॥

ಪ್ರಜಾಪತೀ ರಥಶ್ರೇಷ್ಠೋ ಬ್ರಹ್ಮಾ ಚೈವ ತು ಸಾರಥಿಃ ।
ಏವಂ ಕೃತ್ವಾ ತು ದೇವೇಶಃ ಸರ್ವದೇವಮಯಂ ರಥಂ ॥ ೭ ॥

ಸೋಽತಿಷ್ಠತ್ಸ್ಥಾಣುಭೂತಸ್ತು ಸಹಸ್ರಪರಿವತ್ಸರಾ ।
ಯದಾ ತ್ರೀಣಿ ಸಮೇತಾನಿ ಅಂತರಿಕ್ಷೇ ಸ್ಥಿತಾನಿ ವೈ ॥ ೮ ॥

ತ್ರಿಪರ್ವಣಾ ತ್ರಿಶಲ್ಯೇನ ತದಾ ತಾನಿ ವ್ಯಭೇದಯತ್ ।
ಶರಃ ಪ್ರಚೋದಿತಸ್ತೇನ ರುದ್ರೇಣ ತ್ರಿಪುರಂ ಪ್ರತಿ ॥ ೯ ॥

ಭ್ರಷ್ಟತೇಜಾಃ ಸ್ತ್ರೀಯೋ ಜಾತಾ ಬಲಂ ತಾಸಾಂ ವ್ಯಶೀರ್ಯತ ।
ಉತ್ಪಾತಾಶ್ಚ ಪುರೇ ತಸ್ಮಿನ್ ಪ್ರಾದುರ್ಭೂತಾಃ ಸಹಸ್ರಶಃ ॥೧೦॥

ತ್ರಿಪುರಸ್ಯ ವಿನಾಶಾಯ ಕಾಲರೂಪಾಭವಂಸ್ತದಾ ।
ಅಟ್ಟಹಾಸಂ ಪ್ರಮುಂಚಂತಿ ಹಯಾಃ ಕಾಷ್ಠಮಯಾಸ್ತದಾ ॥೧೧॥

---

೬-೭. ಬಲಗಡೆ ಯಮನೂ ಎಡಗಡೆ ಭಯಂಕರನಾದ ಕಾಲನೂ ಕುಳಿತರು. ಲೋಕವಿಖ್ಯಾತರಾದ ಕೋಟಿಲೆಕ್ಕದ ದೇವತೆಗಳು ಚಕ್ರದಲ್ಲಿ ನೆಲಸಿದರು. ಪ್ರಜಾಪತಿಯೂ ದೇವಶ್ರೇಷ್ಠನೂ ಆದ ಬ್ರಹ್ಮನು ಸಾರಥಿಯಾದನು. ದೇವದೇವನಾದ ಪರಮೇಶ್ವರನು ಹೀಗೆ ಸಕಲ ದೇವತಾಮಯವಾದ ರಥವನ್ನು ನಿರ್ಮಿಸಿ ಸಾವಿರಾರು ವರ್ಷಗಳ ಕಾಲ ಅದರಲ್ಲಿ ಸ್ಥಿರವಾಗಿ ಕುಳಿತನು.

೮-೯. ಅಂತರಿಕ್ಷದಲ್ಲಿ ಆ ಮೂರು ನಗರಗಳೂ ಒಟ್ಟಿಗೆ ಸೇರಿದಾಗ ಮೂರು ಗಿಣ್ಣುಗಳುಳ್ಳ ಮೂರು ಬಾಣಗಳಿಂದ ಅವುಗಳನ್ನು ಭೇದಿಸಿದನು. ಹೀಗೆ ರುದ್ರನು ತ್ರಿಪುರವನ್ನುದ್ದೇಶಿಸಿ ಬಾಣವನ್ನು ಪ್ರಯೋಗಿಸಿದನು.

೧೦. ಸ್ತ್ರೀಯರು ತಮ್ಮ ತೇಜಸ್ಸನ್ನು ಕಳೆದುಕೊಂಡರು. ಅವರ ಬಲವು ಅಡಗಿತು. ಆಗ ತ್ರಿಪುರದಲ್ಲಿ ಸಾವಿರಾರು ಅಪಶಕುನಗಳು ತಲೆದೋರಿದುವು.

೧೧. ತ್ರಿಪುರದ ವಿನಾಶಕ್ಕಾಗಿ ಆಗ ಎಲ್ಲವೂ ಮೃತ್ಯುರೂಪವಾದುವು. ಮರದಿಂದ ಮಾಡಿದ ಅಲಂಕಾರದ ಕುದುರೆಗಳು ಅಟ್ಟಹಾಸಗೆಯ್ದುವು.

ನಿಮೇಷೋನ್ಮೇಷಣಂ ಚೈವ ಕುರ್ವತೇ ಚಿತ್ರರೂಪಿಣಃ |
ಸ್ವಪ್ನೇ ಪಶ್ಯಂತಿ ಚಾತ್ಮಾನಂ ರಕ್ತಾಂಬರವಿಭೂಷಿತಂ ||೧೨||

ಸ್ವಪ್ನೇ ತು ಸರ್ವೇ ಪಶ್ಯಂತಿ ವಿಪರೀತಾನಿ ಯಾನಿ ತು |
ಏತಾನ್ಪಶ್ಯಂತಿ ಉತ್ಪಾತಾಂಸ್ತತ್ರ ಸ್ಥಾನೇ ತು ಯೇ ಜನಾಃ ||೧೩||

ತೇಷಾಂ ಬಲಂ ಚ ಬುದ್ಧಿಶ್ಚ ಹರಕೋಪೇನ ನಾಶಿತೇ |
ತತಃ ಸಾಂವರ್ತಕೋ ವಾಯುರ್ಯುಗಾಂತಪ್ರತಿಮೋ ಮಹಾ ||೧೪||

ಸಮೀರಿತೋಽನಲಸ್ತೇನ ಉತ್ತಮಾಂಗೇಷು ಧಾವತಿ |
ಜ್ವಲಂತಿ ಪಾದಪಾಸ್ತತ್ರ ಪತಂತಿ ಶಿಖರಾಣಿ ಚ ||೧೫||

ಸರ್ವತೋ ವ್ಯಾಕುಲೀಭೂತಂ ಹಾಹಾಕಾರಮಚೇತನಂ |
ಭಗ್ನೋದ್ಯಾನಾನಿ ಸರ್ವಾಣಿ ಕ್ಷಿಪ್ರಂ ತತ್ಪ್ರತ್ಯಭಜ್ಯತ ||೧೬||

---

೧೨. ಚಿತ್ರರೂಪನಾದ ಪ್ರಾಣಿಗಳು ಕಣ್ಣುರೆಪ್ಪೆಗಳನ್ನು ಬಡಿದು ತೆರೆದುವು. ತಾವು ಕೆಂಪುಬಟ್ಟೆಯನ್ನು ಧರಿಸಿಕೊಂಡಿದ್ದಂತೆ ಎಲ್ಲರೂ ಕನಸುಕಂಡರು.

೧೩. ಎಲ್ಲವಸ್ತುಗಳೂ ಸ್ವಪ್ನದಲ್ಲಿ ತಲೆಕೆಳಕಾಗಿ ಕಂಡುವು. ಅಲ್ಲಿದ್ದ ಜನರೆಲ್ಲರೂ ಈ ಅಪಶಕುನಗಳನ್ನು ನೋಡಿದರು.

೧೪-೧೫. ಈಶ್ವರನ ಕೋಪದಿಂದ ಅವರ ಬಲವೂ ಬುದ್ಧಿಯೂ ನಾಶವಾದುವು. ಬಳಿಕ ಯುಗಾಂತದಲ್ಲಿ ಬೀಸುವಂತೆ ಪ್ರಳಯಮಾರುತವು ಬೀಸಿತು. ಆದರಿಂದ ಪ್ರಜ್ವಲಿಸಿ ದಳ್ಳುರಿಯು ಅವರ ತಲೆಗಳಿಗೆ ತಗುಲಿತು. ಮರಗಳು ಉರಿದುವು. ಶಿಖರಗಳು ಬಿದ್ದುವು.

೧೬. ಎಲ್ಲೆಲ್ಲೂ ಗಾಬರಿ ಹರಡಿತು. ಹಾಹಾಕಾರವು ಹಬ್ಬಿತು. ಚೇತನ ಅಡಗಿತು. ಉದ್ಯಾನಗಳೆಲ್ಲ ಮುರಿದು ಬಿದ್ದುವು. ಬೇಗನೆ ಆ ನಗರವು ಭಗ್ನವಾಯಿತು.

ತೇನೈವ ಪೀಡಿತಂ ಸರ್ವಂ ಜ್ವಲಿತಂ ತ್ರಿಶಿಖೈಃ ಶರೈಃ ।
ದ್ರುಮಾಶ್ಚಾರಾಮಖಂಡಾನಿ ಗೃಹಾಣಿ ವಿವಿಧಾನಿ ಚ ॥೧೭॥

ದಶದಿಕ್ಷು ಪ್ರವೃತ್ತೋಽಯಂ ಸಮೃದ್ಧೋ ಹವ್ಯವಾಹನಃ ।
ಮನಃ ಶಿಲಾಪುಂಜನಿಭೋ ದಿಶೋ ದಶ ವಿಭಾಗಶಃ ॥೧೮॥

ಶಿಖಾಶತೈರನೇಕೈಸ್ತು ಪ್ರಜಜ್ವಾಲ ಹುತಾಶನಃ ।
ಸರ್ವಂ ಕಿಂಶುಕವರ್ಣಾಭಂ ಜ್ವಲಿತಂ ದೃಶ್ಯತೇ ಪುರಂ ॥೧೯॥

ಗೃಹಾದ್ಗೃಹಾಂತರಂ ನೈವ ಗಂತುಂ ಧೂಮೇನ ಶಕ್ಯತೇ ।
ಹರಕೋಪಾನಲೈರ್ದಗ್ಧಂ ಕ್ರಂದಮಾನಂ ಸುದುಃಖಿತಂ ॥೨೦॥

ಪ್ರದೀಪ್ತಂ ಸರ್ವತೋ ದಿಕ್ಷು ದಹ್ಯತೇ ತ್ರಿಪುರಂ ಪುರಂ ।
ಪ್ರಾಸಾದಶಿಖರಾಗ್ರಾಣಿ ವ್ಯಶೀರ್ಯಂತ ಸಹಸ್ರಶಃ ॥೨೧॥

ನಾನಾಮಣಿವಿಚಿತ್ರಾಣಿ ವಿಮಾನಾನ್ಯಪ್ಯನೇಕಧಾ ।
ಗೃಹಾಣಿ ಚೈವ ರಮ್ಯಾಣಿ ದಹ್ಯಂತೇ ದೀಪ್ತವಹ್ನಿನಾ ॥೨೨॥

---

೧೭. ಎಲ್ಲವೂ ಆ ಅಗ್ನಿಯಿಂದಲೇ ಪೀಡೆಗೊಳಗಾಯಿತು. ಮರಗಳು, ಕೈದೋಟಗಳು, ಬಗೆಬಗೆಯ ಮನೆಗಳು ಇವುಗಳೆಲ್ಲವೂ ಮುಮ್ಮೊನೆಯ ಬಾಣಗಳಿಂದ ಉರಿದುವು.

೧೮-೧೯. ದೊಡ್ಡದಾಗಿ ಬೆಳೆದ ಈ ಬೆಂಕಿಯು ಹತ್ತುದಿಕ್ಕುಗಳಲ್ಲಿಯೂ ಹರಡಿತು. ನೂರಾರು ಜ್ವಾಲೆಗಳಿಂದ ಕೂಡಿ ಅದು ಉರಿಯುತ್ತಿತ್ತು. ಪಟ್ಟಣವೆಲ್ಲ ಮುತ್ತುಗದ ಹೂಬಣ್ಣದಿಂದ ತುಂಬಿದ್ದಿತು.

೨೦. ಹೊಗೆಯಿಂದ ಒಂದು ಮನೆಯನ್ನು ಬಿಟ್ಟು ಮತ್ತೊಂದು ಮನೆಗೆ ಹೋಗುವುದಕ್ಕೆ ಸಾಧ್ಯವಾಗಲಿಲ್ಲ. ಈಶ್ವರನ ಕೋಪಾಗ್ನಿಯಿಂದ ಸುಟ್ಟುಹೋಗಿ ಆ ತ್ರಿಪುರನಗರವು ಅಳುವಿನಿಂದಲೂ ದುಃಖದಿಂದಲೂ ತುಂಬಿ ಎಲ್ಲದಿಕ್ಕುಗಳಲ್ಲಿಯೂ ಉರಿಯುತ್ತಿತ್ತು.

೨೧-೨೨. ಉಪ್ಪರಿಗೆಯ ಶಿಖರಗಳೂ ಕಲಶಗಳೂ ಸಾವಿರಗಟ್ಟಲೆಯಾಗಿ ಸಿಡಿದುವು. ಬಗೆಬಗೆಯ ರತ್ನಗಳಿಂದ ಆಶ್ಚರ್ಯಕರವಾದ ವಿಮಾನಗಳೂ ರಮ್ಯವಾದ ಮನೆಗಳೂ ಆ ದಳ್ಳುರಿಯಿಂದ ಸುಟ್ಟುಹೋದುವು.

ಧಾವಂತಿ ದ್ರುಮಖಂಡೇಷು ವಲಭೀಷು ತಥಾ ಜನಾಃ ।
ದೇವಾಗಾರೇಷು ಸರ್ವೇಷು ಪ್ರಜ್ವಲಂತಃ ಪ್ರಧಾವಿತಾಃ ॥೨೩॥

ಕ್ರಂದಂತಿ ಚಾನಲಪ್ಲುಷ್ಟಾ ರುದಂತಿ ವಿವಿಧೈಃ ಸ್ವರೈಃ ।
ಗಿರಿಕೂಟನಿಭಾಸ್ತತ್ರ ದೃಶ್ಯಂತೇಽಂಗಾರರಾಶಯಃ ॥೨೪॥

ಗಜಾಶ್ಚ ಗಿರಿಕೂಟಾಭಾ ದಹ್ಯಮಾನಾ ಯತಸ್ತತಃ ।
ಸ್ತುವಂತಿ ದೇವದೇವೇಶಂ ಪರಿತ್ರಾಯಸ್ವ ನಃ ಪ್ರಭೋ ॥೨೫॥

ಅನ್ಯೋನ್ಯಂ ಚ ಪರಿಷ್ವಜ್ಯ ಹುತಾಶನಪ್ರದೀಪಿತಾಃ ।
ಸ್ನೇಹಾತ್ಪ್ರದಹ್ಯಮಾನಾಶ್ಚ ತಥೈವ ವಿಲಯಂ ಗತಾಃ ॥೨೬॥

ದಹ್ಯಂತೇ ದಾನವಾಸ್ತತ್ರ ಶತಶೋಽಥ ಸಹಸ್ರಶಃ ॥೨೭॥

ಹಂಸಕಾರಂಡವಾಕೀರ್ಣಾ ನಲಿನ್ಯಃ ಸಹಪಂಕಜಾಃ ।
ದೃಶ್ಯಂತೇಽನಲದಗ್ಧಾನಿ ಪುರೋದ್ಯಾನಾನಿ ದೀರ್ಘಿಕಾಃ ॥೨೮॥

---

೨೩. ಮರಗಳ ತೋಪುಗಳಲ್ಲಿಯೂ ಮನೆಗಳ ಚಾವಣಿಗಳಲ್ಲಿಯೂ, ಎಲ್ಲ ದೇವಸ್ಥಾನಗಳಲ್ಲಿಯೂ ಬೆಂಕಿ ತಗುಲಿ ಜನರು ಓಡಾಡುತ್ತಿದ್ದರು.

೨೪. ಬೆಂಕಿಯಿಂದ ಬೆಂದು ದಾನವರು ಅಳುತ್ತಿದ್ದರು. ವಿವಿಧ ಸ್ವರಗಳಿಂದ ಗೋಳಿಡುತ್ತಿದ್ದರು. ಕೆಂಡದ ರಾಶಿಗಳು ಪರ್ವತದ ಶಿಖರದಂತೆ ಬಿದ್ದಿದ್ದುವು.

೨೫. ಬೆಟ್ಟದ ಶಿಖರದಂತಿದ್ದ ಆನೆಗಳು ಸಿಕ್ಕಿಸಿಕ್ಕಿದಕಡೆ ಬೆಂಕಿಯಿಂದ ಸುಟ್ಟು ಹೋಗಿ, "ದೇವಾ, ನಮ್ಮನ್ನು ಸಲಹು" ಎಂದು ದೇವದೇವನನ್ನು ಸ್ತುತಿಸುತ್ತಿದ್ದುವು.

೨೬-೨೭. ಬೆಂಕಿ ಮೈಯನ್ನು ಸುಡುತ್ತಿರಲು ಸ್ನೇಹದಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡು ಹಾಗೆಯೇ ಸುಟ್ಟುಹೋಗಿ ಮೃತರಾದರು. ನೂರಾರುಮಂದಿ ಸಾವಿರಾರು ಮಂದಿ ದಾನವರು ಬೆಂದು ಬೂದಿಯಾಗುತ್ತಿದ್ದರು.

೨೮. ಹಂಸ, ಕಾರಂಡವ ಮುಂತಾದ ನೀರು ಹಕ್ಕಿಗಳಿಂದಲೂ ತಾವರೆ ಹೂಗಳಿಂದಲೂ ತುಂಬಿದ ನೈದಿಲೆಕೊಳಗಳು ಬೆಂಕಿಯಿಂದ ಸುಟ್ಟುಹೋದುವು. ಪಟ್ಟಣದ ಉದ್ಯಾನಗಳಿಗೂ ಕೊಳಗಳಿಗೂ ಬೆಂಕಿಯು ಉರಿಯು ತಗುಲಿತು.

ಅಮ್ಲಾನಪಂಕಜಚ್ಛನ್ನಾ ವಿಸ್ತೀರ್ಣಾ ಯೋಜನಾಯುತಾಃ ।
ಗಿರಿಕೂಟನಿಭಾಸ್ತತ್ರ ಪ್ರಾಸಾದಾ ರತ್ನಭೂಷಿತಾಃ ॥೨೯॥

ಪತಂತ್ಯನಲನಿರ್ದಗ್ಧಾ ನಿಸ್ತೋಯಾ ಜಲದಾ ಇವ ।
ವರಸ್ತ್ರೀಬಾಲವೃದ್ಧೇಷು ಗೋಷು ಪಕ್ಷಿಷು ವಾಜಿಷು ॥೩೦॥

ನಿರ್ದಯೋ ವ್ಯದಹದ್ವಹ್ನಿರ್ಹರಕ್ರೋಧೇನ ಪ್ರೇರಿತಃ ।
ಸಹಸ್ರಶಃ ಪ್ರಬುದ್ಧಾಶ್ಚ ಸುಪ್ತಾಶ್ಚ ಬಹವೋ ಜನಾಃ ॥೩೧॥

ಪುತ್ರಮಾಲಿಂಗ್ಯ ತೇ ಗಾಢಂ ದಹ್ಯಂತೇ ತ್ರಿಪುರಾಗ್ನಿನಾ ।
ನಿದಾಘೋಽಭೂನ್ಮಹಾವಹ್ನೇರಂತಕಾಲೇ ಯಥಾ ತಥಾ ॥೩೨॥

ಕೇಚಿದುಗ್ರಪ್ತಾಃ ಪ್ರದಗ್ಧಾಸ್ತು ಭಾರ್ಯೋತ್ಸಂಗರತಾಸ್ತಥಾ ।
ಪಿತ್ರಾ ಮಾತ್ರಾ ಚ ಸುಶ್ಲಿಷ್ಟಾ ದಗ್ಧಾಸ್ತೇ ತ್ರಿಪುರಾಗ್ನಿನಾ ॥೩೩॥

---

೨೯. ನಳನಳಿಸುವ ತಾವರೆ ಹೂಗಳು ದಟ್ಟವಾಗಿ ಅಲಂಕರಿಸಿರಲು, ಯೋಜನ ಪ್ರಮಾಣ ವಿಸ್ತಾರವಾಗಿ, ಪರ್ವತದ ಶಿಖರಾಕಾರವಾದ, ರತ್ನಭೂಷಿತವಾದ ಉಪ್ಪರಿಗೆ ಮನೆಗಳು ಬೆಂಕಿಯಿಂದ ಸಂಪೂರ್ಣವಾಗಿ ಸುಟ್ಟುಹೋಗಿ ನೀರಿಲ್ಲದ ಮೋಡಗಳಂತೆ ಬೀಳುತ್ತಿದ್ದುವು.

೩೦. ಪತಿವ್ರತಾಸ್ತ್ರೀಯರು, ಹುಡುಗರು, ಮುದುಕರು, ಹಸುಗಳು, ಪಕ್ಷಿಗಳು, ಕುದುರೆಗಳು ಇವೊಂದನ್ನೂ ನೋಡದೆ ದಯಾರಹಿತನಾಗಿ ಈಶ್ವರನ ಕ್ರೋಧದಿಂದ ಪ್ರೇರಿತನಾದ ಅಗ್ನಿಯು ಸುಡುತ್ತಿದ್ದನು.

೩೧-೩೨. ಎಚ್ಚರವಾಗಿದ್ದ ಮತ್ತು ಮಲಗಿಕೊಂಡಿದ್ದ ಸಾವಿರಾರು ಮಂದಿ ದಾನವರು ತಮ್ಮ ಪುತ್ರರನ್ನು ಬಿಗಿಯಾಗಿ ತಬ್ಬಿಕೊಂಡು ತ್ರಿಪುರಾಗ್ನಿಯಲ್ಲಿ ಬೆಂದುಹೋದರು. ಅಪರಿಮಿತವಾದ ಆ ಬೆಂಕಿಯಿಂದ ಪ್ರಳಯಕಾಲದಲ್ಲಿ ಆಗುವಂತೆ ಸೆಕೆ ಹುಟ್ಟಿತು.

೩೩. ರಹಸ್ಯವಾಗಿ ತಮ್ಮ ಪತ್ನಿಯರ ತೊಡೆಯ ಮೇಲೆ ವಿಹರಿಸುತ್ತಿದ್ದ ಕೆಲವರು ಪ್ರಿಯರು ಹಾಗೆಯೇ ದಗ್ಧರಾದರು. ತಂದೆತಾಯಿಗಳು ಆಲಂಗಿಸಿಕೊಂಡಿದ್ದಂತೆಯೇ ಅನೇಕ ಜನ ಮಕ್ಕಳನ್ನು ತ್ರಿಪುರಾಗ್ನಿಯು ಸುಟ್ಟಿತು.

**ಅಥ ತಸ್ಮಿನ್ ಪುರೇ ದೀಪ್ತೇ ಸ್ತ್ರಿಯಶ್ಚಾಪ್ಸರಸೋಪಮಾಃ।**
**ಅಗ್ನಿಜ್ವಾಲಾಹತಾಸ್ತತ್ರ ಹ್ಯಪತನ್ಧರಣೀತಲೇ।**
**ಕಾಚಿಜ್ವ್ಯಾಮಾ ವಿಶಾಲಾಕ್ಷೀ ಮುಕ್ತಾವಲಿವಿಭೂಷಿತಾ ॥೩೪॥**

**ಧೂಮೇನಾಕುಲಿತಾ ಸಾ ತು ಪತಿತಾ ಧರಣೀತಲೇ।**
**ಕಾಚಿತ್ಕನಕವರ್ಣಾಭಾ ಇಂದ್ರನೀಲವಿಭೂಷಿತಾ ॥ ॥೩೫॥**

**ಭರ್ತಾರಂ ಪತಿತಂ ದೃಷ್ಟ್ವಾ ಪತಿತಾ ತಸ್ಯ ಚೋಪರಿ।**
**ಕಾಚಿದಾದಿತ್ಯಸಂಕಾಶಾ ಪ್ರಸುಪ್ತಾ ಚ ಗೃಹೇ ಸ್ಥಿತಾ ॥೩೬॥**

**ಅಗ್ನಿಜ್ವಾಲಾಹತಾ ಸಾ ತು ಪತಿತಾ ಗತಚೇತನಾ।**
**ಉತ್ಥಿತೋ ದಾನವಸ್ತತ್ರ ಖಡ್ಗಹಸ್ತೋ ಮಹಾಬಲಃ ॥೩೭॥**

---

೩೪. ಬಳಿಕ ಆ ನಗರದಲ್ಲಿ ಅಪ್ಸರಸ್ತ್ರೀಯರಂತಹ ತರುಣಿಯರು ಬೆಂಕಿಯ ಉರಿಗೆ ಸಿಕ್ಕಿ ಹತರಾಗಿ ನೆಲದ ಮೇಲೆ ಬಿದ್ದರು. ಕಣ್ಣುಗಳು ವಿಶಾಲವಾಗಿ, ಮುತ್ತಿನ ಹಾರಗಳಿಂದ ಸಿಂಗರಿಸಿ ಕೊಂಡಿದ್ದ ನಡುಹರೆಯದ ಸುಂದರಿಯೊಬ್ಬಳು ಹೊಗೆಗೆ ಸಿಕ್ಕಿ ಬಳಲಿ ನೆಲದಮೇಲೆ ಬಿದ್ದುಬಿಟ್ಟಳು.

೩೫. ಚಿನ್ನದಂತೆ ಮೈ ಬಣ್ಣವುಳ್ಳ, ಇಂದ್ರನೀಲ ರತ್ನಗಳಿಂದಲಂಕೃತಳಾದ ಒಬ್ಬಾಕೆಯು ತನ್ನ ಪತಿಯು ಬಿದ್ದುದನ್ನು ಕಂಡು ತಾನೂ ಅವನ ಮೇಲೆ ಬಿದ್ದಳು.

೩೬. ಸೂರ್ಯನಂತೆ ತೇಜಸ್ವಿಯಾದ ಒಬ್ಬನಾರೀಮಣಿಯು ಮನೆಯೊಳಗೆ ನಿದ್ದೆಮಾಡುತ್ತಿದ್ದು, ಅಗ್ನಿಜ್ವಾಲೆಗಳಿಗೆ ತುತ್ತಾಗಿ ಸತ್ತುಬಿದ್ದಳು.

೩೭. ಬಹು ಬಲಶಾಲಿಯಾದ ದಾನವನೊಬ್ಬನು ಕೈಯಲ್ಲಿ ಕತ್ತಿಯನ್ನು ಹಿಡಿದು ಎದ್ದುನಿಂತನು. ಆದರೆ ಅವನೂ ಕೂಡ ಬೆಂಕಿಯ ಹೊಡೆತಕ್ಕೆ ಸಿಕ್ಕಿ ನೆಲದ ಮೇಲೆ ಬಿದ್ದನು.

ವೈಶ್ವಾನರಹತಃ ಸೋಽಪಿ ಪತಿತೋ ಧರಣೀತಲೇ ।
ನೀಲವರ್ಣಾಽಪರಾ ನಾರೀ ಹಾರಕೇಯೂರಭೂಷಿತಾ ॥೩೮॥

ಶ್ವೇತವಸ್ತ್ರಪರೀಧಾನಾ ಬಾಲಂ ಸ್ತನ್ಯಂ ನ್ಯಧಾಪಯತ್ ।
ದಹ್ಯಂತಂ ಬಾಲಕಂ ದೃಷ್ಟ್ವಾ ರುದತೀ ಮೇಘಶಬ್ದವತ್ ॥೩೯॥

ಏವಂ ಸ ತು ದಹನ್ನಗ್ನಿರ್ಹರಕ್ರೋಧೇನ ಪ್ರೇರಿತಃ ।
ಕ್ವಚಿಚ್ಚಂದ್ರಪ್ರಭಾ ಸೌಮ್ಯಾ ವಜ್ರವೈಡೂರ್ಯಭೂಷಿತಾ ॥೪೦॥

ಸುತಮಾಲಿಂಗ್ಯ ವೇಪಂತೀ ದಗ್ಧಾ ಪತತಿ ಭೂತಲೇ ।
ಕಾಚಿತ್ಕುಂದೇಂದುವರ್ಣಾಭಾ ಕ್ರೀಡಂತೀ ಸ್ವಗೃಹೇ ಸ್ಥಿತಾ ॥೪೧॥

ಗೃಹೇ ಪ್ರಜ್ವಲಿತೇ ಸಾತು ಪ್ರತಿಬುದ್ಧಾ ಶಿಖಾರ್ದಿತಾ ।
ಪಶ್ಯಂತೀ ಜ್ವಲಿತಂ ಸರ್ವಂ ಹಾ ಸುತೋ ಮೇ ಕಥಂ ಗತಃ ॥೪೨॥

---

೩೮-೩೯. ಮೋಡದಂತೆ ನೀಲವರ್ಣದವಳಾದ ಮತ್ತೊಬ್ಬ ಹೆಂಗಸು ಹಾರದಿಂದಲೂ ತೋಳುಬಳೆಗಳಿಂದಲೂ ಅಲಂಕೃತಳಾಗಿ, ಶುಭ್ರವಸ್ತ್ರವನ್ನುಟ್ಟು ಮಗುವಿಗೆ ಸ್ತನ್ಯಪಾನಮಾಡಿಸುತ್ತಿದ್ದಳು. ಮಗು ಬೆಂಕಿಯಿಂದ ಸುಟ್ಟು ಹೋಗುತ್ತಿದ್ದುದನ್ನು ಕಂಡು ಗುಡುಗಿನಂತೆ ಗಟ್ಟಿಯಾಗಿ ಅಳತೊಡಗಿದಳು.

೪೦. ಈಶ್ವರನ ಕೋಪದಿಂದ ಪ್ರಯುಕ್ತವಾದ ಆ ಅಗ್ನಿ ಹೀಗೆ ಸುಡುತ್ತಿತ್ತು. ಚಂದ್ರನಂತೆ ಕಾಂತಿಯುಳ್ಳ ಸೌಮ್ಯಳಾದ, ವಜ್ರವೈಡೂರ್ಯಗಳಿಂದ ಭೂಷಿತಳಾದ ಒಬ್ಬ ಸುಂದರಿಯು ಕಂದನನ್ನಪ್ಪಿಕೊಂಡು ನಡುಗುತ್ತ ಬೆಂಕಿಯಿಂದ ಸುಟ್ಟು ಭೂಮಿಯ ಮೇಲೆ ಬಿದ್ದಳು.

೪೧-೪೨. ಮೊಲ್ಲೆಹೂವಿನಂತೆಯೂ ಚಂದ್ರನಂತೆಯೂ ಕಾಂತಿಯುಕ್ತಳಾದ ಒಬ್ಬಾಕೆಯು ತನ್ನ ಮನೆಯಲ್ಲಿ ಕ್ರೀಡಾಸಕ್ತಳಾಗಿದ್ದಳು. ಮನೆ ಉರಿಯತೊಡಗಲು ಬೆಂಕಿಯ ಜ್ವಾಲೆಯ ತಾಪದಿಂದ ಅವಳು ಎಚ್ಚೆತ್ತಳು. ಎಲ್ಲವೂ ಬೆಂದು ಹೋಗಿದ್ದುದನ್ನು ಕಂಡು, "ಅಯ್ಯೋ ನನ್ನ ಮಗನು ಹೋದನಲ್ಲ ಇನ್ನೇನುಗತಿ!" ಎಂದು ಹೇಳುತ್ತ ದಗ್ಧನಾದ ತನ್ನ ಪುತ್ರನನ್ನು ತಬ್ಬಿಕೊಂಡು ನೆಲದಮೇಲೆ ಉರುಳಿದಳು.

ಸುತಂ ಸಂದಗ್ಧಮಾಲಿಂಗ್ಯ ಪತಿತಾ ಧರಣೀತಲೇ ।
ಆದಿತ್ಯೋದಯವರ್ಣಾಭಾ ಲಕ್ಷ್ಮೀವದನಶೋಭನಾ ॥೪೩॥

ತ್ವರಿತಾ ದಹ್ಯಮಾನಾ ಸಾ ಪತಿತಾ ಧರಣೀತಲೇ ।
ಕಾಚಿತ್ಸುವರ್ಣವರ್ಣಾಭಾ ನೀಲರತ್ನೈರ್ವಿಭೂಷಿತಾ ॥೪೪॥

ಧೂಮೇನಾಕುಲಿತಾ ಸಾ ತು ಪ್ರಸುಪ್ತಾ ಧರಣೀತಲೇ ।
ಅನ್ಯಾಗೃಹೀತಹಸ್ತಾ ತು ಸಖಿ ದಹ್ಯತಿ ಬಾಲಿಕಾ ॥೪೫॥

ಅನೇಕದಿಶ್ಯರತ್ನಾಢ್ಯಾ ದೃಷ್ಟ್ವಾ ದಹನಮೋಹಿತಾ ।
ಶಿರಸಿ ಹ್ಯಂಜಲಿಂ ಕೃತ್ವಾ ವಿಜ್ಞಾಪಯತಿ ಪಾವಕಂ ॥೪೬॥

ಭಗವನ್ಯದಿ ವೈರಂ ತೇ ಪುರುಷೇಷ್ವಪಕಾರಿಷು ।
ಸ್ತ್ರಿಯಃ ಕಿಮಪರಾಧ್ಯಂತಿ ಗೃಹಪಂಜರಕೋಕಿಲಾಃ ॥೪೭॥

---

೪೩. ಉದಿಸುತ್ತಿರುವ ಸೂರ್ಯನ ಬಣ್ಣದಿಂದ ಪ್ರಕಾಶಿಸುತ್ತಿದ್ದ ಮಂಗಲಮಯವಾದ ಮುಖಕಾಂತಿಯಿಂದ ಕೂಡಿದ ಆಕೆಯು ಬೇಗನೆ ಬೆಂಕಿಗೆ ತುತ್ತಾಗಿ ಭೂಮಿಯ ಮೇಲೆ ಮಲಗಿದಳು.

೪೪. ಹೊಂಬಣ್ಣದಿಂದ ವಿರಾಜಿಸುತ್ತ ನೀಲರತ್ನಗಳಿಂದ ಅಲಂಕೃತಳಾದ ಮತ್ತೊಬ್ಬಳು ಹೊಗೆಗೆ ಸಿಕ್ಕಿಕೊಂಡು ಬಳಲಿ ನೆಲದಮೇಲೆ ಬಿದ್ದುಬಿಟ್ಟಳು.

೪೫-೪೬. ಹಲವು ದಿಕ್ಕುಗಳಿಂದ ಆರಿಸಿ ತಂದ ಅಮೂಲ್ಯವಾದ ರತ್ನಗಳಿಂದ ಬಹುವಾಗಿ ಅಲಂಕೃತಳಾದ ಮತ್ತೊಬ್ಬಳು, ಗೆಳತಿಯು ತನ್ನ ಕೈಯನ್ನು ಹಿಡಿದುಕೊಂಡಿರಲು "ಸಖೀ, ನನ್ನ ಮಗಳನ್ನು ಬೆಂಕಿ ಸುಡುತ್ತಿದೆಯಲ್ಲಾ!" ಎಂದು ಹೇಳಿ ಮೈಮರೆತು ಕೈಗಳನ್ನೆತ್ತಿ ತಲೆಯಮೇಲೆ ಮುಗಿದು ಅಗ್ನಿಯನ್ನು ಹೀಗೆ ಬೇಡಿಕೊಂಡಳು.

೪೭. ದೇವಾ, ಅಪಕಾರಮಾಡಿದ ಪುರುಷರಲ್ಲಿ ನಿನಗೆ ದ್ವೇಷವಿದ್ದರೆ ಇರಲಿ; ಮನೆಯೆಂಬ ಪಂಜರದೊಳಗಿನ ಕೋಕಿಲೆಗಳಂತಿರುವ ಸ್ತ್ರೀಯರು ನಿನಗೆ ಮಾಡಿದ ಅಪರಾಧವೇನು?

**ಪಾಪ ನಿರ್ದಯ ನಿರ್ಲಜ್ಜ ಕಸ್ತೇ ಕೋಪಃ ಸ್ತ್ರಿಯಃ ಪ್ರತಿ ।**
**ನ ದಾಕ್ಷಿಣ್ಯಂ ನ ತೇ ಲಜ್ಜಾ ನ ಸತ್ಯಂ ಶೌರ್ಯವರ್ಜಿತ ||೪೮||**

**ಅನೇನ ಹ್ಯುಪಸರ್ಗೇಣ ತೂಪಾಲಂಭಂ ಶಿಖಿನ್ಯಧಾತ್ ।**
**ಕಿಂ ತ್ವಯಾ ನ ಶ್ರುತಂ ಲೋಕೇ ಹ್ಯವಧ್ಯಾಃ ಶತ್ರುಯೋಷಿತಃ ||೪೯||**

**ಕಿಂತು ತುಭ್ಯಂ ಗುಣಾ ಹ್ಯೇತೇ ದಹನೋತ್ಸಾದನಂ ಪ್ರತಿ ।**
**ನ ಕಾರುಣ್ಯಂ ಭಯಂ ವಾಽಪಿ ದಾಕ್ಷಿಣ್ಯಂ ನ ಸ್ತ್ರಿಯಃ ಪ್ರತಿ ||೫೦||**

**ದಯಾಂ ಕುರ್ವಂತಿ ಮ್ಲೇಚ್ಛಾಪಿ ದಹಂತೀಂ ವೀಕ್ಷ್ಯ ಯೋಷಿತಂ ।**
**ಮ್ಲೇಚ್ಛಾನಾಮಪಿ ಕಷ್ಟೋಽಸಿ ದುರ್ನಿವಾರೋ ಹ್ಯಚೇತನಃ ||೫೧||**

**ಏತೇ ಚೈವ ಗುಣಾಸ್ತುಭ್ಯಂ ದಹನೋತ್ಸಾದನಂ ಪ್ರತಿ ।**
**ಆಸಾಮಪಿ ದುರಾಚಾರ ಸ್ತ್ರೀಣಾಂ ಕಿಂ ತೇ ನಿಪಾತನೇ ||೫೨||**

---

೪೮. ಪಾಪಿಷ್ಠನೇ, ದಯೆಯಿಲ್ಲದವನೇ, ಲಜ್ಜೆಗೆಟ್ಟವನೇ, ಹೆಂಗಸರ ಮೇಲೆ ನಿನಗೇಕೆ ಕೋಪ? ಎಲೈ ಹೇಡಿ, ನಿನಗೆ ದಾಕ್ಷಿಣ್ಯವಿಲ್ಲ; ನಾಚಿಕೆಯಿಲ್ಲ; ಸತ್ಯವಿಲ್ಲ.

೪೯. ಬಾಧೆಯಿಂದ ನರಳುತ್ತ ಆಕೆ ಅಗ್ನಿಯನ್ನು ನಿಂದಿಸಿದಳು. "ಲೋಕದಲ್ಲಿ ಶತ್ರುಗಳ ಸ್ತ್ರೀಯರನ್ನು ಕೊಲ್ಲಬಾರದೆಂದು ನೀನು ಕೇಳಲಿಲ್ಲವೇ?

೫೦. ಆದರೆ, ಎಲೈ ಅಗ್ನೀ, ನಾಶಮಾಡುವ ವಿಷಯದಲ್ಲಿ ಇವೆಲ್ಲವೂ ನಿನಗೆ ಒಳ್ಳೆಯ ಗುಣಗಳೇ ಆಗಿವೆ. ಹೆಂಗಸರ ವಿಚಾರದಲ್ಲಿ ನಿನಗೆ ಕಾರುಣ್ಯವಾಗಲಿ ಭಯವಾಗಲಿ, ದಾಕ್ಷಿಣ್ಯವಾಗಲಿ ಇಲ್ಲ.

೫೧. ಬೆಂಕಿಗೆ ಸಿಕ್ಕಿ ಬೇಯುತ್ತಿರುವ ಹೆಂಗಸನ್ನು ನೋಡಿ ಮ್ಲೇಚ್ಛರೂ ಕೂಡ ದಯೆಯನ್ನು ತೋರಿಸುತ್ತಾರೆ. ನೀನು ಅವರಿಗಿಂತ ಹೀನನಾದೆ. ನಿನ್ನನ್ನು ತಡೆಯುವವರಿಲ್ಲ. ನೀನು ಪ್ರಜ್ಞೆಯಿಲ್ಲದವನು.

೫೨. ಓ ಅಗ್ನೀ, ಹಾಳುಮಾಡುವುದಕ್ಕೆ ಇವೆಲ್ಲವೂ ನಿನಗೆ ಒಪ್ಪತಕ್ಕ ಗುಣಗಳೇ ಆಗಿವೆ. ಎಲೈ ನಡತೆಗೆಟ್ಟವನೇ. ಈ ಸ್ತ್ರೀಯರನ್ನು ಕೊಲ್ಲುವುದರಿಂದ ನಿನಗಾಗುವ ಪ್ರಯೋಜನವೇನು?

**ದುಷ್ಟ ನಿರ್ಘೃಣ ನಿರ್ಲಜ್ಜ ಹುತಾಶಿ ಮಂದಭಾಗ್ಯಕ ।**
**ನಿರಾಶ ತ್ವಂ ದುರಾವಾಸ ಬಲಾದ್ದಹಸಿ ನಿರ್ದಯ ॥೫೩॥**
**ಏವಂ ವಿಲಪಮಾನಾಸ್ತು ಜಲ್ಪಂತಶ್ಚ ಬಹೂನ್ಯಪಿ ।**
**ಅನ್ಯಾಃ ಕ್ರೋಶಂತಿ ಸಂಕ್ರುದ್ಧಾ ಬಾಲಶೋಕೇನ ಮೋಹಿತಾಃ ॥೫೪॥**
**ದಹತೇ ನಿರ್ದಯೋ ವಹ್ನಿಃ ಸಂಕ್ರುದ್ಧಃ ಪೂರ್ವಶತ್ರುವತ್ ।**
**ಪುಷ್ಕರಿಣ್ಯಾಂ ಜಲಂ ದಗ್ಧಂ ಕೂಪೇಷ್ವಪಿ ತಥೈವ ಚ ॥೫೫॥**
**ಅಸ್ಮಾನ್ ಸಂದಹ್ಯ ಮ್ಲೇಚ್ಛ ತ್ವಂ ಕಾಂ ಗತಿಂ ಪ್ರಾಪಯಿಷ್ಯಸಿ ।**
**ಏವಂ ಪ್ರಲಪತಾಂ ತಾಸಾಂ ವಹ್ನಿರ್ವಚನಮಬ್ರವೀತ್ ॥೫೬॥**

**॥ ಅಗ್ನಿರುವಾಚ ॥**

**ಸ್ವವಶೋ ನೈವ ಯುಷ್ಮಾಕಂ ವಿನಾಶಂ ತು ಕರೋಮ್ಯಹಂ ।**
**ಅಹಮಾದೇಶಕರ್ತಾ ವೈ ನಾಹಂ ಕರ್ತಾಸ್ಮ್ಯನುಗ್ರಹಂ ॥೫೭॥**

---

೫೩. ದುಷ್ಟನೇ, ದಯೆಯಿಲ್ಲದವನೇ, ಹೋಮದ್ರವ್ಯವನ್ನು ಭಕ್ಷಿಸುವವನೇ, ಅದೃಷ್ಟಹೀನನೇ, ಒಳ್ಳೆಯ ಆಶೆಯಿಲ್ಲದವನೇ, ಕರುಣೆಯಿಲ್ಲದವನೇ, ಕೆಟ್ಟಕಡೆ ವಾಸಮಾಡುವವನೇ, ಕರುಣೆಯಿಲ್ಲದವನೇ, ಹೀಗೆ ನೀನು ಬಲಪ್ರಯೋಗದಿಂದ ನಮ್ಮನ್ನು ಸುಡುತ್ತಿರುವೆಯಲ್ಲಾ !

೫೪. ಹೀಗೆ ಅವರು ಗೋಳಿಡುತ್ತ ಮನಸ್ಸುಬಂದಂತೆ ಮಾತನಾಡುತ್ತಿದ್ದರು. ಪುತ್ರಶೋಕದಿಂದ ಮೋಹಿತರಾದ ಉಳಿದವರು ಕೋಪಗೊಂಡು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದರು.

೫೫. ಅಗ್ನಿಯು ಬಹು ಕೋಪದಿಂದ ಕೂಡಿ ಹಳೆಯ ಹಗೆಯಂತೆ ನಿರ್ದಯನಾಗಿ ಸುಡುತ್ತಿದ್ದನು. ಪುಷ್ಕರಣಿಗಳಲ್ಲೂ, ಬಾವಿಗಳಲ್ಲೂ ಇದ್ದ ನೀರು ಕುದಿಯಿತು.

೫೬. "ಓ ಮ್ಲೇಚ್ಛಾ, ನಮ್ಮನ್ನು ಹೀಗೆ ಸುಡುತ್ತಿರುವೆಯಲ್ಲಾ ! ನೀನು ಯಾವಗತಿಗೆ ಹೋಗುವೆ ?" ಹೀಗೆ ಅವರು ಗೋಳಿಡುತ್ತಿರಲು ಅಗ್ನಿಯು ಅವರಿಗಿಂತೆಂದನು.

೫೭. ಅಗ್ನಿ ಹೇಳಿದನು.—ನಾನು ಸ್ವತಂತ್ರನಾಗಿ ನಿಮಗೆ ಕೇಡನ್ನು ಮಾಡುತ್ತಲೇ ಇಲ್ಲ. ಪ್ರಭುವಿನ ಅಪ್ಪಣೆಯನ್ನು ಪಾಲಿಸುತ್ತಿದ್ದೇನೆ ಅಷ್ಟೇ. ಅನುಗ್ರಹವನ್ನು ಮಾಡತಕ್ಕವನು ನಾನಲ್ಲ. ಈಶ್ವರನ ಕೋಪವು ನನ್ನಲ್ಲಿ ಆವೇಶವಾಗಿರುವುದರಿಂದ ಮನಸ್ಸು ಬಂದಕಡೆಗೆ ಪ್ರವೇಶಿಸುತ್ತಿರುವೆನು.

**ರುದ್ರಕ್ರೋಧಸಮಾವಿಷ್ಟೋ ವಿಚರಾಮಿ ಯಥೇಚ್ಛಯಾ ।**
**ತತೋ ಬಾಣೋ ಮಹಾತೇಜಾಸ್ತ್ರಿಪುರಂ ವೀಕ್ಷ್ಯ ದೀಪಿತಂ ॥೫೮॥**

**ಸಿಂಹಾಸನಸ್ಥಃ ಪ್ರೋವಾಚ ಹ್ಯಹಂ ದೇವೈರ್ವಿನಾಶಿತಃ ।**
**ಅಲ್ಪಸತ್ತ್ವೈರ್ದುರಾಚಾರೈರೀಶ್ವರಸ್ಯ ನಿವೇದಿತಂ ॥೫೯॥**

**ಅಪರೀಕ್ಷ್ಯ ತ್ವಹಂ ದಗ್ಧಃ ಶಂಕರೇಣ ಮಹಾತ್ಮನಾ ।**
**ನಾನ್ಯಃ ಶಕ್ತಸ್ತು ಮಾಂ ಹಂತುಂ ವರ್ಜಯಿತ್ವಾ ತ್ರಿಲೋಚನಂ ॥೬೦॥**

**ಉತ್ಥಿತಃ ಶಿರಸಾ ಕೃತ್ವಾ ಲಿಂಗಂ ತ್ರಿಭುವನೇಶ್ವರಂ ।**
**ನಿರ್ಗತಃ ಸ ಪುರದ್ವಾರಾತ್ಪರಿತ್ಯಜ್ಯ ಸುಹೃತ್ಸುತಾನ್ ॥೬೧॥**

**ರತ್ನಾನಿ ಯಾನ್ಯನರ್ಘಾಣಿ ಸ್ತ್ರಿಯೋ ನಾನಾವಿಧಾಸ್ತಥಾ ।**
**ಗೃಹೀತ್ವಾ ಶಿರಸಾ ಲಿಂಗಂ ಗಚ್ಛನ್ ಗಗನಮಂಡಲಂ ॥೬೨॥**

**ಸ್ತುವಂಶ್ಚ ದೇವದೇವೇಶಂ ತ್ರಿಲೋಕಾಧಿಪತಿಂ ಶಿವಂ ।**
**ತ್ಯಕ್ತಾ ಪುರೀ ಮಯಾ ದೇವ ಯದಿ ವಧ್ಯೋಽಸಿ ಶಂಕರ ॥೬೩॥**

---

೫೮-೬೦. ಬಳಿಕ ಸಿಂಹಾಸನದ ಮೇಲೆ ಕುಳಿತಿದ್ದ ಮಹಾತೇಜಸ್ವಿಯಾದ ಬಾಣಾಸುರನು ತ್ರಿಪುರ ಪಟ್ಟಣವು ಸುಡುತ್ತಿದ್ದುದನ್ನು ಕಂಡು ಹೀಗೆ ಹೇಳಿದನು. "ದೇವತೆಗಳು ನನ್ನನ್ನು ಹಾಳುಮಾಡಿದರು. ಬಲಹೀನರೂ ದುರಾಚಾರಿಗಳೂ ಆದ ಅವರು ಈಶ್ವರನಲ್ಲಿ ಹೇಳಿದ್ದಾರೆ. ಮಹಾತ್ಮನಾದ ಪರಮೇಶ್ವರನು ನನ್ನನ್ನು ಪರೀಕ್ಷಿಸದೆ ಸುಡುತ್ತಿದ್ದಾನೆ. ಆ ಮಹಾದೇವನನ್ನು ಹೊರತು ಮತ್ತಾರಿಗೂ ನನ್ನನ್ನು ಕೊಲ್ಲಲು ಶಕ್ತಿಯಿಲ್ಲ."

೬೧. ಮೂರುಲೋಕಗಳ ಅಧಿದೈವವೆನಿಸಿದ ಶಿವಲಿಂಗವನ್ನು ಅವನು ತಲೆಯ ಮೇಲಿರಿಸಿಕೊಂಡು, ತನ್ನ ಸ್ನೇಹಿತರನ್ನೂ ಮಕ್ಕಳನ್ನೂ ತೊರೆದು, ಪಟ್ಟಣದ ಬಾಗಿಲಿನಿಂದ ಹೊರಹೊರಟನು.

೬೨-೬೩. ಅಮೂಲ್ಯವಾದ ರತ್ನಗಳನ್ನೂ ನಾನಾವಿಧವಾದ ಸೌಂದರ್ಯವುಳ್ಳ ಸ್ತ್ರೀಯರನ್ನೂ ಬಿಟ್ಟುಬಂದು, ತಲೆಯ ಮೇಲೆ ಲಿಂಗವನ್ನಿಟ್ಟುಕೊಂಡು, ಅಂತರಿಕ್ಷ ಮಂಡಲವನ್ನೇರಿ ದೇವದೇವನೂ ತ್ರಿಲೋಕಾಧಿಪತಿಯೂ ಆದ ಈಶ್ವರನನ್ನು ಸ್ತುತಿಸಿದನು.

ತ್ವತ್ಪ್ರಸಾದಾನ್ಮಹಾದೇವ ಮಾ ಮೇ ಲಿಂಗಂ ವಿನಶ್ಯತು ।
ಅರ್ಚಿತಂ ಹಿ ಮಯಾ ದೇವ ಭಕ್ತ್ಯಾ ಪರಮಯಾ ಸದಾ ॥೬೪॥

ತ್ವತ್ಕೋಪಾದ್ಯದಿ ವಧ್ಯೋಽಹಂ ತದಿದಂ ಮಾ ವಿನಶ್ಯತು ।
ಶ್ಲಾಘ್ಯಮೇತನ್ಮಹಾದೇವ ತ್ವತ್ಕೋಪಾದ್ದಹನಂ ಮಮ ॥೬೫॥

ಪ್ರತಿಜನ್ಮ ಮಹಾದೇವ ತ್ವತ್ಪಾದನಿರತೋ ಹ್ಯಹಂ ।
ತೋಟಕಚ್ಛಂದಸಾ ದೇವ ಸ್ತೌಮಿ ತ್ವಾಂ ಪರಮೇಶ್ವರ ॥೬೬॥

ಶಿವ ಶಂಕರ ಶರ್ವ ಹರಾಯ ನಮೋ
ಭವಭೀಮ ಮಹೇಶ್ವರ ಸರ್ವ ನಮಃ ।
ಕುಸುಮಾಯುಧದೇಹವಿನಾಶಕರ
ತ್ರಿಪುರಾಂತಕ ಅಂಧಕಶೂಲಧರ ॥೬೭॥

---

೬೪. ದೇವಾ, ನಾನು ಪಟ್ಟಣವನ್ನು ಬಿಟ್ಟುಬಿಟ್ಟೆನು. ಓ ಶಂಕರಾ, ನಾನು ವಧಾರ್ಹನಾಗಿದ್ದರೆ ನನ್ನನ್ನು ಕೊಲ್ಲು; ಆದರೆ ಎಲೈ ಮಹಾದೇವಾ, ನಿನ್ನ ಅನುಗ್ರಹದಿಂದ ನನ್ನ ಶಿವಲಿಂಗವು ನಾಶವಾಗದಿರಲಿ.

೬೫. ದೇವಾ, ಈ ಲಿಂಗವನ್ನು ನಾನು ಅತ್ಯಂತ ಭಕ್ತಿಯಿಂದ ಎಡೆಬಿಡದೆ ಪೂಜಿಸುತ್ತಿರುವೆನು. ನಿನ್ನ ಕೋಪದಿಂದ ನಾನು ಅಗ್ನಿಗೆ ತುತ್ತಾಗಬೇಕಾದರೂ ಇದು ಮಾತ್ರ ನಷ್ಟವಾಗದಿರಲಿ.

೬೬. ಮಹಾದೇವಾ, ಪ್ರತಿಜನ್ಮದಲ್ಲೂ ನಾನು ನಿನ್ನ ಪಾದಗಳಲ್ಲಿ ಭಕ್ತಿಯುಳ್ಳವನಾಗಬೇಕೆಂದು ಬಯಸುವೆನು. ಎಲೈ ಪರಮೇಶ್ವರಾ, ತೋಟಕ ವೃತ್ತದಿಂದ ನಿನ್ನನ್ನು ನಾನು ಸ್ತುತಿಸುವೆನು.

೬೭. ಶಿವಾ, ಶಂಕರಾ, ಶರ್ವಾ, ಪಾಪಹರನಾದ ನಿನಗೆ ನಮಸ್ಕಾರ. ಸರ್ವಾಧಾರಾ, ಭೀಮಾ, ಮಹೇಶ್ವರಾ, ಸರ್ವಸ್ವರೂಪನಾದ ನಿನಗೆ ನಮಸ್ಕಾರ. ಮನ್ಮಥನ ಶರೀರವನ್ನು ದಹಿಸಿದವನೇ, ತ್ರಿಪುರನಾಶಕನೇ, ಅಂಧಕಾಸುರನನ್ನು ಸಂಹರಿಸಿ ಶೂಲದಿಂದೆತ್ತಿದವನೇ, ನಿನಗೆ ನಮಸ್ಕಾರ.

ಪ್ರಮುದಾಪ್ರಿಯ ಕಾಂತ ವಿರಕ್ತ ನಮಃ
ಸಸುರಾಸುರಸಿದ್ಧಿಗಣೈರ್ನಮಿರ್ತ।
ಹಯವಾನರಸಿಂಹಗಜೇಂದ್ರಮುಖೈ
ರತಿಹ್ರಸ್ವಸುದೀರ್ಘವಿಶಾಲಮುಖೈಃ ॥೬೮॥

ಉಪಲಬ್ಧಮಶಕ್ಯತರೈರಸುರೈ
ರ್ವ್ಯಥಿತೋಽಸ್ಮಿ ಚ ಬಾಹುಶತೈರ್ಬಹುಭಿಃ।
ಪ್ರಣತೋಽಸ್ಮಿ ಭವಂ ಭವ ಭಕ್ತಿರತ
ಶ್ಯಲಚಂದ್ರಕಲಾಂಕುರ ದೇವ ನಮಃ ॥೬೯॥

ನ ಚ ಪುತ್ರಕಲತ್ರಹಯಾದಿ ಧನಂ
ಮಮ ತು ತ್ವದನುಸ್ಮರಣಂ ಶರಣಂ।
ವ್ಯಥಿತೋಽಸ್ಮಿ ಶರೀರಶತೈರ್ಬಹುಭಿ
ರ್ಗಮಿತಾ ಚ ಮಹಾನರಕಸ್ಯ ಗತಿಃ ॥೭೦॥

---

೬೮. ನಾರೀರತ್ನವಾದ ಪಾರ್ವತಿಯ ಪ್ರಿಯನೇ, ಸುಂದರನೇ, ವಿರಕ್ತನೇ, ಸುರರು, ಅಸುರರು, ಸಿದ್ಧರು ಇವರುಗಳ ಗಣದಿಂದ ಸ್ತುತಿಸಲ್ಪಡುವವನೇ, ನಿನಗೆ ನಮಸ್ಕಾರ. ಮುಖಗಳು ಬಲು ಚಿಕ್ಕವೂ ಉದ್ದವೂ ವಿಶಾಲವೂ ಆಗಿ ಕುದುರೆ, ಕಪಿ, ಸಿಂಹ, ಆನೆ ಇವುಗಳ ಮುಖವನ್ನು ಹೋಲುತ್ತಿರಲು, ನೂರಾರು ತೋಳುಗಳಿಂದ ಕೂಡಿ ಹತ್ತಿರಹೋಗುವುದಕ್ಕೆ ಅಸಾಧ್ಯವಾದ ನಿನ್ನ ಕಡೆಯ ಅನೇಕ ಅಸುರರು ನನಗೆ ಬಹಳ ವ್ಯಥೆಯನ್ನು ಹುಟ್ಟಿಸಿದ್ದಾರೆ.

೬೯-೭೦. ಬಾಲೆಂದುಶೇಖರಾ, ದೇವಾ, ಭಕ್ತಿಯಿಂದ ಕೂಡಿ ಸರ್ವ ಕಾರಣನಾದ ನಿನ್ನನ್ನು ನಮಿಸುವೆನು. ಮಗ, ಹೆಂಡತಿ, ಕುದುರೆ ಮುಂತಾದುವು ಐಶ್ವರ್ಯವಲ್ಲ. ನಿನ್ನ ಸ್ಮರಣವೇ ನನಗೆ ಗತಿ. ಇದುವರೆಗೆ ನಾನು ಲೆಕ್ಕವಿಲ್ಲದಷ್ಟು ಜನ್ಮಗಳನ್ನೆತ್ತಿ ಬಹಳ ವ್ಯಥೆಪಟ್ಟಿದ್ದೇನೆ. ಘೋರವಾದ ನರಕಕ್ಕೆ ದಾರಿಮಾಡಿಕೊಂಡಿದ್ದೇನೆ.

ನ ನಿವರ್ತತಿ ಜನ್ಮ ನ ಪಾಪಮತಿಃ
ಶುಚಿಕರ್ಮನಿಬದ್ಧಮಪಿ ತ್ಯಜತಿ ।
ಅನುಕಂಪತಿ ವಿಭ್ರಮತಿ ತ್ರಸತಿ
ಮಮ ಚೈವ ಕುಕರ್ಮ ನಿವಾರಯತಿ ॥೭೧॥

ಯಃ ಪಠೇತ್ತೋಟಕಂ ದಿವ್ಯಂ ಪ್ರಯತಃ ಶುಚಿಮಾನಸಃ ।
ಬಾಣಸ್ಯೇವ ಯಥಾ ರುದ್ರಸ್ತಸ್ಯಾಪಿ ವರದೋ ಭವೇತ್ ॥೭೨॥

ಇಮಂ ಸ್ತವಂ ಮಹಾದಿವ್ಯಂ ಶ್ರುತ್ವಾ ದೇವೋ ಮಹೇಶ್ವರಃ ।
ಪ್ರಸನ್ನಸ್ತು ತದಾ ತಸ್ಯ ಸ್ವಯಂ ವಚನಮಬ್ರವೀತ್ ॥೭೩॥

॥ ಮಹೇಶ್ವರ ಉವಾಚ ॥

ನ ಭೇತವ್ಯಂ ತ್ವಯಾ ವತ್ಸ ಸೌವರ್ಣೇ ತಿಷ್ಠ ದಾನವ ।
ಪುತ್ರಪೌತ್ರಸುಹೃದ್ಬಂಧುಭಾರ್ಯಾಭೃತ್ಯಜನೈಃ ಸಹ ॥೭೪॥

---

೭೧. ಪುನರ್ಜನ್ಮವೂ ಪಾಪ ಬುದ್ಧಿಯೂ ನನ್ನನ್ನು ಬಿಟ್ಟು ಸರಿಯುವುದಿಲ್ಲ. ಬಲಾತ್ಕರಿಸಿದರೂ ಪುಣ್ಯಕರ್ಮವು ನನ್ನನ್ನು ತೊರೆಯುತ್ತದೆ. ನನ್ನ ಮನಸ್ಸು ನಡುಗುತ್ತದೆ, ಅಲೆದಾಡುತ್ತದೆ, ಹೆದರುತ್ತದೆ. ಆದರೆ ಪಾಪಕರ್ಮವು ಅದನ್ನು ಸನ್ಮಾರ್ಗಕ್ಕೆ ಹೋಗದಂತೆ ತಡೆಯುತ್ತದೆ.

೭೨. ತೋಟಕವೃತ್ತದಲ್ಲಿ ರಚಿತವಾದ ಈ ದಿವ್ಯ ಸ್ತೋತ್ರವನ್ನು ಜಿತೇಂದ್ರಿಯನಾಗಿ ಪರಿಶುದ್ಧಮನಸ್ಸಿನಿಂದ ಪಾರಾಯಣ ಮಾಡುವಾತನಿಗೆ ಪರಮೇಶ್ವರನು ಬಾಣಾಸುರನಿಗೆ ಅನುಗ್ರಹಿಸಿದಂತೆಯೇ ವರಗಳನ್ನು ಅನುಗ್ರಹಿಸುವನು.

೭೩. ಆಗ ಅತ್ಯಂತ ಶ್ರೇಷ್ಠವಾದ ಈ ಸ್ತುತಿಯನ್ನು ಕೇಳಿ ಮಹೇಶ್ವರನು ಪ್ರಸನ್ನನಾಗಿ ತಾನಾಗಿಯೇ ಇಂತು ನುಡಿದನು.

೭೪. ಮಹೇಶ್ವರನು ಹೇಳಿದನು.—ವತ್ಸಾ, ದಾನವಾ, ನೀನು ಹೆದರಬೇಡ. ಮಕ್ಕಳು, ಮೊಮ್ಮಕ್ಕಳು, ಸ್ನೇಹಿತರು, ಬಂಧುಗಳು, ಪತ್ನಿಯರು ಮತ್ತು ಭೃತ್ಯರೊಡಗೂಡಿ ಸುವರ್ಣ ನಗರದಲ್ಲಿ ವಾಸಿಸು. ಇಂದು ಮೊದಲು ದೇವತೆಗಳಿಗೆ ಸಹ ನೀನು ಅವಧ್ಯನೆನಿಸುವೆ.

ಅದ್ಯ ಪ್ರಭೃತಿ ಬಾಣ ತ್ವಮವಧ್ಯಸ್ತ್ರಿದಶೈರಪಿ ।
ಭೂಯಸ್ತಸ್ಯ ವರೋ ದತ್ತೋ ದೇವದೇವೇನ ಪಾಂಡವ ॥೭೫॥

ಅಕ್ಷಯಶ್ಚಾವ್ಯಯೋ ಲೋಕೇ ವಿಚರಸ್ವಾಕುತೋಭಯಃ ।
ತತೋ ನಿವಾರಯಾಮಾಸ ರುದ್ರಃ ಸಪ್ತಶಿಖಸ್ತದಾ ॥೭೬॥

ತೃತೀಯಂ ರಕ್ಷಿತಂ ತಸ್ಯ ಶಂಕರೇಣ ಮಹಾತ್ಮನಾ ।
ಭ್ರಮತ್ತು ಗಗನೇ ದಿವ್ಯಂ ರುದ್ರತೇಜಃಪ್ರಭಾವತಃ ॥೭೭॥

ಏವಂ ತು ತ್ರಿಪುರಂ ದಗ್ಧಂ ಶಂಕರೇಣ ಮಹಾತ್ಮನಾ ।
ಜ್ವಾಲಾಮಾಲಾಪ್ರದೀಪ್ತಂ ತತ್ಪತಿತಂ ಧರಣೀತಲೇ ॥೭೮॥

ಏಕಂ ನಿಪತಿತಂ ತತ್ರ ಶ್ರೀಶೈಲೇ ತ್ರಿಪುರಾಂತಕೇ ।
ದ್ವಿತೀಯಂ ಪತಿತಂ ತಸ್ಮಿನ್ ಪರ್ವತೇಽಮರಕಂಟಕೇ ॥೭೯॥

ದಗ್ಧೇಷು ತೇಷು ರಾಜೇಂದ್ರ ರುದ್ರಕೋಟಿಃ ಪ್ರತಿಷ್ಠಿತಾ ।
ಜ್ವಲತ್ತದಪತತ್ತತ್ರ ತೇನ ಜ್ವಾಲೇಶ್ವರಃ ಸ್ಮೃತಃ ॥೮೦॥

---

೭೫-೭೬. ಓ ಧರ್ಮರಾಜಾ, ಮಹಾದೇವನು ಬಾಣಾಸುರನಿಗೆ ಮತ್ತೆ ವರವನ್ನು ಕರುಣಿಸಿದನು. "ಎಲೈ ಅಸುರನೇ, ನಾಶವೂ ವಿಕಾರವೂ ಇಲ್ಲದೆ ನೀನು ನಿರ್ಭೀತನಾಗಿ ಲೋಕದಲ್ಲಿ ಸಂಚರಿಸು". ಬಳಿಕ ಈಶ್ವರನು ತ್ರಿಪುರವನ್ನು ದಹಿಸುತ್ತಿದ್ದ ಅಗ್ನಿಯನ್ನು ನಿವಾರಿಸಿದನು.

೭೭. ಮಹಾತ್ಮನಾದ ಶಂಕರನು ಬಾಣಾಸುರನ ಮೂರನೆಯ ನಗರವನ್ನು ರಕ್ಷಿಸಿದನು. ಅದು ರುದ್ರತೇಜಃ ಪ್ರಭಾವದಿಂದ ಆಕಾಶದಲ್ಲಿ ತಿರುಗುತ್ತಿರುವುದು.

೭೮. ಹೀಗೆ ಮಹಾತ್ಮನಾದ ಮಹೇಶ್ವರನು ತ್ರಿಪುರವನ್ನು ದಹಿಸಿದನು. ಅದು ಎಡೆಬಿಡದೆ ದಟ್ಟವಾಗಿ ಉರಿಯುತ್ತ ನೆಲದಮೇಲೆ ಬಿದ್ದಿತು.

೭೯. ಒಂದು ತ್ರಿಪುರಾಂತಕವೆಂಬ ಶ್ರೀಶೈಲಕ್ಷೇತ್ರದಲ್ಲಿ ಬಿದ್ದಿತು. ಎರಡನೆಯದು ಆ ಅಮರಕಂಟಕ ಪರ್ವತದಲ್ಲಿ ಬಿದ್ದಿತು.

೮೦. ಎಲೈ ಧರ್ಮರಾಜಾ, ಎಲ್ಲವೂ ಸುಟ್ಟುಹೋದಮೇಲೆ ಅಲ್ಲಿ ರುದ್ರಕೋಟಿ ಲಿಂಗವನ್ನು ಪ್ರತಿಷ್ಠೆಮಾಡಿದರು. ಉರಿಯುತ್ತ ಅದು ನೆಲದಮೇಲೆ ಬಿದ್ದಕಾರಣ ಅದಕ್ಕೆ ಜ್ವಾಲೇಶ್ವರವೆಂದು ಹೆಸರು.

ಊರ್ಧ್ವೇನ ಪ್ರಸ್ಥಿತಾಸ್ತಸ್ಯ ದಿವ್ಯಜ್ವಾಲಾ ದಿವಂ ಗತಾಃ ।
ಹಾಹಾಕಾರಸ್ತದಾ ಜಾತೋ ದೇವಾಸುರಕೃತೋ ಮಹಾನ್ ॥೮೧॥

ಶರಮುಸ್ತಂಭಯದ್ರುದ್ರೋ ಮಹೇಶ್ವರಪುರೋತ್ತಮೇ ।
ಏವಂ ವೃತ್ತಂ ತದಾ ತಸ್ಮಿನ್ ಪರ್ವತೇಽಮರಕಂಟಕೇ ॥೮೨॥

ಚತುರ್ದಶಾಖ್ಯಂ ಭುವನಂ ಸ ಭುಕ್ತ್ವಾ ಪಾಂಡುನಂದನ ।
ವರ್ಷಕೋಟಿಸಹಸ್ರಂ ತು ತ್ರಿಂಶತ್ಕೋಟ್ಯಸ್ತಥಾ ಪರಾಃ ॥೮೩॥

ತತೋ ಮಹೀತಲಂ ಪ್ರಾಪ್ಯ ರಾಜಾ ಭವತಿ ಧಾರ್ಮಿಕಃ ।
ಪೃಥಿವೀಮೇಕಚ್ಛತ್ರೇಣ ಭುಂಜ್ಕ್ತೇ ಸ ತು ನ ಸಂಶಯಃ ॥೮೪॥

ಏವಂಪುಣ್ಯೋ ಮಹಾರಾಜ ಪರ್ವತೋಽಮರಕಂಟಕಃ ।
ಚಂದ್ರಸೂರ್ಯೋಪರಾಗೇ ತು ಗಚ್ಛೇದ್ಯೋಽಮರಕಂಟಕಂ ॥೮೫॥

---

೮೧. ಬಹು ತೇಜಸ್ಸಿನಿಂದ ಕೂಡಿದ ಅದರ ಜ್ವಾಲೆಗಳು ಮೇಲಕ್ಕೆ ಹೊರಟು ಸ್ವರ್ಗವನ್ನು ಮುಟ್ಟಿದುವು. ಆಗ ದೇವಾಸುರರು ದೊಡ್ಡದಾಗಿ ಹಾಹಾಕಾರವನ್ನು ಮಾಡಿದರು.

೮೨. ಈಶ್ವರನು ತನ್ನ ಪರಮಭಕ್ತನಾದ ಬಾಣಾಸುರನ ಸುವರ್ಣನಗರದಲ್ಲಿ ಬೀಳದಂತೆ ತನ್ನ ಬಾಣವನ್ನು ತಡೆದು ನಿಲ್ಲಿಸಿದನು. ಅಮರಕಂಟಕಪರ್ವತದಲ್ಲಿ ಹಿಂದೆ ಹೀಗೆಲ್ಲ ನಡೆಯಿತು.

೮೩-೮೪. ಎಲೈ ಧರ್ಮರಾಜಾ, ಅಮರಕಂಟಕಪರ್ವತದಲ್ಲಿ ಕಾಲವನ್ನು ಕಳೆಯುವಾತನು ಒಂದು ಸಾವಿರದ ಮೂವತ್ತು ಕೋಟಿ ವರ್ಷಗಳ ಕಾಲ ಹದಿನಾಲ್ಕು ಲೋಕಗಳ ಅಧಿಪತಿಯಾಗಿ ಸುಖಪಡುವನು. ಬಳಿಕ ಭೂಮಿಯಲ್ಲಿ ಧರ್ಮನಿರತನಾದ ರಾಜನಾಗಿ ಜನಿಸಿ ಭೂಮಂಡಲವೆಲ್ಲವನ್ನೂ ಏಕಚ್ಛತ್ರಾಧಿಪತ್ಯದಿಂದ ಆಳುವನು. ಸಂಶಯವಿಲ್ಲ.

೮೫-೮೬. ಓ ಧರ್ಮರಾಜಾ, ಅಮರಕಂಟಕ ಪರ್ವತವು ಇಷ್ಟು ಪುಣ್ಯಕರವಾದುದು. ಚಂದ್ರಸೂರ್ಯರ ಗ್ರಹಣಕಾಲದಲ್ಲಿ ಅಮರಕಂಟಕಕ್ಕೆ ಹೋಗುವಾತನು

ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಿಣಃ ।
ಸ್ವರ್ಗಲೋಕಮವಾಪ್ನೋತಿ ದೃಷ್ಟ್ವಾ ತತ್ರ ಮಹೇಶ್ವರಂ ॥೮೬॥

ಬ್ರಹ್ಮಹತ್ಯಾ ಗಮಿಷ್ಯಂತಿ ರಾಹುಗ್ರಸ್ತೇ ದಿವಾಕರೇ ।
ತದೇವಂ ನಿಖಿಲಂ ಪುಣ್ಯಂ ಪರ್ವತೇಽಮರಕಂಟಕೇ ॥೮೭॥

ಮನಸಾಪಿ ಸ್ಮರೇದ್ಯಸ್ತಂ ಗಿರಿಂ ತ್ವಮರಕಂಟಕಂ ।
ಚಾಂದ್ರಾಯಣಶತಂ ಸಾಗ್ರಂ ಲಭತೇ ನಾತ್ರ ಸಂಶಯಃ ॥೮೮॥

ತ್ರಯಾಣಾಮಪಿ ಲೋಕಾನಾಂ ವಿಖ್ಯಾತೋಽಮರಕಂಟಕಃ ।
ಏವಂಪುಣ್ಯೋ ಗಿರಿಶ್ರೇಷ್ಠಃ ಸಿದ್ಧಗಂಧರ್ವಸೇವಿತಃ ॥೮೯॥

ನಾನಾದ್ರುಮಲತಾಕೀರ್ಣೋ ನಾನಾಪುಷ್ಪೋಪಶೋಭಿತಃ ।
ಮೃಗವ್ಯಾಘ್ರಸಹಸ್ರೈಸ್ತು ಸೇವ್ಯಮಾನೋ ಮಹಾಗಿರಿಃ ॥೯೦॥

---

ಅಶ್ವಮೇಧಯಾಗದ ಹತ್ತರಷ್ಟು ಫಲವನ್ನು ಪಡೆಯುವನೆಂದು ವಿದ್ವಾಂಸರು ಹೇಳುತ್ತಾರೆ. ಆ ಕ್ಷೇತ್ರದಲ್ಲಿ ಮಹೇಶ್ವರನ ದರ್ಶನಮಾಡಿದವನು ಸ್ವರ್ಗ ಲೋಕವನ್ನೈದುವನು.

೮೭. ರಾಹು ಹಿಡಿದು ಸೂರ್ಯಗ್ರಹಣವಾದಾಗ ಇಲ್ಲಿ ಸ್ನಾನಾದಿಗಳನ್ನು ಮಾಡಿದರೆ ಬ್ರಹ್ಮಹತ್ಯಾದೋಷಗಳೂ ಸಹ ಪರಿಹಾರವಾಗುವುವು. ಹೀಗೆ ಅಮರ ಕಂಟಕ ಪರ್ವತದಲ್ಲಿ ಎಲ್ಲ ಪುಣ್ಯವೂ ಕೈಸೇರುವುದು.

೮೮. ಅಮರಕಂಟಕಪರ್ವತವನ್ನು ಮನಸ್ಸಿನಲ್ಲಿ ಸ್ಮರಣೆಮಾಡಿದರೂ ಸಾಕು ; ಒಂದು ನೂರು ಚಾಂದ್ರಾಯಣವ್ರತಗಳನ್ನು ಸಾಂಗವಾಗಿ ನೆರವೇರಿಸಿದಷ್ಟು ಫಲ ಬರುತ್ತದೆ. ಸಂಶಯವಿಲ್ಲ.

೮೯. ಅಮರಕಂಟಕಪರ್ವತವು ಮೂರುಲೋಕದಲ್ಲಿಯೂ ಪ್ರಸಿದ್ಧ ವಾದುದು. ಸಿದ್ಧರಿಂದಲೂ ಗಂಧರ್ವರಿಂದಲೂ ಸೇವಿತವಾದ ಆ ಪರ್ವತೋತ್ತಮವು ಇಂತಹ ಪುಣ್ಯಮಯವಾದುದು.

೯೦. ಆ ದೊಡ್ಡ ಪರ್ವತವು ಬಗೆಬಗೆಯ ಮರಗಳಿಂದ ತುಂಬಿದೆ. ವಿಧ ವಿಧವಾದ ಹೂಗಳಿಂದ ಶೋಭಿಸುತ್ತಿದೆ. ಸಾವಿರಾರು ಜಿಂಕೆಗಳೂ ಹುಲಿಗಳೂ ಅಲ್ಲಿ ವಾಸಮಾಡುತ್ತಿವೆ.

ಯತ್ರ ಸನ್ನಿಹಿತೋ ದೇವೋ ದೇವ್ಯಾ ಸಹ ಮಹೇಶ್ವರಃ ।
ಬ್ರಹ್ಮಾ ವಿಷ್ಣುಸ್ತಥಾ ಚೇಂದ್ರೋ ವಿದ್ಯಾಧರಗಣೈಃ ಸಹ ॥೯೧॥

ಋಷಿಭಿಃ ಕಿನ್ನರೈರ್ಯಕ್ಷೈರ್ನಿತ್ಯಮೇವ ನಿಷೇವಿತಃ ।
ವಾಸುಕಿಃ ಸಹಿತಸ್ತತ್ರ ಕ್ರೀಡತೇ ಪನ್ನಗೋತ್ತಮೈಃ ॥೯೨॥

ಪ್ರದಕ್ಷಿಣಂ ತು ಯಃ ಕುರ್ಯಾತ್ಪರ್ವತೇಽಮರಕಂಟಕೇ ।
ಪೌಂಡರೀಕಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೯೩॥

ತತ್ರ ಜ್ವಾಲೇಶ್ವರಂ ನಾಮ ತೀರ್ಥಂ ಸಿದ್ಧನಿಷೇವಿತಂ ।
ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥೯೪॥

ಜ್ವಾಲೇಶ್ವರೇ ಮಹಾರಾಜ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಚಂದ್ರಸೂರ್ಯೋಪರಾಗೇಷು ತಸ್ಯಾಪಿ ಶೃಣು ಯತ್ಫಲಂ ॥೯೫॥

---

೯೧-೯೨. ಆ ಪರ್ವತದಲ್ಲಿ ಭಗವಂತನಾದ ಮಹೇಶ್ವರನು ಪಾರ್ವತೀ ದೇವಿಯೊಡನೆ ನೆಲಸಿರುವನು. ಬ್ರಹ್ಮ, ವಿಷ್ಣು ಮತ್ತು ಇಂದ್ರರು ವಿದ್ಯಾಧರ ಗಣಗಳೊಡಗೂಡಿ ವಾಸಿಸುವರು. ಋಷಿಗಳು, ಕಿನ್ನರರು ಮತ್ತು ಯಕ್ಷರು ಯಾವಾಗಲೂ ಅದರ ಸೇವೆಯನ್ನು ಮಾಡುವರು. ವಾಸುಕಿಯು ಶ್ರೇಷ್ಠವಾದ ಸರ್ಪಗಳೊಡನೆ ಕ್ರೀಡಿಸುತ್ತಿರುವನು.

೯೩. ಅಮರಕಂಟಕ ಪರ್ವತದ ಪ್ರದಕ್ಷಿಣವನ್ನು ಮಾಡುವ ಮಾನವರಿಗೆ ಪೌಂಡರೀಕ ಯಜ್ಞದ ಫಲವು ಬರುವುದು.

೯೪. ಅಲ್ಲಿ ಜ್ವಾಲೇಶ್ವರವೆಂಬ ಸಿದ್ಧಸೇವಿತವಾದ ಪ್ರಸಿದ್ಧವಾದ ತೀರ್ಥವುಂಟು. ಅದರಲ್ಲಿ ಸ್ನಾನಮಾಡಿದವರು ಸ್ವರ್ಗವನ್ನು ಸೇರುತ್ತಾರೆ. ಮೃತರಾದವರು ಮೋಕ್ಷವನ್ನು ಪಡೆಯುತ್ತಾರೆ.

೯೫. ಓ ಧರ್ಮರಾಜಾ, ಜ್ವಾಲೇಶ್ವರ ತೀರ್ಥದಲ್ಲಿ ಸೂರ್ಯಚಂದ್ರರ ಗ್ರಹಣದ ಕಾಲದಲ್ಲಿ ಪ್ರಾಣಬಿಡುವಾತನಿಗೆ ದೊರೆಯುವ ಪುಣ್ಯಫಲವನ್ನು ಕೇಳು.

**ಸರ್ವಕರ್ಮವಿನಿರ್ಮುಕ್ತೋ ಜ್ಞಾನವಿಜ್ಞಾನಸಂಯುತಃ ।**
**ರುದ್ರಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ॥೯೬॥**

**ಅಮರೇಶಸ್ಯ ದೇವಸ್ಯ ಪರ್ವತಸ್ಯ ಉಭೇ ತಟೇ ।**
**ಕೋಟಿಶೋ ಋಷಿಮುಖ್ಯಾಸ್ತೇ ತಪಸ್ತಪ್ಯಂತಿ ಸುವ್ರತಾಃ ॥೯೭॥**

**ಸಮಂತಾದ್ಯೋಜನಂ ರಾಜನ್ ಕ್ಷೇತ್ರಂ ಚಾಮರಕಂಟಕಂ ॥೯೮॥**

**ಅಕಾಮೋ ವಾ ಸಕಾಮೋ ವಾ ನರ್ಮದಾಯಾ ಶುಭೇ ಜಲೇ ।**
**ಸ್ನಾತ್ವಾ ಮುಚ್ಯೇತ ಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥೯೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ**
**ನರ್ಮದಾಮಾಹಾತ್ಮ್ಯೇಽಷ್ಟಾಶೀತ್ಯಧಿಕಶತತಮೋಽಧ್ಯಾಯಃ**

---

೯೬. ಸಕಲವಿಧವಾದ ಕರ್ಮಗಳಿಂದ ಬಿಡುಗಡೆ ಹೊಂದಿ, ಬ್ರಹ್ಮಜ್ಞಾನದಿಂದಲೂ ಬಗೆಬಗೆಯ ಶಾಸ್ತ್ರಕಲೆಗಳ ಜ್ಞಾನದಿಂದಲೂ ಕೂಡಿ, ಮಹಾ ಪ್ರಳಯದ ವರೆಗೂ ರುದ್ರಲೋಕದಲ್ಲಿರುವನು.

೯೭. ಅಮರಕಂಟಕ ಪರ್ವತದ ಎರಡು ತಪ್ಪಲುಗಳಲ್ಲಿಯೂ ಕೋಟಿಗಟ್ಟಲೆ ಋಷಿವರ್ಯರು ವ್ರತನಿಷ್ಠರಾಗಿ ತಪಸ್ಸುಮಾಡುತ್ತಿರುವರು.

೯೮. ಓ ರಾಜಾ, ಈ ಗಿರಿಯ ಸುತ್ತಲೂ ಒಂದು ಯೋಜನದವರೆಗೆ ಅಮರಕಂಟಕ ಕ್ಷೇತ್ರವು ವ್ಯಾಪಿಸಿದೆ.

೯೯. ಫಲವನ್ನು ಕೋರಿಯೋ ಕೋರದೆಯೋ ನರ್ಮದಾನದಿಯ ಶುಭ ಜಲದಲ್ಲಿ ಸ್ನಾನಮಾಡುವಾತನು ಪಾಪನಿರ್ಮುಕ್ತನಾಗಿ ರುದ್ರಲೋಕವನ್ನೈದುವನು.

## ಅಧ್ಯಾಯದ ಸಾರಾಂಶ

ಬಾಣಾಸುರನಿಗೆ ಮಹೇಶ್ವರನು ವರವನ್ನು ಕರುಣಿಸಿದ ವೃತ್ತಾಂತವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಪರಮೇಶ್ವರನು ನರ್ಮದಾತೀರಕ್ಕೆ ಬಂದು ಬಾಣಾಸುರನ ತ್ರಿಪುರನಗರವನ್ನು ದಹನಮಾಡುವುದಕ್ಕಾಗಿ ಉಪಾಯವನ್ನು ಚಿಂತಿಸಿದನು. ಅವನು ಸಕಲ ದೇವತಾ ಮಯವಾದ ದಿವ್ಯರಥವನ್ನು ನಿರ್ಮಿಸಿ, ಅದರಲ್ಲಿ ಕುಳಿತು ಸಾವಿರಾರು ವರ್ಷಗಳ ಕಾಲ ಸಮಯವನ್ನು ನಿರೀಕ್ಷಿಸುತ್ತಿದ್ದನು. ಮೂರು ಪಟ್ಟಣಗಳೂ ಆಕಾಶದಲ್ಲಿ ಸೇರಿದಾಗ ಆತನು ಶರಪ್ರಯೋಗಮಾಡಿದನು. ಅತಿ ದಾರುಣವಾದ ಅಗ್ನಿ ಉತ್ಪನ್ನ ವಾಗಿ ಅವುಗಳನ್ನು ದಹಿಸಿತು.

ಬಾಣಾಸುರನು ಪರಮೇಶ್ವರನನ್ನು ವಿಧವಿಧವಾಗಿ ಸ್ತೋತ್ರಮಾಡಿದನು. ಅದಕ್ಕೆ ಮೆಚ್ಚಿ ದೇವದೇವನು ಅವನಿಗೆ ಅವಧ್ಯತ್ವವನ್ನು ಕರುಣಿಸಿ ಚಿನ್ನದ ಪಟ್ಟಣ ದಲ್ಲಿ ಆತನು ವಾಸಮಾಡುವಂತೆ ಅಪ್ಪಣೆಮಾಡಿದನು. ಈಶ್ವರನ ಬಾಣದ ಅಗ್ನಿಯಿಂದ ದಗ್ಧವಾದ ಎರಡು ಪಟ್ಟಣಗಳಲ್ಲಿ ಒಂದು ಶ್ರೀಶೈಲದಲ್ಲೂ ಇನ್ನೊಂದು ಅಮರಕಂಟಕದಲ್ಲೂ ಬಿದ್ದುವು. ಈ ಸ್ಥಳದಲ್ಲೇ ರುದ್ರಕೋಟಿಲಿಂಗವು ಪ್ರತಿಷ್ಠಿತ ವಾಯಿತು. ಅಮರಕಂಟಕವು ಪ್ರಸಿದ್ಧವಾದ ಕ್ಷೇತ್ರವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರಎಂಬತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ನವಾಶೀತ್ಯಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ಪೃಚ್ಛಂತಿ ತೇ ಮಹಾತ್ಮಾನೋ ಮಾರ್ಕಂಡೇಯಂ ಮಹಾಮುನಿಂ ।
ಯುಧಿಷ್ಠಿರಪುರೋಗಾಸ್ತೇ ಋಷಯಶ್ಚ ತಪೋಧನಾಃ ॥ ೧ ॥

ಆಖ್ಯಾಹಿ ಭಗವಂಸ್ತೀರ್ಥ್ಯಂ ಕಾವೇರೀಸಂಗಮಂ ಮಹತ್ ।
ಲೋಕಾನಾಂ ಚ ಹಿತಾರ್ಥಾಯ ಅಸ್ಮಾಕಂ ಚ ವಿವೃದ್ಧಯೇ ॥ ೨ ॥

ಸದಾ ಪಾಪರತಾ ಯೇ ಚ ನರಾ ದುಷ್ಕೃತಕಾರಿಣಃ ।
ಮುಚ್ಯಂತೇ ಸರ್ವಪಾಪೇಭ್ಯೋ ಗಚ್ಛಂತಿ ಪರಮಂ ಪದಂ ।
ಏತದಿಚ್ಛಾಮ ವಿಜ್ಞಾತುಂ ಭಗವನ್ ವಕ್ತುಮರ್ಹಸಿ ॥ ೩ ॥

---

೧. ಸೂತಪೌರಾಣಿಕನು ಹೇಳಿದನು.—ಧರ್ಮರಾಜನೇ ಮೊದಲಾದ ಮಹಾತ್ಮರೂ ಮಹಾತಪಸ್ವಿಗಳಾದ ಋಷಿಗಳೂ ಮಾರ್ಕಂಡೇಯ ಮಹಾಮುನಿಯನ್ನು ಪ್ರಶ್ನಿಸುವರು.

೨. ಎಲೈ ಪೂಜ್ಯನೇ, ಲೋಕಗಳ ಹಿತಕ್ಕಾಗಿಯೂ ನಮ್ಮ ಏಳಿಗೆಗಾಗಿಯೂ ಪ್ರಸಿದ್ಧವಾದ ಕಾವೇರೀಸಂಗಮಕ್ಷೇತ್ರದ ಮಾಹಾತ್ಮ್ಯವನ್ನು ವಿವರವಾಗಿ ತಿಳಿಸು.

೩. ಯಾವಾಗಲೂ ಪಾಪದಲ್ಲಿ ಆಸಕ್ತರಾಗಿ ದುಷ್ಕೃತ್ಯವನ್ನು ಮಾಡುವ ಮನುಷ್ಯರೂ ಕೂಡ ಅಲ್ಲಿ ಸಕಲಪಾಪಗಳಿಂದಲೂ ಬಿಡುಗಡೆ ಹೊಂದಿ ಸದ್ಗತಿಯನ್ನು ಪಡೆಯುವರಷ್ಟೆ! ಇವನ್ನು ತಿಳಿಯಲಿಚ್ಛಿಸುತ್ತೇವೆ. ಓ ಮಹಾತ್ಮಾ, ನಮಗೆ ಅದನ್ನು ಹೇಳು.

॥ ಮಾರ್ಕಂಡೇಯ ಉವಾಚ ॥

ಶೃಣ್ವಂತ್ವವಹಿತಾಃ ಸರ್ವೇ ಯುಧಿಷ್ಠಿರಪುರೋಗಮಾಃ ।
ಅಸ್ತಿ ವೀರೋ ಮಹಾಯಕ್ಷಃ ಕುಬೇರಃ ಸತ್ಯವಿಕ್ರಮಃ ॥ ೧ ॥

ಇದಂ ತೀರ್ಥಮನುಪ್ರಾಪ್ಯ ರಾಜನ್ ಯಕ್ಷಾಧಿಪೋಽಭವತ್ ।
ಸಿದ್ಧಿಂ ಪ್ರಾಪ್ತೋ ಮಹಾರಾಜ ತನ್ಮೇ ನಿಗದತಃ ಶೃಣು ॥ ೨ ॥

ಕಾವೇರೀ ನರ್ಮದಾ ಯತ್ರ ಸಂಗಮೋ ಲೋಕವಿಶ್ರುತಃ ।
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಕುಬೇರಃ ಸತ್ಯವಿಕ್ರಮಃ ॥ ೩ ॥

ತಪೋಽತಪ್ಯತ ಯಕ್ಷೇಂದ್ರೋ ದಿವ್ಯಂ ವರ್ಷಶತಂ ಮಹತ್ ।
ತಸ್ಯ ತುಷ್ಟೋ ಮಹಾದೇವಃ ಪ್ರದಾತುಂ ವರಮುತ್ತಮಂ ॥ ೪ ॥

ಭೋ ಭೋ ಯಕ್ಷ ಮಹಾಸತ್ತ್ವ ವರಂ ಬ್ರೂಹಿ ಯಥೇಪ್ಸಿತಂ ।
ಬ್ರೂಹಿ ಕಾರ್ಯಂ ಯಥೇಷ್ಟಂ ತು ಯದ್ವಾ ಮನಸಿ ವರ್ತತೇ ॥ ೫ ॥

---

೧-೨. ಮಾರ್ಕಂಡೇಯನು ಹೇಳಿದನು.—ಓ ಯುಧಿಷ್ಠಿರಪ್ರಮುಖರೇ, ಎಲ್ಲರೂ ಗಮನವಿಟ್ಟು ಕೇಳಿ. ಕುಬೇರನೆಂಬ ಮಹಾಶೂರನೂ ವೀರನೂ ಆದ ಯಕ್ಷನೊಬ್ಬನುಂಟು. ಅವನು ಈ ತೀರ್ಥಕ್ಕೆ ಬಂದು ಯಕ್ಷಾಧಿಪನಾಗಿ ತಾನು ಕೋರಿದ ಸಿದ್ಧಿಯನ್ನು ಪಡೆದನು. ಎಲೈ ರಾಜಾ, ಅದನ್ನು ಹೇಳುವೆನು ಕೇಳು.

೩. ಕಾವೇರೀ ಮತ್ತು ನರ್ಮದಾ ನದಿಗಳ ಸಂಗಮವು ಲೋಕ ಪ್ರಸಿದ್ಧವಾದ ಪುಣ್ಯತೀರ್ಥ. ವೀರಾಗ್ರೇಸರನೂ ಯಕ್ಷರ ಅಧಿಪತಿಯೂ ಆದ ಆ ಕುಬೇರನು ಅಲ್ಲಿ ಸ್ನಾನಮಾಡಿ ಶುಚಿಯಾಗಿ ನೂರಾರು ದಿವ್ಯ ಸಂವತ್ಸರಗಳ ಕಾಲ ಘೋರವಾದ ತಪಸ್ಸನ್ನು ಮಾಡಿದನು.

೪-೫. ಪರಮೇಶ್ವರನು ಅವನ ತಪಸ್ಸಿಗೆ ಮೆಚ್ಚಿ ಉತ್ತಮವಾದ ವರವನ್ನು ಕರುಣಿಸುವುದಕ್ಕಾಗಿ ಬಂದು ಇಂತೆಂದನು. ಸತ್ವಗುಣ ಪೂರ್ಣನಾದ ಓ ಕುಬೇರಾ, ನಿನಗೆ ಬೇಕಾದ ವರವನ್ನು ಹೇಳು. ನೀನು ಬಯಸುವ ಕಾರ್ಯವಾವುದು ? ನಿನ್ನ ಮನಸ್ಸಿನಲ್ಲಿರುವುದೇನು ?

ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಅದ್ಯ ಪ್ರಭೃತಿ ಸರ್ವೇಷಾಂ ಯಕ್ಷಾಣಾಮಧಿಪೋ ಭವೇ ॥ ೯ ॥

ಕುಬೇರಸ್ಯ ವಚಃ ಶ್ರುತ್ವಾ ಪರಿತುಷ್ಟೋ ಮಹೇಶ್ವರಃ ।
ಏವಮಸ್ತು ತತೋ ದೇವಸ್ತತ್ರೈವಾಂತರಧೀಯತ ॥೧೦॥

ಸೋಽಪಿ ಲಬ್ಧವರೋ ಯಕ್ಷಃ ಶೀಘ್ರಂ ಯಕ್ಷಕುಲಂ ಗತಃ ।
ಪೂಜಿತಃ ಸ ತು ಯಕ್ಷೈಶ್ಚ ಹ್ಯಭಿಷಿಕ್ತಸ್ತು ಪಾರ್ಥಿವ ॥೧೧॥

ಕಾವೇರೀ ಸಂಗಮಂ ತತ್ರ ಸರ್ವಪಾಪಪ್ರಣಾಶನಂ ।
ಯೇ ನರಾ ನಾಭಿಜಾನಂತಿ ವಂಚಿತಾಸ್ತೇ ನ ಸಂಶಯಃ ॥೧೨॥

ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾಯೀತ ಮಾನವಃ ।
ಕಾವೇರೀ ಚ ಮಹಾಪುಣ್ಯಾ ನರ್ಮದಾ ಚ ಮಹಾನದೀ ॥೧೩॥

---

೯. ಕುಬೇರನು ಹೇಳಿದನು.—ದೇವಾ, ನನಗೆ ನೀನು ಪ್ರಸನ್ನನಾಗಿ ವರವನ್ನು ಕರುಣಿಸುವುದಾದರೆ ಇಂದಿನಿಂದ ನಾನು ಎಲ್ಲ ಯಕ್ಷರಿಗೂ ಅಧಿಪತಿ ಯಾಗಬೇಕೆಂದಿರುವೆನು.

೧೦. ಕುಬೇರನ ಮಾತನ್ನು ಕೇಳಿ ಮಹೇಶ್ವರನು ಬಹು ಸಂತುಷ್ಟನಾದನು. ಹಾಗೆಯೇ ಆಗಲೆಂದು ಹೇಳಿ ಅವನು ಅಲ್ಲೇ ಅದೃಶ್ಯನಾದನು.

೧೧. ಧರ್ಮರಾಜಾ, ಆ ಕುಬೇರನೂ ಕೂಡ ವರವನ್ನು ಪಡೆದು ಬೇಗನೆ ತನ್ನ ವಸತಿಗೆ ತೆರಳಿದನು. ಯಕ್ಷರು ಅವನನ್ನು ಪೂಜಿಸಿ ಅವನಿಗೆ ಪಟ್ಟಾಭಿಷೇಕ ಮಾಡಿದರು

೧೨. ಕಾವೇರೀ ಸಂಗಮಕ್ಷೇತ್ರವು ಸಕಲಪಾಪಗಳನ್ನೂ ಕಳೆಯುವುದು. ಇದನ್ನರಿಯದ ಜನರು ಖಂಡಿತವಾಗಿ ಮೋಸಹೋದಂತೆಯೇ ಸರಿ.

೧೩-೧೪. ಆದುದರಿಂದ ಮಾನವನು ಅಲ್ಲಿ ಸ್ನಾನಮಾಡುವುದಕ್ಕೆ ಸರ್ವ ಪ್ರಯತ್ನವನ್ನೂ ಮಾಡಬೇಕು. ಕಾವೇರಿಯು ಬಹು ಪುಣ್ಯಕರವಾದ ನದಿ; ನರ್ಮದೆಯೂ ಸಹ ಅತಿ ಶ್ರೇಷ್ಠವಾದುದು. ಎಲೈ ರಾಜೇಂದ್ರಾ, ಅಲ್ಲಿ ಸ್ನಾನಮಾಡಿ

ತತ್ರ ಸ್ನಾತ್ವಾ ತು ರಾಜೇಂದ್ರ ಹ್ಯರ್ಚಯೇದ್ವೃಷಭಧ್ವಜಂ ।
ಅಶ್ವಮೇಧಫಲಂ ಪ್ರಾಪ್ಯ ರುದ್ರಲೋಕೇ ಮಹೀಯತೇ ॥೧೪॥

ಅಗ್ನಿಪ್ರವೇಶಂ ಯಃ ಕುರ್ಯಾದ್ಯಶ್ಚ ಕುರ್ಯಾದನಾಶಕಂ ।
ಅನಿವರ್ತ್ಯಾ ಗತಿಸ್ತಸ್ಯ ಯಥಾ ಮೇ ಶಂಕರೋಽಬ್ರವೀತ್ ॥೧೫॥

ಸೇವ್ಯಮಾನೋ ವರಸ್ತ್ರೀಭಿಃ ಕ್ರೀಡತೇ ದಿವಿ ರುದ್ರವತ್ ।
ಷಷ್ಟಿರ್ವರ್ಷಸಹಸ್ರಾಣಿ ಷಷ್ಟಿಕೋಟ್ಯಸ್ತಥಾ ಪರಾಃ ॥೧೬॥

ಮೋದತೇ ರುದ್ರಲೋಕಸ್ಥೋ ಯತ್ರ ತತ್ರೈವ ಗಚ್ಛತಿ ।
ಪುಣ್ಯಕ್ಷಯಾತ್ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ॥೧೭॥

ಭೋಗವಾನ್ ದಾನಶೀಲಶ್ಚ ಮಹಾಕುಲಸಮುದ್ಭವಃ ।
ತತ್ರ ಪೀತ್ವಾ ಜಲಂ ಸಮ್ಯಕ್ಚಾಂದ್ರಾಯಣಫಲಂ ಲಭೇತ್ ॥೧೮॥

---

ಮಹಾದೇವನನ್ನು ಪೂಜಿಸಿದರೆ ಅಶ್ವಮೇಧಯಾಗದ ಫಲವು ಬರುವುದು. ಅಷ್ಟೇ ಅಲ್ಲ; ಆತನು ರುದ್ರಲೋಕದಲ್ಲಿ ಗೌರವವನ್ನು ಪಡೆಯುವನು.

೧೫. ಆ ಕ್ಷೇತ್ರದಲ್ಲಿ ಅಗ್ನಿಪ್ರವೇಶವನ್ನು ಮಾಡಲಿ, ಪ್ರಾಯೋಪವೇಶವನ್ನು ನಡೆಸಲಿ, ಪುನರಾವೃತ್ತಿರಹಿತವಾದ ಸದ್ಗತಿ ಲಭಿಸುವುದು. ಶಂಕರನೇ ನನಗೆ ಹೀಗೆಂದು ಹೇಳಿದನು.

೧೬. ಆತನು ದಿವ್ಯನಾರಿಯರಿಂದ ಸೇವೆಯನ್ನು ಕೈಗೊಳ್ಳುತ್ತ ಸ್ವರ್ಗದಲ್ಲಿ ಈಶ್ವರನಂತೆ ಕ್ರೀಡಿಸುವನು. ಅರವತ್ತು ಕೋಟಿ ಅರವತ್ತು ಸಾವಿರ ವರ್ಷಗಳ ಕಾಲ ರುದ್ರಲೋಕದಲ್ಲಿ ಸಂತೋಷದಿಂದಿರುವನು. ಮಹಾದೇವನು ಹೋದ ಕಡೆಗಳಿಗೆಲ್ಲ ಇವನೂ ಹೋಗುವನು.

೧೭. ಪುಣ್ಯಫಲವು ತೀರಿದ ಮೇಲೆ ಭೂಮಿಗೆ ಜಾರಿಬಿದ್ದು ಶ್ರೇಷ್ಠವಾದ ಕುಲದಲ್ಲಿ ಧಾರ್ಮಿಕನೂ, ಭೋಗವಂತನೂ, ದಾನಶೀಲನೂ ಆದ ರಾಜನಾಗಿ ಜನಿಸುವನು.

೧೮. ಆ ಸಂಗಮದಲ್ಲಿ ಜಲಪಾನವನ್ನು ಮಾಡಿದರೆ ಚಾಂದ್ರಾಯಣ ವ್ರತವನ್ನು ಶಾಸ್ತ್ರೋಕ್ತವಾಗಿ ಆಚರಿಸಿದಷ್ಟು ಫಲವು ಬರುವುದು. ಆ ಪುಣ್ಯ ಜಲವನ್ನು ಪಾನಮಾಡಿದ ಮನುಷ್ಯರು ಸ್ವರ್ಗವನ್ನೈದುವರು.

**ಸ್ವರ್ಗಂ ಗಚ್ಛಂತಿ ತೇ ಮರ್ತ್ಯಾ ಯೇ ಪಿಬಂತಿ ಶುಭಂ ಜಲಂ ।**
**ಗಂಗಾಯಮುನಯೋರ್ಮಧ್ಯೇ ಯತ್ಫಲಂ ಪ್ರಾಪ್ನುಯಾನ್ನರಃ ।**
**ಕಾವೇರೀಸಂಗಮೇ ಸ್ನಾತ್ವಾ ತತ್ಫಲಂ ತಸ್ಯ ಜಾಯತೇ ॥೧೯॥**

**ಏವಮಾದಿ ತು ರಾಜೇಂದ್ರ ಕಾವೇರೀಸಂಗಮೇ ಮಹತ್ ।**
**ಪುಣ್ಯಂ ಮಹತ್ಫಲಂ ತತ್ರ ಸರ್ವಪಾಪಪ್ರಣಾಶನಂ ॥೨೦॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ**
**ಏಕೋನನವತ್ಯಧಿಕಶತತಮೋಽಧ್ಯಾಯಃ**

---

೧೯. ಗಂಗಾಯಮುನಾ ನದಿಗಳ ಸಂಗಮಸ್ಥಳದಲ್ಲಿ ಯಾವ ಫಲವು ಬರುತ್ತದೆಯೋ ಅದೇ ಫಲವು ಕಾವೇರೀಸಂಗಮದಲ್ಲಿ ಸ್ನಾನಮಾಡಿದವನಿಗೆ ಉಂಟಾಗುತ್ತದೆ.

೨೦. ಎಲೈ ಧರ್ಮರಾಜಾ, ಕಾವೇರೀಸಂಗಮದಲ್ಲಿ ಈ ರೀತಿಯಾಗಿ ಅಪಾರವಾದ ಪುಣ್ಯಫಲವು ಪ್ರಾಪ್ತವಾಗುವುದು. ಅದು ಸಕಲಪಾಪಪರಿಹಾರಕ ವಾದ ಕ್ಷೇತ್ರ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಾವೇರೀಸಂಗಮತೀರ್ಥದ ಮಾಹಾತ್ಮ್ಯವನ್ನು ವರ್ಣಿಸಿದೆ.

ಕಾವೇರಿ ಮತ್ತು ನರ್ಮದಾ ನದಿಗಳ ಸಂಗಮವು ಬಹು ಪವಿತ್ರವಾದ ತೀರ್ಥ. ಕುಬೇರನು ಅಲ್ಲಿ ಸ್ನಾನಮಾಡಿ ಮಹಾದೇವನನ್ನು ಅರ್ಚಿಸಿದ ಕಾರಣ ಯಕ್ಷಾಧಿ ಪತಿಯಾದನು. ಈ ತೀರ್ಥದ ಸ್ನಾನದಿಂದ ಮಾನವನು ಸ್ವರ್ಗಾದಿ ಪುಣ್ಯಲೋಕ ಗಳನ್ನೈದುವನು. ಗಂಗಾಯಮುನಾ ಸಂಗಮದಂತೆ ಕಾವೇರೀ ನರ್ಮದಾ ಸಂಗಮವೂ ಅತ್ಯಂತ ಪಾವನವಾದುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರೆಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ನವತ್ಯಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ನಾರ್ಮದೇ ಚೋತ್ತರೇ ಕೂಲೇ ತೀರ್ಥಂ ಯೋಜನವಿಸ್ತೃತಂ ।
ಮಂತ್ರೇಶ್ವರೇತಿ ವಿಖ್ಯಾತಂ ಸರ್ವಪಾಪಹರಂ ಪರಂ ॥ ೧ ॥

ತತ್ರ ಸ್ನಾತ್ವಾ ನರೋ ರಾಜನ್ ದೈವತೈಃ ಸಹ ಮೋದತೇ ।
ಪಂಚವರ್ಷಸಹಸ್ರಾಣಿ ಕ್ರೀಡತೇ ಕಾಮರೂಪಧೃಕ್ ॥ ೨ ॥

ಗರ್ಜನಂ ಚ ತತೋ ಗಚ್ಛೇದ್ಯತ್ರ ಮೇಘಸ್ತತೋತ್ಥಿತಃ ।
ಇಂದ್ರಜಿನ್ನಾಮ ಸಂಪ್ರಾಪ್ತಸ್ತಸ್ಯ ತೀರ್ಥಪ್ರಭಾವತಃ ॥ ೩ ॥

ಮೇಘನಾದಂ ತತೋ ಗಚ್ಛೇದ್ಯತ್ರ ಮೇಘಾನುಗರ್ಜಿತಂ ।
ಮೇಘನಾದೋ ಗಣಸ್ತತ್ರ ಪರಮಾಂ ಗಣತಾಂ ಗತಃ ॥ ೪ ॥

---

೧. ಮಾರ್ಕಂಡೇಯನು ಹೇಳಿದನು.—ನರ್ಮದಾ ನದಿಯ ಉತ್ತರತೀರದಲ್ಲಿ ಒಂದು ಯೋಜನ ಪ್ರಮಾಣದ ವಿಸ್ತಾರವುಳ್ಳ ಮಂತ್ರೇಶ್ವರವೆಂಬ ಪ್ರಸಿದ್ಧವಾದ ತೀರ್ಥವುಂಟು. ಅದು ಸಕಲ ಪಾಪಪರಿಹಾರಕವಾದುದು. ಅತ್ಯಂತ ಶ್ರೇಷ್ಠವಾದುದು

೨. ಓ ರಾಜಾ, ಅಲ್ಲಿ ಸ್ನಾನಮಾಡಿದ ಮನುಷ್ಯನು ದೇವತೆಗಳೊಡನೆ ಸಂತೋಷದಿಂದಿರುವನು. ಸ್ವೇಚ್ಛಾರೂಪವನ್ನು ಧರಿಸಿ ಐದುಸಾವಿರ ವರ್ಷಗಳ ಕಾಲ ಕ್ರೀಡಿಸುವನು.

೩. ಬಳಿಕ ಗರ್ಜನವೆಂಬ ತೀರ್ಥಕ್ಕೆ ಹೋಗಬೇಕು. ಇಂದ್ರಜಿತ್ತೆಂಬ ಪ್ರಸಿದ್ಧವಾದ ಮೇಘವು ಅಲ್ಲಿಗೆ ಬಂದು ಆ ತೀರ್ಥದ ಪ್ರಭಾವದಿಂದ ಮೇಲೇರಿ ಹೋಗುವುದು.

೪. ಅನಂತರ ಮೇಘನಾದ ಕ್ಷೇತ್ರಕ್ಕೆ ತೆರಳಬೇಕು. ಅಲ್ಲಿ ಮೋಡಗಳು ಮೊಳಗುತ್ತಿವೆ. ಮೇಘನಾದನೆಂಬ ಗಣಪನು ಅಲ್ಲಿ ಸ್ನಾನಮಾಡಿ ಶ್ರೇಷ್ಠವಾದ ಗಣೇಶ್ವರ ಪದವಿಯನ್ನು ಪಡೆದನು.

**ತತೋ ಗಚ್ಛೇತ್ತು ರಾಜೇಂದ್ರ ತೀರ್ಥಮಾಮ್ರಾತಕೇಶ್ವರಂ ।**
**ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ ೫ ॥**

**ನರ್ಮದೋತ್ತರತೀರೇ ತು ತೀರ್ಥಂ ತು ವಿಶ್ರುತಂ ಭವೇತ್ ।**
**ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ತರ್ಪಯೇತ್ಪಿತೃದೇವತಾಃ ॥ ೬ ॥**

**ಸರ್ವಾನ್ಕಾಮಾನವಾಪ್ನೋತಿ ಮನಸಾ ಯೇ ವಿಚಿಂತಿತಾಃ ।**
**ತತೋ ಗಚ್ಛೇತ್ತು ರಾಜೇಂದ್ರ ಬ್ರಹ್ಮಾವರ್ತಮಿತಿ ಸ್ಮೃತಂ ॥ ೭ ॥**

**ತತ್ರ ಸನ್ನಿಹಿತೋ ಬ್ರಹ್ಮಾ ನಿತ್ಯಮೇವ ಯುಧಿಷ್ಠಿರ ।**
**ತತ್ರ ಸ್ನಾತ್ವಾ ತು ರಾಜೇಂದ್ರ ಬ್ರಹ್ಮಲೋಕೇ ಮಹೀಯತೇ ॥ ೮ ॥**

**ತತೋಽಗಾರೇಶ್ವರಂ ಗಚ್ಛೇನ್ನಿಯತೋ ನಿಯತಾಶನಃ ।**
**ಸರ್ವಪಾಪವಿನಿರ್ಮುಕ್ತೋ ರುದ್ರಲೋಕಂ ಸ ಗಚ್ಛತಿ ॥ ೯ ॥**

---

೫. ಎಲೈ ರಾಜೇಂದ್ರಾ, ಅಲ್ಲಿಂದ ಮುಂದೆ ಉತ್ತಮವಾದ ಆಮ್ರಾತಕೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಮನುಷ್ಯನು ಅಲ್ಲಿ ಸ್ನಾನಮಾಡಿದರೆ ಒಂದು ಸಾವಿರ ಗೋದಾನಗಳ ಫಲವನ್ನು ಪಡೆಯುವನು.

೬. ನರ್ಮದಾನದಿಯ ಉತ್ತರತೀರದಲ್ಲಿ ವಿಶ್ರುತವೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಕೊಟ್ಟರೆ ಮನಸ್ಸಿನಲ್ಲಿ ಕೋರಿದ ಇಷ್ಟಾರ್ಥಗಳೆಲ್ಲವೂ ಕೈಗೂಡುವುವು.

೭-೮. ಓ ಯುಧಿಷ್ಠಿರಾ, ತರುವಾಯ ಬ್ರಹ್ಮಾವರ್ತವೆಂಬ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಯಾವಾಗಲೂ ಬ್ರಹ್ಮದೇವನ ಸಾನ್ನಿಧ್ಯವಿರುವುದು. ಅಲ್ಲಿ ಸ್ನಾನಮಾಡಿದಾತನು ಬ್ರಹ್ಮಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

೯. ಆ ತರುವಾಯ ಜಿತೇಂದ್ರಿಯನೂ ಮಿತಾಹಾರಿಯೂ ಆಗಿ ಅಗಾರೇಶ್ವರ ತೀರ್ಥವನ್ನೈದಬೇಕು. ಸಕಲ ಪಾಪಗಳಿಂದಲೂ ಬಿಡುಗಡೆಹೊಂದಿ ರುದ್ರಲೋಕವನ್ನು ಸೇರುವನು.

ತತೋ ಗಚ್ಛೇಚ್ಚ ರಾಜೇಂದ್ರ ಕಪಿಲಾತೀರ್ಥಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಕಪಿಲಾದಾನಮಾಪ್ನುಯಾತ್ ॥೧೦॥

ಗಚ್ಛೇತ್ಕರಜತೀರ್ಥಂ ತು ದೇವರ್ಷಿಗಣಸೇವಿತಂ ।
ತತ್ರ ಸ್ನಾತ್ವಾ ನರೋ ರಾಜನ್ ಗೋಲೋಕಂ ಸಮವಾಪ್ನುಯಾತ್ ॥೧೧॥

ತತೋ ಗಚ್ಛೇತ್ತು ರಾಜೇಂದ್ರ ಕುಂಡಲೇಶ್ವರಮುತ್ತಮಂ ।
ತತ್ರ ಸನ್ನಿಹಿತೋ ರುದ್ರಸ್ತಿಷ್ಠತೇ ಹ್ಯುಮಯಾ ಸಹ ॥೧೨॥

ತತ್ರ ಸ್ನಾತ್ವಾ ತು ರಾಜೇಂದ್ರ ಹ್ಯವಧ್ಯಸ್ತ್ರಿದಶೈರಪಿ ।
ಪಿಪ್ಪಲೇಶಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ॥೧೩॥

ತತ್ರ ಸ್ನಾತ್ವಾ ತು ರಾಜೇಂದ್ರ ರುದ್ರಲೋಕೇ ಮಹೀಯತೇ ।
ತತೋ ಗಚ್ಛೇತ್ತು ರಾಜೇಂದ್ರ ವಿಮಲೇಶ್ವರಮುತ್ತಮಂ ॥೧೪॥

ತತ್ರ ದೇವಶಿಲಾ ರಮ್ಯಾ ಚೇಶ್ವರೇಣ ವಿನಿರ್ಮಿತಾ ।
ತತ್ರ ಪ್ರಾಣಪರಿತ್ಯಾಗಾದ್ರುದ್ರಲೋಕಮವಾಪ್ನುಯಾತ್ ॥೧೫॥

---

೧೦. ಆ ಬಳಿಕ ಅತಿಶ್ರೇಷ್ಠವಾದ ಕಪಿಲಾತೀರ್ಥಕ್ಕೆ ಹೋಗಿ ಸ್ನಾನ ಮಾಡಿದರೆ, ಓ ರಾಜಾ, ಗೋದಾನವನ್ನು ಮಾಡಿದಷ್ಟು ಫಲವು ಬರುತ್ತದೆ.

೧೧. ತರುವಾಯ ದೇವತೆಗಳಿಂದಲೂ ಋಷಿಗಳಿಂದಲೂ ಸೇವಿತವಾದ ಕರಜತೀರ್ಥಕ್ಕೆ ಹೋಗಿ ಸ್ನಾನಮಾಡುವುದರಿಂದ ಮನುಷ್ಯನಿಗೆ ಗೋಲೋಕದ ಪ್ರಾಪ್ತಿಯಾಗುವುದು.

೧೨. ಎಲೈ ಧರ್ಮರಾಜಾ, ಮುಂದೆ ಕುಂಡಲೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಪರಮೇಶ್ವರನು ಪಾರ್ವತೀಸಮೇತನಾಗಿ ನೆಲಸಿರುವನು. ಆ ತೀರ್ಥದಲ್ಲಿ ಸ್ನಾನಮಾಡಿದಾತನು ದೇವತೆಗಳಿಗೂ ಅವಧ್ಯನೆನಿಸುವನು.

೧೩. ತರುವಾಯ ಎಲ್ಲ ಪಾಪಗಳನ್ನೂ ಕಳೆಯುವ ಪಿಪ್ಪಲೇಶ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದವನು ರುದ್ರಲೋಕವನ್ನೈದಿ ಮಾನ್ಯತೆಯನ್ನು ಪಡೆಯುವನು.

೧೪-೧೫. ಓ ಧರ್ಮರಾಜಾ, ಅಲ್ಲಿಂದ ಮುಂದೆ ವಿಮಲೇಶ್ವರವೆಂಬ ಉತ್ತಮ ತೀರ್ಥವು ಸಿಕ್ಕುವುದು. ಅಲ್ಲಿ ಈಶ್ವರನಿಂದ ನಿರ್ಮಿತವಾದ ಶಿಲೆಯಿದೆ. ಅದರಲ್ಲಿ ಪ್ರಾಣವನ್ನು ಬಿಡತಕ್ಕವನಿಗೆ ರುದ್ರಲೋಕವು ಪ್ರಾಪ್ತವಾಗುವುದು.

ತತಃ ಪುಷ್ಕರಿಣೀಂ ಗಚ್ಛೇತ್ತತ್ರ ಸ್ನಾನಂ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಹೀಂದ್ರಸ್ಯಾರ್ಧಾಸನಂ ಲಭೇತ್ ॥೧೬॥

ನರ್ಮದಾ ಸರಿತಾಂ ಶ್ರೇಷ್ಠಾ ರುದ್ರದೇಹಾದ್ವಿನಿಃಸೃತಾ ।
ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥೧೭॥

ಸರ್ವದೇವಾಧಿದೇವೇನ ತ್ವೀಶ್ವರೇಣ ಮಹಾತ್ಮನಾ ।
ಕಥಿತಾ ಋಷಿಸಂಘೇಭ್ಯೋ ಹ್ಯಸ್ಮಾಕಂ ಚ ವಿಶೇಷತಃ ॥೧೮॥

ಮುನಿಭಿಃ ಸಂಸ್ತುತಾ ಹ್ಯೇಷಾ ನರ್ಮದಾ ಪ್ರವರಾ ನದೀ ।
ರುದ್ರದೇಹಾದ್ವಿನಿಷ್ಕ್ರಾಂತಾ ಲೋಕಾನಾಂ ಹಿತಕಾಮ್ಯಯಾ ॥೧೯॥

ಸರ್ವಪಾಪಹರಾ ನಿತ್ಯಂ ಸರ್ವದೇವನಮಸ್ಕೃತಾ ।
ಸಂಸ್ತುತಾ ದೇವಗಂಧರ್ವೈರಪ್ಸರೋಭಿಸ್ತಥೈವ ಚ ॥೨೦॥

---

೧೬. ಬಳಿಕ ಪುಷ್ಕರಿಣೀ ತೀರ್ಥವನ್ನು ಸೇರಿ ಅಲ್ಲಿ ಸ್ನಾನಮಾಡಬೇಕು. ಅಷ್ಟು ಮಾಡಿದರೆ ಸಾಕು. ಮನುಷ್ಯನು ಸ್ವರ್ಗವನ್ನೈದಿ ಇಂದ್ರನ ಅರ್ಧಾಸನದಲ್ಲಿ ಕುಳಿತುಕೊಳ್ಳುವನು.

೧೭. ನರ್ಮದೆಯು ನದಿಗಳಲ್ಲೆಲ್ಲ ಶ್ರೇಷ್ಠವಾದುದು. ಈಶ್ವರನ ದೇಹದಿಂದ ಹೊರಟಂತಹುದು. ಅದು ಸಂಚರಿಸುವ ಮತ್ತು ಸಂಚರಿಸದಿರುವ ಸಕಲ ಜಂತುಗಳನ್ನೂ ಉದ್ಧಾರಮಾಡುವುದು.

೧೮. ಸಕಲ ದೇವತೆಗಳ ಅಧೀಶ್ವರನೂ ಮಹಾತ್ಮನೂ ಆದ ಪರಮೇಶ್ವರನು ಋಷಿಗಣಗಳಿಗೂ, ವಿಶೇಷವಾಗಿ ನಮಗೂ ಈ ನದಿಯ ಮಹಿಮೆಯನು ಹೇಳಿರುವನು.

೧೯. ಶ್ರೇಷ್ಠವಾದ ಈ ನರ್ಮದಾನದಿಯು ಮುನಿಗಳಿಂದ ಸ್ತುತಿಸಲ್ಪಟ್ಟಿರುವುದು. ಲೋಕಗಳಿಗೆ ಹಿತವನ್ನುಂಟುಮಾಡುವ ಉದ್ದೇಶದಿಂದ ಇದು ಪರಮೇಶ್ವರನ್ನ ದೇಹದಿಂದ ಹೊರಹೊರಟಿತು.

೨೦. ಇದು ಸಕಲ ವಿಧವಾದ ಪಾಪಗಳನ್ನೂ ಕಳೆಯುವುದು. ಸಕಲ ದೇವತೆಗಳೂ ಇದನ್ನು ಸದಾ ನಮಸ್ಕರಿಸುವರು. ದೇವತೆಗಳು ಗಂಧರ್ವರು ಮತ್ತು ಅಪ್ಸರಸ್ತ್ರೀಯರು ಸ್ತುತಿಸುವರು.

ನಮಃ ಪುಣ್ಯಜಲೇ ಹ್ಯಾದ್ಯೇ ನಮಃ ಸಾಗರಗಾಮಿನಿ ।
ನಮಸ್ತೇ ಪಾಪನಿರ್ದಾಹೇ ನಮೋ ದೇವಿ ವರಾನನೇ ॥೨೧॥

ನಮೋಽಸ್ತು ತೇ ಋಷಿಗಣಸಿದ್ಧಸೇವಿತೇ ।
ನಮೋಽಸ್ತು ತೇ ಶಂಕರದೇಹನಿಃಸೃತೇ
ನಮೋಽಸ್ತು ತೇ ಧರ್ಮಭೃತಾಂ ವರಪ್ರದೇ
ನಮೋಽಸ್ತು ತೇ ಸರ್ವಪವಿತ್ರಪಾವನೇ ॥೨೨॥

ಯಸ್ತ್ವಿದಂ ಪಠತೇ ಸ್ತೋತ್ರಂ ನಿತ್ಯಂ ಶ್ರದ್ಧಾಸಮನ್ವಿತಃ ।
ಬ್ರಾಹ್ಮಣೋ ವೇದಮಾಪ್ನೋತಿ ಕ್ಷತ್ರಿಯೋ ವಿಜಯೀ ಭವೇತ್ ॥೨೩॥

ವೈಶ್ಯಸ್ತು ಲಭತೇ ಲಾಭಂ ಶೂದ್ರಶ್ಚೈವ ಶುಭಾಂ ಗತಿಂ ।
ಅರ್ಥಾರ್ಥೀ ಲಭತೇ ಹ್ಯರ್ಥಂ ಸ್ಮರಣಾದೇವ ನಿತ್ಯಶಃ ॥೨೪॥

---

೨೧. ಪುಣ್ಯಜಲದಿಂದ ಕೂಡಿ ಆದಿತೀರ್ಥವೆನಿಸಿದ ಓ ನರ್ಮದೇ, ನಿನಗೆ ನಮಸ್ಕಾರ. ಸಾಗರವನ್ನು ಸೇರತಕ್ಕವಳೇ, ನಿನಗೆ ನಮಸ್ಕಾರ. ಪಾಪಪರಿಹಾರಕಳೇ, ನಿನಗೆ ನಮಸ್ಕಾರ. ಎಲೌ ಸೌಮ್ಯಮುಖೀ, ದೇವೀ, ನಿನಗೆ ನಮಸ್ಕಾರ.

೨೨. ಋಷಿಗಳಿಂದಲೂ ಸಿದ್ಧರಿಂದಲೂ ಸೇವೆಯನ್ನು ಕೈಗೊಳ್ಳುವವಳೇ, ನಿನಗೆ ನಮಸ್ಕಾರ. ಶಂಕರನ ದೇಹದಿಂದ ಹುಟ್ಟಿದವಳೇ, ನಿನಗೆ ನಮಸ್ಕಾರ. ಧರ್ಮನಿರತರಿಗೆ ವರವನ್ನು ಕರುಣಿಸುವವಳೇ, ನಿನಗೆ ನಮಸ್ಕಾರ.

೨೩-೨೪. ಈ ಸ್ತೋತ್ರವನ್ನು ನಿತ್ಯವೂ ಶ್ರದ್ಧೆಯಿಂದ ಪಾರಾಯಣಮಾಡತಕ್ಕ ಬ್ರಾಹ್ಮಣನು ವೇದ ಸಂಪನ್ನನಾಗುವನು. ಕ್ಷತ್ರಿಯನು ಜಯಶಾಲಿಯಾಗುವನು. ವೈಶ್ಯನು ಲಾಭವನ್ನು ಪಡೆಯುವನು. ಶೂದ್ರನು ಸದ್ಗತಿಯನ್ನೈದುವನು. ದ್ರವ್ಯವನ್ನು ಬಯಸುವವನು ಸ್ಮರಣಮಾತ್ರದಿಂದಲೇ ದಿನದಿನವೂ ಹಣಗಾರನಾಗುವನು.

**ನರ್ಮದಾಂ ಸೇವತೇ ನಿತ್ಯಂ ಸ್ವಯಂ ದೇವೋ ಮಹೇಶ್ವರಃ ।**
**ತೇನ ಪುಣ್ಯನದೀ ಜ್ಞೇಯಾ ಬ್ರಹ್ಮಹತ್ಯಾಪಹಾರಿಣೀ ॥೨೫॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ**
**ನವತ್ಯಧಿಕಶತತಮೋಽಧ್ಯಾಯಃ**

---

೨೫. ಪರಮೇಶ್ವರನು ತಾನಾಗಿಯೇ ದಿನದಿನವೂ ನರ್ಮದಾನದಿಯ ಸೇವೆಯನ್ನು ಮಾಡುತ್ತಿರುವನು. ಆದಕಾರಣ ಈ ನದಿಯು ಬಹು ಪುಣ್ಯಕರವಾದುದೆಂದರಿಯಬೇಕು. ಇದು ಬ್ರಹ್ಮಹತ್ಯೆಯನ್ನು ಪರಿಹಾರಮಾಡುವುದು.

## ಅಧ್ಯಾಯದ ಸಾರಾಂಶ

ನರ್ಮದಾ ನದಿಗೆ ಸಂಬಂಧಿಸಿದ ಹಲವು ತೀರ್ಥಗಳನ್ನು ಈ ಅಧ್ಯಾಯದಲ್ಲಿ ಹೇಳಿದೆ

ನರ್ಮದಾ ನದಿಯ ಉತ್ತರದ ದಡದಲ್ಲಿ ಮಂತ್ರೇಶ್ವರ, ಮೇಘನಾದ ಮೊದಲಾದ ಎಷ್ಟೋ ಪವಿತ್ರ ತೀರ್ಥಗಳಿವೆ. ಒಂದೊಂದೂ ಅಪರಿಮಿತವಾದ ಮಹಿಮೆಯಿಂದ ಕೂಡಿದೆ. ನರ್ಮದಾ ನದಿಯು ಲೋಕಹಿತಾರ್ಥವಾಗಿ ಮಹಾದೇವನ ಶರೀರದಿಂದ ಉತ್ಪನ್ನವಾಯಿತು. ಸ್ವಯಂ ಪರಮೇಶ್ವರನೇ ಇದನ್ನು ಎಡೆಬಿಡದೆ ಸೇವಿಸುತ್ತಿದ್ದಾನೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರತೊಂಭತ್ತನೆಯ ಅಧ್ಯಾಯವು ಮುಗಿದುದು.

## ಅಥೈಕನವತ್ಯಧಿಕಶತತಮೋಽಧ್ಯಾಯಃ

|| ಮಾರ್ಕಂಡೇಯ ಉವಾಚ ||

ತದಾಪ್ರಭೃತಿ ಬ್ರಹ್ಮಾದ್ಯಾ ಋಷಯಶ್ಚ ತಪೋಧನಾಃ ।
ಸೇವಂತೇ ನರ್ಮದಾಂ ರಾಜನ್ ರಾಗಕ್ರೋಧವಿವರ್ಜಿತಾಃ || ೧ ||

|| ಯುಧಿಷ್ಠಿರ ಉವಾಚ ||

ಕಸ್ಮಿನ್ನಿಪತಿತಂ ಶೂಲಂ ದೇವಸ್ಯ ತು ಮಹೀತಲೇ ।
ತತ್ರ ಪುಣ್ಯಂ ಸಮಾಖ್ಯಾಹಿ ಯಥಾವನ್ಮುನಿಸತ್ತಮ || ೨ ||

|| ಮಾರ್ಕಂಡೇಯ ಉವಾಚ ||

ಶೂಲಭೇದಮಿತಿ ಖ್ಯಾತಂ ತೀರ್ಥಂ ಪುಣ್ಯತಮಂ ಮಹತ್ ।
ತತ್ರ ಸ್ನಾತ್ವಾಽರ್ಚಯೇದ್ದೇವಂ ಗೋಸಹಸ್ರಫಲಂ ಲಭೇತ್ || ೩ ||

ತ್ರಿರಾತ್ರಂ ಕಾರಯೇದ್ಯಸ್ತು ತಸ್ಮಿಂಸ್ತೀರ್ಥೇ ನರಾಧಿಪ ।
ಅರ್ಚಯಿತ್ವಾ ಮಹಾದೇವಂ ಪುನರ್ಜನ್ಮ ನ ವಿದ್ಯತೇ || ೪ ||

---

೧. ಮಾರ್ಕಂಡೇಯನು ಹೇಳಿದನು.—ಓ ಧರ್ಮರಾಜಾ, ಅದು ಮೊದಲುಗೊಂಡು ಬ್ರಹ್ಮನೇ ಮೊದಲಾದ ಮಹರ್ಷಿಗಳೂ ತಪೋಧನರೂ ಕಾಮಕ್ರೋಧಗಳನ್ನು ಬಿಟ್ಟು ನರ್ಮದಾನದಿಯ ಸೇವೆಯನ್ನು ಮಾಡುತ್ತಿರುವರು.

೨. ಧರ್ಮರಾಜನು ಹೇಳಿದನು.—ಎಲೈ ಋಷಿವರ್ಯಾ, ಮಹಾದೇವನ ಶೂಲವು ಭೂಮಿಯಲ್ಲಿ ಯಾವಕಡೆ ಬಿದ್ದಿತು ? ಆ ಕ್ಷೇತ್ರದಲ್ಲಿ ಲಬ್ಧವಾಗುವ ಪುಣ್ಯಫಲವೇನು ? ವಿವರವಾಗಿ ತಿಳಿಸು.

೩. ಮಾರ್ಕಂಡೇಯನು ಹೇಳಿದನು.—ಅತ್ಯಂತ ಪುಣ್ಯಕರವಾದ ಶೂಲಭೇದವೆಂಬ ಪ್ರಸಿದ್ಧವಾದ ತೀರ್ಥವುಂಟು. ಅಲ್ಲಿ ಸ್ನಾನಮಾಡಿ ಮಹಾದೇವನನ್ನು ಪೂಜಿಸಬೇಕು. ಅದರಿಂದ ಒಂದುಸಾವಿರ ಹಸುಗಳನ್ನು ದಾನಮಾಡಿದ ಪುಣ್ಯ ಬರುತ್ತದೆ.

೪. ಎಲೈ ಧರ್ಮರಾಜಾ, ಆ ತೀರ್ಥದಲ್ಲಿ ಮೂರುದಿನ ಸ್ನಾನಮಾಡಿ ಪರಮೇಶ್ವರನನ್ನು ಪೂಜಿಸಿದವನಿಗೆ ಪುನರ್ಜನ್ಮವಿಲ್ಲ.

ಭೀಮೇಶ್ವರಂ ತತೋ ಗಚ್ಛೇನ್ನಾರದೇಶ್ವರಮುತ್ತಮಂ ।
ಆದಿತ್ಯೇಶಂ ಮಹಾಪುಣ್ಯಂ ಸ್ಮೃತಂ ಕಿಲ್ಬಿಷನಾಶನಂ ॥ ೫ ॥

ನಂದಿಕೇಶಂ ಪರಿಕ್ರಮ್ಯ ಪರ್ಯಾಪ್ತಂ ಜನ್ಮನಃ ಫಲಂ ।
ವರುಣೇಶಂ ತತೋ ಪಶ್ಯೇತ್ಸ್ವತಂತ್ರೇಶ್ವರಮೇವ ಚ ।
ಸರ್ವತೀರ್ಥಫಲಂ ತಸ್ಯ ಪಂಚಾಯತನದರ್ಶನಾತ್ ॥ ೬ ॥

ತತೋ ಗಚ್ಛೇತ್ತು ರಾಜೇಂದ್ರ ಯುದ್ಧಂ ಯತ್ರ ಸುಸಾಧಿತಂ ।
ಕೋಟಿತೀರ್ಥಂ ತು ವಿಖ್ಯಾತಮಸುರಾ ಯತ್ರ ಮೋಹಿತಾಃ ॥ ೭ ॥

ಯತ್ರೈವ ನಿಹತಾ ರಾಜನ್ ದಾನವಾ ಬಲದರ್ಪಿತಾ ।
ತೇಷಾಂ ಶಿರಾಂಸ್ಯಗೃಹ್ಣಂತ ಸರ್ವೇ ದೇವಾಃ ಸಮಾಗತಾಃ ॥ ೮ ॥

---

೫. ಬಳಿಕ ಭೀಮೇಶ್ವರಕ್ಕೂ ನಾರದೇಶ್ವರಕ್ಕೂ ಹೋಗಬೇಕು. ಮಹಾ ಪುಣ್ಯಕರವಾದ ಆದಿತ್ಯೇಶವೆಂಬ ತೀರ್ಥದಲ್ಲಿ ಸಕಲ ಪಾಪಗಳೂ ಪರಿಹಾರ ವಾಗುವುವು.

೬. ನಂದಿಕೇಶ್ವರದಲ್ಲಿ ಸಂಚಾರಮಾಡಿದರೆ ಜನ್ಮವು ಸಾರ್ಥಕವೆನಿಸುವುದು. ಬಳಿಕ ವರುಣೇಶ ಮತ್ತು ಸ್ವತಂತ್ರೇಶ್ವರಗಳೆಂಬ ತೀರ್ಥಗಳ ದರ್ಶನವನ್ನು ಮಾಡಬೇಕು. ಅಲ್ಲಿರುವ ಪಂಚಾಯತನ ಮೂರ್ತಿಗಳ (ಆದಿತ್ಯ, ಅಂಬಿಕೆ, ವಿಷ್ಣು, ಗಣನಾಥ ಮತ್ತು ಮಹೇಶ್ವರರೆಂಬ ಪಂಚದೇವತೆಗಳಿಗೆ ಪಂಚಾಯತನವೆಂಬ ಪ್ರಸಿದ್ಧಿಯುಂಟು) ದರ್ಶನದಿಂದ ಸರ್ವತೀರ್ಥಗಳಲ್ಲಿಯೂ ಸೇವೆಯನ್ನು ಸಲ್ಲಿಸಿದಷ್ಟು ಫಲ ಬರುತ್ತದೆ.

೭. ಓ ರಾಜೇಂದ್ರಾ, ಬಳಿಕ ದೇವಾಸುರರಿಗೆ ಘೋರವಾದ ಯುದ್ಧವು ನಡೆದ ಪ್ರಖ್ಯಾತವಾದ ಕೋಟಿತೀರ್ಥಕ್ಕೆ ಹೋಗಬೇಕು. ಅಲ್ಲಿ ಅಸುರರು ಮೋಹಕ್ಕೊಳಗಾದರು.

೮. ಬಲದಿಂದ ಕೊಬ್ಬಿಹೋಗಿದ್ದ ದಾನವರು ಸಂಹೃತರಾದ ಸ್ಥಳವು ಅದೇ. ದೇವತೆಗಳೆಲ್ಲರೂ ಆ ದೈತ್ಯರ ತಲೆಗಳನ್ನು ಎತ್ತಿಕೊಂಡು ಬಂದರು.

ತ್ರೈಸ್ತು ಸಂಸ್ಥಾಪಿತೋ ದೇವಃ ಶೂಲಪಾಣಿರ್ವೃಷಧ್ವಜಃ।
ಕೋಟಿರ್ವಿನಿಹತಾ ತತ್ರ ತೇನ ಕೋಟೇಶ್ವರಃ ಸ್ಮೃತಃ ॥ ೯ ॥

ದರ್ಶನಾತ್ತಸ್ಯ ತೀರ್ಥಸ್ಯ ಸದೇಹಃ ಸ್ವರ್ಗಮಾರುಹೇತ್।
ಯದಾ ತ್ವಿಂದ್ರೇಣ ಕ್ಷುದ್ರತ್ವಾದ್ವಜ್ರಂ ಕೀಲೇನ ಯಂತ್ರಿತಂ ॥೧೦॥

ತದಾಪ್ರಭೃತಿ ಲೋಕಾನಾಂ ಸ್ವರ್ಗಮಾರ್ಗೋ ನಿವಾರಿತಃ।
ಯಃ ಸ್ತುತಂ ಶ್ರೀಫಲಂ ದದ್ಯಾತ್ಕೃತ್ವಾ ಚಾಂತೇ ಪ್ರದಕ್ಷಿಣಂ ॥೧೧॥

ಪರ್ವತಂ ಸಹದೀಪಂ ತು ಶಿರಸಾ ಚೈವ ಧಾರಯೇತ್।
ಸರ್ವಕಾಮುಸುಸಂಪನ್ನೋ ರಾಜಾ ಭವತಿ ಪಾಂಡವ ॥೧೨॥

ಮೃತೋ ರುದ್ರತ್ವಮಾಪ್ನೋತಿ ತತೋಽಸೌ ಜಾಯತೇ ಪುನಃ।
ಸ್ವರ್ಗಾದೇತ್ಯ ಭವೇದ್ರಾಜಾ ರಾಜ್ಯಂ ಕೃತ್ವಾ ದಿವಂ ವ್ರಜೇತ್ ॥೧೩॥

---

೯. ಶೂಲಪಾಣಿಯಾದ ಪರಮೇಶ್ವರನ ಮೂರ್ತಿಯನ್ನು ದೇವತೆಗಳು ಅಲ್ಲಿ ಸ್ಥಾಪನೆಮಾಡಿದರು. ಒಂದುಕೋಟಿ ಸಂಖ್ಯೆಯ ದಾನವರು ಹತರಾದ ಕಾರಣ ಆ ಕ್ಷೇತ್ರಕ್ಕೆ ಕೋಟೇಶ್ವರವೆಂದು ಹೆಸರು ಬಂದಿತು. ಆ ಕ್ಷೇತ್ರದ ದರ್ಶನಮಾತ್ರದಿಂದ ದೇಹದೊಡನೆಯೇ ಸ್ವರ್ಗಕ್ಕೇರಿ ಹೋಗಬಹುದು.

೧೦. ಕ್ಷುದ್ರಸ್ವಭಾವದವನಾದ ಇಂದ್ರನು ವಜ್ರಾಯುಧವನ್ನು ದಾರಿಗೆ ಅಡ್ಡಲಾಗಿ ಇಟ್ಟುಬಿಟ್ಟನು. ಅದು ಮೊದಲುಗೊಂಡು ಜನರಿಗೆ ಸ್ವರ್ಗಮಾರ್ಗದಲ್ಲಿ ಅಡ್ಡಿಯಾಯಿತು.

೧೧-೧೨. ಕೋಟೇಶ್ವರ ಕ್ಷೇತ್ರದಲ್ಲಿ ಶ್ರೇಷ್ಠವಾದ ಬಿಲ್ವಫಲವನ್ನು ದಾನ ಮಾಡಿ ಕೊನೆಯಲ್ಲಿ ಪ್ರದಕ್ಷಿಣ ಮಾಡಬೇಕು. ಬಳಿಕ ದೀಪಸಹಿತವಾಗಿ ಪರ್ವತ ವನ್ನು ಎಂದರೆ ಚಿನ್ನ, ಎಳ್ಳು, ಬೆಳ್ಳಿ ಮುಂತಾದುವುಗಳಿಂದ ಆದ ಕೃತಕಪರ್ವತ ವನ್ನು ಶಿರಸ್ಸಿನಲ್ಲಿ ಧಾರಣಮಾಡಬೇಕು. ಎಲೈ ಧರ್ಮರಾಜಾ, ಅವನು ಸಕಲ ಮನೋರಥಗಳನ್ನೂ ಪೂರ್ಣಮಾಡಿಕೊಂಡು ರಾಜನಾಗುವನು.

೧೩. ಮೃತನಾದ ಬಳಿಕ ಅವನು ರುದ್ರಸಾಯುಜ್ಯವನ್ನೈದುವನು. ಸ್ವರ್ಗದಿಂದ ಮರಳಿ ಬಂದು ರಾಜನಾಗಿ ಹುಟ್ಟಿ ರಾಜ್ಯವನ್ನಾಳಿ ಸ್ವರ್ಗಕ್ಕೆ ಹೋಗುವನು.

ಬಹುನೇತ್ರಂ ತತಃ ಪಶ್ಯೇತ್ತ್ರಯೋದಶ್ಯಾಂ ತು ಮಾನವಃ ।
ಸ್ನಾತಮಾತ್ರೋ ನರಸ್ತತ್ರ ಸರ್ವಯಜ್ಞಫಲಂ ಲಭೇತ್ ॥೧೪॥

ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಪರಮಶೋಭನಂ ।
ನರಾಣಾಂ ಪಾಪನಾಶಾಯ ಹ್ಯಗಸ್ತ್ಯೇಶ್ವರಮುತ್ತಮಂ ॥೧೫॥

ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕೇ ಮಹೀಯತೇ ।
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ॥೧೬॥

ಘೃತೇನ ಸ್ನಾಪಯೇದ್ದೇವಂ ಸಮಾಧಿಸ್ಥೋ ಜಿತೇಂದ್ರಿಯಃ ।
ಏಕವಿಂಶಕುಲೋಪೇತೋ ನ ಚ್ಯವೇದೈಶ್ವರಾತ್ಪದಾತ್ ॥೧೭॥

ಧೇನುಮುಪಾನಹೌ ಚ್ಛತ್ರಂ ದದ್ಯಾಚ್ಚ ಘೃತಕುಂಭಕಂ ।
ಭೋಜನಂ ಚೈವ ವಿಪ್ರಾಣಾಂ ಸರ್ವಂ ಕೋಟಿಗುಣಂ ಭವೇತ್ ॥೧೮॥

---

೧೪. ಅನಂತರ ಬಹುನೇತ್ರಕ್ಷೇತ್ರದ ದರ್ಶನಮಾಡಬೇಕು. ತ್ರಯೋದಶಿಯ ದಿನ ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಮನುಷ್ಯನಿಗೆ ಸಕಲಯಜ್ಞಗಳ ಫಲವು ಬರುತ್ತದೆ.

೧೫. ಎಲೈ ಧರ್ಮರಾಜಾ, ಅಲ್ಲಿಂದ ಬಹು ಮಂಗಲಕರವಾದ ಅಗಸ್ತ್ಯೇಶ್ವರವೆಂಬ ಉತ್ತಮವಾದ ತೀರ್ಥಕ್ಕೆ ಹೋಗಬೇಕು. ಅಲ್ಲಿ ಮನುಜರ ಪಾಪಗಳೆಲ್ಲವೂ ನಾಶವಾಗುವುವು.

೧೬-೧೭. ಧರ್ಮರಾಜಾ, ಅಲ್ಲಿ ಸ್ನಾನಮಾಡಿದವನು ಬ್ರಹ್ಮಲೋಕದಲ್ಲಿ ಮನ್ನಣೆಯನ್ನು ಪಡೆಯುವನು. ಕಾರ್ತಿಕಮಾಸದ ಕೃಷ್ಣಪಕ್ಷ ಚತುರ್ದಶಿಯ ದಿವಸ ಏಕಾಗ್ರಚಿತ್ತದಿಂದ ಜಿತೇಂದ್ರಿಯನಾಗಿ ಮಹಾದೇವನಿಗೆ ತುಪ್ಪದಿಂದ ಅಭಿಷೇಕ ಮಾಡಬೇಕು. ಇಪ್ಪತ್ತೊಂದು ತಲೆಯವರೆಗೆ ತನ್ನ ವಂಶಜರೊಡಗೂ ಆತನು ಪರಮೇಶ್ವರನ ಸಾನ್ನಿಧ್ಯದಲ್ಲಿ ಕದಲದೆ ವಾಸಮಾಡುವನು.

೧೮. ಹಸು, ಪಾದರಕ್ಷೆ, ಕೊಡೆ, ತುಪ್ಪದಿಂದ ತುಂಬಿದ ಪಾತ್ರೆ ಇವುಗಳನ್ನು ದಾನಮಾಡಿ ಬ್ರಾಹ್ಮಣ ಭೋಜನವನ್ನು ಮಾಡಿಸಿದರೆ ಕೋಟಿಪಾಲು ಅಧಿಕವಾ ಪುಣ್ಯ ಬರುವುದು.

ತತೋ ಗಚ್ಛೇಚ್ಚ ರಾಜೇಂದ್ರ ಬಲಾಕೇಶ್ವರಮುತ್ತಮಂ।
ತತ್ರ ಸ್ನಾತ್ವಾ ನರೋ ರಾಜನ್ ಸಿಂಹಾಸನಪತಿರ್ಭವೇತ್ ॥೧೯॥

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಶಕ್ರಸ್ಯ ವಿಶ್ರುತಂ।
ಉಪೋಷ್ಯ ರಜನೀಮೇಕಾಂ ಸ್ನಾನಂ ತತ್ರ ಸಮಾಚರೇತ್ ॥೨೦॥

ಸ್ನಾನಂ ಕೃತ್ವಾ ಯಥಾನ್ಯಾಯಮರ್ಚಯೇಚ್ಚ ಜನಾರ್ದನಂ।
ಗೋಸಹಸ್ರಫಲಂ ತಸ್ಯ ವಿಷ್ಣುಲೋಕಂ ಸ ಗಚ್ಛತಿ ॥೨೧॥

ಋಷಿತೀರ್ಥಂ ತತೋ ಗಚ್ಛೇತ್ಸರ್ವಪಾಪಹರಂ ನೃಣಾಂ।
ಸ್ನಾತಮಾತ್ರೋ ನರಸ್ತತ್ರ ಶಿವಲೋಕಂ ಚ ಗಚ್ಛತಿ ॥೨೨॥

ನಾರದಸ್ಯ ತು ತತ್ರೈವ ತೀರ್ಥಂ ಪರಮಶೋಭನಂ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥೨೩॥

---

೧೯. ಎಲೈ ಧರ್ಮರಾಜಾ, ಆ ತರುವಾಯ ಬಲಾಕೇಶ್ವರವೆಂಬ ಉತ್ತಮವಾದ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಸಿಂಹಾಸನಾಧೀಶನಾಗುವನು.

೨೦. ನರ್ಮದಾನದಿಯ ದಕ್ಷಿಣತೀರದಲ್ಲಿ ಪ್ರಖ್ಯಾತವಾದ ಶಕ್ರತೀರ್ಥವಿದೆ. ಅಲ್ಲಿ ಒಂದು ರಾತ್ರಿ ಉಪವಾಸವಿದ್ದು ಸ್ನಾನವನ್ನು ಮಾಡಬೇಕು.

೨೧. ಆ ತೀರ್ಥದಲ್ಲಿ ಶಾಸ್ತ್ರೋಕ್ತವಾಗಿ ಸ್ನಾನವನ್ನು ಮಾಡಿ ವಿಷ್ಣುವನ್ನು ಪೂಜಿಸಬೇಕು. ಇದರಿಂದ ಸಹಸ್ರ ಗೋದಾನಗಳ ಫಲ ಬರುತ್ತದೆ. ಮತ್ತು ವಿಷ್ಣುಲೋಕವು ಲಭಿಸುವುದು.

೨೨. ಮನುಷ್ಯರ ಪಾಪಗಳೆಲ್ಲವನ್ನೂ ಪರಿಹಾರಮಾಡುವ ಋಷಿತೀರ್ಥಕ್ಕೆ ತರುವಾಯ ಹೋಗಬೇಕು. ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಯಾತ್ರಿಕನು ಶಿವಲೋಕವನ್ನು ಮುಂದೆ ಸೇರುವಂತಹ ಪುಣ್ಯವನ್ನು ಪಡೆಯುತ್ತಾನೆ.

೨೩. ಅಲ್ಲೇ ಅತ್ಯಂತಮಂಗಳಕರವಾದ ನಾರದ ತೀರ್ಥವುಂಟು. ಅದರಲ್ಲಿ ಸ್ನಾನಮಾಡಿದರೆ ಸಾಕು; ಮನುಷ್ಯನಿಗೆ ಒಂದುಸಾವಿರ ಗೋದಾನದ ಫಲವು ಲಭಿಸುವುದು.

ದೇವತೀರ್ಥಂ ತತೋ ಗಚ್ಛೇದ್ಬ್ರಹ್ಮಣಾ ನಿರ್ಮಿತಂ ಪುರಾ ।
ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕೇ ಮಹೀಯತೇ ॥೨೪॥

ಅಮರಕಂಟಕಂ ಗಚ್ಛೇದಮರೈಃ ಸ್ಥಾಪಿತಂ ಪುರಾ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥೨೫॥

ತತೋ ಗಚ್ಛೇಚ್ಚ ರಾಜೇಂದ್ರ ರಾವಣೇಶ್ವರಮುತ್ತಮಂ ।
ತತ್ಪಂಚಾಯತನಂ ದೃಷ್ಟ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥೨೬॥

ಋಣತೀರ್ಥಂ ತತೋ ಗಚ್ಛೇದೃಣೇಭ್ಯೋ ಮುಚ್ಯತೇ ಧ್ರುವಂ ।
ವಟೇಶ್ವರಂ ತತೋ ದೃಷ್ಟ್ವಾ ಪರ್ಯಾಪ್ತಂ ಜನ್ಮನಃ ಫಲಂ ॥೨೭॥

ಭೀಮೇಶ್ವರಂ ತತೋ ಗಚ್ಛೇತ್ಸರ್ವವ್ಯಾಧಿವಿನಾಶನಂ ।
ಸ್ನಾತಮಾತ್ರೋ ನರೋ ರಾಜನ್ ಸರ್ವದುಃಖೈಃ ಪ್ರಮುಚ್ಯತೇ ॥೨೮॥

---

೨೪. ಬಳಿಕ ದೇವತೀರ್ಥಕ್ಕೆ ತೆರಳಬೇಕು. ಅದು ಪೂರ್ವದಲ್ಲಿ ಬ್ರಹ್ಮನಿಂದ ನಿರ್ಮಿತವಾಯಿತು. ಎಲೈ ರಾಜಾ, ಅಲ್ಲಿ ಸ್ನಾನಮಾಡಿದವನು ಬ್ರಹ್ಮಲೋಕದಲ್ಲಿ ಗೌರವವನ್ನು ಪಡೆಯುವನು.

೨೫. ಹಿಂದೆ ದೇವತೆಗಳು ಸ್ಥಾಪಿಸಿದ ಅಮರಕಂಟಕ ತೀರ್ಥವನ್ನೈದಿ ಸ್ನಾನಮಾಡಿದ ಮಾತ್ರದಿಂದಲೇ ರುದ್ರಲೋಕವನ್ನು ಸೇರಿ ಪೂಜ್ಯತೆಯನ್ನು ಪಡೆಯುವನು.

೨೬. ತರುವಾಯ ಶ್ರೇಷ್ಠವಾದ ರಾವಣೇಶ್ವರಕ್ಷೇತ್ರಕ್ಕೆ ಹೋಗಿ ಅಲ್ಲಿ ಪಂಚಾಯತನ ದರ್ಶನ ಮಾಡಿದರೆ ಬ್ರಹ್ಮಹತ್ಯಾಪಾತಕವು ಕೂಡ ತೊಲಗುವುದು.

೨೭. ಅನಂತರ ಋಣತೀರ್ಥಕ್ಕೆ ಹೋದರೆ ಎಲ್ಲ ಬಗೆಯ ಋಣಗಳಿಂದಲೂ ಬಿಡುಗಡೆ ಹೊಂದುವನು. ವಟೇಶ್ವರ ಕ್ಷೇತ್ರದ ದರ್ಶನದಿಂದ ಜನ್ಮವು ಸಫಲವೆನಿಸುವುದು.

೨೮. ತರುವಾಯ ಸಕಲ ವ್ಯಾಧಿಗಳನ್ನೂ ಪರಿಹರಿಸುವ ಭೀಮೇಶ್ವರಕ್ಕೆ ಹೋಗಿ ಸ್ನಾನಮಾಡಿದ ಮಾತ್ರದಿಂದ ಸಕಲ ವಿಧವಾದ ದುಃಖಗಳೂ ದೂರವಾಗುವುವು.

ತತೋ ಗಚ್ಛೇತ್ತು ರಾಜೇಂದ್ರ ತುರಾಸಂಗಮನುತ್ತಮಂ ।
ತತ್ರ ಸ್ನಾತ್ವಾ ಮಹಾದೇವಮರ್ಚಯನ್ಸಿದ್ಧಿಮಾಪ್ನುಯಾತ್ ॥೨೯॥

ಸೋಮತೀರ್ಥಂ ತತೋ ಗಚ್ಛೇತ್ಪಶ್ಯೇಚ್ಚಂದ್ರಮನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಭಕ್ತ್ಯಾ ಪರಮಯಾ ಯುತಃ ॥೩೦॥

ತತ್ಕ್ಷಣಾದ್ದಿವ್ಯದೇಹಸ್ಥಃ ಶಿವವನ್ಮೋದತೇ ಚಿರಂ ।
ಷಷ್ಟಿರ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥೩೧॥

ತತೋ ಗಚ್ಛೇತ್ತು ರಾಜೇಂದ್ರ ಪಿಂಗಲೇಶ್ವರಮುತ್ತಮಂ ।
ಅಹೋರಾತ್ರೋಪವಾಸೇನ ತ್ರಿರಾತ್ರಫಲಮಾಪ್ನುಯಾತ್ ॥೩೨॥

ತಸ್ಮಿಂಸ್ತೀರ್ಥೇ ತು ರಾಜೇಂದ್ರ ಕಪಿಲಾಂ ಯಃ ಪ್ರಯಚ್ಛತಿ ।
ಯಾವಂತಿ ತಸ್ಯಾ ರೋಮಾಣಿ ತತ್ಪ್ರಸೂತಿಕುಲೇಷು ಚ ॥೩೩॥

---

೨೯. ಓ ರಾಜೇಂದ್ರಾ, ಮುಂದೆ ತುರಾಸಂಗವೆಂಬ ಅತಿಶ್ರೇಷ್ಠವಾದ ತೀರ್ಥದಲ್ಲಿ ಸ್ನಾನಮಾಡಿ ಮಹಾದೇವನನ್ನು ಅರ್ಚಿಸಿದರೆ ಸಕಲ ಸಿದ್ಧಿಗಳೂ ಈಡೇರುವುವು.

೩೦-೩೧. ಅನಂತರ ಸೋಮತೀರ್ಥಕ್ಕೆ ಹೋಗಿ ಭಗವಂತನಾದ ಚಂದ್ರನ ದರ್ಶನವನ್ನು ಮಾಡಬೇಕು. ನಿಶ್ಚಲವಾದ ಭಕ್ತಿಯಿಂದ ಅಲ್ಲಿ ಸ್ನಾನಮಾಡಿದವನು ಆ ಕ್ಷಣದಲ್ಲೇ ದಿವ್ಯದೇಹವನ್ನು ಧರಿಸಿ ಈಶ್ವರನಂತೆ ಚಿರಕಾಲ ಆನಂದಪೂರ್ಣನಾಗಿರುವನು. ಅರವತ್ತುಸಾವಿರ ವರ್ಷಗಳ ಕಾಲ ಆತನು ರುದ್ರಲೋಕದಲ್ಲಿ ಪೂಜ್ಯನಾಗಿ ವಾಸಿಸುವನು.

೩೨. ಓ ಧರ್ಮರಾಜಾ, ಬಳಿಕ ಪರಿಶುದ್ಧವಾದ ಪಿಂಗಲೇಶ್ವರ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಒಂದು ಹಗಲೂ ರಾತ್ರಿ ಉಪವಾಸಮಾಡಿದರೆ ಮೂರು ದಿನಗಳ ಉಪವಾಸದ ಫಲವನ್ನು ಪಡೆಯಬಹುದು.

೩೩. ಎಲೈ ರಾಜೇಂದ್ರಾ, ಆ ತೀರ್ಥದಲ್ಲಿ ಗೋದಾನವನ್ನು ಮಾಡಿದರೆ ಅದರ ಮೈಯಲ್ಲೂ ಅದರ ವಂಶದಲ್ಲಿ ಹುಟ್ಟುವ ಹಸುಕರುಗಳ ಮೈಯಲ್ಲೂ ಒಟ್ಟು ಎಷ್ಟುಕೂದಲುಗಳುಂಟೋ ಅಷ್ಟು ಸಾವಿರವರ್ಷಗಳಕಾಲ ರುದ್ರಲೋಕದಲ್ಲಿ ಮಾನ್ಯನಾಗುವನು.

ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ।
ಯಸ್ತು ಪ್ರಾಣಪರಿತ್ಯಾಗಂ ಕುರ್ಯಾತ್ತತ್ರ ನರಾಧಿಪ ॥೩೪॥

ಅಕ್ಷಯಂ ಮೋದತೇ ಕಾಲಂ ಯಾವಚ್ಚಂದ್ರದಿವಾಕರೌ ।
ನರ್ಮದಾತಟಮಾಶ್ರಿತ್ಯ ತಿಷ್ಠೇಯುರ್ಯೇ ನರೋತ್ತಮಾಃ ॥೩೫॥

ತೇ ಮೃತಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ ।
ಸುರೇಶ್ವರಂ ತತೋ ಗಚ್ಛೇನ್ನಾಮ್ನಾ ಕರ್ಕೋಟಕೇಶ್ವರಂ ॥೩೬॥

ಗಂಗಾವತರತೇ ತತ್ರ ದಿನೇ ಪುಣ್ಯೇ ನ ಸಂಶಯಃ ।
ನಂದಿತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ॥೩೭॥

ತುಷ್ಯತೇ ತಸ್ಯ ನಂದೀಶಃ ಸೋಮಲೋಕೇ ಮಹೀಯತೇ ।
ತತೋ ದೀಪೇಶ್ವರಂ ಗಚ್ಛೇದ್ವ್ಯಾಸತೀರ್ಥಂ ತಪೋವನಂ ॥೩೮॥

---

೩೪. ಆ ಕ್ಷೇತ್ರದಲ್ಲಿ ಪ್ರಾಣಬಿಡುವಾತನು ಅನಂತಕಾಲ ಎಂದರೆ ಚಂದ್ರ ಸೂರ್ಯರಿರುವವರೆಗೂ ಸುಖದಿಂದಿರುವನು.

೩೫ ನರ್ಮದಾತೀರದಲ್ಲಿ ವಾಸಮಾಡುವ ಜನರು ಮನುಷ್ಯರಲ್ಲಿ ಉತ್ತಮರು. ಅವರು ಮೃತರಾಗಿ ಪುಣ್ಯಶಾಲಿಗಳಾದ ಸತ್ಪುರುಷರಂತೆ ಸ್ವರ್ಗ ವನ್ನೈದುವರು.

೩೬. ತರುವಾಯ ಸುರೇಶ್ವರವೆಂಬ ತೀರ್ಥಕ್ಕೆ ಹೋಗಬೇಕು. ಅದಕ್ಕೆ ಕರ್ಕೋಟಕೇಶ್ವರವೆಂದೂ ಹೆಸರುಂಟು. ಪುಣ್ಯದಿನದಲ್ಲಿ ಗಂಗಾನದಿಯು ಆ ತೀರ್ಥಕ್ಕೆ ಬಂದು ಸೇರುವುದು.

೩೭. ಬಳಿಕ ನಂದಿತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ಅದರಿಂದ ನಂದೀಶ್ವರನು ತೃಪ್ತನಾಗುವನು. ಆ ಯಾತ್ರಿಕನು ಚಂದ್ರಲೋಕವನ್ನು ಸೇರಿ ಗೌರವವನ್ನು ಪಡೆಯುವನು.

೩೮-೩೯. ಅನಂತರ ದೀಪೇಶ್ವರಕ್ಷೇತ್ರಕ್ಕೆ ಹೋಗಬೇಕು. ಅದಕ್ಕೆ ವ್ಯಾಸ ತೀರ್ಥವೆಂದೂ ಹೆಸರು. ಅಲ್ಲಿ ಪವಿತ್ರವಾದ ತಪೋವನವಿದೆ. ವ್ಯಾಸಮಹರ್ಷಿಗಳು

ನಿವರ್ತಿತಾ ಪುರಾ ತತ್ರ ವ್ಯಾಸಭೀತಾ ಮಹಾನದೀ ।
ಹೂಂಕಾರಿತಾ ತು ವ್ಯಾಸೇನ ದಕ್ಷಿಣೇನ ತತೋ ಗತಾ ॥೪೯॥

ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಅಕ್ಷಯಂ ಮೋದತೇ ಕಾಲಂ ಯಾವಚ್ಚಂದ್ರದಿವಾಕರೌ ॥೫೦॥

ವ್ಯಾಸಸ್ತಸ್ಯ ಭವೇತ್ಪ್ರೀತಃ ಪ್ರಾಪ್ನುಯಾದೀಪ್ಸಿತಂ ಫಲಂ ।
ಸೂತ್ರೇಣ ವೇಷ್ಟಯಿತ್ವಾ ತು ದೀಪೋ ದೇಯಃ ಸವೇದಿಕಃ ॥೫೧॥

ಕ್ರೀಡಂತಿ ಹ್ಯಕ್ಷಯಂ ಕಾಲಂ ಯಥಾ ರುದ್ರಸ್ತಥೈವ ಚ ।
ತತೋ ಗಚ್ಛೇಚ್ಚ ರಾಜೇಂದ್ರ ಐರಂಡೀತೀರ್ಥಮುತ್ತಮಂ ॥೫೨॥

ಸಂಗಮೇ ತು ನರಃ ಸ್ನಾತ್ವಾ ಮುಚ್ಯತೇ ಸರ್ವಪಾತಕೈಃ ।
ಐರಂಡೀ ತ್ರಿಷು ಲೋಕೇಷು ವಿಖ್ಯಾತಾ ಪಾಪನಾಶಿನೀ ॥೫೩॥

---

ಹುಂಕಾರಮಾಡಲು ಆ ಮಹಾನದಿಯು ಹೆದರಿಕೊಂಡು ಹಿಂದಿರುಗಿ ದಕ್ಷಿಣಕ್ಕೆ ಹರಿದುಹೋದಳು.

೫೦. ಎಲೈ ಧರ್ಮರಾಜಾ, ಆ ತೀರ್ಥದಲ್ಲಿ ಪ್ರದಕ್ಷಿಣವನ್ನು ಮಾಡುವಾತನು ಚಂದ್ರಸೂರ್ಯರಿರುವಷ್ಟು ಕಾಲ ಆನಂದದಿಂದಿರುವನು.

೫೧. ಆತನ ವಿಷಯದಲ್ಲಿ ವ್ಯಾಸಮಹರ್ಷಿಯು ಪ್ರೀತನಾಗುವನು. ಮತ್ತು ಆ ಭಕ್ತನು ಕೋರಿದ ಫಲವನ್ನು ನೀಡುವನು. ದಾರದಿಂದ ಸುತ್ತಿದ ದೀಪವನ್ನೂ ಅದನ್ನು ಇರಿಸುವುದಕ್ಕೆ ವೇದಿಕೆಯನ್ನೂ ಈ ಕ್ಷೇತ್ರದಲ್ಲಿ ದಾನಮಾಡಬೇಕು.

೫೨. ಹಾಗೆ ದಾನಮಾಡಿದವರು ಅನಂತಕಾಲ ಪರಮೇಶ್ವರನಂತೆ ಆನಂದ ದಿಂದಿರುವರು. ಓ ಧರ್ಮರಾಜಾ, ಬಳಿಕ ಪಾವನವೆನಿಸಿದ ಐರಂಡೀತೀರ್ಥಕ್ಕೆ ತೆರಳಬೇಕು.

೫೩. ಐರಂಡೀನದಿಯ ಸಂಗಮಕ್ಷೇತ್ರದಲ್ಲಿ ಸ್ನಾನಮಾಡಿ ಮನುಷ್ಯನು ಸಕಲ ಪಾಪಗಳಿಂದಲೂ ದೂರವಾಗುವನು. ಈ ನದಿ ಮೂರುಲೋಕದಲ್ಲಿಯೂ ಪ್ರಸಿದ್ಧವಾದುದು ; ಪಾಪನಾಶಕವಾದುದು.

ಅಥವಾಽಶ್ವಯುಜೇ ಮಾಸಿ ಶುಕ್ಲಪಕ್ಷೇ ತು ಚಾಷ್ಟಮೀ ।
ಶುಚಿರ್ಭೂತ್ವಾ ನರಃ ಸ್ನಾತ್ವಾ ಸೋಪವಾಸಪರಾಯಣಃ ॥೪೪॥

ಬ್ರಾಹ್ಮಣಂ ಭೋಜಯೇದೇಕಂ ಕೋಟಿರ್ಭವತಿ ಭೋಜಿತಾ ।
ಮೃತ್ತಿಕಾಂ ಶಿರಸಿ ಸ್ಥಾಪ್ಯ ಹ್ಯವಗಾಹ್ಯ ಚ ವೈ ಜಲಂ ॥೪೫॥

ನರ್ಮದೋದಕಸಮ್ಮಿಶ್ರಂ ಮುಚ್ಯತೇ ಸರ್ವಕಿಲ್ಬಿಷೈಃ ।
ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥೪೬॥

ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ।
ತತಃ ಸುವರ್ಣಸಲಿಲೇ ಸ್ನಾತ್ವಾ ದತ್ವಾ ತು ಕಾಂಚನಂ ॥೪೭॥

ಕಾಂಚನೇನ ವಿಮಾನೇನ ರುದ್ರಲೋಕೇ ಮಹೀಯತೇ ।
ತತಃ ಸ್ವರ್ಗಾಚ್ಚ್ಯುತಃ ಕಾಲಾದ್ರಾಜಾ ಭವತಿ ವೀರ್ಯವಾನ್ ॥೪೮॥

---

೪೪. ಹಾಗಲ್ಲದಿದ್ದರೆ ಆಶ್ವಯುಜಮಾಸದ ಶುಕ್ಲಪಕ್ಷದ ಅಷ್ಟಮಿಯ ದಿವಸ ಸ್ನಾನಮಾಡಿ ಶುಚಿಯಾಗಿ ಉಪವಾಸವಿದ್ದು ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಕೋಟಿಜನರಿಗೆ ಅನ್ನದಾನ ಮಾಡಿದಷ್ಟು ಫಲಬರುತ್ತದೆ.

೪೫-೪೬. ಆ ತೀರ್ಥದ ಮಣ್ಣನ್ನು ತಲೆಗೆ ಹಚ್ಚಿಕೊಂಡು ಎರಡೂ ಮತ್ತು ನರ್ಮದಾ ನದಿಗಳ ಸಂಗಮಜಲದಲ್ಲಿ ಸ್ನಾನಮಾಡಿದರೆ ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುವನು. ಎಲೈ ರಾಜಾ, ಆ ತೀರ್ಥದಲ್ಲಿ ಪ್ರದಕ್ಷಿಣಮಾಡಿದರೆ ಸಪ್ತ ದ್ವೀಪಸಹಿತವಾದ ಭೂಮಂಡಲವನ್ನು ಪ್ರದಕ್ಷಿಣಮಾಡಿದಷ್ಟು ಪುಣ್ಯ ಬರುತ್ತದೆ.

೪೭-೪೮. ತರುವಾಯ ಒಳ್ಳೆಯ ಕಾಂತಿಯಿಂದ ಕೂಡಿದ ಆ ನೀರಿನಲ್ಲಿ ಸ್ನಾನಮಾಡಿ ಸುವರ್ಣದಾನವನ್ನು ಮಾಡಿದರೆ ಚಿನ್ನದ ವಿಮಾನದಲ್ಲಿ ಕುಳಿತು ರುದ್ರಲೋಕವನ್ನೈದಿ ಮನ್ನಣೆಗೆ ಪಾತ್ರನಾಗುವನು. ಬಳಿಕ ಕಾಲ ಬಂದಾಗ ಸ್ವರ್ಗ ದಿಂದಿಳಿದು ಬಂದು ವೀರ್ಯಶಾಲಿಯಾದ ರಾಜನಾಗಿ ಜನಿಸುವನು.

ತತೋ ಗಚ್ಛೇಚ್ಚ ರಾಜೇಂದ್ರ ಇಕ್ಷುನದ್ಯಾಸ್ತು ಸಂಗಮಂ ।
ತ್ರೈಲೋಕ್ಯವಿಶ್ರುತಂ ದಿವ್ಯಂ ತತ್ರ ಸನ್ನಿಹಿತಃ ಶಿವಃ ॥೪೯॥

ತತ್ರ ಸ್ನಾತ್ವಾ ನರೋ ರಾಜನ್ ಗಾಣಾಪತ್ಯಮವಾಪ್ನುಯಾತ್ ।
ಸ್ಕಂದತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ॥೫೦॥

ತತ್ತೀರ್ಥಂ ತ್ರಿವಿಧಂ ಪಾಪಂ ಸ್ನಾನಮಾತ್ರಾದ್ವ್ಯಪೋಹತಿ ।
ಲಿಂಗಸಾರಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ॥೫೧॥

ಗೋಸಹಸ್ರಫಲಂ ತಸ್ಯ ರುದ್ರಲೋಕೇ ಮಹೀಯತೇ ।
ಭಂಗತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ॥೫೨॥

ತತ್ರ ಗತ್ವಾ ತು ರಾಜೇಂದ್ರ ಸ್ನಾನಂ ತತ್ರ ಸಮಾಚರೇತ್ ।
ಸಪ್ತಜನ್ಮಕೃತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೫೩॥

---

೪೯. ಓ ಯುಧಿಷ್ಠಿರಾ, ತರುವಾಯ ಮೂರು ಲೋಕದಲ್ಲಿಯೂ ಸುಪ್ರಸಿದ್ಧವಾದ ಇಕ್ಷುನದೀಸಂಗಮವೆಂಬ ದಿವ್ಯತೀರ್ಥಕ್ಕೆ ಹೋಗಬೇಕು. ಅಲ್ಲಿ ಮಹಾದೇವನು ನೆಲಸಿರುವನು.

೫೦. ರಾಜಾ, ಅಲ್ಲಿ ಸ್ನಾನಮಾಡಿದ ಮನುಷ್ಯನು ಗಣಗಳ ಅಧಿಪತ್ಯವನು ಪಡೆಯುವನು. ಅಲ್ಲಿಂದ ಮುಂದೆ ಸಕಲ ಪಾಪಪರಿಹಾರಕವಾದ ಸ್ಕಂದತೀರ್ಥವು ಸಿಕ್ಕುವುದು. ಸ್ನಾನಮಾಡಿದ ಮಾತ್ರದಿಂದಲೇ ಅದು ಮನಸ್ಸಿನಿಂದ, ಮಾತಿನಿಂದ ಮತ್ತು ಕೃತ್ಯದಿಂದ ಆದ ಮೂರು ಬಗೆಯ ಪಾಪಗಳನ್ನೂ ಹೋಗಲಾಡಿಸುವುದು.

೫೧. ಅನಂತರ ಲಿಂಗಸಾರಕ್ಕೆ ಹೋಗಿ ಸ್ನಾನಮಾಡಿದರೆ ಸಹಸ್ರ ಗೋದಾನಗಳ ಫಲ ದೊರೆಯುವುದು. ರುದ್ರಲೋಕದಲ್ಲಿ ಪೂಜ್ಯತೆ ಲಭಿಸುವುದು.

೫೨-೫೩. ಮುಂದೆ ಹೋಗಿ ಸಕಲ ಪಾಪಪರಿಹಾರಕವಾದ ಭಂಗತೀರ್ಥದಲ್ಲಿ ಸ್ನಾನಮಾಡಿದರೆ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳು ತೊಲಗುವುವು. ಸಂದೇಹವಿಲ್ಲ.

ವಟೇಶ್ವರಂ ತತೋ ಗಚ್ಛೇತ್ಸರ್ವತೀರ್ಥಮನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥೫೪॥

ಸಂಗಮೇಶಂ ತತೋ ಗಚ್ಛೇತ್ಸರ್ವದೇವನಮಸ್ಕೃತಂ ।
ಸ್ನಾನಮಾತ್ರಾನ್ನರಸ್ತತ್ರ ಚೇಂದ್ರತ್ವಂ ಲಭತೇ ಧ್ರುವಂ ॥೫೫॥

ಕೋಟಿತೀರ್ಥಂ ತತೋ ಗಚ್ಛೇತ್ಸರ್ವಪಾಪಹರಂ ಶುಭಂ ।
ತತ್ರ ಸ್ನಾತ್ವಾ ನರೋ ರಾಜ್ಯಂ ಲಭತೇ ನಾತ್ರ ಸಂಶಯಃ ॥೫೬॥

ತತ್ರ ತೀರ್ಥಂ ಸಮಾಸಾದ್ಯ ದತ್ತ್ವಾ ದಾನಂ ತು ಯೋ ನರಃ ।
ತಸ್ಯ ತೀರ್ಥಪ್ರಭಾವೇಣ ಸರ್ವಂ ಕೋಟಿಗುಣಂ ಭವೇತ್ ॥೫೭॥

ಅಥ ನಾರೀ ಭವೇತ್ಕಾಚಿತ್ತತ್ರ ಸ್ನಾನಂ ಸಮಾಚರೇತ್ ।
ಗೌರೀತುಲ್ಯಾ ಭವೇತ್ಸಾಪಿ ತ್ವಿಂದ್ರಪತ್ನೀ ನ ಸಂಶಯಃ ॥೫೮॥

---

೫೪. ಸಕಲ ತೀರ್ಥರೂಪವಾಗಿ ಅತ್ಯಂತ ಶ್ರೇಷ್ಠವೆನಿಸಿದ ವಟೇಶ್ವರದಲ್ಲಿ ಸ್ನಾನಮಾಡಿದರೆ, ಎಲೈ ಧರ್ಮರಾಜಾ, ಸಹಸ್ರಗೋದಾನಗಳ ಫಲವು ಪ್ರಾಪ್ತವಾಗುತ್ತದೆ.

೫೫. ಅನಂತರ ಸಂಗಮೇಶ್ವರತೀರ್ಥಕ್ಕೆ ಹೋಗಬೇಕು. ಅದು ಸಕಲ ದೇವತೆಗಳಿಂದಲೂ ಪೂಜಿತವಾದುದು. ಅಲ್ಲಿ ಸ್ನಾನಮಾಡಿದರೆ ಸಾಕು; ಇಂದ್ರ ಪದವಿ ನಿಸ್ಸಂದೇಹವಾಗಿ ದೊರೆಯುವುದು.

೫೬. ಕೋಟಿತೀರ್ಥವು ಪಾಪಗಳೆಲ್ಲವನ್ನೂ ಪರಿಹರಿಸುವಂತಹುದು. ಶುಭಕರವಾದುದು. ಅಲ್ಲಿ ಸ್ನಾನಮಾಡಿದರೆ ರಾಜ್ಯಲಾಭವಾಗುವುದು. ಸಂಶಯವಿಲ್ಲ.

೫೭. ಅಲ್ಲಿಗೆ ಹೋಗಿ ದಾನವನ್ನು ಕೊಟ್ಟರೆ ಆ ತೀರ್ಥದ ಪ್ರಭಾವದಿಂದ ಸ್ನಾನದಾನಾದಿ ಸಕಲಸತ್ಕಾರ್ಯಗಳ ಫಲವೂ ಕೋಟಿಮಡಿಯಾಗುವುದು.

೫೮. ಆ ತೀರ್ಥದಲ್ಲಿ ಸ್ನಾನಮಾಡಿದ ಹೆಂಗಸು ಪಾರ್ವತಿಗೆ ಸಮಾನಳಾಗುವಳು. ಮತ್ತು ನಿಸ್ಸಂಶಯವಾಗಿ ಆಕೆ ಇಂದ್ರನ ಪತ್ನಿಯಾಗುವಳು.

ಅಂಗಾರೇಶಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥೫೯॥

ಅಂಗಾರಕಚತುರ್ಥ್ಯಾಂ ತು ಸ್ನಾನಂ ತತ್ರ ಸಮಾಚರೇತ್ ।
ಅಕ್ಷಯಂ ಮೋದತೇ ಕಾಲಂ ಶುಚಿಃ ಪ್ರಯತಮಾನಸಃ ॥೬೦॥

ಅಯೋನಿಸಂಭವೇ ಸ್ನಾತ್ವಾ ನ ಪಶ್ಯೇದ್ಯೋನಿಸಂಕಟಂ ।
ಪಾಂಡವೇಶಂ ತು ತತ್ರೈವ ಸ್ನಾನಂ ತತ್ರ ಸಮಾಚರೇತ್ ॥೬೧॥

ಅಕ್ಷಯಂ ಮೋದತೇ ಕಾಲಮವಧ್ಯಸ್ತ್ರಿದಶೈರಪಿ ।
ವಿಷ್ಣುಲೋಕಂ ತತೋ ಗತ್ವಾ ಕ್ರೀಡತೇ ಭೋಗಸಂಯುತಃ ॥೬೨॥

ತತ್ರ ಭುಕ್ತ್ವಾ ಮಹಾಭೋಗಾನ್ ಮರ್ತ್ಯರಾಜೋಽಭಿಜಾಯತೇ ।
ಕಠೇಶ್ವರಂ ತತೋ ಗಚ್ಛೇತ್ತತ್ರ ಸ್ನಾನಂ ಸಮಾಚರೇತ್ ॥೬೩॥

ಉತ್ತರಾಯಣಸಂಪ್ರಾಪ್ತೌ ಯದಿಚ್ಛೇತ್ತಸ್ಯ ತದ್ಭವೇತ್ ।
ಚಂದ್ರಭಾಗಂ ತತೋ ಗಚ್ಛೇತ್ತತ್ರ ಸ್ನಾನಂ ಸಮಾಚರೇತ್ ॥೬೪॥

---

೫೯. ಆ ತರುವಾಯ ಅಂಗಾರೇಶ ತೀರ್ಥವನ್ನು ಸೇರಿ ಸ್ನಾನಮಾಡಿದ ಮಾತ್ರದಿಂದಲೇ ರುದ್ರಲೋಕದಲ್ಲಿ ಮನ್ನಣೆಯನ್ನು ಪಡೆಯುವನು.

೬೦. ಮಂಗಳವಾರಸಹಿತವಾದ ಚತುರ್ಥಿಯ ದಿನ ಅಲ್ಲಿ ಸ್ನಾನಮಾಡಿದರೆ ಪರಿಶುದ್ಧನೂ ನಿಶ್ಚಲಮನಸ್ಕನೂ ಆಗಿ ಅನಂತಕಾಲ ಸುಖದಿಂದಿರುವನು.

೬೧. ಅಯೋನಿಸಂಭವತೀರ್ಥದಲ್ಲಿ ಸ್ನಾನಮಾಡಿದರೆ ಆವನು ಮತ್ತೆ ಗರ್ಭವಾಸದ ಸಂಕಟವನ್ನು ನೋಡುವುದಿಲ್ಲ. ಅಲ್ಲೇ ಪಾಂಡವೇಶವೆಂಬ ಮತ್ತೊಂದು ತೀರ್ಥವುಂಟು. ಅದರಲ್ಲಿ ಸ್ನಾನಮಾಡಿದ ಮನುಷ್ಯನು ದೇವತೆಗಳಿಗೂ ಅವಧ್ಯನೆನಿಸಿ ಅಪರಿಮಿತಕಾಲ ಸಂತೋಷದಿಂದಿರುವನು.

೬೨. ಬಳಿಕ ಆತನು ವಿಷ್ಣುಲೋಕವನ್ನು ಸೇರಿ ಸಕಲ ಭೋಗಗಳಿಂದ ಕೂಡಿ ಬಹು ಸುಖದಿಂದಿರುವನು. ಆ ಮೇಲೆ ಭೂಮಿಯಲ್ಲಿ ರಾಜನಾಗಿ ಜನಿಸುವನು.

೬೩-೬೪. ರಾಜಾ, ಅಲ್ಲಿಂದ ಮುಂದೆ ಚಂದ್ರಭಾಗಕ್ಕೆ ಹೋಗಿ ಸ್ನಾನ ಮಾಡಿದ ಮಾತ್ರದಿಂದಲೇ ಮನುಷ್ಯನು ಚಂದ್ರಲೋಕದಲ್ಲಿ ಪೂಜ್ಯತೆಯನ್ನು ಪಡೆಯುವನು.

ಸ್ನಾತಮಾತ್ರೋ ನರೋ ರಾಜನ್ ಸೋಮಲೋಕೇ ಮಹೀಯತೇ ।
ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಶಕ್ರಸ್ಯ ವಿಶ್ರುತಂ ॥೬೫॥

ಪೂಜಿತಂ ದೇವರಾಜೇನ ದೇವೈರಪಿ ನಮಸ್ಕೃತಂ ।
ತತ್ರ ಸ್ನಾತ್ವಾ ನರೋ ರಾಜನ್ ದಾನಂ ದತ್ವಾ ತು ಕಾಂಚನಂ ॥೬೬॥

ಅಥವಾ ನೀಲವರ್ಣಾಭಂ ವೃಷಭಂ ಯಃ ಸಮುತ್ಸೃಜೇತ್ ।
ವೃಷಭಸ್ಯ ತು ರೋಮಾಣಿ ತತ್ಪ್ರಸೂತಿಕುಲೇಷು ಚ ॥೬೭॥

ತಾವದ್ವರ್ಷಸಹಸ್ರಾಣಿ ನರೋ ಹರಪುರೇ ವಸೇತ್ ।
ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ವೀರ್ಯವಾನ್ ॥೬೮॥

ಅಶ್ವಾನಾಂ ಶ್ವೇತವರ್ಣಾನಾಂ ಸಹಸ್ರಾಣಾಂ ನರಾಧಿಪ ।
ಸ್ವಾಮೀ ಭವತಿ ಮರ್ತ್ಯೇಷು ತಸ್ಯ ತೀರ್ಥಪ್ರಭಾವತಃ ॥೬೯॥

ತತೋ ಗಚ್ಛೇತ್ತು ರಾಜೇಂದ್ರ ಬ್ರಹ್ಮಾವರ್ತಮನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜಂಸ್ತರ್ಪಯೇತ್ಪಿತೃದೇವತಾಃ ॥೭೦॥

---

೬೫-೬೭. ಎಲೈ ಧರ್ಮಪುತ್ರಾ, ಬಳಿಕ ಪ್ರಸಿದ್ಧವಾದ ಶಕ್ರತೀರ್ಥಕ್ಕೆ ಪ್ರಯಾಣಮಾಡಬೇಕು. ಅದು ದೇವೇಂದ್ರನಿಂದ ಪೂಜಿತವಾದುದು. ಎಲ್ಲ ದೇವತೆಗಳಿಂದ ಗೌರವವನ್ನು ಪಡೆದಂತಹುದು. ಅಲ್ಲಿ ಸ್ನಾನಮಾಡಿ ಸುವರ್ಣವನ್ನು ದಾನವಾಗಿ ಕೊಡಬೇಕು. ಅಥವಾ ಕರಿಯ ಎತ್ತನ್ನು ಗೂಳಿಬಿಡಬೇಕು. ಹಾಗೆ ಮಾಡಿದರೆ ಅದರ ಮೈಮೇಲೂ ಅದರ ವಂಶದಲ್ಲಿ ಹುಟ್ಟಿದ ದನಕರುಗಳ ಮೈಮೇಲೂ ಎಷ್ಟು ಕೂದಲುಗಳಿವೆಯೋ ಅಷ್ಟುಸಾವಿರ ವರ್ಷಗಳ ಕಾಲ ರುದ್ರಲೋಕದಲ್ಲಿ ವಾಸಿಸುವನು.

೬೮-೬೯. ಆ ಬಳಿಕ ಸ್ವರ್ಗದಿಂದ ಭೂಮಿಗೆ ಬಂದು ಪ್ರತಾಪಶಾಲಿಯಾದ ರಾಜನಾಗುವನು. ಓ ಯುಧಿಷ್ಠಿರಾ, ಆ ತೀರ್ಥದ ಪ್ರಭಾವದಿಂದ ಆತನು ಸಾವಿರಾರು ಬಿಳಿಯ ಕುದುರೆಗಳಿಗೆ ಅಧಿಪತಿಯಾಗಿ ಮನುಷ್ಯರ ನಡುವೆ ಮೆರೆಯುವನು.

೭೦-೭೧. ಅನಂತರ ಬ್ರಹ್ಮಾವರ್ತಕ್ಕೆ ಹೋಗಬೇಕು. ಅದಕ್ಕಿಂತ ಉತ್ತಮವಾದ ತೀರ್ಥ ಮತ್ತೊಂದಿಲ್ಲ. ಎಲೈ ರಾಜನೇ, ಕನ್ಯಾಮಾಸದಲ್ಲಿ ಅಲ್ಲಿ ಸ್ನಾನಮಾಡಿ

**ಉಪೋಷ್ಯ ರಜನೀಮೇಕಾಂ ಪಿಂಡಂ ದತ್ವಾ ಯಥಾವಿಧಿ ।**
**ಕನ್ಯಾಗತೇ ತಥಾದಿತ್ಯೇ ಅಕ್ಷಯಂ ಸ್ಯಾನ್ನರಾಧಿಪ ॥೨೧॥**

**ತತೋ ಗಚ್ಛೇಚ್ಚ ರಾಜೇಂದ್ರ ಕಪಿಲಾತೀರ್ಥಮುತ್ತಮಂ ।**
**ತತ್ರ ಸ್ನಾತ್ವಾ ನರೋ ರಾಜನ್ ಕಪಿಲಾಂ ಯಃ ಪ್ರಯಚ್ಛತಿ ॥೨೨॥**

**ಸಂಪೂರ್ಣಾಂ ಪೃಥಿವೀಂ ದತ್ವಾ ಯತ್ಫಲಂ ತದವಾಪ್ನುಯಾತ್ ।**
**ನರ್ಮದೇಶಂ ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ॥೨೩॥**

**ತತ್ರ ಸ್ನಾತ್ವಾ ನರೋ ರಾಜನ್ನಶ್ವಮೇಧಫಲಂ ಲಭೇತ್ ।**
**ನರ್ಮದಾದಕ್ಷಿಣೇ ಕೂಲೇ ಸಂಗಮೇಶ್ವರಮುತ್ತಮಂ ॥೨೪॥**

**ತತ್ರ ಸ್ನಾತ್ವಾ ನರೋ ರಾಜನ್ ಸರ್ವಯಜ್ಞಫಲಂ ಲಭೇತ್ ।**
**ತತಃ ಸರ್ವಗತೋ ರಾಜಾ ಪೃಥಿವ್ಯಾಮಭಿಜಾಯತೇ ॥೨೫॥**

---

ಪಿತೃದೇವತೆಗಳಿಗೆ ತರ್ಪಣಕೊಡಬೇಕು. ಒಂದು ರಾತ್ರಿ ಉಪವಾಸವಿದ್ದು ಪಿಂಡವನ್ನಿಡಬೇಕು. ಆದರಿಂದ ಅಕ್ಷಯವಾದ ಫಲ ಬರುವುದು.

೨೨. ಅಲ್ಲಿಂದ ಮುಂದೆ ಶ್ರೇಷ್ಠವಾದ ಕಪಿಲಾತೀರ್ಥವನ್ನೈದಿ ಸ್ನಾನಮಾಡಿ ಗೋರೋಚನವರ್ಣದ ಹಸುವನ್ನು ದಾನಮಾಡಿದರೆ ಸಕಲ ದ್ವೀಪಸಹಿತವಾದ ಭೂಮಂಡಲವನ್ನೆಲ್ಲ ಕೊಟ್ಟಷ್ಟು ಫಲ ಬರುತ್ತದೆ.

೨೩. ನರ್ಮದೇಶದಂತಹ ಉತ್ತಮವಾದ ತೀರ್ಥವು ಹಿಂದೆ ಇರಲಿಲ್ಲ; ಮುಂದೆ ಇರುವುದಿಲ್ಲ. ಎಲೈ ಭೂಪಾಲಾ, ಅಲ್ಲಿ ಸ್ನಾನಮಾಡಿದವನಿಗೆ ಅಶ್ವಮೇಧದ ಫಲವು ಪ್ರಾಪ್ತವಾಗುವುದು.

೨೪. ನರ್ಮದಾ ನದಿಯ ದಕ್ಷಿಣತೀರದಲ್ಲಿರುವ ಸಂಗಮೇಶ್ವರದಲ್ಲಿ ಸ್ನಾನ ಮಾಡಿದರೆ ಸಕಲಯಜ್ಞಗಳನ್ನೂ ಮಾಡಿದಷ್ಟು ಪುಣ್ಯ ಬರುತ್ತದೆ.

೨೫. ಆದರ ಫಲವಾಗಿ ಸಕಲೇಷ್ಟಾರ್ಥಗಳನ್ನೂ ಪಡೆದು ರಾಜನಾಗಿ ಭೂಮಿಯಲ್ಲಿ ಜನಿಸುವನು ಸರ್ವಲಕ್ಷಣಗಳಿಂದ ಪೂರ್ಣನಾಗಿ ಯಾವುದೊಂದು ರೋಗದ ಸಂಬಂಧವೂ ಇಲ್ಲದೆ ಬಾಳುವನು.

ಸರ್ವಲಕ್ಷಣಸಂಪೂರ್ಣಃ ಸರ್ವವ್ಯಾಧಿವಿವರ್ಜಿತಃ ।
ನಾರ್ಮದೇ ಚೋತ್ತರೇ ಕೂಲೇ ತೀರ್ಥಂ ಪರಮಶೋಭನಂ ॥೭೬॥

ಆದಿತ್ಯಾಯತನಂ ದಿವ್ಯಮೀಶ್ವರೇಣ ತು ಭಾಷಿತಂ ।
ತತ್ರ ಸ್ನಾತ್ವಾ ತು ರಾಜೇಂದ್ರ ದಾನಂ ದತ್ವಾ ತು ಶಕ್ತಿತಃ ।
ತಸ್ಯ ತೀರ್ಥಪ್ರಭಾವೇಣ ದತ್ತಂ ಭವತಿ ಚಾಕ್ಷಯಂ ॥೭೭॥

ದರಿದ್ರಾ ವ್ಯಾಧಿನೋ ಯೇ ತು ಯೇ ತು ದುಷ್ಕೃತಕರ್ಮಿಣಃ ।
ಮುಚ್ಯಂತೇ ಸರ್ವಪಾಪೇಭ್ಯಃ ಸೂರ್ಯಲೋಕಂ ತು ಯಾಂತಿ ತೇ ॥೭೮॥

ಮಾಘಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷಸ್ಯ ಸಪ್ತಮೀ ।
ವಸೇದಾಯತನೇ ತತ್ರ ನಿರಾಹಾರೋ ಜಿತೇಂದ್ರಿಯಃ ॥೭೯॥

ನ ಜರಾವ್ಯಾಧಿತೋ ಮೂಕೋ ನ ಚಾಂಧೋ ಬಧಿರೋಽಥವಾ ।
ಸುಭಗೋ ರೂಪಸಂಪನ್ನಃ ಸ್ತ್ರೀಣಾಂ ಭವತಿ ವಲ್ಲಭಃ ॥೮೦॥

---

೭೬-೭೭. ನರ್ಮದಾ ನದಿಯ ಉತ್ತರದ ತೀರದಲ್ಲಿ ಬಹು ಪುಣ್ಯಮಯವಾದ ತೀರ್ಥವಿದೆ. ಅದಕ್ಕೆ ಆದಿತ್ಯಾಯತನವೆಂದು ಹೆಸರು. ಓ ರಾಜೇಂದ್ರಾ, ಅಲ್ಲಿ ಸ್ನಾನಮಾಡಿ ಶಕ್ತಿಗೆ ತಕ್ಕಂತೆ ದಾನವನ್ನು ಕೊಟ್ಟರೆ ಆ ತೀರ್ಥದ ಪ್ರಭಾವದಿಂದ ಅದು ಅಕ್ಷಯವಾಗುತ್ತದೆಂದು ಈಶ್ವರನೇ ಹೇಳಿರುವನು.

೭೮. ಅಲ್ಲಿಗೆ ತೆರಳಿದ ಬಡವರು, ರೋಗಿಗಳು, ಮತ್ತು ಪಾಪಿಷ್ಠರು ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದಿ ಸೂರ್ಯಲೋಕವನ್ನೈದುವರು.

೭೯. ಮಾಘಮಾಸದ ಶುಕ್ಲಪಕ್ಷದ ಸಪ್ತಮಿಯ ದಿನ ಉಪವಾಸ ಮಾಡಿ ಜಿತೇಂದ್ರಿಯನಾಗಿ ಆದಿತ್ಯಾಯತನ ಕ್ಷೇತ್ರದಲ್ಲಿ ವಾಸಿಸಬೇಕು.

೮೦. ಅವನಿಗೆ ಮುಪ್ಪೂ ರೋಗವೂ ಬಾರವು. ಅವನು ಮೂಗನೂ, ಕುರುಡನೂ, ಕಿವುಡನೂ ಆಗನು. ಅಷ್ಟೇ ಅಲ್ಲ; ಅದೃಷ್ಟಶಾಲಿಯೂ ರೂಪ ಸಂಪನ್ನನೂ ಆಗಿ ಹಲವರು ಸ್ತ್ರೀಯರಿಗೆ ವಲ್ಲಭನಾಗುವನು.

ಏವಂ ತೀರ್ಥಂ ಮಹಾಪುಣ್ಯಂ ಮಾರ್ಕಂಡೇಯೇನ ಭಾಷಿತಂ ।
ಯೇ ನ ಜಾನಂತಿ ರಾಜೇಂದ್ರ ವಂಚಿತಾಸ್ತೇ ನ ಸಂಶಯಃ ॥೮೧॥

ಗರ್ಗೇಶ್ವರಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸ್ವರ್ಗಲೋಕಮವಾಪ್ನುಯಾತ್ ॥೮೨॥

ಮೋದತೇ ಸ್ವರ್ಗಲೋಕಸ್ಥೋ ಯಾವದಿಂದ್ರಾಶ್ಚತುರ್ದಶ ।
ಸಮೀಪತಃ ಸ್ಥಿತಂ ತಸ್ಯ ನಾಗೇಶ್ವರತಪೋವನಂ ॥೮೩॥

ತತ್ರ ಸ್ನಾತ್ವಾ ತು ರಾಜೇಂದ್ರ ನಾಗಲೋಕಮವಾಪ್ನುಯಾತ್ ।
ಬಹ್ವೀಭಿರ್ನಾಗಕನ್ಯಾಭಿಃ ಕ್ರೀಡತೇ ಕಾಲಮಕ್ಷಯಂ ॥೮೪॥

ಕುಬೇರಭವನಂ ಗಚ್ಛೇತ್ಕುಬೇರೋ ಯತ್ರ ಸಂಸ್ಥಿತಃ ।
ಕಾಲೇಶ್ವರಂ ಪರಂ ತೀರ್ಥಂ ಕುಬೇರೋ ಯತ್ರ ತೋಷಿತಃ ॥೮೫॥

---

೮೧. ಓ ರಾಜೇಂದ್ರಾ, ಮಾರ್ಕಂಡೇಯನು ಹೇಳಿದ ಇಂತಹ ಮಹಾ ಪುಣ್ಯಕರವಾದ ತೀರ್ಥದ ಮಹಿಮೆಯನ್ನು ಅರಿಯದವರು ಖಂಡಿತವಾಗಿ ಮೋಸ ಹೋದಂತೆಯೇ ಸರಿ.

೮೨. ಬಳಿಕ ಗರ್ಗೇಶ್ವರತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ಅಷ್ಟುಮಾತ್ರದಿಂದಲೇ ಮನುಷ್ಯನು ಸ್ವರ್ಗಲೋಕವನ್ನೈದುವನು.

೮೩-೮೪. ಹದಿನಾಲ್ಕು ಜನ ಇಂದ್ರರ ಆಧಿಪತ್ಯದ ಕಾಲದವರೆಗೂ ಆತನು ಸ್ವರ್ಗಲೋಕದಲ್ಲಿ ಸುಖಪಡುವನು. ಗರ್ಗೇಶ್ವರತೀರ್ಥದ ಸಮೀಪದಲ್ಲೇ ನಾಗೇಶ್ವರ ವೆಂಬ ತಪೋವನವಿದೆ. ಅಲ್ಲಿನ ಪುಣ್ಯತೀರ್ಥದಲ್ಲಿ ಸ್ನಾನಮಾಡಿದವನು ನಾಗಲೋಕ ವನ್ನು ಸೇರಿ ಹಲವರು ನಾಗಕನ್ಯೆಯರೊಡಗೂಡಿ ಬಹುಕಾಲ ಕ್ರೀಡಿಸುವನು.

೮೫. ಆ ತರುವಾಯ ಕುಬೇರಭವನವೆಂಬ ತೀರ್ಥಕ್ಕೆ ಹೋಗಬೇಕು. ಅದು ಕುಬೇರನ ವಾಸಸ್ಥಳ. ಕಾಲೇಶ್ವರವೆಂಬುದು ಅತಿಶ್ರೇಷ್ಠವಾದ ಪುಣ್ಯಸ್ಥಳ. ಅಲ್ಲಿನ ಸ್ನಾನದಿಂದ ಕುಬೇರನು ತೃಪ್ತನಾಗುವನು. ಅಷ್ಟೇ ಅಲ್ಲ ; ಓ ರಾಜೇಂದ್ರಾ, ಸಕಲ ಸಂಪದಗಳನ್ನೂ ಕರುಣಿಸುವನು.

ತತ್ರ ಸ್ನಾತ್ವಾ ತು ರಾಜೇಂದ್ರ ಸರ್ವಸಂಪದವಾಪ್ನುಯಾತ್ ।
ತತಃ ಪಶ್ಚಿಮತೋ ಗಚ್ಛೇನ್ಮಾರುತಾಲಯಮುತ್ತಮಂ ॥೮೬॥

ತತ್ರ ಸ್ನಾತ್ವಾ ತು ರಾಜೇಂದ್ರ ಶುಚಿರ್ಭೂತ್ವಾ ಸಮಾಹಿತಃ ।
ಕಾಂಚನಂ ತು ತತೋ ದದ್ಯಾದ್ಯಥಾಶಕ್ತಿ ಸುಬುದ್ಧಿಮಾನ್ ॥೮೭॥

ಪುಷ್ಕರೇಣ ವಿಮಾನೇನ ವಾಯುಲೋಕಂ ಸ ಗಚ್ಛತಿ ।
ಯಮತೀರ್ಥಂ ತತೋ ಗಚ್ಛೇನ್ಮಾಘಮಾಸೇ ಯುಧಿಷ್ಠಿರ ॥೮೮॥

ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾನಂ ತತ್ರ ಸಮಾಚರೇತ್ ।
ನಕ್ತಭೋಜ್ಯಂ ತತಃ ಕುರ್ಯಾನ್ನ ಪಶ್ಯೇದ್ಯೋನಿಸಂಕಟಂ ॥೮೯॥

ಅಹಲ್ಯಾತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಹ್ಯಪ್ಸರೋಭಿಃ ಪ್ರಮೋದತೇ ॥೯೦॥

---

೮೬-೮೭. ಆ ಮೇಲೆ ಅದರ ಪಶ್ಚಿಮಕ್ಕಿರುವ ಮಾರುತಾಲಯವೆಂಬ ಶ್ರೇಷ್ಠವಾದ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ಓ ಧರ್ಮಪುತ್ರಾ, ಪರಿಶುದ್ಧನಾಗಿ ಏಕಾಗ್ರಚಿತ್ತದಿಂದ ತನ್ನ ಶಕ್ತಿಗೆ ತಕ್ಕಂತೆ ಅಲ್ಲಿ ಚಿನ್ನವನ್ನು ದಾನವಾಗಿ ಕೊಡುವ ವಿವೇಕಶಾಲಿಯು ಪುಷ್ಕರವಿಮಾನದಲ್ಲಿ ಕುಳಿತು ವಾಯುಲೋಕಕ್ಕೆ ತೆರಳುವನು.

೮೮-೮೯. ಅಲ್ಲಿಂದ ಮುಂದೆ ಯಮತೀರ್ಥಕ್ಕೆ ಹೋಗಬೇಕು. ಮಾಘ ಮಾಸದ ಕೃಷ್ಣಪಕ್ಷ ಚತುರ್ದಶಿಯ ದಿನ ಅಲ್ಲಿ ಸ್ನಾನಮಾಡಿ, ಹಗಲು ಉಪವಾಸ ವಿದ್ದು ರಾತ್ರಿ ಭೋಜನಮಾಡಿದರೆ ಮತ್ತೆ ತಾಯಿಯ ಗರ್ಭದಲ್ಲಿ ವಾಸಮಾಡುವ ಕಷ್ಟವು ತಲೆದೋರದು.

೯೦. ಬಳಿಕ ಅಹಲ್ಯಾತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ಅಷ್ಟರಿಂದಲೇ ಮನುಷ್ಯನು ಸ್ವರ್ಗವನ್ನೇರಿ ಅಪ್ಸರಸ್ತ್ರೀಯರೊಡನೆ ಸುಖಿಸುವನು.

ಅಹಲ್ಯಾ ಚ ತಪಸ್ತಪ್ತ್ವಾ ತತ್ರ ಮುಕ್ತಿಮುಪಾಗತಾ ।
ಚೈತ್ರಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷೇ ಚತುರ್ದಶೀ ॥೯೧॥

ಕಾಮದೇವದಿನೇ ತಸ್ಮಿನ್ನಹಲ್ಯಾಂ ಯಸ್ತು ಪೂಜಯೇತ್ ।
ಯತ್ರ ಯತ್ರ ನರೋತ್ಪನ್ನೋ ನರಸ್ತತ್ರ ಪ್ರಿಯೋ ಭವೇತ್ ॥೯೨॥

ಸ್ತ್ರೀವಲ್ಲಭೋ ಭವೇಚ್ಛ್ರೀಮಾನ್ ಕಾಮದೇವ ಇವಾಪರಃ ।
ಅಯೋಧ್ಯಾಂ ತು ಸಮಾಸಾದ್ಯ ತೀರ್ಥಂ ರಾಮಸ್ಯ ವಿಶ್ರುತಂ ॥೯೩॥

ಸ್ನಾತಮಾತ್ರೋ ನರಸ್ತತ್ರ ಸರ್ವಪಾಪೈಃ ಪ್ರಮುಚ್ಯತೇ ।
ಸೋಮತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ॥೯೪॥

ಸ್ನಾತಮಾತ್ರೋ ನರಸ್ತತ್ರ ಸರ್ವಪಾಪೈಃ ಪ್ರಮುಚ್ಯತೇ ।
ಸೋಮಗ್ರಹೇ ತು ರಾಜೇಂದ್ರ ಪಾಪಕ್ಷಯಕರಂ ನೃಣಾಂ ॥೯೫॥

---

೯೧-೯೨. ಅಹಲ್ಯಾದೇವಿಯು ಅಲ್ಲಿ ತಪಸ್ಸನ್ನು ಮಾಡಿ ಮುಕ್ತಿಯನ್ನು ಪಡೆದಳು. ಕಾಮದೇವನ ದಿವಸವಾದ ಆ ಚೈತ್ರಮಾಸದ ಶುಕ್ಲಪಕ್ಷ ಚತುರ್ದಶಿಯಲ್ಲಿ ಅಹಲ್ಯೆಯನ್ನು ಯಾವನು ಪೂಜಿಸುತ್ತಾನೋ ಅವನು ಎಲ್ಲೆಲ್ಲಿ ಹುಟ್ಟಲಿ ಎಲ್ಲರಿಗೂ ಪ್ರಿಯನಾಗುವನು. ಸ್ತ್ರೀಯರಿಗೆ ಪ್ರೀತಿಪಾತ್ರನೂ, ಶ್ರೀಮಂತನೂ ಆಗಿ ಎರಡನೆಯ ಮನ್ಮಥನಂತೆ ಪ್ರಕಾಶಿಸುವನು.

೯೩. ಅಯೋಧ್ಯೆಯೆಂದು ಪ್ರಸಿದ್ಧವಾದ ರಾಮತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಮನುಷ್ಯನು ಎಲ್ಲ ಬಗೆಯ ಪಾಪಗಳಿಂದಲೂ ಬಿಡುಗಡೆ ಹೊಂದುವನು.

೯೪. ತರುವಾಯ ಸೋಮತೀರ್ಥವನ್ನೈದಿ ಅಲ್ಲಿ ಸ್ನಾನಮಾಡಬೇಕು. ಅಷ್ಟುಮಾತ್ರದಿಂದಲೇ ಆ ಮನುಜನ ಪಾಪಗಳೆಲ್ಲವೂ ತೊಲಗುವುವು.

೯೫. ಎಲೈ ಧರ್ಮರಾಜಾ, ಸೋಮಗ್ರಹ ತೀರ್ಥದಲ್ಲಿ ಮನುಷ್ಯರ ಪಾಪಗಳೆಲ್ಲವೂ ಕ್ಷಯಿಸುವುವು. ಅದು ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಮತ್ತು ಬಹು ಫಲಪ್ರದವಾದ ಮಹಾತೀರ್ಥ.

ತ್ರೈಲೋಕ್ಯವಿಶ್ರುತಂ ರಾಜನ್ ಸೋಮತೀರ್ಥಂ ಮಹಾಫಲಂ ।
ಯಸ್ತು ಚಾಂದ್ರಾಯಣಂ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥೯೬॥

ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ಸ ಗಚ್ಛತಿ ।
ಅಗ್ನಿಪ್ರವೇಶೇಽಥ ಜಲೇ ಅಥವಾಪಿ ಹ್ಯನಾಶಕೇ ॥೯೭॥

ಸೋಮತೀರ್ಥೇ ಮೃತೋ ಯಸ್ತು ನಾಽಸೌ ಮರ್ತ್ಯೇಽಭಿಜಾಯತೇ ।
ಶುಭತೀರ್ಥಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ॥೯೮॥

ಸ್ನಾತಮಾತ್ರೋ ನರಸ್ತತ್ರ ಗೋಲೋಕೇ ತು ಮಹೀಯತೇ ।
ತತೋ ಗಚ್ಛೇಚ್ಚ ರಾಜೇಂದ್ರ ವಿಷ್ಣುತೀರ್ಥಮನುತ್ತಮಂ ॥೯೯॥

ಯೋಧನೀಪುರಮಾಖ್ಯಾತಂ ವಿಷ್ಣುಸ್ಥಾನಮನುತ್ತಮಂ ।
ಅಸುರಾ ಯೋಧಿತಾಸ್ತತ್ರ ವಾಸುದೇವೇನ ಕೋಟಿಶಃ ॥೧೦೦॥

---

೯೬-೯೭. ಆ ತೀರ್ಥದಲ್ಲಿ ಚಾಂದ್ರಾಯಣವ್ರತವನ್ನು ನಡೆಸುವಾತನು ಸರ್ವಪಾಪಗಳಿಂದಲೂ ಮುಕ್ತನಾಗಿ, ಪರಿಶುದ್ಧನೆನಿಸಿ ಚಂದ್ರಲೋಕವನ್ನೈದುವನು. ಅಗ್ನಿಪ್ರವೇಶದಿಂದಲೋ, ಜಲಪ್ರವೇಶದಿಂದಲೋ ಅಥವಾ ಉಪವಾಸ ವ್ರತದಿಂದಲೋ ಸೋಮತೀರ್ಥದಲ್ಲಿ ಪ್ರಾಣಬಿಟ್ಟ ಮನುಷ್ಯನು ಮತ್ತೆ ಜನ್ಮವನ್ನೆತ್ತನು.

೯೮. ಅನಂತರ ಶುಭತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ಅಷ್ಟು ಮಾತ್ರದಿಂದಲೇ ಮನುಷ್ಯನು ಗೋಲೋಕವನ್ನೈದಿ ಪೂಜ್ಯತೆಯನ್ನು ಗಳಿಸುವನು.

೯೯-೧೦೧. ಧರ್ಮರಾಜಾ, ಅನಂತರ ಅತಿಪವಿತ್ರವಾದ ವಿಷ್ಣುತೀರ್ಥಕ್ಕೆ ಹೋಗಬೇಕು. ಯೋಧನೀಪುರವೆಂದು ಪ್ರಖ್ಯಾತವಾದ ವಿಷ್ಣುಕ್ಷೇತ್ರವಿದು. ವಾಸುದೇವನು ಕೋಟಿಗಟ್ಟಲೆ ಅಸುರರೊಡನೆ ಅಲ್ಲಿ ಹೋರಾಡಿದನು. ಅದರಿಂದ ಆ

ತತ್ರ ತೀರ್ಥಂ ಸಮುತ್ಪನ್ನಂ ವಿಷ್ಣುಃ ಪ್ರಿತೋ ಭವೇದಿಹ ।
ಅಹೋರಾತ್ರೋಪವಾಸೇನ ಬ್ರಹ್ಮಹತ್ಯಾಂ ವ್ಯಪೋಹತಿ ॥೧೦೧॥

ತತೋ ಗಚ್ಛೇತ್ತು ರಾಜೇಂದ್ರ ತಾಪಸೇಶ್ವರಮುತ್ತಮಂ ।
ಹರಿಣೀ ವ್ಯಾಧಸಂತ್ರಸ್ತಾ ಪತಿತಾ ಯತ್ರ ಸಾ ಮೃಗೀ ॥೧೦೨॥

ಜಲೇ ಪ್ರಕ್ಷಿಪ್ತಗಾತ್ರಾ ತು ಅಂತರಿಕ್ಷಂ ಗತಾ ಚ ಸಾ ।
ವ್ಯಾಧೋ ವಿಸ್ಮಿತಚಿತ್ತಸ್ತು ಪರಂ ವಿಸ್ಮಯಮಾಗತಃ ॥೧೦೩॥

ತೇನ ತಾಪೇಶ್ವರಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ತತೋ ಗಚ್ಛೇತ್ತು ರಾಜೇಂದ್ರ ಬ್ರಹ್ಮತೀರ್ಥಮನುತ್ತಮಂ ॥೧೦೪॥

ಅಮೋಹಕಮಿತಿ ಖ್ಯಾತಂ ಪಿತೄಂಶ್ಚೈವಾತ್ರ ತರ್ಪಯೇತ್ ।
ಪೌರ್ಣಮಾಸ್ಯಾಮಮಾಯಾಂ ತು ಶ್ರಾದ್ಧಂ ಕುರ್ಯಾದ್ಯಥಾವಿಧಿ ॥೧೦೫॥

---

ತೀರ್ಥವು ಉತ್ಪನ್ನವಾಯಿತು. ವಿಷ್ಣುವು ಅಲ್ಲಿ ಪ್ರೀತನಾಗುವನು. ಆ ಕ್ಷೇತ್ರದಲ್ಲಿ ಒಂದು ಹಗಲೂ ರಾತ್ರಿ ಉಪವಾಸಮಾಡಿದರೆ ಬ್ರಹ್ಮಹತ್ಯಾ ದೋಷವು ಪರಿಹಾರ ವಾಗುವುದು.

೧೦೨-೧೦೩. ಅಲ್ಲಿಂದ ಮುಂದೆ ಶ್ರೇಷ್ಠವಾದ ತಾಪಸೇಶ್ವರವೆಂಬ ತೀರ್ಥ ಸಿಕ್ಕುವುದು. ಓ ರಾಜೇಂದ್ರಾ, ಬೇಡರವನಿಗೆ ಹೆದರಿಕೊಂಡು ಓಡುತ್ತ ಒಂದಾನೊಂದು ಹೆಣ್ಣುಜಿಂಕೆ ಅಲ್ಲಿ ಬಿದ್ದುಬಿಟ್ಟಿತು. ಅದು ನೀರಿನಲ್ಲಿ ಬಿದ್ದು ದಿವ್ಯದೇಹದಿಂದ ಅಂತರಿಕ್ಷಕ್ಕೆ ಏರಿಹೋಯಿತು. ಅದನ್ನು ಕಂಡು ಬೇಡನು ಮನಸ್ಸಿನಲ್ಲಿ ಬಹಳ ಆಶ್ಚರ್ಯಗೊಂಡನು. ಆ ತಾಪಸೇಶ್ವರದಂತಹ ಮಹಾತೀರ್ಥವು ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ.

೧೦೪-೧೦೫. ಬಳಿಕ ಅತಿ ಶ್ರೇಷ್ಠವಾದ ಬ್ರಹ್ಮತೀರ್ಥಕ್ಕೆ ಹೋಗಿ ಪಿತೃಗಳಿಗೆ ತರ್ಪಣವನ್ನು ಕೊಡಬೇಕು. ಈ ತೀರ್ಥಕ್ಕೆ ಅಮೋಹಕವೆಂದೂ ಪ್ರಖ್ಯಾತಿಯುಂಟು. ಹುಣ್ಣಿಮೆಯಲ್ಲೂ ಅಮಾವಾಸ್ಯೆಯಲ್ಲೂ ಶಾಸ್ತ್ರೋಕ್ತವಾಗಿ ಅಲ್ಲಿ ಶ್ರಾದ್ಧವನ್ನು ಮಾಡಬೇಕು.

ತತ್ರ ಸ್ನಾತ್ವಾ ನರೋ ರಾಜನ್ ಪಿತೃಪಿಂಡಂ ತು ದಾಪಯೇತ್ ।
ಗಜರೂಪಾ ಶಿಲಾ ತತ್ರ ತೋಯಮಧ್ಯೇ ಪ್ರತಿಷ್ಠಿತಾ ॥೧೦೬॥

ತಸ್ಯಾಂ ತು ದಾಪಯೇತ್ಪಿಂಡಂ ವೈಶಾಖ್ಯಾಂ ತು ವಿಶೇಷತಃ ।
ತೃಪ್ಯಂತಿ ಪಿತರಸ್ತತ್ರ ಯಾವತ್ತಿಷ್ಠತಿ ಮೇದಿನೀ ॥೧೦೭॥

ತತೋಗಚ್ಛೇಚ್ಚ ರಾಜೇಂದ್ರ ಸಿದ್ಧೇಶ್ವರಮನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಗಣಪತ್ಯಂತಿಕಂ ವ್ರಜೇತ್ ॥೧೦೮॥

ತತೋ ಗಚ್ಛೇತ್ತು ರಾಜೇಂದ್ರ ಲಿಂಗಂ ಯತ್ರ ಜನಾರ್ದನಃ ।
ತತ್ರ ಸ್ನಾತ್ವಾ ತು ರಾಜೇಂದ್ರ ವಿಷ್ಣುಲೋಕೇ ಮಹೀಯತೇ ॥೧೦೯॥

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಂ ।
ಕಾಮದೇವಃ ಸ್ವಯಂ ತತ್ರ ತಪೋಽತಪ್ಯತ ವೈ ಮಹತ್ ॥೧೧೦॥

---

೧೦೬-೧೦೭. ಎಲೈ ಭೂಪಾಲಕಾ, ಆ ತೀರ್ಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ಪಿಂಡವನ್ನು ಹಾಕಬೇಕು. ನೀರಿನ ನಡುವೆ ಆನೆಯ ಆಕಾರದ ಒಂದು ಶಿಲೆಯಿದೆ. ಆದರ ಮೇಲೆ ಪಿಂಡವನ್ನಿಡಬೇಕು. ವೈಶಾಖಮಾಸದ ಹುಣ್ಣಿಮೆಯ ದಿನವಂತೂ ಅಲ್ಲಿ ಪಿಂಡದಾನವನ್ನು ಮಾಡಿಯೇ ತೀರಬೇಕು. ಆದರಿಂದ ಭೂಮಂಡಲ ವಿರುವವರೆಗೂ ಪಿತೃಗಳು ತೃಪ್ತರಾಗಿರುತ್ತಾರೆ.

೧೦೮. ಎಲೈ ಯುಧಿಷ್ಠಿರಾ, ತರುವಾಯ ಪರಮಪಾವನವಾದ ಸಿದ್ಧೇಶ್ವರಕ್ಕೆ ಹೋಗಿ ಸ್ನಾನಮಾಡಿದರೆ ಗಣಪತಿಯ ಸಾನ್ನಿಧ್ಯವು ಪ್ರಾಪ್ತವಾಗುವುದು.

೧೦೯. ತರುವಾಯ ವಿಷ್ಣುವಿನ ನಿವಾಸಸ್ಥಾನವಾದ ಲಿಂಗತೀರ್ಥಕ್ಕೆ ಹೋಗಿ ಸ್ನಾನಮಾಡುವಾತನು ವಿಷ್ಣುಲೋಕದಲ್ಲಿ ಗೌರವವನ್ನು ಪಡೆಯುತ್ತಾನೆ.

೧೧೦. ನರ್ಮದಾ ನದಿಯ ದಕ್ಷಿಣತೀರದಲ್ಲಿ ಬಹುಮಂಗಳಮಯವಾದ ಕುಸುಮೇಶ್ವರವೆಂಬ ತೀರ್ಥವುಂಟು. ಅಲ್ಲಿ ಸಾಕ್ಷಾನ್ಮನ್ಮಥನು ಘೋರವಾದ ತಪಸ್ಸನ್ನು ಮಾಡಿದನು.

ದಿವ್ಯಂ ವರ್ಷಸಹಸ್ರಂ ತು ಶಂಕರಂ ಪರ್ಯುಪಾಸತ ।
ಸಮಾಧಿಭಂಗದಗ್ಧಸ್ತು ಶಂಕರೇಣ ಮಹಾತ್ಮನಾ ॥೧೧೧॥

ಶ್ವೇತಪರ್ವಾ ಯಮಶ್ಚೈವ ಹುತಾಶಃ ಶುಕ್ಲಪರ್ವಣಿ ।
ಏತೇ ದಗ್ಧಾಸ್ತು ತೇ ಸರ್ವೇ ಕುಸುಮೇಶ್ವರಸಂಸ್ಥಿತಾಃ ॥೧೧೨॥

ದಿವ್ಯವರ್ಷಸಹಸ್ರೇಣ ತುಷ್ಟಸ್ತೇಷಾಂ ಮಹೇಶ್ವರಃ ।
ಉಮಯಾ ಸಹಿತೋ ರುದ್ರಸ್ತುಷ್ಟಸ್ತೇಷಾಂ ವರಪ್ರದಃ ॥೧೧೩॥

ಮೋಕ್ಷಯಿತ್ವಾ ತು ತಾನ್ ಸರ್ವಾನ್ನರ್ಮದಾತಟಮಾಸ್ಥಿತಃ ।
ತತಸ್ತೀರ್ಥಪ್ರಭಾವೇಣ ಪುನರ್ದೇವತ್ವಮಾಗತಾಃ ॥೧೧೪॥

ತ್ವತ್ಪ್ರಸಾದಾನ್ಮಹಾದೇವ ತೀರ್ಥಂ ಭವತು ಚೋತ್ತಮಮ್ ।
ಅರ್ಧಯೋಜನವಿಸ್ತೀರ್ಣಂ ಕ್ಷೇತ್ರಂ ದಿಕ್ಷು ಸಮಂತತಃ ॥೧೧೫॥

---

೧೧೧. ಆತನು ದೇವಮಾನದ ಸಹಸ್ರವರ್ಷಗಳಕಾಲ ಪರಮೇಶ್ವರನನ್ನು ಧ್ಯಾನಿಸಿದನು. ಆದರೆ ಮಹಾತ್ಮನಾದ ಶಂಕರನು ತನ್ನ ಯೋಗಸಮಾಧಿಗೆ ವಿಘ್ನತಂದನೆಂಬ ಕಾರಣದಿಂದ ಅವನನ್ನು ದಹಿಸಿದನು.

೧೧೨. ಕುಸುಮೇಶ್ವರ ಕ್ಷೇತ್ರವಾಸಿಗಳಾಗಿದ್ದ ಶ್ವೇತಪರ್ವ, ಯಮ, ಅಗ್ನಿ ಇವರೆಲ್ಲರೂ ಆ ಹುಣ್ಣಿಮೆಯ ದಿನ ಈಶ್ವರನಿಂದ ದಗ್ಧರಾದರು.

೧೧೩. ಒಂದುಸಾವಿರ ದಿವ್ಯ ವರ್ಷಗಳ ತರುವಾಯ ಮಹೇಶ್ವರನು ಅವರಲ್ಲಿ ಪ್ರಸನ್ನನಾದನು. ಪಾರ್ವತೀಸಹಿತನಾಗಿ ಆತನು ತುಷ್ಟನಾಗಿ ಅವರಿಗೆ ವರವನ್ನಿತ್ತನು.

೧೧೪. ಈಶ್ವರನು ಅವರೆಲ್ಲರನ್ನೂ ತನ್ನ ಕೋಪಶಾಪದಿಂದ ಬಿಡುಗಡೆ ಮಾಡಿ ನರ್ಮದಾತೀರ್ಥದಲ್ಲಿ ನೆಲಸಿದನು. ಬಳಿಕ ಆ ತೀರ್ಥದ ಪ್ರಭಾವದಿಂದ ಅವರೆಲ್ಲರೂ ಮತ್ತೆ ದೇವತ್ವವನ್ನು ಪಡೆದರು.

೧೧೫. "ಓ ಮಹಾದೇವಾ, ನಿನ್ನ ಅನುಗ್ರಹದಿಂದ ಈ ತೀರ್ಥವು ಅತಿ ಶ್ರೇಷ್ಠವಾಗಲಿ. ಈ ಕ್ಷೇತ್ರವು ಎಲ್ಲ ದಿಕ್ಕುಗಳಲ್ಲಿಯೂ ಅರ್ಧಯೋಜನ ವಿಸ್ತಾರ ವ್ಯಾಪಿಸಲಿ" ಎಂದು ಅವರು ಪ್ರಾರ್ಥಿಸಿದರು.

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಚೋಪವಾಸಪರಾಯಣಃ ।
ಕುಸುಮಾಯುಧರೂಪೇಣ ರುದ್ರಲೋಕೇ ಮಹೀಯತೇ ॥೧೧೬॥

ವೈಶ್ವಾನರೋ ಯಮುಶ್ಚೈವ ಕಾಮದೇವಸ್ತಥಾ ಮರುತ್ ।
ತಪಸ್ತಪ್ತ್ವಾ ತು ರಾಜೇಂದ್ರ ಪರಾಂ ಸಿದ್ಧಿಮವಾಪ್ನುಯುಃ ॥೧೧೭॥

ಅಂಕೋಲಸ್ಯ ಸಮೀಪೇ ತು ನಾತಿದೂರೇ ತು ತಸ್ಯ ವೈ ।
ಸ್ನಾನಂ ದಾನಂ ಚ ತತ್ರೈವ ಭೋಜನಂ ಪಿಂಡಪಾತನಂ ॥೧೧೮॥

ಅಗ್ನಿಪ್ರವೇಶೇಽಥ ಜಲೇ ಅಥವಾ ತು ಹ್ಯನಾಶಕೇ ।
ಅನಿವರ್ತಿಕಾ ಗತಿಸ್ತಸ್ಯ ಮೃತಸ್ಯಾಮುತ್ರ ಜಾಯತೇ ॥೧೧೯॥

ತ್ರ್ಯಂಬಕೇಣ ತು ತೋಯೇನ ಯಶ್ಚರುಂ ಶ್ರಪಯೇನ್ನರಃ ।
ಅಂಕೋಲಮೂಲೇ ದತ್ವಾ ತು ಪಿಂಡಂ ಚೈವ ಯಥಾವಿಧಿ ॥೧೨೦॥

---

೧೧೬. ಆ ತೀರ್ಥದಲ್ಲಿ ಸ್ನಾನಮಾಡಿ ಉಪವಾಸವ್ರತವನ್ನು ನಿಯಮದಿಂದ ಆಚರಿಸುವ ಮನುಷ್ಯನು ಮನ್ಮಥನ ರೂಪವನ್ನು ತಾಳಿ ರುದ್ರಲೋಕದಲ್ಲಿ ಮಾನ್ಯನಾಗುವನು.

೧೧೭. ಎಲ್ಲೆ ಧರ್ಮರಾಜಾ, ಅಗ್ನಿ, ಯಮ, ಮನ್ಮಥ, ವಾಯು ಇವರು ತಪಸ್ಸನ್ನು ಮಾಡಿ ಉತ್ತಮವಾದ ಸಿದ್ಧಿಯನ್ನು ಪಡೆದರು.

೧೧೮-೧೧೯. ಅಂಕೋಲತೀರ್ಥದ ಸಮೀಪದಲ್ಲಿ ಸ್ನಾನ, ದಾನ, ಭೋಜನ, ಪಿಂಡದಾನ ಆವುಗಳನ್ನು ಮಾಡಿದರೂ, ಬೆಂಕಿಯಲ್ಲಿ ಬಿದ್ದೋ, ನೀರಿನಲ್ಲಿ ಮುಳುಗಿಯೋ ಪ್ರಾಣಬಿಟ್ಟರೂ ಪುನರ್ಜನ್ಮವಿಲ್ಲದ ಸದ್ಗತಿ ಲಭಿಸುವುದು.

೧೨೦. ತ್ರಿಯಂಬಕ ತೀರ್ಥದ ಜಲದಿಂದ ಅನ್ನವನ್ನು ಪಕ್ವಮಾಡಿ ಆ ಕ್ಷೇತ್ರದಲ್ಲಿರುವ ಅಂಕೋಲವೃಕ್ಷದ ಮೂಲದಲ್ಲಿ ಶಾಸ್ತ್ರೋಕ್ತವಾಗಿ ಪಿಂಡದಾನವನ್ನು ಮಾಡಿದರೆ ಆತನ ಪಿತೃಗಳು ಚಂದ್ರಸೂರ್ಯರಿರುವವರೆಗೂ ತೃಪ್ತರಾಗಿರುತ್ತಾರೆ.

ತೃಪ್ಯಂತಿ ಪಿತರಸ್ತಸ್ಯ ಯಾವಚ್ಚಂದ್ರದಿವಾಕರೌ ।
ಉತ್ತರೇ ತ್ವಯನೇ ಪ್ರಾಪ್ತೇ ಘೃತಸ್ನಾನಂ ಕರೋತಿ ಯಃ ||೧೨೧||

ಪುರುಷೋ ವಾಥ ಸ್ತ್ರೀ ವಾಪಿ ವಸೇದಾಯತನೇ ಶುಚಿಃ ।
ಸಿದ್ಧೇಶ್ವರಸ್ಯ ದೇವಸ್ಯ ಪ್ರಾತಃ ಪೂಜಾಂ ಪ್ರಕಲ್ಪಯೇತ್ ||೧೨೨||

ಸ ಯಾಂ ಗತಿಮವಾಪ್ನೋತಿ ನ ತಾಂ ಸರ್ವೈರ್ಮಹಾಮಖೈಃ ।
ಯದಾವತೀರ್ಣಃ ಕಾಲೇನ ರೂಪವಾನ್ ಸುಭಗೋ ಭವೇತ್ ||೧೨೩||

ಮರ್ತ್ಯೇ ಭವತಿ ರಾಜಾ ಚ ತ್ವಾಸಮುದ್ರಾಂತಗೋಚರೇ ।
ಕ್ಷೇತ್ರಪಾಲಂ ನ ಪಶ್ಯೇದ್ಯೋ ದಂಡಪಾಣಿಂ ಮಹಾಬಲಂ ||೧೨೪||

ವೃಥಾ ತಸ್ಯ ಭವೇದ್ಯಾತ್ರಾ ಹ್ಯದೃಷ್ಟ್ವಾ ಕರ್ಣಕುಂಡಲಂ ।
ಏವಂ ತೀರ್ಥಫಲಂ ಜ್ಞಾತ್ವಾ ಸರ್ವೇ ದೇವಾಃ ಸಮಾಗತಾಃ ।
ಮುಂಚಂತಿ ಕುಸುಮೈರ್ವೃಷ್ಟಿಂ ತೇನ ತತ್ಕುಸುಮೇಶ್ವರಂ ||೧೨೫||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ
ಏಕನವತ್ಯಧಿಕಶತತಮೋಽಧ್ಯಾಯಃ

---

೧೨೧-೧೨೨. ಪುರುಷನಾಗಲಿ ಸ್ತ್ರೀಯಾಗಲಿ ಉತ್ತರಾಯಣದಲ್ಲಿ ಘೃತ ಸ್ನಾನವನ್ನು ಮಾಡಿ, ಶುದ್ಧಿಯಿಂದ ದೇವಾಲಯದಲ್ಲೇ ವಾಸಮಾಡುತ್ತ, ಸಿದ್ಧೇಶ್ವರ ಕ್ಷೇತ್ರವಾಸಿಯಾದ ಮಹಾದೇವನನ್ನು ಪ್ರಾತಃಕಾಲದಲ್ಲಿ ಪೂಜಿಸಬೇಕು.

೧೨೩. ಇದರಿಂದ ಲಭಿಸುವ ಸದ್ಗತಿಯು ಎಲ್ಲ ಮಹಾಯಜ್ಞಗಳನ್ನು ಮಾಡಿದರೂ ಪ್ರಾಪ್ತವಾಗಲಾರದು. ಕಾಲವಶದಿಂದ ಆತನು ಭೂಮಿಯಲ್ಲಿ ಜನಿಸಿದಾಗ ರೂಪವಂತನೂ ಅದೃಷ್ಟಶಾಲಿಯೂ ಆಗಿ, ಸಮುದ್ರದ ವರೆಗಿನ ಭೂಮಿಗೆಲ್ಲ ರಾಜನಾಗುವನು.

೧೨೪. ವಾರಾಣಸೀಕ್ಷೇತ್ರದ ರಕ್ಷಕನೂ ಮಹಾಬಲಶಾಲಿಯೂ ಆದ ದಂಡಪಾಣಿಯನ್ನು ಕಂಡು, ಆತನ ಕರ್ಣಕುಂಡಲವನ್ನು ದರ್ಶನಮಾಡದಾತನ ಯಾತ್ರೆಯೆಲ್ಲವೂ ನಿಷ್ಫಲವಾಗುವುದು.

೧೨೫. ಹೀಗೆ ತೀರ್ಥಗಳ ಫಲವನ್ನು ತಿಳಿದುಕೊಂಡು, ದೇವತೆಗಳೆಲ್ಲರೂ ಬಂದು ಹೂವಿನ ಮಳೆಯನ್ನು ಕರೆದ ಸ್ಥಳವಾದುದರಿಂದ ಅದು ಕುಸುಮೇಶ್ವರ ಕ್ಷೇತ್ರವೆಂದು ಪ್ರಸಿದ್ಧವಾಯಿತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನರ್ಮದಾನದಿಯ ಎರಡು ದಡಗಳಲ್ಲಿಯೂ ಇರುವ ಪುಣ್ಯತೀರ್ಥಗಳ ಮಹಿಮೆಯನ್ನು ವರ್ಣಿಸಿದೆ.

ಒಂದೊಂದು ತೀರ್ಥದಲ್ಲೂ ಒಂದೊಂದು ಬಗೆಯ ಮಹಿಮಾತಿಶಯವುಂಟು. ಕೆಲವು ಕಡೆ ಸ್ನಾನಮಾಡಿದರೆ ಸಾಕು; ರುದ್ರಲೋಕ, ಬ್ರಹ್ಮಲೋಕ, ಗೋಲೋಕ ಮುಂತಾದ ಪುಣ್ಯಲೋಕಗಳು ಲಭಿಸುವುವು. ಮತ್ತೆ ಕೆಲವುಕಡೆ ಪಿತೃಗಳನ್ನು ದ್ದೇಶಿಸಿ ತರ್ಪಣವನ್ನೂ ಪಿಂಡವನ್ನೂ ಕೊಟ್ಟರೆ ಅವರಿಗೆ ಅಕ್ಷಯವಾದ ತೃಪ್ತಿಯುಂಟಾಗುವುದು. ಇನ್ನೂ ಕೆಲವು ಕ್ಷೇತ್ರಗಳಲ್ಲಿ ಮರಣವು ಸದ್ಗತಿಪ್ರದವೆಂದು ಭಾವಿಸಿದ್ದಾರೆ. ಜಲಪ್ರವೇಶದಿಂದಲೋ, ಅಗ್ನಿಪ್ರವೇಶದಿಂದಲೋ, ಉಪವಾಸ ವ್ರತದಿಂದಲೊ, ಅಲ್ಲಿ ಪ್ರಾಣಬಿಟ್ಟರೆ ಉತ್ತಮ ಲೋಕವು ಪ್ರಾಪ್ತವಾಗುವುದು.

ಕ್ಷೇತ್ರರಕ್ಷಕನಾದ ದಂಡಪಾಣಿಯ ದರ್ಶನವನ್ನು ಮಾಡದಿದ್ದರೆ ಉಳಿದ ತೀರ್ಥಯಾತ್ರೆಯಿಂದ ಫಲವೇನೂ ಇಲ್ಲ. ಬ್ರಹ್ಮಾವರ್ತ, ಕಪಿಲಾತೀರ್ಥ, ಪಿಪ್ಪಲೇಶ, ಬಲಾಕೇಶ್ವರ, ಋಷಿತೀರ್ಥ, ಪಿಂಗಲೇಶ್ವರ, ಲಿಂಗಸಾರ, ಕೋಟಿತೀರ್ಥ, ಕುಸುಮೇಶ್ವರ ಮುಂತಾದ ಎಷ್ಟೋ ಪುಣ್ಯತೀರ್ಥಗಳ ಪ್ರಭಾವವು ಇಲ್ಲಿ ವರ್ಣಿತವಾಗಿದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ<br>ನೂರತೊಂಬತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿನವತ್ಯಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಭಾರ್ಗವೇಶಂ ತತೋ ಗಚ್ಛೇದ್ಭೃಗ್ವೋ ಯತ್ರ ಜನಾರ್ದನಃ।
ಅಸುರೈಸ್ತು ಮಹಾಯುದ್ಧೇ ಮಹಾಬಲಪರಾಕ್ರಮೈಃ ॥ ೧ ॥

ಹುಂಕಾರಿತಾಸ್ತು ದೇವೇನ ದಾನವಾಃ ಪ್ರಲಯಂ ಗತಾಃ।
ತತ್ರ ಸ್ನಾತ್ವಾ ತು ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥ ೨ ॥

ಶುಕ್ಲತೀರ್ಥಸ್ಯ ಚೋತ್ಪತ್ತಿಂ ಶೃಣು ತ್ವಂ ಪಾಂಡುನಂದನ।
ಹಿಮವಚ್ಛಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ॥ ೩ ॥

ತರುಣಾದಿತ್ಯಸಂಕಾಶೇ ತಪ್ತಕಾಂಚನಸಪ್ರಭೇ।
ವಜ್ರಸ್ಫಟಿಕಸೋಪಾನೇ ಚಿತ್ರಪಟ್ಟಶಿಲಾತಲೇ ॥ ೪ ॥

---

೧-೨. ಮಾರ್ಕಂಡೇಯನು ಹೇಳಿದನು.—ಹಿಂದೆ ಹೇಳಿದ ಕ್ಷೇತ್ರಗಳ ಯಾತ್ರೆ ಮುಗಿದಮೇಲೆ ಭಾರ್ಗವೇಶವೆಂಬ ಕ್ಷೇತ್ರಕ್ಕೆ ಹೋಗಬೇಕು. ಬಹು ಬಲವೂ ಪರಾಕ್ರಮವೂ ಉಳ್ಳ ಅಸುರರೊಡನೆ ದೊಡ್ಡ ಯುದ್ಧವನ್ನು ಮಾಡಿ ವಿಷ್ಣು ಪರಾಜಿತನಾದನು. ಬಳಿಕ ಆ ಭಗವಂತನು ಕೋಪದಿಂದ ಹುಂಕಾರಮಾಡಲು ದಾನವರೆಲ್ಲರೂ ನಾಶವಾದರು. ಎಲೈ ಧರ್ಮರಾಜಾ, ಆ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳೂ ಹೋಗುವುವು.

೩-೬. ಓ ಪಾಂಡುಪುತ್ರಾ, ಶುಕ್ಲತೀರ್ಥದ ಉತ್ಪತ್ತಿಯನ್ನು ಹೇಳುವೆನು ಕೇಳು. ಹಿಮವತ್ಪರ್ವತದ ಶಿಖರವು ಮನೋಹರವಾಗಿ ಬಗೆಬಗೆಯ ಧಾತುಗಳಿಂದ ವಿಚಿತ್ರವಾಗಿ ಶೋಭಿಸುವುದು. ಅದು ಬಾಲಸೂರ್ಯನಂತೆಯೂ ಪುಟವಿಟ್ಟ ಚಿನ್ನದಂತೆಯೂ ಕಾಂತಿಯುಕ್ತವಾಗಿರುವುದು. ಅದರ ಮೆಟ್ಟಲು ವಜ್ರದಿಂದಲೂ ಸ್ಫಟಿಕದಿಂದಲೂ ಆದುದು. ಬಂಡೆಗಳು ರತ್ನಗಂಬಳಿಗಳನ್ನು ಹಾಸಿದಂತೆ ಅಂದವಾಗಿರುವುವು. ಆ ಶಿಖರವು ಸುವರ್ಣಮಯವಾಗಿ ನಾನಾ ವಿಧವಾದ ಪುಷ್ಪಗಳಿಂದ

ಜಾಂಬೂನದಮಯೇ ದಿವ್ಯೇ ನಾನಾಪುಷ್ಪೋಪಶೋಭಿತೇ ।
ತತ್ರಾಸೀನಂ ಮಹಾದೇವಂ ಸರ್ವಜ್ಞಂ ಪ್ರಭುಮವ್ಯಯಂ ॥ ೫ ॥

ಲೋಕಾನುಗ್ರಹಕರ್ತಾರಂ ಗುಣವೃಂದೈಃ ಸಮಾವೃತಂ ।
ಸ್ಕಂದನಂದಿಮಹಾಕಾಲೈರ್ವೀರಭದ್ರಗಣಾದಿಭಿಃ ।
ಉಮಯಾ ಸಹಿತಂ ದೇವಂ ಮಾರ್ಕಂಡಿಃ ಪರ್ಯಪೃಚ್ಛತ ॥ ೬ ॥

ದೇವದೇವ ಮಹಾದೇವ ಬ್ರಹ್ಮವಿಷ್ಣ್ವಿಂದ್ರಸಂಸ್ತುತ ।
ಸಂಸಾರಭಯಭೀತೋಽಹಂ ಸುಖೋಪಾಯಂ ಬ್ರವೀಹಿ ಮೇ ॥ ೭ ॥

ಭಗವನ್ ಭೂತಭವ್ಯೇಶ ಸರ್ವಪಾಪಪ್ರಣಾಶನಂ ।
ತೀರ್ಥಾನಾಂ ಪರಮಂ ತೀರ್ಥಂ ತದ್ವದಸ್ವ ಮಹೇಶ್ವರ ॥ ೮ ॥

॥ ಈಶ್ವರ ಉವಾಚ ॥

ಶೃಣು ವಿಪ್ರ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ ।
ಸ್ನಾನಾಯ ಗಚ್ಛ ಸುಭಗ ಋಷಿಸಂಘೈಃ ಸಮಾವೃತಃ ॥ ೯ ॥

---

ಅಲಂಕೃತವಾಗಿರುವುದು. ಅಲ್ಲಿ ಸರ್ವಜ್ಞನೂ, ಜಗತ್ಪ್ರಭುವೂ, ಲೋಕಾನುಗ್ರಹ ಕಾರಿಯೂ, ಅವ್ಯಯನೂ ಆದ ಮಹಾದೇವನು ಕುಳಿತಿದ್ದನು. ಷಣ್ಮುಖ, ನಂದಿ, ಮಹಾಕಾಲ, ವೀರಭದ್ರ ಮುಂತಾದ ಗಣಾಧಿಪತಿಗಳೂ ಪ್ರಮಥಗಳೂ ಸುತ್ತ ಕುಳಿತಿದ್ದರು. ಪಾರ್ವತೀ ಸಹಿತನಾದ ಆ ಪರಮೇಶ್ವರನನ್ನು ಮೃಕಂಡಮುನಿಯ ಪುತ್ರನಾದ ಮಾರ್ಕಂಡಿಯು ಪ್ರಶ್ನಿಸಿದನು.

೭. ದೇವದೇವಾ, ಬ್ರಹ್ಮ, ವಿಷ್ಣು, ಇಂದ್ರ ಇವರಿಂದ ಸ್ತುತಿಗೊಳ್ಳುವ ಎಲೈ ಮಹಾದೇವಾ, ಸಂಸಾರಭಯದಿಂದ ನಾನು ಹೆದರಿದ್ದೇನೆ. ಸುಖೋಪಾಯವನ್ನು ನನಗೆ ಹೇಳು.

೮. ಭೂತ ಭವಿಷ್ಯಗಳ ಅಧಿಪತಿಯಾದ ಎಲೈ ಭಗವಂತಾ, ಮಹೇಶ್ವರಾ, ಸಕಲ ಪಾಪಗಳನ್ನೂ ಪರಿಹರಿಸುವ ಅತ್ಯಂತ ಶ್ರೇಷ್ಠವಾದ ತೀರ್ಥವಾವುದು ತಿಳಿಸು.

೯. ಈಶ್ವರನು ಹೇಳಿದನು.—ಬಹು ಬುದ್ಧಿವಂತನೂ ಸರ್ವಶಾಸ್ತ್ರ ವಿಶಾರದನೂ ಮಹಿಮಾನ್ವಿತನೂ ಆದ ಎಲೈ ಬ್ರಾಹ್ಮಣೋತ್ತಮನೇ, ಕೇಳು; ಋಷಿ ಸಂಘಗಳೊಡಗೂಡಿ ಸ್ನಾನಕ್ಕೆ ಏಳು.

ಮನ್ವತ್ರಿಕಶ್ಯಪಾಶ್ಚೈವ ಯಾಜ್ಞವಲ್ಕ್ಯೋಶನೋಂಗಿರಾಃ ।
ಯಮಾಪಸ್ತಂಭಸಂವರ್ತಾಃ ಕಾತ್ಯಾಯನಬೃಹಸ್ಪತೀ ॥೧೦॥

ನಾರದೋ ಗೌತಮಶ್ಚೈವ ಸೇವಂತೇ ಧರ್ಮಕಾಂಕ್ಷಿಣಃ ।
ಗಂಗಾ ಕನಖಲಂ ಪುಣ್ಯಂ ಪ್ರಯಾಗಂ ಪುಷ್ಕರಂ ಗಯಾಂ ॥೧೧॥

ಕುರುಕ್ಷೇತ್ರಂ ಮಹಾಪುಣ್ಯಂ ರಾಹುಗ್ರಸ್ತೇ ದಿವಾಕರೇ ।
ದಿವಾ ವಾ ಯದಿ ವಾ ರಾತ್ರೌ ಶುಕ್ಲತೀರ್ಥಂ ಮಹಾಫಲಂ ॥೧೨॥

ದರ್ಶನಾತ್ಸ್ಪರ್ಶನಾಚ್ಚೈವ ಸ್ನಾನಾದ್ದಾನಾತ್ತಪೋಜಪಾತ್ ।
ಹೋಮಾಚ್ಚೈವೋಪವಾಸಾಚ್ಚ ಶುಕ್ಲತೀರ್ಥಂ ಮಹಾಫಲಂ ॥೧೩॥

ಶುಕ್ಲತೀರ್ಥಂ ಮಹಾಪುಣ್ಯಂ ನರ್ಮದಾಯಾಂ ವ್ಯವಸ್ಥಿತಂ ।
ಚಾಣಕ್ಯೋ ನಾಮ ರಾಜರ್ಷಿಃ ಸಿದ್ಧಿಂ ತತ್ರ ಸಮಾಗತಃ ॥೧೪॥

---

೧೦-೧೨. ಮನು, ಅತ್ರಿ, ಕಶ್ಯಪ, ಯಾಜ್ಞವಲ್ಕ್ಯ, ಉಶನಸ, ಅಂಗಿರಸ, ಯಮ, ಆಪಸ್ತಂಭ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ನಾರದ, ಗೌತಮ ಮುಂತಾದವರೆಲ್ಲರೂ ಧರ್ಮಪರರಾಗಿ ರಾಹುವಿನಿಂದ ಸೂರ್ಯನ ಗ್ರಹಣವಾದಾಗ ಗಂಗೆ, ಕನಖಲ, ಪುಣ್ಯಕರವಾದ ಪ್ರಯಾಗ, ಪುಷ್ಕರ, ಗಯೆ, ಮಹಾ ಪುಣ್ಯಪ್ರದ ವಾದ ಕುರುಕ್ಷೇತ್ರ ಈ ಪುಣ್ಯತೀರ್ಥಗಳನ್ನು ಸೇವಿಸುವರು. ಆದರೆ ಹಗಲಿನಲ್ಲಾಗಲಿ ರಾತ್ರಿಯಲ್ಲಾಗಲಿ ಶುಕ್ಲತೀರ್ಥವು ಯಾತ್ರಿಕನಿಗೆ ಅತ್ಯಧಿಕವಾದ ಫಲವನ್ನು ಕೊಡುವುದು.

೧೩. ದರ್ಶನ, ಸ್ಪರ್ಶನ, ಸ್ನಾನ, ದಾನ ತಪ, ಜಪ, ಹೋಮ, ಉಪವಾಸ ಇವುಗಳಲ್ಲಿ ಯಾವುದನ್ನು ಮಾಡಿದರೂ ಶುಕ್ಲತೀರ್ಥವು ಅನಂತ ಫಲವನ್ನು ಉಂಟು ಮಾಡುವುದು.

೧೪. ಬಹುಪುಣ್ಯಕರವಾದ ಶುಕ್ಲತೀರ್ಥವು ನರ್ಮದಾನದಿಯಲ್ಲಿರುವುದು. ಚಾಣಕ್ಯನೆಂದು ಪ್ರಸಿದ್ಧನಾದ ರಾಜರ್ಷಿಯು ಅಲ್ಲಿ ಸಿದ್ಧಿಯನ್ನು ಪಡೆದನು.

**ಏತತ್ಕ್ಷೇತ್ರಂ ಸುವಿಪುಲಂ ಯೋಜನಂ ವೃತ್ತಸಂಸ್ಥಿತಂ।**
**ಶುಕ್ಲತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ||೧೫||**

**ಪಾದಪಾಗ್ರೇಣ ದೃಷ್ಟೇನ ಬ್ರಹ್ಮಹತ್ಯಾಂ ವ್ಯಪೋಹತಿ।**
**ಜಲಸ್ಯ ದರ್ಶನಾಚ್ಚೈವ ಭ್ರೂಣಹತ್ಯಾಂ ವ್ಯಪೋಹತಿ ||೧೬||**

**ಅಹಂ ತತ್ರ ಋಷಿಶ್ರೇಷ್ಠ ತಿಷ್ಠಾಮಿ ಹ್ಯುಮಯಾ ಸಹ।**
**ವೈಶಾಖೇ ಚೈತ್ರಮಾಸೇ ತು ಕೃಷ್ಣಪಕ್ಷೇ ಚತುರ್ದಶೀ ||೧೭||**

**ಕೈಲಾಸಾಚ್ಚಾಪಿ ನಿಷ್ಕ್ರಮ್ಯ ತತ್ರ ಸನ್ನಿಹಿತೋ ಹ್ಯಹಂ।**
**ದೈತ್ಯದಾನವಗಂಧರ್ವಾಃ ಸಿದ್ಧವಿದ್ಯಾಧರಾಸ್ತಥಾ ||೧೮||**

**ಗಣಾಶ್ಚಾಪ್ಸರಸೋ ನಾಗಾಃ ಸರ್ವೇ ದೇವಾಃ ಸಮಾಗತಾಃ।**
**ಗಗನಸ್ಥಾಸ್ತು ತಿಷ್ಠಂತಿ ವಿಮಾನೈಃ ಸಾರ್ವಕಾಮಿಕೈಃ ||೧೯||**

---

೧೫. ಈ ಕ್ಷೇತ್ರವು ಬಹು ವಿಸ್ತಾರವಾಗಿ, ಸುತ್ತಲೂ ಒಂದು ಯೋಜನದ ವರೆಗೆ ವ್ಯಾಪಿಸಿ ವೃತ್ತಾಕಾರವಾಗಿರುವುದು. ಶುಕ್ಲತೀರ್ಥವು ಮಹಾಪುಣ್ಯಕರ ವಾದುದು. ಸಕಲಪಾಪಗಳನ್ನೂ ನಾಶಮಾಡುವಂತಹುದು.

೧೬. ಮರದ ತುದಿಯಿಂದ ಈ ತೀರ್ಥವನ್ನು ನೋಡಿದರೆ ಬ್ರಹ್ಮಹತ್ಯಾ ಪಾಪವು ಪರಿಹಾರವಾಗುವುದು. ಇದರ ನೀರನ್ನು ನೋಡಿದರೆ ಸಾಕು ; ಭ್ರೂಣಹತ್ಯಾ ದೋಷವು ದೂರವಾಗುವುದು.

೧೭. ಓ ಋಷಿಶ್ರೇಷ್ಠಾ, ನಾನು ಆ ತೀರ್ಥದಲ್ಲಿ ಪಾರ್ವತೀ ಸಹಿತನಾಗಿ ನೆಲಸಿರುವೆನು. ಚೈತ್ರವೈಶಾಖಮಾಸಗಳ ಕೃಷ್ಣಪಕ್ಷ ಚತುರ್ದಶಿಯ ದಿನ ಕೈಲಾಸ ವನ್ನಾದರೂ ಬಿಟ್ಟು ಬಂದು ಅಲ್ಲಿ ನಿಲ್ಲುವೆನು.

೧೮-೧೯. ದೈತ್ಯರು, ದಾನವರು, ಗಂಧರ್ವರು, ಸಿದ್ಧರು, ವಿದ್ಯಾಧರರು, ಪ್ರಮಥಗಣಗಳು, ಅಪ್ಸರಸ್ತ್ರೀಯರು, ನಾಗರು ಮತ್ತು ಉಳಿದ ದೇವತೆಗಳು ಇವರೆಲ್ಲ ಸಕಲ ಮನೋರಥಗಳನ್ನು ಈಡೇರಿಸುವ ವಿಮಾನಗಳಲ್ಲಿ ಬಂದು ಆಕಾಶ ದಲ್ಲಿ ನಿಲ್ಲುವರು.

ಶುಕ್ಲತೀರ್ಥಂ ತು ರಾಜೇಂದ್ರ ಹ್ಯಾಗತಾ ಧರ್ಮಕಾಂಕ್ಷಿಣಃ ।
ರಜಕೇನ ಯಥಾ ವಸ್ತ್ರಂ ಶುಕ್ಲಂ ಭವತಿ ವಾರಿಣಾ ॥೨೦॥

ಆಜನ್ಮಜನಿತಂ ಪಾಪಂ ಶುಕ್ಲಂ ತೀರ್ಥಂ ವ್ಯಪೋಹತಿ ।
ಸ್ನಾನಂ ದಾನಂ ಮಹಾಪುಣ್ಯಂ ಮಾರ್ಕಂಡೇ ಋಷಿಸತ್ತಮ ॥೨೧॥

ಶುಕ್ಲತೀರ್ಥಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ಪೂರ್ವೇ ವಯಸಿ ಕರ್ಮಾಣಿ ಕೃತ್ವಾ ಪಾಪಾನಿ ಮಾನವಃ ॥೨೨॥

ಅಹೋರಾತ್ರೋಪವಾಸೇನ ಶುಕ್ಲತೀರ್ಥೇ ವ್ಯಪೋಹತಿ ।
ತಪಸಾ ಬ್ರಹ್ಮಚರ್ಯೇಣ ಯಜ್ಞೈರ್ದಾನೇನ ವಾ ಪುನಃ ॥೨೩॥

ದೇವಾರ್ಚನೇನ ಯಾ ತುಷ್ಟಿರ್ನ ಸಾ ಕ್ರತುಶತೈರಪಿ ।
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ॥೨೪॥

ಘೃತೇನ ಸ್ನಾಪಯೇದ್ದೇವಮುಪೋಷ್ಯ ಪರಮೇಶ್ವರಂ ।
ಏಕವಿಂಶಕುಲೋಪೇತೋ ನ ಚ್ಯವೇದೈಶ್ವರಾತ್ಪದಾತ್ ॥೨೫॥

---

೨೦-೨೧. ಓ ಧರ್ಮರಾಜಾ, ಧರ್ಮದಲ್ಲಿ ಆಸಕ್ತರಾದವರು ಶುಕ್ಲತೀರ್ಥಕ್ಕೆ ಬರುವರು. ಅಗಸನು ನೀರಿನಲ್ಲಿ ಒಗೆದು ವಸ್ತ್ರವನ್ನು ಬೆಳ್ಳಗೆ ಮಾಡುವಂತೆ ಶುಕ್ಲತೀರ್ಥವು ಮಾನವನ ಜನ್ಮಾರಭ್ಯ ಬಂದ ಪಾಪವನ್ನು ಹೋಗಲಾಡಿಸಿ ಅವನನ್ನು ಶುದ್ಧನನ್ನಾಗಿ ಮಾಡುವುದು.

೨೨. ಚಿಕ್ಕ ವಯಸ್ಸಿನಲ್ಲಿ ಪಾಪಕರ್ಮಗಳನ್ನು ಮಾಡಿದ ಮನುಷ್ಯನು ಶುಕ್ಲ ತೀರ್ಥದಲ್ಲಿ ಒಂದು ಹಗಲೂ ರಾತ್ರಿ ಉಪವಾಸಮಾಡಿದರೆ ಪಾಪನಿರ್ಮುಕ್ತ ನಾಗುವನು.

೨೩. ಶುಕ್ಲತೀರ್ಥದಲ್ಲಿ ಆಚರಿಸಿದ ತಪಸ್ಸು, ಬ್ರಹ್ಮಚರ್ಯ, ಯಜ್ಞ, ದಾನ, ದೇವತಾರ್ಚನ ಇವುಗಳಿಂದ ಭಗವಂತನಿಗೆ ಆಗುವಷ್ಟು ತೃಪ್ತಿಯು ನೂರಾರು ಯಾಗಗಳನ್ನು ಮಾಡಿದರೂ ಆಗದು.

೨೪-೨೫. ಕಾರ್ತಿಕ ಬಹುಳ ಚತುರ್ದಶಿಯ ದಿನ ಪರಮೇಶ್ವರನಿಗೆ ತುಪ್ಪ ದಿಂದ ಅಭಿಷೇಕಮಾಡಿ ಉಪವಾಸವಿದ್ದರೆ ಇಪ್ಪತ್ತೊಂದು ತಲೆಯವರೆಗೆ ಆತನ ಕುಲದವರು ಪರಮೇಶ್ವರನ ಸಾನ್ನಿಧ್ಯವನ್ನು ಬಿಟ್ಟು ಕದಲದಿರುವರು.

**ಶುಕ್ಲತೀರ್ಥಂ ಮಹಾಪುಣ್ಯಮೃಷಿಸಿದ್ಧನಿಷೇವಿತಂ ।**
**ತತ್ರ ಸ್ನಾತ್ವಾ ನರೋ ರಾಜನ್ನ ಪುನರ್ಜನ್ಮಭಾಗ್ಭವೇತ್ ॥೨೬॥**

**ಸ್ನಾತ್ವಾ ವೈ ಶುಕ್ಲತೀರ್ಥೇ ತು ಹ್ಯರ್ಚಯೇದ್ವೃಷಭಧ್ವಜಂ ।**
**ಕಪಾಲಪೂರಣಂ ಕೃತ್ವಾ ತುಷ್ಯತ್ಯತ್ರ ಮಹೇಶ್ವರಃ ॥೨೭॥**

**ಅರ್ಧನಾರೀಶ್ವರಂ ದೇವಂ ಪಟೇ ಭಕ್ತ್ಯಾ ಲಿಖಾಪಯೇತ್ ।**
**ಶಂಖತೂರ್ಯನಿನಾದೈಶ್ಚ ಬ್ರಹ್ಮಘೋಷೈಶ್ಚ ಸದ್ವಿಜೈಃ ॥೨೮॥**

**ಜಾಗರಂ ಕಾರಯೇತ್ತತ್ರ ನೃತ್ಯಗೀತಾದಿಮಂಗಲೈಃ ।**
**ಪ್ರಭಾತೇ ಶುಕ್ಲತೀರ್ಥೇ ತು ಸ್ನಾನಂ ವೈ ದೇವತಾರ್ಚನಂ ॥೨೯॥**

**ಆಚಾರ್ಯಾನ್ ಭೋಜಯೇತ್ಪಶ್ಚಾಚ್ಛಿವವ್ರತಪರಾನ್ ಶುಚೀನ್ ।**
**ದಕ್ಷಿಣಾಂ ಚ ಯಥಾಶಕ್ತಿ ವಿತ್ತಶಾಠ್ಯಂ ವಿವರ್ಜಯೇತ್ ॥೩೦॥**

---

೨೬. ಶುಕ್ಲತೀರ್ಥವು ಬಹು ಪುಣ್ಯಕರವಾದುದು. ಋಷಿಗಳಿಂದಲೂ ಸಿದ್ಧರಿಂದಲೂ ಸೇವಿತವಾದುದು. ಎಲೈ ರಾಜಾ, ಅಲ್ಲಿ ಸ್ನಾನಮಾಡಿದ ಮನುಷ್ಯನಿಗೆ ಪುನರ್ಜನ್ಮ ಬಾರದು.

೨೭. ಶುಕ್ಲತೀರ್ಥದಲ್ಲಿ ಸ್ನಾನಮಾಡಿ ಮಹಾದೇವನನ್ನು ಪೂಜಿಸಬೇಕು. ಆತನ ಕೈಯಲ್ಲಿರುವ ಬ್ರಹ್ಮಕಪಾಲವನ್ನು ಪುಷ್ಪಾದಿಗಳ ಸಮರ್ಪಣೆಯಿಂದ ಪೂರ್ಣ ಮಾಡಬೇಕು. ಇದರಿಂದ ಪರಮೇಶ್ವರನು ತೃಪ್ತನಾಗುವನು.

೨೮-೨೯. ಭಗವಂತನಾದ ಅರ್ಧನಾರೀಶ್ವರನನ್ನು ಬಟ್ಟೆಯಮೇಲೆ ಬರೆಸಬೇಕು. ಆ ಸ್ವಾಮಿಗೆ ಶಂಖಧ್ವನಿಯಿಂದಲೂ, ಮಂಗಳವಾದ್ಯನಿನಾದದಿಂದಲೂ, ಬ್ರಾಹ್ಮಣ ವೇದಘೋಷಗಳಿಂದಲೂ, ಕೂಡಿ ಸುಪ್ರಭಾತವನ್ನು ಹಾಡಬೇಕು. ಪ್ರಾತಃಕಾಲ ಶುಕ್ಲತೀರ್ಥದಲ್ಲಿ ಸ್ನಾನಮಾಡಿ ದೇವತಾರ್ಚನವನ್ನು ನೆರವೇರಿಸಬೇಕು.

೩೦-೩೧. ತರುವಾಯ ಮಂಗಳವ್ರತನಿಷ್ಠ ಶುದ್ಧರೂ ಆದ ಆಚಾರ್ಯರಿಗೆ ಭೋಜನಮಾಡಿಸಿ ತನ್ನ ಶಕ್ತಿಗೆ ತಕ್ಕಂತೆ ದಕ್ಷಿಣೆಯನ್ನು ಕೊಡಬೇಕು. ಹಣದಲ್ಲಿ

ಪ್ರದಕ್ಷಿಣಂ ತತಃ ಕೃತ್ವಾ ಶನೈರ್ದೇವಾಂತಿಕಂ ವ್ರಜೇತ್ ।
ಏವಂ ವೈ ಕುರುತೇ ಯಸ್ತು ತಸ್ಯ ಪುಣ್ಯಫಲಂ ಶೃಣು ॥೩೧॥

ದಿವ್ಯಯಾನಂ ಸಮಾರೂಢೋ ಗೀಯಮಾನೋಽಪ್ಸರೋಗಣೈಃ ।
ಶಿವತುಲ್ಯಬಲೋಪೇತಸ್ತಿಷ್ಠತ್ಯಾಭೂತಸಂಪ್ಲವಂ ॥೩೨॥

ಶುಕ್ಲತೀರ್ಥೇ ತು ಯಾ ನಾರೀ ದದಾತಿ ಕನಕಂ ಶುಭಂ ।
ಘೃತೇನ ಸ್ನಾಪಯೇದ್ದೇವಂ ಕುಮಾರಂ ಚಾಪಿ ಪೂಜಯೇತ್ ॥೩೩॥

ಏವಂ ಯಾ ಕುರುತೇ ಭಕ್ತ್ಯಾ ತಸ್ಯಾಃ ಪುಣ್ಯಫಲಂ ಶೃಣು ।
ಮೋದತೇ ಶರ್ವಲೋಕಸ್ಥಾ ಯಾವದಿಂದ್ರಾಶ್ಚತುರ್ದಶ ॥೩೪॥

---

ಜಿಪುಣತನವನ್ನು ತೋರಿಸಬಾರದು. ಬಳಿಕ ಪ್ರದಕ್ಷಿಣ ಮಾಡಿ ನಿಧಾನವಾಗಿ ದೇವರ ಸಾನ್ನಿಧ್ಯಕ್ಕೆ ಹೋಗಬೇಕು. ಹೀಗೆ ಮಾಡುವಾತನಿಗೆ ಬರುವ ಪುಣ್ಯಫಲ ವನ್ನು ಕೇಳು.

೩೨. ಅಪ್ಸರಸ್ತ್ರೀಯರು ಕೀರ್ತಿಯನ್ನು ಗಾನಮಾಡುತ್ತಿರಲು ದಿವ್ಯವಿಮಾನ ವನ್ನೇರಿ, ಬಲದಲ್ಲಿ ಈಶ್ವರನಿಗೆ ಸಮಾನನೆನಿಸಿ, ಮಹಾಪ್ರಳಯಕಾಲದವರೆಗೂ ಅವನು ಸುಖವಾಗಿರುವನು.

೩೩-೩೪. ಶುಕ್ಲತೀರ್ಥದಲ್ಲಿ ಸುವರ್ಣವನ್ನು ದಾನವಾಗಿ ಕೊಟ್ಟು ಪರಮೇಶ್ವ ರನನ್ನೂ ಷಣ್ಮುಖನನ್ನೂ ತುಪ್ಪದಿಂದ ಅಭಿಷೇಕಮಾಡಿ ಪೂಜಿಸುವ ಸ್ತ್ರೀಯು ಹದಿನಾಲ್ಕು ಜನ ಇಂದ್ರರ ಆಧಿಪತ್ಯಕಾಲದವರೆಗೂ ಶಿವಲೋಕದಲ್ಲಿ ಸಂತೋಷ ದಿಂದಿರುವಳು.

**ಪೌರ್ಣಮಾಸ್ಯಾಂ ಚತುರ್ದಶ್ಯಾಂ ಸಂಕ್ರಾಂತೌ ವಿಷುವೇ ತಥಾ ।**
**ಸ್ನಾತ್ವಾ ತು ಸೋಪವಾಸಃ ಸನ್ವಿಜಿತಾತ್ಮಾ ಸಮಾಹಿತಃ ॥೩೫॥**

**ದಾನಂ ದದ್ಯಾದ್ಯಥಾಶಕ್ತ್ಯಾ ಪ್ರೀಯೇತಾಂ ಹರಿಶಂಕರೌ ।**
**ಏವಂ ತೀರ್ಥಪ್ರಭಾವೇಣ ಸರ್ವಂ ಭವತಿ ಚಾಕ್ಷಯಂ । ॥೩೬॥**

**ಅನಾಥಂ ದುರ್ಗತಂ ವಿಪ್ರಂ ನಾಥವಂತಮಥಾಪಿ ವಾ ।**
**ಉದ್ವಾಹಯತಿ ಯಸ್ತೀರ್ಥೇ ತಸ್ಯ ಪುಣ್ಯಫಲಂ ಶೃಣು ॥೩೭॥**

**ಯಾವತ್ತದ್ರೋಮಸಂಖ್ಯಾ ಚ ತತ್ಪ್ರಸೂತಿಕುಲೇಷು ಚ ।**
**ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೩೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ**
**ದ್ವಿನವತ್ಯಧಿಕಶತತಮೋಽಧ್ಯಾಯಃ**

---

೩೫-೩೬. ಹುಣ್ಣಿಮೆ, ಚತುರ್ದಶಿ, ಸಂಕ್ರಮಣ, ಮತ್ತು ವಿಷುವತ್ಪುಣ್ಯ ಕಾಲ ಈ ದಿನಗಳಲ್ಲಿ ಸ್ನಾನಮಾಡಿ ಉಪವಾಸವಿದ್ದು, ಜಿತೇಂದ್ರಿಯನೂ ಏಕಾಗ್ರ ಚಿತ್ತನೂ ಆಗಿ ತನ್ನ ಶಕ್ತ್ಯನುಸಾರವಾಗಿ ಏನಾದರೂ ದಾನಮಾಡಿದರೆ ವಿಷ್ಣುವೂ ಈಶ್ವರನೂ ತೃಪ್ತರಾಗುವರು. ಈ ಶುಕ್ಲತೀರ್ಥದ ಪ್ರಭಾವದಿಂದ ಎಲ್ಲವೂ ಅಕ್ಷಯ ವಾಗುವುದು.

೩೭-೩೮. ದಿಕ್ಕಿರಲಿ, ದಿಕ್ಕಿಲ್ಲದಿರಲಿ ಬಡವನಾದ ಬ್ರಾಹ್ಮಣನಿಗೆ ಶುಕ್ಲತೀರ್ಥ ದಲ್ಲಿ ಯಾವಾತನು ಮದುವೆಯನ್ನು ಮಾಡಿಸುತ್ತಾನೋ ಅದರ ಪುಣ್ಯಫಲವನ್ನು ಕೇಳು. ಅವನ ಮತ್ತು ಅವನ ವಂಶದಲ್ಲಿ ಹುಟ್ಟಿದವರ ಶರೀರದ ಕೂದಲುಗಳ ಸಂಖ್ಯೆಯೆಷ್ಟೋ ಅಷ್ಟುಸಾವಿರ ವರ್ಷಗಳಕಾಲ ಅವನು ಶಿವಲೋಕದಲ್ಲಿ ಗೌರವಿಸಲ್ಪಡುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಶುಕ್ಲತೀರ್ಥದ ಮಹಿಮೆಯನ್ನು ವರ್ಣಿಸಿದೆ.

ಶುಕ್ಲತೀರ್ಥವು ನರ್ಮದಾನದಿಯಲ್ಲಿರುವುದು. ವೃತ್ತಾಕಾರವಾಗಿ ಸುತ್ತಲೂ ಒಂದು ಯೋಜನದವರೆಗೆ ಇದು ವ್ಯಾಪಿಸಿದೆ. ತೀರ್ಥಗಳಲ್ಲೆಲ್ಲಾ ಇದು ಅತ್ಯಂತ ಶ್ರೇಷ್ಠವಾದುದು. ಪರಮೇಶ್ವರನು ಪಾರ್ವತಿಯೊಡನೆಯೂ ಪ್ರಮಥಗಣಗಳೊಡನೆಯೂ ಕೂಡಿ ಇಲ್ಲಿ ವಾಸಿಸುವನು. ಅಗಸನು ಬಟ್ಟೆಗಳನ್ನು ಶುಭ್ರವಾಗಿ ಮಾಡುವಂತೆ ಈ ತೀರ್ಥವು ಸಕಲವಿಧವಾದ ಪಾಪಗಳನ್ನೂ ಕಳೆದು ಯಾತ್ರಿಕನನ್ನು ಪರಿಶುದ್ಧವಾಗಿ ಮಾಡುವುದು. ಆದರಿಂದಲೇ ಇದಕ್ಕೆ ಶುಕ್ಲತೀರ್ಥವೆಂದು ಹೆಸರು ಬಂತು. ಇಲ್ಲಿ ಯಾವ ಧರ್ಮಕಾರ್ಯವನ್ನು ಮಾಡಲಿ ಅದು ಅನಂತಫಲವನ್ನು ಕೊಡುವುದು. ಸ್ನಾನ, ದೇವಾರ್ಚನ ಮುಂತಾದುವೆಲ್ಲಕ್ಕೂ ಈ ತೀರ್ಥವು ಬಹು ಪ್ರಶಸ್ತವಾದುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರ ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು



## ಅಥ ತ್ರಿನವತ್ಯಧಿಕಶತತಮೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತತಸ್ತ್ವನರಕಂ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ನರಕಂ ಚ ನ ಪಶ್ಯತಿ ॥ ೧ ॥

ತಸ್ಯ ತೀರ್ಥಸ್ಯ ಮಾಹಾತ್ಮ್ಯಂ ಶೃಣು ತ್ವಂ ಪಾಂಡುನಂದನ ।
ತಸ್ಮಿಂಸ್ತೀರ್ಥೇ ತು ರಾಜೇಂದ್ರ ಯಸ್ಯಾಸ್ಥೀನಿ ವಿನಿಕ್ಷಿಪೇತ್ ॥ ೨ ॥

ವಿಲಯಂ ಯಾಂತಿ ಪಾಪಾನಿ ರೂಪವಾಞ್ಜಾಯತೇ ನರಃ ।
ಗೋತೀರ್ಥಂ ತು ತತೋ ಗತ್ವಾ ಸರ್ವಪಾಪಾತ್ಪ್ರಮುಚ್ಯತೇ ॥ ೩ ॥

ತತೋ ಗಚ್ಛೇತ್ತು ರಾಜೇಂದ್ರ ಕಪಿಲಾತೀರ್ಥಮುತ್ತಮಂ ।
ತತ್ರ ಗತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ ೪ ॥

---

೧. ಮಾರ್ಕಂಡೇಯನು ಹೇಳಿದನು.—ತರುವಾಯ ಅನರಕವೆಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಮನುಷ್ಯನಿಗೆ ನರಕದರ್ಶನವೇ ಆಗದು.

೨. ಓ ಧರ್ಮರಾಜಾ, ಆ ತೀರ್ಥದ ಪ್ರಭಾವವನ್ನು ಕೇಳು. ಯಾರ ಮೂಳೆಗಳನ್ನು ಅದರಲ್ಲಿ ಹಾಕುತ್ತಾರೆಯೋ ಆತನ ಪಾಪಗಳು ನಾಶವಾಗುವುವು. ಅವನು ರೂಪವಂತನಾಗಿ ಮರಳಿ ಹುಟ್ಟುತ್ತಾನೆ.

೩-೪. ಅಲ್ಲಿಂದ ಮುಂದೆ ಗೋತೀರ್ಥಕ್ಕೆ ಹೋದರೆ ಪಾತಕಗಳೆಲ್ಲವೂ ದೂರವಾಗುವುವು. ಎಲೈ ರಾಜೋತ್ತಮಾ, ಬಳಿಕ ಕಪಿಲಾ ತೀರ್ಥವನ್ನೈದುವ ಮನುಷ್ಯನಿಗೆ ಸಹಸ್ರಗೋದಾನಗಳ ಫಲ ಲಭಿಸುವುದು.

ಜ್ಯೇಷ್ಠಮಾಸೇ ತು ಸಂಪ್ರಾಪ್ತೇ ಚತುರ್ದಶ್ಯಾಂ ವಿಶೇಷತಃ ।
ತತ್ರೋಪೋಷ್ಯ ನರೋ ಭಕ್ತ್ಯಾ ಕಪಿಲಾಂ ಯಃ ಪ್ರಯಚ್ಛತಿ ॥ ೫ ॥

ಘೃತೇನ ದೀಪಂ ಪ್ರಜ್ವಾಲ್ಯ ಘೃತೇನ ಸ್ನಾಪಯೇಚ್ಛಿವಂ ।
ಸಘೃತಂ ಶ್ರೀಫಲಂ ಜಗ್ಧ್ವಾ ಕೃತ್ವಾ ಚಾಂತೇ ಪ್ರದಕ್ಷಿಣಂ ॥ ೬ ॥

ಘಂಟಾಭರಣಸಂಯುಕ್ತಾಂ ಕಪಿಲಾಂ ಯಃ ಪ್ರಯಚ್ಛತಿ ।
ಶಿವತುಲ್ಯಬಲೋ ಭೂತ್ವಾ ನೈವಾಸೌ ಜಾಯತೇ ಪುನಃ ॥ ೭ ॥

ಅಂಗಾರಕದಿನೇ ಪ್ರಾಪ್ತೇ ಚತುರ್ಥ್ಯಾಂ ತು ವಿಶೇಷತಃ ।
ಪೂಜಯೇತ್ತು ಶಿವಂ ಭಕ್ತ್ಯಾ ಬ್ರಾಹ್ಮಣೇಭ್ಯಶ್ಚ ಭೋಜನಂ ॥ ೮ ॥

ಅಂಗಾರಕನವಮ್ಯಾಂ ತು ಅಮಾಯಾಂ ಚ ವಿಶೇಷತಃ ।
ಸ್ನಾಪಯೇತ್ತತ್ರ ಯತ್ನೇನ ರೂಪವಾನ್ ಸುಭಗೋ ಭವೇತ್ ॥ ೯ ॥

---

೫-೭. ಜ್ಯೇಷ್ಠಮಾಸದ ಚತುರ್ದಶಿಯ ದಿನ ಆ ಕ್ಷೇತ್ರದಲ್ಲಿ ಭಕ್ತಿಯಿಂದ ಉಪವಾಸಮಾಡಿ, ತುಪ್ಪದ ದೀಪವನ್ನು ಹಚ್ಚಿ, ತುಪ್ಪದಿಂದ ಪರಮೇಶ್ವರನಿಗೆ ಅಭಿಷೇಕ ಮಾಡಬೇಕು. ತುಪ್ಪದೊಡನೆ ಬಿಲ್ವಫಲವನ್ನು ತಿಂದು, ಅದನ್ನೇ ದಾನವಾಗಿ ಕೊಟ್ಟು ಪ್ರದಕ್ಷಿಣಮಾಡಿ, ಗಂಟೆಗಳನ್ನೂ ಒಡವೆಗಳನ್ನೂ ಹಾಕಿದ ಕಪಿಲೆಯನ್ನು ಎಂದರೆ ಗೋರೋಜನ ಬಣ್ಣದ ಹಸುವನ್ನು ದಾನಮಾಡಬೇಕು. ಇಂತಹವನು ಬಲದಲ್ಲಿ ಈಶ್ವರನಿಗೆ ಸಮಾನನಾಗುತ್ತಾನೆ. ಮತ್ತೆ ಅವನು ಈ ಲೋಕದಲ್ಲಿ ಹುಟ್ಟುವುದಿಲ್ಲ.

೮. ಮಂಗಳವಾರದ ಚತುರ್ಥಿಯಲ್ಲಿ ಪರಮೇಶ್ವರನನ್ನು ವಿಶೇಷ ಭಕ್ತಿಯಿಂದ ಪೂಜಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು.

೯. ಮಂಗಳವಾರದ ನವಮಿಯಲ್ಲೂ ಮಹಾದೇವನಿಗೆ ವಿಶೇಷರೀತಿಯಿಂದ ಅಭಿಷೇಕ ಮಾಡಿಸಬೇಕು. ಆದರಿಂದ ರೂಪವಂತನೂ ಅದೃಷ್ಟವಂತನೂ ಆಗುವನು.

ಘೃತೇನ ಸ್ನಾಪಯೇಲ್ಲಿಂಗಂ ಪೂಜಯೇದ್ಭಕ್ತಿತೋ ದ್ವಿಜಾನ್ ।
ಪುಷ್ಕರೇಣ ವಿಮಾನೇನ ಸಹಸ್ರೈಃ ಪರಿವಾರಿತಃ ॥೧೦॥

ಶೈವಂ ಪದಮವಾಪ್ನೋತಿ ಯತ್ರ ಚಾಭಿಮತಂ ಭವೇತ್ ।
ಅಕ್ಷಯಂ ಮೋದತೇ ಕಾಲಂ ಯಥಾ ರುದ್ರಸ್ತಥೈವ ಸಃ ॥೧೧॥

ಯದಾ ತು ಕರ್ಮಸಂಯೋಗಾನ್ಮರ್ತ್ಯಲೋಕಮುಪಾಗತಃ ।
ರಾಜಾ ಭವತಿ ಧರ್ಮಿಷ್ಠೋ ರೂಪವಾನ್ ಜಾಯತೇ ಕುಲೇ ॥೧೨॥

ತತೋ ಗಚ್ಛೇಚ್ಚ ರಾಜೇಂದ್ರ ಋಷಿತೀರ್ಥಮನುತ್ತಮಂ ।
ತೃಣಬಿಂದುರ್ನಾಮ ಋಷಿಃ ಶಾಪದಗ್ಧೋ ವ್ಯವಸ್ಥಿತಃ ॥೧೩॥

ತತ್ತೀರ್ಥಸ್ಯ ಪ್ರಭಾವೇಣ ಶಾಪಮುಕ್ತೋಽಭವದ್ದ್ವಿಜಃ ।
ತತೋ ಗಚ್ಛೇತ್ತು ರಾಜೇಂದ್ರ ಗಂಗೇಶ್ವರಮನುತ್ತಮಂ ॥೧೪॥

---

೧೦-೧೧. ಈಶ್ವರಲಿಂಗಕ್ಕೆ ತುಪ್ಪದಿಂದ ಅಭಿಷೇಕಮಾಡಿ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸಬೇಕು. ಅವನು ಸಾವಿರಾರು ಪರಿಜನಗಳೊಡಗೂಡಿ ಪುಷ್ಕರ ವಿಮಾನದಲ್ಲಿ ಕುಳಿತು ಶಿವಸಾನ್ನಿಧ್ಯವನ್ನು ಹೊಂದುವನು. ತನಗೆ ಇಷ್ಟಬಂದ ಕಡೆ ಅಪರಿಮಿತವಾದ ಕಾಲದವರೆಗೆ ಈಶ್ವರನಂತೆಯೇ ಆನಂದದಿಂದಿರುವನು.

೧೨. ಕರ್ಮವಶದಿಂದ ಭೂಲೋಕಕ್ಕೆ ಬಂದಾಗ ಆತನು ಉನ್ನತವಾದ ವಂಶದಲ್ಲಿ ರೂಪವಂತನೂ ಧರ್ಮಿಷ್ಠನೂ ಆದ ರಾಜನಾಗಿ ಜನಿಸುವನು.

೧೩. ಎಲೈ ಯುಧಿಷ್ಠಿರನೇ, ಅಲ್ಲಿಂದ ಅತಿ ಶ್ರೇಷ್ಠವಾದ ಋಷಿತೀರ್ಥಕ್ಕೆ ಹೋಗಬೇಕು. ಶಾಪದಗ್ಧನಾಗಿದ್ದ ತೃಣಬಿಂದುವೆಂಬ ಮುನಿಯು ಆ ತೀರ್ಥದ ಮಹಿಮೆಯಿಂದ ಶಾಪವನ್ನು ಕಳೆದುಕೊಂಡು ದ್ವಿಜೋತ್ತಮನಾದನು.

೧೪-೧೫. ಓ ಧರ್ಮರಾಜಾ, ಆ ಬಳಿಕ ಗಂಗೇಶ್ವರವೆಂಬ ಉತ್ತಮವಾದ ತೀರ್ಥವು ಸಿಕ್ಕುವುದು. ಶ್ರಾವಣಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನ ಅಲ್ಲಿ

ಶ್ರಾವಣೇ ಮಾಸಿ ಸಂಪ್ರಾಪ್ತೇ ಕೃಷ್ಣಪಕ್ಷೇ ಚತುರ್ದಶೀ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥೧೫॥

ಪಿತೄಣಾಂ ತರ್ಪಣಂ ಕೃತ್ವಾ ಮುಚ್ಯತೇ ಚ ಋಣತ್ರಯಾತ್ ।
ಗಂಗೇಶ್ವರಸಮೀಪೇ ತು ಗಂಗಾವನಮುತ್ತಮಂ ॥೧೬॥

ಅಕಾಮೋ ವಾ ಸಕಾಮೋ ವಾ ತತ್ರ ಸ್ನಾತ್ವಾ ತು ಮಾನವಃ ।
ಆಜನ್ಮಜನಿತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೧೭॥

ತತ್ರ ತೀರ್ಥೇ ನರಃ ಸ್ನಾತ್ವಾ ವ್ರಜೇದ್ವೈ ಯತ್ರ ಶಂಕರಃ ।
ಸರ್ವದಾ ಪರ್ವದಿವಸೇ ಸ್ನಾನಂ ತತ್ರ ಸಮಾಚರೇತ್ ॥೧೮॥

---

ಸ್ನಾನಮಾಡಿದ ಮಾತ್ರಕ್ಕೆ ಮನುಷ್ಯನು ರುದ್ರಲೋಕವನ್ನು ಸೇರಿ ಮನ್ನಣೆಯನ್ನು ಪಡೆಯುವನು.

೧೬. ಆ ತೀರ್ಥದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ದೇವಋಣ, ಋಷಿಋಣ, ಪಿತೃಋಣಗಳೆಂಬ ಮೂರು ಋಣಗಳಿಂದಲೂ* ಬಿಡುಗಡೆಹೊಂದುವನು. ಗಂಗೇಶ್ವರದ ಬಳಿಯಲ್ಲೇ ಗಂಗಾವದನವೆಂಬ ಉತ್ತಮ ತೀರ್ಥವುಂಟು.

೧೭. ಫಲಾಪೇಕ್ಷೆಯಿಲ್ಲದೆಯೋ ಇದ್ದೋ ಅಲ್ಲಿ ಸ್ನಾನಮಾಡುವ ಮನುಷ್ಯನು ಹುಟ್ಟಿದಂದಿನಿಂದ ತಾನು ಮಾಡಿದ ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುವನು ; ಸಂದೇಹವಿಲ್ಲ.

೧೮. ಆ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಶಂಕರನ ಸಾನ್ನಿಧ್ಯವನ್ನೈದುವನು. ಅಷ್ಟಮಿ ಚತುರ್ದಶಿ, ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಮಣ ಇಂತಹ ಪರ್ವದಿನಗಳಲ್ಲಿ ಅಲ್ಲಿ ತಪ್ಪದೆ ಸ್ನಾನಮಾಡಬೇಕು.

---

* ಪ್ರತಿಯೊಬ್ಬ ದ್ವಿಜನಿಗೂ ದೇವಋಣ, ಋಷಿಋಣ ಮತ್ತು ಪಿತೃಋಣಗಳೆಂಬ ಮೂರು ಋಣಗಳುಂಟು. ದೇವತಾರ್ಚನ, ನಿತ್ಯಕರ್ಮಾನುಷ್ಠಾನ, ದಾನ, ಪರೋಪಕಾರ ಮುಂತಾದುವುಗಳಿಂದ ಮೊದಲನೆಯ ಋಣವೂ ವೇದಶಾಸ್ತ್ರಗಳ ಅಧ್ಯಯನದಿಂದ ಎರಡನೆಯದೂ, ಗೃಹಸ್ಥಾಶ್ರಮಿಯಾಗಿ ತನ್ನ ವಂಶವನ್ನು ಅಭಿವೃದ್ಧಿಗೆ ತರುವುದರಿಂದ ಕೊನೆಯದೂ ಪರಿಹಾರವಾಗುತ್ತವೆಂದು ಶಾಸ್ತ್ರಗಳಲ್ಲಿ ಹೇಳಿದೆ.

ಪಿತೄಣಾಂ ತರ್ಪಣಂ ಕೃತ್ವಾ ಹ್ಯಶ್ವಮೇಧಫಲಂ ಲಭೇತ್ ।
ಪ್ರಯಾಗೇ ಯತ್ಫಲಂ ದೃಷ್ಟಂ ಶಂಕರೇಣ ಮಹಾತ್ಮನಾ ॥೧೯॥

ತದೇವ ನಿಖಿಲಂ ದೃಷ್ಟಂ ಗಂಗಾವದನಸಂಗಮೇ ।
ತಸ್ಯೈವ ಪಶ್ಚಿಮೇ ಸ್ಥಾನೇ ಸಮೀಪೇ ನಾತಿದೂರತಃ ॥೨೦॥

ದಶಾಶ್ವಮೇಧಜನನಂ ತ್ರಿಷು ಲೋಕೇಷು ವಿಶ್ರುತಂ ।
ಉಪೋಷ್ಯ ರಜನೀಮೇಕಾಂ ಮಾಸಿ ಭಾದ್ರಪದೇ ತಥಾ ॥೨೧॥

ಅಮಾಯಾಂ ಚ ನರಃ ಸ್ನಾತ್ವಾ ವ್ರಜತೇ ಯತ್ರ ಶಂಕರಃ ।
ಸರ್ವದಾ ಪರ್ವದಿವಸೇ ಸ್ನಾನಂ ತತ್ರ ಸಮಾಚರೇತ್ ॥೨೨॥

ಪಿತೄಣಾಂ ತರ್ಪಣಂ ಕೃತ್ವಾ ಚಾಶ್ವಮೇಧಫಲಂ ಲಭೇತ್ ।
ದಶಾಶ್ವಮೇಧಾತ್ಪಶ್ಚಿಮತೋ ಭೃಗುರ್ಬ್ರಾಹ್ಮಣಸತ್ತಮಃ ॥೨೩॥

---

೧೯. ಆ ತೀರ್ಥದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಅಶ್ವಮೇಧದ ಫಲವು ಬರುತ್ತದೆ. ಪ್ರಯಾಗಕ್ಷೇತ್ರದಲ್ಲಿ ಯಾವ ಫಲವುಂಟೆಂದು ಮಹಾತ್ಮನಾದ ಶಂಕರನು ಹೇಳಿದ್ದಾನೋ ಅದೆಲ್ಲ ಗಂಗಾವದನ ಸಂಗಮದಲ್ಲೂ ಲಭ್ಯವಾಗುತ್ತದೆ.

೨೦-೨೨. ಗಂಗಾವದನ ಸಂಗಮದ ಪಶ್ಚಿಮಕ್ಕೆ ಹತ್ತಿರದಲ್ಲೇ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ದಶಾಶ್ವಮೇಧಜನನವೆಂಬ ಕ್ಷೇತ್ರವುಂಟು. ಅಲ್ಲಿ ಒಂದು ರಾತ್ರಿ ಉಪವಾಸವಿದ್ದು ಭಾದ್ರಪದಮಾಸದ ಅಮಾವಾಸ್ಯೆಯ ದಿನ ಸ್ನಾನಮಾಡುವ ಮನುಷ್ಯನು ಈಶ್ವರನಿರುವಲ್ಲಿಗೆ ಹೋಗುವನು. ಪರ್ವದಿನದಲ್ಲಿ ಯಾವಾಗಲೂ ಅಲ್ಲಿ ಸ್ನಾನಮಾಡಬೇಕು.

೨೩. ಅಲ್ಲಿ ಪಿತೃಗಳಿಗೆ ತರ್ಪಣಕೊಟ್ಟರೆ ಅಶ್ವಮೇಧಯಾಗ ಮಾಡಿದಷ್ಟು ಫಲ ಬರುವುದು. ದಶಾಶ್ವಮೇಧಕ್ಷೇತ್ರಕ್ಕೆ ಪಶ್ಚಿಮದಲ್ಲಿ ಬ್ರಾಹ್ಮಣೋತ್ತಮನಾದ ಭೃಗು ದೇವಮಾನದ ಸಾವಿರ ವರ್ಷಗಳ ಕಾಲ ಈಶ್ವರನನ್ನು ಧ್ಯಾನಿಸಿದನು.

ದಿವ್ಯಂ ವರ್ಷಸಹಸ್ರಂ ತುಂ ಈಶ್ವರಂ ಪರ್ಯುಪಾಸತ ।
ವಲ್ಮೀಕವೇಷ್ಟಿತಶ್ಚಾಸೌ ಪಕ್ಷಿಣಾಂ ಚ ನಿಕೇತನಃ ॥೨೪॥

ಆಶ್ಚರ್ಯಂ ಸುಮಹಜ್ಜಾತಮುಮಾಯಾಃ ಶಂಕರಸ್ಯ ಚ ।
ಗೌರೀ ಪಪ್ರಚ್ಛ ದೇವೇಶಂ ಕೋಽಯಮೇವಂ ತು ಸಂಸ್ಥಿತಃ ।
ದೇವೋ ವಾ ದಾನವೋ ವಾಽಥ ಕಥಯಸ್ವ ಮಹೇಶ್ವರ ॥೨೫॥

ಭೃಗುರ್ನಾಮ ಋಷಿಶ್ರೇಷ್ಠ ಋಷೀಣಾಂ ಪ್ರವರೋ ಮುನಿಃ ।
ಮಾಂ ಧ್ಯಾಯತೇ ಸಮಾಧಿಸ್ಥೋ ವರಂ ಪ್ರಾರ್ಥಯತೇ ಪ್ರಿಯೇ ॥೨೬॥

ತತಃ ಪ್ರಹಸಿತಾ ದೇವೀ ಈಶ್ವರಂ ಪ್ರತ್ಯಭಾಷತ ।
ಧೂಮವತ್ತ್ವಚ್ಛಿಖಾ ಜಾತಾ ತತೋಽದ್ಯಾಪಿ ನ ತುಷ್ಯಸೇ
ದುರಾರಾಧ್ಯೋಽಸಿ ತೇನ ತ್ವಂ ನಾತ್ರ ಕಾರ್ಯಾ ವಿಚಾರಣಾ ॥೨೭॥

॥ ಮಹೇಶ್ವರ ಉವಾಚ ॥

ನ ಜಾನಾಸಿ ಮಹಾದೇವಿ ಹ್ಯಯಂ ಕ್ರೋಧೇನ ವೇಷ್ಟಿತಃ ।
ದರ್ಶಯಾಮಿ ಯಥಾತಥ್ಯಂ ಪ್ರತ್ಯಯಂ ತೇ ಕರೋಮ್ಯಹಂ ॥೨೮॥

---

೨೪-೨೫. ಅವನ ಸುತ್ತಲೂ ಹುತ್ತವು ಬೆಳೆಯಿತು. ಮೈಮೇಲೆ ಪಕ್ಷಿಗಳು ಗೂಡುಕಟ್ಟಿ ವಾಸಮಾಡಿದುವು. ಪಾರ್ವತೀಪರಮೇಶ್ವರರಿಗೆ ಇದರಿಂದ ಬಹಳ ಆಶ್ಚರ್ಯವಾಯಿತು. ದೇವಿಯು ಮಹಾದೇವನನ್ನು ಕೇಳಿದಳು. "ಇವನಾರು? ನಿಶ್ಚಲನಾಗಿ ಹೀಗೆ ನಿಂತಿದ್ದಾನೆ! ದೇವನೋ ದಾನವನೋ? ಮಹೇಶ್ವರಾ, ಹೇಳು.

೨೬. ಮಹೇಶ್ವರನು ಹೇಳಿದನು.—ಎಲೌ ಪ್ರಿಯೇ, ಈತನು ಋಷಿಶ್ರೇಷ್ಠನಾದ ಭೃಗುಮಹಾಮುನಿ. ಏಕಾಗ್ರಚಿತ್ತನಾಗಿ ನನ್ನನ್ನು ಧ್ಯಾನಿಸುತ್ತ ವರವನ್ನು ಬೇಡುತ್ತಾನೆ.

೨೭. ಬಳಿಕ ಪಾರ್ವತಿ ನಗುತ್ತ ಈಶ್ವರನಿಗೆ ಉತ್ತರವಿತ್ತಳು. "ಅವನ ತಪೋಜ್ವಾಲೆ ಹೊಗೆಯಂತೆ ಮೇಲಕ್ಕೆ ಏಳುತ್ತಿದೆ. ಇನ್ನೂ ನಿನಗೆ ತೃಪ್ತಿಯಾಗಲಿಲ್ಲವಲ್ಲಾ! ದೇವಾ, ನಿನ್ನನ್ನು ಮೆಚ್ಚಿಸುವುದು ಬಹುಕಷ್ಟ. ಇದರಲ್ಲಿ ವಿಚಾರವನ್ನೇ ಮಾಡಬೇಕಾಗಿಲ್ಲ."

೨೮. ಮಹೇಶ್ವರನು ಹೇಳಿದನು.—ಓ ಮಹಾದೇವೀ, ನಿನಗೆ ತಿಳಿಯದು. ಅವನಿಗೆ ಬಹು ಕೋಪ ಹತ್ತಿದೆ. ವಾಸ್ತವಾಂಶವನ್ನು ತೋರಿಸಿ ಕೊಡುತ್ತೇನೆ. ನಿನಗೆ ನಂಬಿಕೆ ಹುಟ್ಟಿಸುವೆನು.

ತತಃ ಸ್ಮೃತೋಽಥ ದೇವೇನ ಧರ್ಮರೂಪೋ ವೃಷಸ್ತದಾ ।
ಸ್ಮರಣಾತ್ತಸ್ಯ ದೇವಸ್ಯ ವೃಷಃ ಶೀಘ್ರಮುಪಸ್ಥಿತಃ ।
ವದಂಸ್ತು ಮಾನುಷೀಂ ವಾಚಮಾದೇಶಂ ದೀಯತಾಂ ಪ್ರಭೋ ॥೨೯॥

॥ ಭಗವಾನುವಾಚ ॥

ವಲ್ಮೀಕಂ ತ್ವಂ ಖನಸ್ವೈನಂ ವಿಪ್ರಂ ಭೂಮೌ ನಿಪಾತಯ ।
ಯೋಗಸ್ಥಸ್ತು ತತೋ ಧ್ಯಾಯನ್ ಭೃಗುಸ್ತೇನ ನಿಪಾತಿತಃ ॥೩೦॥

ತತ್ಕ್ಷಣಾತ್ಕ್ರೋಧಸಂತಪ್ತೋ ಹಸ್ತಮುತ್ಕ್ಷಿಪ್ಯ ಸೋಽಶಪತ್ ।
ಏವಂ ಸಂಭಾಷಣಮಾಣಸ್ತು ಕುತ್ರ ಗಚ್ಛಸಿ ಭೋ ವೃಷ ।
ಅದ್ಯಾಹಂ ಸಂಪ್ರಕೋಪೇಣ ಪ್ರಲಯಂ ತ್ವಾಂ ನಯೇ ವೃಷ ॥೩೧॥

ಧರ್ಷಿತಸ್ತು ತದಾ ವಿಪ್ರಶ್ಚಾಂತರಿಕ್ಷಂ ಗತೋ ವೃಷಂ ।
ಆಕಾಶೇ ಪ್ರೇಕ್ಷತೇ ವಿಪ್ರ ಏತದದ್ಭುತಮುತ್ತಮಂ ॥೩೨॥

---

೨೯. ಬಳಿಕ ಪರಮೇಶ್ವರನು ಧರ್ಮರೂಪವಾದ ತನ್ನ ವೃಷಭವನ್ನು ಸ್ಮರಿಸಿಕೊಂಡನು. ತಡಮಾಡದೆ ಅದು ಮುಂದೆ ಬಂದು ನಿಂತಿತು. "ದೇವಾ, ಅಪ್ಪಣೆಯೇನು? ತಿಳಿಸು" ಎಂದು ಮನುಷ್ಯರ ಮಾತಿನಲ್ಲಿ ಹೇಳಿತು.

೩೦. ಪರಮೇಶ್ವರನು ಹೇಳಿದನು.—ಈ ಹುತ್ತವನ್ನು ಅಗೆದು ಅಲ್ಲಿರುವ ಬ್ರಾಹ್ಮಣನನ್ನು ನೆಲಕ್ಕೆ ಬೀಳಿಸು ಎಂದು ಹೇಳಲು ವೃಷಭನು ಯೋಗಾರೂಢನಾಗಿ ಧ್ಯಾನ ಮಗ್ನನಾಗಿದ್ದ ಭೃಗುವನ್ನು ಕೆಡವಿದನು.

೩೧. ಆ ಗಳಿಗೆಯಲ್ಲೇ ಮಹರ್ಷಿಗೆ ಕೋಪವು ಮಿತಿಮೀರಿತು. ಅವನು ಕೈಯೆತ್ತಿ ಶಾಪವಿತ್ತನು. "ಓ ವೃಷಭಾ, ಎಲ್ಲಿ ಹೋಗುವೆ? ನನ್ನ ಈ ಸಿಟ್ಟಿನಿಂದ ನಿನ್ನನ್ನು ನಾನು ಧ್ವಂಸಮಾಡುತ್ತೇನೆ" ಎಂದು ಹೇಳಿದನು.

೩೨. ಆಗ ವೃಷಭನು ಮೇಲೆ ಬಿದ್ದು ಪೀಡಿಸಲು, ಭೃಗು ಆಕಾಶಕ್ಕೆ ಏರಿಹೋದನು. ಅಲ್ಲಿಂದ ಅವನನ್ನು ನೋಡುತ್ತ ಮುಂದಣ ಆಶ್ಚರ್ಯವನ್ನು ಕಂಡನು.

ತತಃ ಪ್ರಹಸಿತೋ ರುದ್ರ ಋಷೇರಗ್ರೇ ವ್ಯವಸ್ಥಿತಃ ।
ತೃತೀಯಂ ಲೋಚನಂ ದೃಷ್ಟ್ವಾ ವೈಲಕ್ಷ್ಯಾತ್ಪತಿತೋ ಭುವಿ ।
ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ಪರಮೇಶ್ವರಂ ॥೩೩॥

ಪ್ರಣಿಪತ್ಯ ಭೂತನಾಥಂ
ಭವೋದ್ಭವಂ ತ್ವಾಮಹಂ ದಿವ್ಯರೂಪಂ ।
ಭವಾತೀತೋ ಭುವನಪತೇ ।
ಪ್ರಭೋ ತು ವಿಜ್ಞಾಪಯೇ ಕಿಂಚಿತ್ ॥೩೪॥

ತ್ವದ್ಗುಣನಿಕರಾನ್ ವಕ್ತುಂ
ಕಃ ಶಕ್ತೋ ಭವತಿ ಮಾನುಷೋ ನಾಮ ।
ವಾಸುಕಿರಪಿ ಹಿ ಕದಾಚಿತ್
ವದನಸಹಸ್ರಂ ಭವೇದ್ಯಸ್ಯ ॥೩೫॥

---

೩೩. ಋಷಿಯು ಈಶ್ವರನನ್ನು ನೋಡಿ ನಗಲು, ಅವನು ಇವನ ಮುಂದೆ ಬಂದು ನಿಂತನು. ಮಹಾದೇವನ ಮೂರನೆಯ ಕಣ್ಣನ್ನು ಕಂಡು ಭೃಗು ಬೆಪ್ಪಾಗಿ ನೆಲದ ಮೇಲೆ ಬಿದ್ದನು. ಬಳಿಕ ಸಾಷ್ಟಾಂಗ ದಂಡಪ್ರಣಾಮಮಾಡಿ ಮಹೇಶ್ವರನನ್ನು ಇಂತು ಸ್ತುತಿಸಿದನು.

೩೪. ಓ ಜಗದೀಶ್ವರಾ, ಪ್ರಭೂ, ನಿನ್ನ ದರ್ಶನದಿಂದಲೇ ನಾನು ಸಂಸಾರದಿಂದ ಪಾರಾದೆನು. ಸಕಲಪ್ರಾಣಿಗಳ ಒಡೆಯನೂ, ಸೃಷ್ಟಿಕಾರಣನೂ, ದಿವ್ಯರೂಪನೂ ಆದ ನಿನಗೆ ನಮಸ್ಕರಿಸಿ ಒಂದು ವಿಷಯವನ್ನು ಬಿನ್ನೈಸುವೆನು.

೩೫. ನಿನ್ನ ಗುಣರಾಶಿಗಳನ್ನು ವರ್ಣಿಸುವುದಕ್ಕೆ ಯಾವ ಮನುಷ್ಯನಿಗೆ ತಾನೆ ಸಾಧ್ಯ? ಸಾವಿರ ಮುಖಗಳುಳ್ಳ ವಾಸುಕಿಯ ಕೈಯಲ್ಲಿ ಒಂದು ವೇಳೆ ಆದೀತೋ ಏನೋ?

ಭಕ್ತ್ಯಾ ತಥಾಪಿ ಶಂಕರ
ಭುವನಪತೇ ತ್ವತ್ಸ್ತುತೌ ಮುಖರಃ ।
ವದತಃ ಕ್ಷಮಸ್ವ ಭಗವನ್
ಪ್ರಸೀದ ಮೇ ತವ ಚರಣಪತಿತಸ್ಯ ॥೩೬॥

ಸತ್ವಂ ರಜಸ್ತಮಸ್ತ್ವಂ
ಸ್ಥಿತ್ಯುತ್ಪತ್ತ್ಯೋರ್ವಿನಾಶನೇ ದೇವ ।
ತ್ವಾಂ ಮುಕ್ತ್ವಾ ಭುವನಪತೇ
ಭುವನೇಶ್ವರ ನೈವ ದೈವತಂ ಕಿಂಚಿತ್ ॥೩೭॥

ಯಮನಿಯಮಯಜ್ಞದಾನ
ವೇದಾಭ್ಯಾಸಾಶ್ಚ ಧಾರಣಾಯೋಗಃ ।
ತ್ವದ್ಭಕ್ತೇಃ ಸರ್ವಮಿದಂ
ನಾರ್ಹತಿ ಹಿ ಕಲಾಸಹಸ್ರಾಂಶಂ ॥೩೮॥

---

೩೬. ಓ ಶಂಕರಾ, ಜಗತ್ಪತೇ, ಆದರೂ ಭಕ್ತಿವಶನಾಗಿ ನಿನ್ನನ್ನು ಸ್ತುತಿಸಬೇಕೆಂದು ತವಕಪಡುತ್ತಿದ್ದೇನೆ. ಭಗವಂತಾ, ಮನಸ್ಸುಬಂದಂತೆ ಮಾತನಾಡುವ ನನ್ನನ್ನು ಕ್ಷಮಿಸು. ನಿನ್ನ ಪಾದದಡಿಗಳಲ್ಲಿ ಬಿದ್ದಿರುವ ನನಗೆ ಪ್ರಸನ್ನನಾಗು.

೩೭. ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳಿಂದ ಪೂರ್ಣರಾದ ಬ್ರಹ್ಮವಿಷ್ಣುಮಹೇಶ್ವರರೆಂಬ ತ್ರಿಮೂರ್ತಿಸ್ವರೂಪನು ನೀನೇ. ಜಗನ್ನಾಥಾ, ಲೋಕೇಶ್ವರಾ, ನಿನ್ನನ್ನು ಬಿಟ್ಟರೆ ಪ್ರಪಂಚದ ಸೃಷ್ಟಿಸ್ಥಿತಿ ಸಂಹಾರಗಳಿಗೆ ಅಧಿಪತಿಯಾದ ಬೇರೆ ದೇವರನ್ನು ನಾನು ಕಾಣೆನು.

೩೮. ಯಮ, ನಿಯಮ, ಯಜ್ಞ, ದಾನ, ವೇದಾಭ್ಯಾಸ, ಧಾರಣ, ಯೋಗ ಇವೆಲ್ಲ ಸೇರಿದರೂ, ನಿನ್ನ ಭಕ್ತಿಯ ಒಲ್ಲೊಂದು ಭಾಗದ ಸಹಸ್ರಾಂಶದಷ್ಟು ಕೂಡ ಬೆಲೆ ಬಾಳುವುದಿಲ್ಲ.

ಉಚ್ಛಿಷ್ಟರಸರಸಾಯನ
 ಖಡ್ಗಾಂಜನಪಾದುಕಾವಿವರಸಿದ್ಧಿರ್ವಾ ।
ಚಿಹ್ನಂ ಭವವ್ರತಾನಾಂ
 ದೃಶ್ಯತಿ ಚೇಹ ಜನ್ಮನಿ ಪ್ರಕಟಂ ॥೩೯॥

ಶಾಠ್ಯೇನ ನಮತಿ ಯದ್ಯಪಿ
 ದದಾಸಿ ತ್ವಂ ಭೂತಿಮಿಚ್ಛತೋ ದೇವ ।
ಭಕ್ತಿರ್ಭವಭೇದಕರೀ
 ಮೋಕ್ಷಾಯ ವಿನಿರ್ಮಿತಾ ನಾಥ ॥೪೦॥

ಪರದಾರಪರಸ್ವರತಂ
 ಪರಪರಿಭವದುಃಖಶೋಕಸಂತಪ್ತಂ ।
ಪರವದನವೀಕ್ಷಣಪರಂ
 ಪರಮೇಶ್ವರ ಮಾಂ ಪರಿತ್ರಾಹಿ ॥೪೧॥

---

೩೯. ಇಂದ್ರಿಯ ಸುಖಗಳು, ಧನಕನಕಾದಿ ಸುಖಸಾಧನಗಳು, ಪ್ರಪಂಚವನ್ನೇ ಗೆಲ್ಲಬೇಕೆಂಬ ದುರಾಸೆಯ ಚಿಹ್ನವಾದ ಕತ್ತಿ, ಅಲಂಕಾರಸೂಚಕವಾದ ಕಾಡಿಗೆ, ಪ್ರಭುತ್ವದ್ಯೋತಕವಾದ ಹಾವುಗೆ, ಪರರಾಷ್ಟ್ರಗಳ ದಿಗ್ವಿಜಯ ಇವೆಲ್ಲ ಸಂಸಾರದಲ್ಲೇ ಇದ್ದು ಬಾಳಬೇಕೆಂಬ ಆಸೆಯಿರುವವರಿಗೆ ಬೇಕು. ಇದು ಅವರ ಬಾಳಿನಲ್ಲಿ ಸ್ಪಷ್ಟವಾಗಿ ಕಾಣುತ್ತಿದೆ. ಆದರೆ ಯೋಗಿಗಳು ಇವುಗಳನ್ನು ತುಚ್ಛವೆಂದು ಕಡೆಗಣಿಸಿರುವರು.

೪೦. ದೇವಾ, ಅವಿನಯದಿಂದ ನಮಸ್ಕರಿಸಿದರೂ ಐಶ್ವರ್ಯವನ್ನು ಬಯಸುವವನಿಗೆ ನೀನು ಅದನ್ನು ಕೊಟ್ಟೇ ಕೊಡುವೆ. ನಾಥಾ, ಭಕ್ತಿಯು ಸಂಸಾರದಿಂದ ಪಾರುಮಾಡತಕ್ಕುದು. ಮೋಕ್ಷಸಾಧನೆಗಾಗಿ ಅದು ನಿರ್ಮಿತವಾಗಿರುವುದು.

೪೧. ಪರಮೇಶ್ವರಾ, ನಾನು ಪರಸ್ತ್ರೀಯರಲ್ಲೂ ಪರಸ್ವತ್ತಿನಲ್ಲೂ ಆಸಕ್ತನಾಗಿರುವೆನು. ಇತರರ ತಿರಸ್ಕಾರಕ್ಕೆ ಗುರಿಯಾಗಿ ದುಃಖದಿಂದ ಬೇಯುತ್ತಿದ್ದೇನೆ. ಕಂಡವರ ಮುಖವನ್ನು ನೋಡುವುದೇ ನನ್ನ ಕೆಲಸ. ಇಂತಹ ನನ್ನನ್ನು ರಕ್ಷಿಸು.

ಮಿಥ್ಯಾಭಿಮಾನದಗ್ಧಂ
  ಕ್ಷಣಭಂಗುರದೇಹವಿಲಸಿತಂ ಕ್ರೂರಂ ।
ಕುಪಥಾಭಿಮುಖಂ ಪತಿತಂ
  ತ್ವಂ ಮಾಂ ಪಾಪಾತ್ಪರಿತ್ರಾಹಿ ॥೪೨॥

ದೀನೇ ದ್ವಿಜಗಣಸಾರ್ಥೇ
  ಬಂಧುಜನೇ ನೈವ ದೂಷಿತಾ ಹ್ಯಾಶಾ ।
ತೃಷ್ಣಾ ತಥಾಪಿ ಶಂಕರ
  ಕಿಂ ಮೂಢಂ ಮಾಂ ವಿಡಂಬಯತಿ ॥೪೩॥

ತೃಷ್ಣಾಂ ಹರಸ್ವ ಶೀಘ್ರಂ
  ಲಕ್ಷ್ಮೀಂ ಪ್ರದತ್ಸ್ವ ಯಾವದಾಸಿನೀಂ ನಿತ್ಯಂ ।
ಛಿಂದಿ ಮಹಾಮೋಹಪಾಶಾ
  ಸುತ್ತಾರಯ ಮಾಂ ಮಹಾದೇವ ॥೪೪॥

---

೪೨. ವ್ಯರ್ಥವಾದ ಅಭಿಮಾನದಿಂದ ನಾನು ದಗ್ಧನಾಗಿದ್ದೇನೆ. ನಶ್ವರವಾದ ಈ ದೇಹವನ್ನು ನಂಬಿಕೊಂಡು ಮೆರೆಯುತ್ತಿದ್ದೇನೆ. ಕ್ರೂರಿಯೂ, ಕುಮಾರ್ಗ ಪ್ರವರ್ತಕನೂ, ಧರ್ಮಭ್ರಷ್ಟನೂ ಆಗಿದ್ದೇನೆ. ದೇವಾ, ಪಾಪಕ್ಕೆ ಸಿಲುಕದಂತೆ ನನ್ನನ್ನು ರಕ್ಷಿಸು.

೪೩. ದರಿದ್ರರಾದ ಬ್ರಾಹ್ಮಣರು ಆಸೆಪಟ್ಟರೆ ಅವರ ಬಂಧುವಾದ ನಾನೇ ಅವರನ್ನು ದೂಷಿಸುತ್ತಿದ್ದೆನು. ಆದರೂ, ಓ ಶಂಕರಾ, ಅದೇ ಆಶೆಯು ಮೂಢನಾದ ನನ್ನನ್ನೇಕೆ ನಗೆಗೇಡುಮಾಡುತ್ತಿದೆ ?

೪೪. ಓ ಮಹಾದೇವಾ, ಆಶೆಯನ್ನು ಬೇಗನೆ ತೊಲಗಿಸು. ಎಂದೆಂದಿಗೂ ಸ್ಥಿರವಾಗಿ ನಿಲ್ಲಬಲ್ಲ ಸಂಪತ್ತನ್ನು ಕರುಣಿಸು. ಬಲವಾದ ಮೋಹವೆಂಬ ಪಾಶಗಳನ್ನು ಕತ್ತರಿಸಿ ನನ್ನನ್ನು ಪಾರುಮಾಡು.

ಕರುಣಾಭ್ಯುದಯಂ ನಾಮ
 ಸ್ತೋತ್ರಮಿದಂ ಸರ್ವಸಿದ್ಧಿದಂ ದಿವ್ಯಂ ।
ಯಃ ಪಠತಿ ಭಕ್ತಿಯುಕ್ತ
 ಸ್ತಸ್ಯ ತುಷ್ಯೇದ್ಭೃಗೋರ್ಯಥಾ ಚ ಶಿವಃ ||೪೫||

|| ಈಶ್ವರ ಉವಾಚ ||

ಅಹಂ ತುಷ್ಟೋಽಸ್ಮಿ ತೇ ವತ್ಸ ಪ್ರಾರ್ಥಯಸ್ವೇಪ್ಸಿತಂ ವರಂ
ಉಮಯಾ ಸಹಿತೋ ದೇವೋ ವರಂ ತಸ್ಯ ಹ್ಯದಾಪಯತ್ ||೪೬||

|| ಭೃಗುರುವಾಚ ||

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ರುದ್ರವೇದೀ ಭವದೇವಮೇತತ್ಸಂಪಾದಯಸ್ವ ಮೇ ||೪೭||

|| ಈಶ್ವರ ಉವಾಚ ||

ಏವಂ ಭವತು ವಿಪ್ರೇಂದ್ರ ಕ್ರೋಧಸ್ತ್ವಾ ನ ಭವಿಷ್ಯತಿ ।
ನ ಪಿತಾಪುತ್ರಯೋಶ್ಚೈವ ತ್ವೈಕಮತ್ಯಂ ಭವಿಷ್ಯತಿ ||೪೮||

---

೪೫. ಸಕಲ ಸಿದ್ಧಿಗಳನ್ನೂ ಕೊಡುವ, ದಿವ್ಯವಾದ, ಕರುಣಾಭ್ಯುದಯವೆಂಬ ಈ ಸ್ತೋತ್ರವನ್ನು ಭಕ್ತಿಯಿಂದ ಪಾರಾಯಣಮಾಡುವಾತನಲ್ಲಿ ಪರಮೇಶ್ವರನು ಭೃಗುವಿನಲ್ಲಿ ತೋರಿದಂತೆಯೇ ಅನುಗ್ರವನ್ನು ತೋರಿಸುವನು.

೪೬. ಈಶ್ವರನು ಹೇಳಿದನು.—"ಮಗೂ, ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಬೇಡು" ಎಂದು ಹೇಳಿ ಪಾರ್ವತೀ ಸಹಿತನಾದ ಮಹಾದೇವನು ಅವನಿಗೆ ವರವನ್ನು ಕರುಣಿಸಿದನು.

೪೭. ಭೃಗುಮುನಿ ಹೇಳಿದನು.—ದೇವೇಶ್ವರಾ, ನೀನು ಪ್ರಸನ್ನನಾಗಿ ನನಗೆ ವರವನ್ನು ಕೊಡುವುದಾದರೆ ನಾನು ದೇವದೇವನಾದ ರುದ್ರನನ್ನು ಅರಿಯುವವನಾಗಬೇಕು. ನನಗೆ ಈ ಸಾಮರ್ಥ್ಯವನ್ನುಂಟುಮಾಡು.

೪೮. ಈಶ್ವರನು ಹೇಳಿದನು.—ಎಲೈ ಬ್ರಾಹ್ಮಣೋತ್ತಮಾ, ಹೀಗೆಯೇ ಆಗಲಿ. ನಿನಗೆ ಕೋಪವು ಹುಟ್ಟುವುದಿಲ್ಲ. ತಂದೆ ಮಕ್ಕಳಿಬ್ಬರಲ್ಲೂ ಏಕಾಭಿಪ್ರಾಯವು ಇರುವುದಿಲ್ಲ.

ತದಾ ಪ್ರಭೃತಿ ಬ್ರಹ್ಮಾದ್ಯಾಃ ಸರ್ವದೇವಾಃ ಸಕಿನ್ನರಾಃ ।
ಉಪಾಸತೇ ಭೃಗೋಸ್ತೀರ್ಥಂ ತುಷ್ಟೋ ಯತ್ರ ಮಹೇಶ್ವರಃ ॥೪೯॥

ದರ್ಶನಾತ್ತಸ್ಯ ತೀರ್ಥಸ್ಯ ಸದ್ಯಃ ಪಾಪಾತ್ಪ್ರಮುಚ್ಯತೇ ।
ಅವಶಾಃ ಸ್ವವಶಾ ವಾಪಿ ಮ್ರಿಯಂತೇ ಯತ್ರ ಜಂತವಃ ॥೫೦॥

ಗುಹ್ಯಾತಿಗುಹ್ಯಾ ಸುಗತಿಸ್ತೇಷಾಂ ನಿಸ್ಸಂಶಯಂ ಭವೇತ್ ।
ಏತತ್ಕ್ಷೇತ್ರಂ ಸುವಿಪುಲಂ ಸರ್ವಪಾಪಪ್ರಣಾಶನಂ ॥೫೧॥

ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ
ಉಪಾನಹೌ ಚ ಛತ್ರಂ ಚ ದೇಯಮನ್ನಂ ಚ ಕಾಂಚನಂ ॥೫೨॥

ಭೋಜನಂ ಚ ಯಥಾಶಕ್ತ್ಯಾ ಹ್ಯಕ್ಷಯಂ ಚ ತಥಾ ಭವೇತ್ ।
ಸೂರ್ಯೋಪರಾಗೇ ಯೋ ದದ್ಯಾದ್ದಾನಂ ಚೈವ ಯಥೇಚ್ಛಯಾ ॥೫೩॥

---

೪೯. ಅದು ಮೊದಲುಗೊಂಡು ಬ್ರಹ್ಮನೇ ಮೊದಲಾದ ಎಲ್ಲ ದೇವತೆಗಳೂ ಕಿನ್ನರರೂ ಪರಮೇಶ್ವರನು ಮೆಚ್ಚಿಕೆಯನ್ನು ತೋರಿದ ಭೃಗುತೀರ್ಥವನ್ನು ಉಪಾಸನ ಮಾಡುತ್ತಿರುವರು.

೫೦. ಆ ತೀರ್ಥದ ದರ್ಶನಮಾಡಿದಕೂಡಲೆ ಪಾಪದಿಂದ ಬಿಡುಗಡೆ ಹೊಂದುವನು. ಪ್ರಾಣಿಗಳು ಅಲ್ಲಿ ಉದ್ದೇಶವಿಲ್ಲದೆಯೋ ಇದ್ದೋ ಮೃತಪಟ್ಟರೆ ಅವುಗಳಿಗೆ ಅತ್ಯಂತಪವಿತ್ರವಾದ ಸದ್ಗತಿ ಲಭಿಸುವುದು.

೫೧. ಈ ಕ್ಷೇತ್ರವು ಬಹು ವಿಸ್ತಾರವಾದುದು. ಸಕಲ ಪಾಪಗಳನೂ ಕಳೆಯತಕ್ಕುದು. ಅಲ್ಲಿ ಸ್ನಾನಮಾಡಿದವರು ಸ್ವರ್ಗವನ್ನೇರುತ್ತಾರೆ. ಮೃತಪಟ್ಟವರು ಮತ್ತೆ ಜನ್ಮವೆತ್ತುವುದಿಲ್ಲ.

೫೨. ಈ ಕ್ಷೇತ್ರದಲ್ಲಿ ಪಾದರಕ್ಷೆ, ಕೊಡೆ, ಅನ್ನ, ಚಿನ್ನ ಇವುಗಳನ್ನು ದಾನ ಮಾಡಬೇಕು. ಶಕ್ತ್ಯನುಸಾರ ಭೋಜನವನ್ನೀಯಬೇಕು. ಇದರಿಂದ ಅಕ್ಷಯಫಲ ಲಭಿಸುವುದು.

೫೩. ಸೂರ್ಯಗ್ರಹಣ ಕಾಲದಲ್ಲಿ ತನ್ನ ಮನಸ್ಸಿಗೆ ಬಂದ ಎಲ್ಲ ದಾನಗಳನ್ನೂ ಕೊಡಬಹುದು. ಅವು ಅಕ್ಷಯ ಫಲವನ್ನು ಕೊಡುವುವು.

ದೀಯಮಾನಂ ತು ತದ್ದಾನಮಕ್ಷಯಂ ತಸ್ಯ ತದ್ಭವೇತ್ ।
ಚಂದ್ರಸೂರ್ಯೋಪರಾಗೇಷು ಯತ್ಫಲಂ ತ್ವಮರಕಂಟಕೇ ॥೫೪॥

ತದೇವ ನಿಖಿಲಂ ಪುಣ್ಯಂ ಭೃಗುತೀರ್ಥೇ ನ ಸಂಶಯಃ ।
ಕ್ಷರಂತಿ ಸರ್ವದಾನಾನಿ ಯಜ್ಞದಾನತಪಃಕ್ರಿಯಾಃ ॥೫೫॥

ನ ಕ್ಷರೇತ್ತು ತಪಸ್ತಪ್ತಂ ಭೃಗುತೀರ್ಥೇ ಯುಧಿಷ್ಠಿರ ।
ಯಸ್ಯ ವೈ ತಪಸೋಗ್ರೇಣ ತುಷ್ಟೇನೈವ ತು ಶಂಭುನಾ ॥೫೬॥

ಸಾನ್ನಿಧ್ಯಂ ತತ್ರ ಕಥಿತಂ ಭೃಗುತೀರ್ಥೇ ನರಾಧಿಪ ।
ಪ್ರಖ್ಯಾತಂ ತ್ರಿಷು ಲೋಕೇಷು ಯತ್ರ ತುಷ್ಟೋ ಮಹೇಶ್ವರಃ ॥೫೭॥

ಏವಂ ತು ವದತೋ ದೇವೀಂ ಭೃಗುತೀರ್ಥಮನುತ್ತಮಂ ।
ನ ಜಾನಂತಿ ನರಾ ಮೂಢಾ ವಿಷ್ಣುಮಾಯಾವಿಮೋಹಿತಾಃ ॥೫೮॥

---

೫೪. ಚಂದ್ರಸೂರ್ಯರ ಗ್ರಹಣವಾದಾಗ ಅಮರಕಂಟಕದಲ್ಲಿ ದಾನವನ್ನು ಮಾಡಿದರೆ ಬರುವ ಪುಣ್ಯಫಲವೆಲ್ಲ ಭೃಗುತೀರ್ಥದಲ್ಲಿಯೂ ಬರುತ್ತದೆ. ಸಂಶಯವಿಲ್ಲ.

೫೫. ಸಕಲ ದಾನಗಳೂ, ಯಜ್ಞ, ದಾನ, ತಪಸ್ಸು ಮುಂತಾದ ಕರ್ಮಗಳೂ ವ್ಯರ್ಥವಾದರೂ ಆಗಬಹುದು. ಆದರೆ, ಎಲೈ ಧರ್ಮರಾಜಾ, ಭೃಗುತೀರ್ಥದಲ್ಲಿ ಮಾಡಿದ ತಪಸ್ಸು ಮಾತ್ರ ನಿಷ್ಫಲವಾಗದು.

೫೬. ಎಲೈ ನರೇಂದ್ರಾ, ಭೃಗುಮಹರ್ಷಿಯ ಉಗ್ರತಪಸ್ಸಿನಿಂದ ತುಷ್ಟನಾದ ಪರಮೇಶ್ವರನು ಆ ತೀರ್ಥದಲ್ಲಿ ತನ್ನ ಸಾನ್ನಿಧ್ಯವಿರುವುದೆಂದು ತಾನೇ ಹೇಳುತ್ತಾನೆ.

೫೭-೫೮. ಮಹೇಶ್ವರನು ಸಂತುಷ್ಟನಾದ ಆ ತೀರ್ಥವು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿದೆ. ಶ್ರೇಷ್ಠವಾದ ಭೃಗುತೀರ್ಥದ ವಿಷಯದಲ್ಲಿ ಪಾರ್ವತಿಗೆ ಶಂಕರನು ಹೀಗೆ ಹೇಳಿದನು. ವಿಷ್ಣುವಿನ ಮಾಯೆಯಿಂದ ಮೋಹಿತರಾದ ಮೂಢಜನರು ಮಾತ್ರ ಅದರ ಮಹಿಮೆಯನ್ನು ತಿಳಿಯರು.

ನರ್ಮದಾಯಾಂ ಸ್ಥಿತಂ ದಿವ್ಯಂ ಭೃಗುತೀರ್ಥಂ ನರಾಧಿಪ ।
ಭೃಗುತೀರ್ಥಸ್ಯ ಮಾಹಾತ್ಮ್ಯಂ ಯಃ ಶೃಣೋತಿ ನರಃ ಕ್ವಚಿತ್ ॥೫೯॥
ವಿಮುಕ್ತಃ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ।
ತತೋ ಗಚ್ಛೇತ್ತು ರಾಜೇಂದ್ರ ಗೌತಮೇಶ್ವರಮುತ್ತಮಂ ॥೬೦॥
ತತ್ರ ಸ್ನಾತ್ವಾ ನರೋ ರಾಜನ್ನುಪವಾಸಪರಾಯಣಃ
ಕಾಂಚನೇನ ವಿಮಾನೇನ ಬ್ರಹ್ಮಲೋಕೇ ಮಹೀಯತೇ ॥೬೧॥
ಧೌತಪಾಪಂ ತತೋ ಗಚ್ಛೇತ್ ಕ್ಷೇತ್ರಂ ಯತ್ರ ವೃಷೇಣ ತು ।
ನರ್ಮದಾಯಾಂ ಕೃತಂ ರಾಜ್ಞ ಸರ್ವಪಾತಕನಾಶನಂ ॥೬೨॥
ತತ್ರ ತೀರ್ಥೇ ನರಃ ಸ್ನಾತ್ವಾ ಬ್ರಹ್ಮಹತ್ಯಾಂ ವಿಮುಂಚತಿ ।
ತಸ್ಮಿಂಸ್ತೀರ್ಥೇ ತು ರಾಜೇಂದ್ರ ಪ್ರಾಣತ್ಯಾಗಂ ಕರೋತಿ ಯಃ ॥೬೩॥
ಚತುರ್ಭುಜಸ್ತ್ರೀನೇತ್ರಶ್ಚ ಶಿವತುಲ್ಯಬಲೋ ಭವೇತ್ ।
ವಸೇತ್ಕಲ್ಪಾಯುತಂ ಸಾಗ್ರಂ ಶಿವತುಲ್ಯಪರಾಕ್ರಮಃ ॥೬೪॥

---

೫೯. ಎಲೈ ಧರ್ಮರಾಜಾ, ದಿವ್ಯವಾದ ಭೃಗುತೀರ್ಥವು ನರ್ಮದಾ ನದಿಯಲ್ಲಿದೆ. ಅದರ ಮಾಹಾತ್ಮ್ಯವನ್ನು ಮನುಷ್ಯನು ಎಂದಾದರೂ ಒಂದುಸಾರಿ ಕೇಳಿದರೆ ಸಾಕು. ಸಕಲ ಪಾಪಗಳಿಂದಲೂ ಮುಕ್ತನಾಗಿ ರುದ್ರಲೋಕವನ್ನೈದುವನು.

೬೦-೬೧. ಎಲೈ ರಾಜೇಂದ್ರಾ, ಅಲ್ಲಿಂದ ಪಾವನವಾದ ಗೌತಮೇಶ್ವರಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿ ಮನುಷ್ಯನು ಉಪವಾಸವ್ರತವನ್ನು ಕೈಗೊಂಡರೆ ದೇಹಾವಸಾನದಲ್ಲಿ ಸುವರ್ಣವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ತೆರಳುವನು. ಅಲ್ಲಿ ಎಲ್ಲರಿಂದಲೂ ಮನ್ನಣೆಯನ್ನು ಪಡೆಯುವನು.

೬೨. ಆ ಬಳಿಕ ಧೂತಪಾಪವೆಂಬ ಪುಣ್ಯತೀರ್ಥಕ್ಕೆ ಹೋಗಬೇಕು. ಓ ಧರ್ಮರಾಜಾ, ನರ್ಮದಾನದಿಯ ಆ ಪಾವನ ತೀರ್ಥದಲ್ಲಿ ಸ್ನಾನಮಾಡಿ ದೇವೇಂದ್ರನು ಸಕಲಪಾಪಗಳನ್ನೂ ಕಳೆದುಕೊಂಡನು.

೬೩-೬೪. ಆ ತೀರ್ಥದಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯಾದೋಷವೂ ಕೂಡ ಹೋಗುತ್ತದೆ. ಓ ಯುಧಿಷ್ಠಿರಾ, ಅದರಲ್ಲಿ ಪ್ರಾಣಬಿಡುವಾತನು ನಾಲ್ಕು ತೋಳುಗಳೂ, ಮೂರುಕಣ್ಣುಗಳೂ ಆಗಿ ಬಲದಲ್ಲಿ ಶಿವನಿಗೆ ಸಮನೆನಿಸುವನು.

ಕಾಲೇನ ಮಹತಾ ಪ್ರಾಪ್ತಃ ಪೃಥಿವ್ಯಾಮೇಕರಾಡ್ಭವೇತ್ ।
ತತೋ ಗಚ್ಛೇಚ್ಚ ರಾಜೇಂದ್ರ ಐರಂಡೀತೀರ್ಥಮುತ್ತಮಂ ॥೬೫॥

ಪ್ರಯಾಗೇ ಯತ್ಫಲಂ ದೃಷ್ಟಂ ಮಾರ್ಕಂಡೇಯೇನ ಭಾಷಿತಂ ।
ತತ್ಫಲಂ ಲಭತೇ ರಾಜನ್ ಸ್ನಾತಮಾತ್ರೋ ಹಿ ಮಾನವಃ ॥೬೬॥

ಮಾಸಿ ಭಾದ್ರಪದೇ ಚೈವ ಶುಕ್ಲಪಕ್ಷೇ ಚತುರ್ದಶೀ ।
ಉಪೋಷ್ಯ ರಜನೀಮೇಕಾಂ ತಸ್ಮಿನ್ ಸ್ನಾನಂ ಸಮಾಚರೇತ್ ।
ಯಮದೂತೈರ್ನ ಬಾಧ್ಯೇತ ರುದ್ರಲೋಕಂ ಸ ಗಚ್ಛತಿ ॥೬೭॥

ತತೋ ಗಚ್ಛೇತ್ತು ರಾಜೇಂದ್ರ ಸಿದ್ಧೋ ಯತ್ರ ಜನಾರ್ದನಃ ।
ಹಿರಣ್ಯದ್ವೀಪವಿಖ್ಯಾತಂ ಸರ್ವಪಾಪಪ್ರಣಾಶನಂ ॥೬೮॥

---

೬೫-೬೬. ಆ ತರುವಾಯ ಪವಿತ್ರವಾದ ಐರಂಡೀತೀರ್ಥಕ್ಕೆ ತೆರಳಬೇಕು. ಎಲೈ ಯುಧಿಷ್ಠಿರನೇ, ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಪ್ರಯಾಗದಲ್ಲಿ ಯಾವ ಪುಣ್ಯಫಲ ಬರುತ್ತದೆಂದು ಮಾರ್ಕಂಡೇಯನು ಹೇಳಿದನೋ ಆ ಫಲವನ್ನು ಮಾನವನು ಪಡೆಯುವನು.

೬೭. ಒಂದು ರಾತ್ರಿ ಉಪವಾಸವಿದ್ದು ಭಾದ್ರಪದಮಾಸದ ಶುಕ್ಲಪಕ್ಷ ಚತುರ್ದಶಿಯ ದಿನ ಅಲ್ಲಿ ಸ್ನಾನಮಾಡಿದರೆ ಯಮದೂತರ ಬಾಧೆಯಿಲ್ಲ. ರುದ್ರ ಲೋಕವಾಸವು ಪ್ರಾಪ್ತವಾಗುವುದು.

೬೮. ರಾಜೇಂದ್ರಾ, ಬಳಿಕ ಸಕಲ ಪಾಪಹರವಾದ ಹಿರಣ್ಯದ್ವೀಪವೆಂಬ ಪ್ರಸಿದ್ಧತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದವನು ಧನವಂತನೂ ರೂಪವಂತನೂ ಆಗುವನು.

ತತ್ರ ಸ್ನಾತ್ವಾ ನರೋ ರಾಜನ್ ಧನವಾನ್ ರೂಪವಾನ್ ಭವೇತ್ ।
ತತೋ ಗಚ್ಛೇತ್ತು ರಾಜೇಂದ್ರ ತೀರ್ಥಂ ಕನಖಲಂ ಮಹತ್ ॥೬೯॥

ಗರುಡೇನ ತಪಸ್ತಪ್ತಂ ತಸ್ಮಿಂಸ್ತೀರ್ಥೇ ನರಾಧಿಪ ।
ಪ್ರಖ್ಯಾತಂ ತ್ರಿಷು ಲೋಕೇಷು ಯೋಗಿನೀ ತತ್ರ ತಿಷ್ಠತಿ ॥೭೦॥

ಕ್ರೀಡತೇ ಯೋಗಿಭಿಃ ಸಾರ್ಧಂ ಶಿವೇನ ಸಹ ನೃತ್ಯತಿ ।
ತತ್ರ ಸ್ನಾತ್ವಾ ನರೋ ರಾಜನ್ ರುದ್ರಲೋಕೇ ಮಹೀಯತೇ ॥೭೧॥

ತತೋ ಗಚ್ಛೇತ್ತು ರಾಜೇಂದ್ರ ಹಂಸತೀರ್ಥಮನುತ್ತಮಂ ।
ಹಂಸಾಸ್ತತ್ರ ವಿನಿರ್ಮುಕ್ತಾ ಗತಾ ಊರ್ಧ್ವಂ ನ ಸಂಶಯಃ ॥೭೨॥

ತತೋ ಗಚ್ಛೇತ್ತು ರಾಜೇಂದ್ರ ಸಿದ್ಧೋ ಯತ್ರ ಜನಾರ್ದನಃ ।
ವಾರಾಹಂ ರೂಪಮಾಸ್ಥಾಯ ಅರ್ಚಿತಃ ಪರಮೇಶ್ವರಃ ॥೭೩॥

ವರಾಹತೀರ್ಥೇ ನರಃ ಸ್ನಾತ್ವಾ ದ್ವಾದಶ್ಯಾಂ ತು ವಿಶೇಷತಃ ।
ವಿಷ್ಣುಲೋಕಮವಾಪ್ನೋತಿ ನರಕಂ ನ ಚ ಪಶ್ಯತಿ ॥೭೪॥

---

೬೯-೭೧. ಅಲ್ಲಿಂದ ಮುಂದೆ ಹೋದರೆ ಕನಖಲವೆಂಬ ಅತಿಶ್ರೇಷ್ಠವಾದ ತೀರ್ಥವು ಸಿಕ್ಕುವುದು. ರಾಜಾ, ಅಲ್ಲಿ ಗರುಡನು ತಪಸ್ಸನ್ನು ಮಾಡಿದನು. ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾದ ಆ ತೀರ್ಥದಲ್ಲಿ ಒಬ್ಬ ಯೋಗಿನಿ ಇರುವಳು. ಅವಳು ಯೋಗಿಗಳೊಡಗೂಡಿ ಪರಮೇಶ್ವರನೊಡನೆ ನರ್ತಿಸುವಳು. ಆ ಪುಣ್ಯತೀರ್ಥದಲ್ಲಿ ಸ್ನಾನಮಾಡಿದವನು ರುದ್ರಲೋಕದಲ್ಲಿ ಮಾನ್ಯತೆಯನ್ನು ಪಡೆಯುವನು.

೭೨. ಎಲೈ ಧರ್ಮರಾಜಾ, ಬಳಿಕ ಅತ್ಯಂತ ಪಾವನವಾದ ಹಂಸತೀರ್ಥಕ್ಕೆ ಹೋಗಬೇಕು. ಸನ್ಯಾಸಿಗಳು ಅಲ್ಲಿ ಪ್ರಕೃತಿ ಬಂಧನದಿಂದ ಮುಕ್ತರಾಗಿ ಊರ್ಧ್ವ ಲೋಕಗಳನ್ನೈದುವರು. ಸಂಶಯವಿಲ್ಲ.

೭೩. ವರಾಹರೂಪವನ್ನು ಧರಿಸಿ, ಪರಮೇಶ್ವರನನ್ನು ಪೂಜಿಸಿ ಜನಾರ್ದನನು ಸಿದ್ಧಿಯನ್ನು ಪಡೆದ ಪವಿತ್ರವಾದ ವರಾಹಕ್ಷೇತ್ರಕ್ಕೆ ಅಲ್ಲಿಂದ ಹೋಗಬೇಕು.

೭೪. ವರಾಹ ತೀರ್ಥದಲ್ಲಿ ಮುಖ್ಯವಾಗಿ ದ್ವಾದಶಿಯದಿನ ಸ್ನಾನಮಾಡಿದ ಮನುಷ್ಯನು ವಿಷ್ಣುಲೋಕವನ್ನು ಸೇರುವನು. ಅವನಿಗೆ ನರಕದ ದರ್ಶನವೂ ಸಹ ಆಗದು.

ತತೋ ಗಚ್ಛೇತ್ತು ರಾಜೇಂದ್ರ ಚಂದ್ರತೀರ್ಥಮನುತ್ತಮಂ ।
ಪೌರ್ಣಮಾಸ್ಯಾಂ ವಿಶೇಷೇಣ ಸ್ನಾನಂ ತತ್ರ ಸಮಾಚರೇತ್ ॥೨೫॥

ಸ್ನಾತಮಾತ್ರೋ ನರಸ್ತತ್ರ ಚಂದ್ರಲೋಕೇ ಮಹೀಯತೇ ।
ದಕ್ಷಿಣೇನ ತು ದ್ವಾರೇಣ ಕನ್ಯಾತೀರ್ಥಂ ತು ವಿಶ್ರುತಂ ॥೨೬॥

ಶುಕ್ಲಪಕ್ಷೇ ತೃತೀಯಾಯಾಂ ಸ್ನಾನಂ ತತ್ರ ಸಮಾಚರೇತ್ ।
ಪ್ರಣಿಪತ್ಯ ತು ಚೇಶಾನಂ ಬಲಿಸ್ತೇನ ಪ್ರಸೀದತಿ ॥೨೭॥

ಹರಿಶ್ಚಂದ್ರಪುರಂ ದಿವ್ಯಮಂತರಿಕ್ಷೇ ಚ ದೃಶ್ಯತೇ ।
ಶಕ್ರಧ್ವಜೇ ಸಮಾವೃತ್ತೇ ಸುಪ್ತೇ ನಾಗರಿಕೇತನೇ ॥೨೮॥

ನರ್ಮದಾಸಲಿಲೌಘೇನ ತರೂಣ ಸಂಪ್ಲಾವಯಿಷ್ಯತಿ ।
ಅಸ್ಮಿನ್ ಸ್ಥಾನೇ ನಿವಾಸಃ ಸ್ಯಾದ್ವಿಷ್ಣುಃ ಶಂಕರಮಬ್ರವೀತ್ ॥೨೯॥

---

೨೫. ಧರ್ಮರಾಜಾ, ಬಳಿಕ ಅತಿ ಪಾವನವಾದ ಚಂದ್ರತೀರ್ಥಕ್ಕೆ ಹೋಗಬೇಕು. ಮುಖ್ಯವಾಗಿ ಪೌರ್ಣಮಿಯ ದಿನ ಅಲ್ಲಿ ಸ್ನಾನಮಾಡಬೇಕು. ಅಷ್ಟುಮಾತ್ರಕ್ಕೆ ಮನುಷ್ಯನು ಚಂದ್ರಲೋಕವನ್ನು ಸೇರಿ ಮನ್ನಣೆಯನ್ನು ಪಡೆಯುವನು.

೨೬-೨೭. ನರ್ಮದಾನದಿಯ ದಕ್ಷಿಣಪಾರ್ಶ್ವದಲ್ಲಿ ಪ್ರಸಿದ್ಧವಾದ ಕನ್ಯಾತೀರ್ಥವುಂಟು. ಶುಕ್ಲಪಕ್ಷದ ತೃತೀಯೆಯ ದಿನ ಅಲ್ಲಿ ಸ್ನಾನಮಾಡಿ ಪರಮೇಶ್ವರನನ್ನು ನಮಸ್ಕರಿಸಿದರೆ ಬಲಿಯು ಪ್ರಸನ್ನನಾಗುವನು.

೨೮-೨೯. ದಿವ್ಯವಾದ ಹರಿಶ್ಚಂದ್ರನಗರವು ಅಂತರಿಕ್ಷದಲ್ಲಿ ಕಾಣುತ್ತದೆ. ಇಂದ್ರನ ಗೌರವಕ್ಕಾಗಿ ಎತ್ತಿಕಟ್ಟಿದ ಬಾವುಟಗಳು ಸುತ್ತಲೂ ಹಾರಾಡುತ್ತಿವೆ. ಪಟ್ಟಣದ ಜನರು ನಿದ್ರೆಯಲ್ಲಿದ್ದಾರೆ. ನರ್ಮದಾನದಿಯ ಜಲರಾಶಿಯು ಇಲ್ಲಿ ಮರಗಳ ನಡುವೆ ಹರಿಯುತ್ತಿದೆ. ಈ ಸ್ಥಳವು ವಾಸಕ್ಕೆ ಪ್ರಶಸ್ತವಾದುದೆಂದು ವಿಷ್ಣು ಶಂಕರನಿಗೆ ಹೇಳಿದನು.

ದ್ವೀಪೇಶ್ವರೇ ನರಃ ಸ್ನಾತ್ವಾ ಲಭೇದ್ಬಹುಸುವರ್ಣಕಂ ।
ತತೋ ಗಚ್ಛೇತ್ತು ರಾಜೇಂದ್ರ ಕನ್ಯಾತೀರ್ಥಂ ಸುಸಂಗಮೇ ॥೮೦॥

ಸ್ನಾತಮಾತ್ರೋ ನರಸ್ತತ್ರ ದೇವ್ಯಾಃ ಸ್ಥಾನಮವಾಪ್ನುಯಾತ್ ।
ದೇವತೀರ್ಥಂ ತತೋ ಗಚ್ಛೇತ್ಸರ್ವತೀರ್ಥಮನುತ್ತಮಂ ॥೮೧॥

ತತ್ರ ಸ್ನಾತ್ವಾ ತು ರಾಜೇಂದ್ರ ದೈವತೈಃ ಸಹ ಮೋದತೇ ।
ತತೋ ಗಚ್ಛೇಚ್ಚ ರಾಜೇಂದ್ರ ಶಿಖಿತೀರ್ಥಮನುತ್ತಮಂ ॥೮೨॥

ಯತ್ತತ್ರ ದೀಯತೇ ದಾನಂ ಸರ್ವಂ ಕೋಟಿಗುಣಂ ಭವೇತ್ ।
ಅಪರಪಕ್ಷೇ ತ್ವಮಾಯಾಂ ತು ಸ್ನಾನಂ ತತ್ರ ಸಮಾಚರೇತ್ ॥೮೩॥

ಬ್ರಾಹ್ಮಣಂ ಭೋಜಯೇದೇಕಂ ಕೋಟಿರ್ಭವತಿ ಭೋಜಿತಾ ।
ಭೃಗುತೀರ್ಥೇ ತು ರಾಜೇಂದ್ರ ತೀರ್ಥಕೋಟಿರ್ವ್ಯವಸ್ಥಿತಾ ॥೮೪॥

---

೮೦. ದ್ವೀಪೇಶ್ವರದಲ್ಲಿ ಸ್ನಾನಮಾಡಿದವನು ಯಥೇಚ್ಛವಾಗಿ ಚಿನ್ನವನ್ನು ಪಡೆಯುವನು. ಧರ್ಮರಾಜಾ, ಬಳಿಕ ಪಾವನವಾದ ಸಂಗಮಸ್ಥಾನದಲ್ಲಿರುವ ಕನ್ಯಾತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಮನುಷ್ಯನಿಗೆ ದೇವಿಯ ಸಾನ್ನಿಧ್ಯ ಲಭಿಸುವುದು.

೮೧. ಅಲ್ಲಿಂದ ತೀರ್ಥಗಳಲ್ಲೆಲ್ಲ ಉತ್ತಮವಾದ ದೇವತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ದೇವತೆಗಳೊಡನೆ ಕೂಡಿ ಸಂತೋಷಪಡುವನು.

೮೨-೮೩. ಎಲೈ ಯುಧಿಷ್ಠಿರಾ, ತರುವಾಯ ಅತ್ಯಂತ ಪಾವನವಾದ ಅಗ್ನಿ ತೀರ್ಥಕ್ಕೆ ತೆರಳಬೇಕು. ಅಲ್ಲಿ ದಾನಮಾಡಿದುದೆಲ್ಲವೂ ಕೋಟಿಮಡಿ ಅಧಿಕ ವಾಗುವುದು. ಅಪರಪಕ್ಷದ ಅಮಾವಾಸ್ಯೆಯ ದಿನ ಅಲ್ಲಿ ಸ್ನಾನಮಾಡಿ ಒಬ್ಬ ಬ್ರಾಹ್ಮಣನಿಗೆ ಭೋಜನವಿತ್ತರೆ ಕೋಟಿಜನರಿಗೆ ಅನ್ನದಾನ ಮಾಡಿದಷ್ಟು ಫಲ ಬರುತ್ತದೆ.

೮೪-೮೫. ಓ ಧರ್ಮರಾಜಾ, ಭೃಗುತೀರ್ಥವೊಂದರಲ್ಲೇ ಕೋಟಿ ತೀರ್ಥಗಳು ವಾಸಿಸುತ್ತವೆಯೆಂದರಿಯಬೇಕು. ಫಲವನ್ನು ಕೋರದೆಯೋ ಕೋರಿಯೋ

ಅಕಾಮೋ ವಾ ಸಕಾಮೋ ವಾ ತತ್ರ ಸ್ನಾನಂ ಸಮಾಚರೇತ್ ।
ಅಶ್ವಮೇಧಮವಾಪ್ನೋತಿ ದೈವತೈಃ ಸಹ ಮೋದತೇ ॥೮೫॥

ತತ್ರ ಸಿದ್ಧಿಂ ಪರಾಂ ಪ್ರಾಪ್ತೋ ಭೃಗುಸ್ತು ಮುನಿಪುಂಗವಃ ।
ಅವತಾರಃ ಕೃತಸ್ತತ್ರ ಶಂಕರೇಣ ಮಹಾತ್ಮನಾ ॥೮೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯೇ
ತ್ರಿನವತ್ಯಧಿಕಶತತಮೋಽಧ್ಯಾಯಃ

---

- ಸ್ನಾನಮಾಡಿದರೆ ಅಶ್ವಮೇಧದ ಫಲವನ್ನು ಪಡೆದು ದೇವತೆಗಳೊಡನೆ ಸಂತೋಷಿಸುವನು.

೮೬. ಅಲ್ಲಿ ಮುನಿಶ್ರೇಷ್ಠನಾದ ಭೃಗುಮಹರ್ಷಿಯು ಸಿದ್ಧಿಯನ್ನು ಗಳಿಸಿದನು. ಮಹಾತ್ಮನಾದ ಶಂಕರನು ಅವತಾರವನ್ನು ಮಾಡಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಹ ಹಲವು ಪುಣ್ಯತೀರ್ಥಗಳ ಮಹಿಮಾತಿಶಯವನ್ನು ವರ್ಣಿಸಿವೆ.

ಕಪಿಲಾತೀರ್ಥ, ಋಷಿತೀರ್ಥ, ದಶಾಶ್ವಮೇಧ, ಮುಂತಾದುವು ಸುಪ್ರಸಿದ್ಧವಾದ ತೀರ್ಥಗಳು, ಇವುಗಳಲ್ಲಿ ಮಾಡಿದ ಸ್ನಾನ, ದಾನ, ಅರ್ಚನ ಇವೆಲ್ಲ ಅಕ್ಷಯವಾಗುವುವು. ದಶಾಶ್ವಮೇಧದ ಪಶ್ಚಿಮಕ್ಕೆ ಭೃಗುತೀರ್ಥವಿದೆ. ಭೃಗುಮಹರ್ಷಿಯು ಅಲ್ಲಿ ಶಂಕರನನ್ನು ಧ್ಯಾನಮಾಡಿ ಸಿದ್ಧಿಯನ್ನು ಪಡೆದನು. ಅದರಲ್ಲಿ ಸ್ನಾನಮಾಡಿದರೆ ಒಂದು ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿದಷ್ಟು ಪುಣ್ಯ ಬರುತ್ತದೆ. ಹಂಸತೀರ್ಥ, ವರಾಹತೀರ್ಥ, ದ್ವೀಪೇಶ್ವರ ಮುಂತಾದುವೆಲ್ಲ ಪ್ರಖ್ಯಾತವಾದ ಇತರ ತೀರ್ಥಗಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯದಲ್ಲಿ
ನೂರ ತೊಂಬತ್ತಮೂರನೆಯ ಅಧ್ಯಾಯವು ಮುಗಿದುದು.

## ಅಥ ಚತುರ್ನವತ್ಯಧಿಕಶತತಮೋऽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ತತೋ ಗಚ್ಛೇತ್ತು ರಾಜೇಂದ್ರ ಹ್ಯಂಕುಶೇಶ್ವರಮುತ್ತಮಂ ।
ದರ್ಶನಾತ್ತಸ್ಯ ದೇವಸ್ಯ ಮುಚ್ಯತೇ ಸರ್ವಪಾತಕೈಃ ॥ ೧ ॥

ತತೋ ಗಚ್ಛೇಚ್ಚ ರಾಜೇಂದ್ರ ನರ್ಮದೇಶ್ವರಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಸ್ವರ್ಗಲೋಕೇ ಮಹೀಯತೇ ॥ ೨ ॥

ಅಶ್ವತೀರ್ಥಂ ತತೋ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।
ಸುಭಗೋ ದರ್ಶನೀಯಶ್ಚ ಭೋಗವಾನ್ ಜಾಯತೇ ನರಃ ॥ ೩ ॥

ಪಿತಾಮಹಂ ತತೋ ಗಚ್ಛೇದ್ಬ್ರಹ್ಮಣಾ ನಿರ್ಮಿತಂ ಪುರಾ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಪಿತೃಪಿಂಡಂ ತು ದಾಪಯೇತ್ ॥ ೪ ॥

ತಿಲದರ್ಭವಿಮಿಶ್ರಂ ತು ಹ್ಯುದಕಂ ತತ್ರ ದಾಪಯೇತ್ ।
ತಸ್ಯ ತೀರ್ಥಪ್ರಭಾವೇಣ ಸರ್ವಂ ಭವತಿ ಚಾಕ್ಷಯಂ ॥ ೫ ॥

---

೧. ಮಾರ್ಕಂಡೇಯನು ಹೇಳಿದನು.—ಓ ಧರ್ಮರಾಜಾ, ತರುವಾಯ ಅಂಕುಶೇಶ್ವರವೆಂಬ ಪಾವನವಾದ ತೀರ್ಥಕ್ಕೆ ಹೋಗಬೇಕು. ಅಲ್ಲಿರುವ ಮಹಾದೇವನ ದರ್ಶನಮಾಡಿದರೆ ಎಲ್ಲ ಪಾಪಗಳೂ ದೂರವಾಗುವುವು.

೨. ರಾಜೇಂದ್ರಾ, ಆ ತರುವಾಯ ನರ್ಮದೇಶ್ವರ ತೀರ್ಥಕ್ಕೆ ತೆರಳಿ ಅಲ್ಲಿ ಸ್ನಾನಮಾಡಿದರೆ ಸ್ವರ್ಗಲೋಕದಲ್ಲಿ ಪೂಜ್ಯತೆ ಬರುತ್ತದೆ.

೩. ಬಳಿಕ ಅಶ್ವತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಮನುಷ್ಯನು ಅದೃಷ್ಟ ಶಾಲಿಯೂ, ಸುಂದರನೂ, ಸುಖಶಾಲಿಯೂ ಆಗುತ್ತಾನೆ.

೪-೫. ಪೂರ್ವದಲ್ಲಿ ಬ್ರಹ್ಮನಿಂದ ನಿರ್ಮಿತವಾದ ಪಿತಾಮಹಕ್ಷೇತ್ರಕ್ಕೆ ಅನಂತರ ಹೋಗಿ ಭಕ್ತಿಯಿಂದ ಸ್ನಾನಮಾಡಬೇಕು. ಪಿತೃಗಳಿಗೆ ಪಿಂಡವನ್ನು ಕೊಟ್ಟು ತಿಲೋದಕವನ್ನೂ ದರ್ಭೋದಕವನ್ನೂ ಬಿಡಬೇಕು. ಆ ತೀರ್ಥದ ಪ್ರಭಾವದಿಂದ ಎಲ್ಲವೂ ಅಕ್ಷಯವಾಗುತ್ತದೆ.

ಸಾವಿತ್ರೀತೀರ್ಥಮಾಸಾದ್ಯ ಯಸ್ತು ಸ್ನಾನಂ ಸಮಾಚರೇತ್ ।
ವಿಧೂಯ ಸರ್ವಪಾಪಾನಿ ಬ್ರಹ್ಮಲೋಕೇ ಮಹೀಯತೇ ॥ ೬ ॥

ಮನೋಹರಂ ತತೋ ಗಚ್ಛೇತ್ತೀರ್ಥಂ ಪರಮಶೋಭನಂ ।
ತತ್ರ ಸ್ನಾತ್ವಾ ನರೋ ರಾಜನ್ ಪಿತೃಲೋಕೇ ಮಹೀಯತೇ ॥ ೭ ॥

ತತೋ ಗಚ್ಛೇತ್ತು ರಾಜೇಂದ್ರ ಮಾನಸಂ ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ರುದ್ರಲೋಕೇ ಮಹೀಯತೇ ॥ ೮ ॥

ತತೋ ಗಚ್ಛೇಚ್ಚ ರಾಜೇಂದ್ರ ಕುಂಜತೀರ್ಥಮನುತ್ತಮಂ ।
ವಿಖ್ಯಾತಂ ತ್ರಿಷು ಲೋಕೇಷು ಸರ್ವಪಾಪಪ್ರಣಾಶನಂ ॥ ೯ ॥

ಯಾನ್ ಯಾನ್ ಕಾಮಯತೇ ಕಾಮಾನ್ ಪಶುಪುತ್ರಧನಾನಿ ಚ ।
ಪ್ರಾಪ್ನುಯಾತ್ತಾನಿ ಸರ್ವಾಣಿ ತತ್ರ ಸ್ನಾತ್ವಾ ನರಾಧಿಪ ॥೧೦॥

---

೬. ಸಾವಿತ್ರೀತೀರ್ಥಕ್ಕೆ ಹೋಗಿ ಅಲ್ಲಿ ಯಾವನು ಸ್ನಾನಮಾಡುತ್ತಾನೋ ಆತನು ಪಾಪಗಳನ್ನೆಲ್ಲ ತೊರೆದು ಬ್ರಹ್ಮಲೋಕವನ್ನು ಸೇರಿ ಮನ್ನಣೆಯನ್ನು ಪಡೆಯುತ್ತಾನೆ.

೭. ಮನೋಹರವೆಂಬ ತೀರ್ಥವು ಮಂಗಳಮಯವಾದುದು. ಓ ರಾಜಾ, ಅಲ್ಲಿ ಹೋಗಿ ಸ್ನಾನಮಾಡಿದರೆ ಪಿತೃಲೋಕದಲ್ಲಿ ಮಾನ್ಯತೆ ಲಭಿಸುತ್ತದೆ.

೮. ಎಲೈ ಭೂಪೋತ್ತಮಾ, ಅಲ್ಲಿಂದ ಶ್ರೇಷ್ಠವಾದ ಮಾನಸತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ರುದ್ರಲೋಕದಲ್ಲಿ ಸತ್ಕಾರಕ್ಕೆ ಪಾತ್ರನಾಗುವನು.

೯-೧೦. ಅಲ್ಲಿಂದ ಮುಂದೆ ಅತ್ಯಂತ ಶ್ರೇಷ್ಠವಾದ ಕುಂಜತೀರ್ಥವಿದೆ. ಅದು ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದುದು. ಎಲ್ಲಪಾಪಗಳನ್ನೂ ಕಳೆಯುವಂತಹುದು. ಯುಧಿಷ್ಠಿರಾ, ಅಲ್ಲಿ ಸ್ನಾನಮಾಡಿದರೆ ಪಶು, ಪುತ್ರ, ಧನ ಮುಂತಾದ ಕೋರಿದ ಇಷ್ಟಾರ್ಥಗಳೆಲ್ಲ ಕೈಗೂಡುವುವು.

ತತೋ ಗಚ್ಛೇತ್ತು ರಾಜೇಂದ್ರ ತ್ರಿದಶಜ್ಯೋತಿವಿಶ್ರುತಂ ।
ಯತ್ರ ತಾ ಋಷಿಕನ್ಯಾಸ್ತು ತಪೋಽತಪ್ಯಂತ ಸುವ್ರತಾಃ ॥೧೧॥

ಭರ್ತಾ ಭವತು ಸರ್ವಾಸಾಮೀಶ್ವರಃ ಪ್ರಭುರವ್ಯಯಃ ।
ಪ್ರೀತಸ್ತಾಸಾಂ ಮಹಾದೇವೋ ದಂಡರೂಪಧರೋ ಹರಃ ॥೧೨॥

ವಿಕೃತಾನನಬೀಭತ್ಸುರ್ವ್ರತೀ ತೀರ್ಥಮುಪಾಗತಃ ।
ತತ್ರ ಕನ್ಯಾ ಮಹಾರಾಜ ವರಯುಃ ಪರಮೇಶ್ವರಃ ॥೧೩॥

ಅಸ್ಮಾಕಂ ದೇವದೇವಸ್ಯ ಕನ್ಯಾದಾನಂ ಪ್ರದೀಯತಾಂ ।
ತೀರ್ಥಂ ತತ್ರ ಮಹಾರಾಜ ಋಷಿಕನ್ಯೇತಿ ವಿಶ್ರುತಂ ॥೧೪॥

ತತ್ರ ಸ್ನಾತ್ವಾ ನರೋ ರಾಜನ್ ಸರ್ವಪಾಪೈಃ ಪ್ರಮುಚ್ಯತೇ ।
ತತೋ ಗಚ್ಛೇಚ್ಚ ರಾಜೇಂದ್ರ ಸ್ವರ್ಣಬಿಂದು ತ್ವಿತಿ ಸ್ಮೃತಂ ॥೧೫॥

---

೧೧-೧೨. ಧರ್ಮರಾಜಾ, ಬಳಿಕ ತ್ರಿದಶಜ್ಯೋತಿಯೆಂಬ ಪ್ರಖ್ಯಾತವಾದ ತೀರ್ಥಕ್ಕೆ ಹೋಗಬೇಕು. ಅಲ್ಲಿ ಋಷಿಕನ್ಯೆಯರು ವ್ರತನಿಷ್ಠರಾಗಿ ತಪಸ್ಸು ಮಾಡಿದರು. "ಜಗತ್ಪ್ರಭುವೂ ನಿರ್ವಿಕಾರನೂ ಆದ ಪರಮೇಶ್ವರನೇ ನಮ್ಮೆಲ್ಲರಿಗೂ ಪತಿಯಾಗಲಿ" ಎಂದು ಅವರು ಕೋರಿದರು. ಮಹಾದೇವನು ಪ್ರಶಸ್ತವಾದ ದಂಡವನ್ನು ಧರಿಸಿ ಅವರಲ್ಲಿ ಸುಪ್ರೀತನಾದನು.

೧೩-೧೪. ವಿಕಾರವಾದ ಮುಖವೂ ಭಯಂಕರವಾದ ಆಕೃತಿಯೂ ಆಗಿ ವ್ರತನಿಷ್ಠನಾದ ಆತನು ಆ ತೀರ್ಥದ ಬಳಿಗೆ ಬಂದನು. ಎಲೈ ಮಹಾರಾಜಾ, ಪರಮೇಶ್ವರನು ಆ ಕನ್ಯೆಯರನ್ನು ವರಿಸಿದನು. "ದೇವದೇವನಾದ ನಮ್ಮ ಸ್ವಾಮಿ ಬಂದಿದ್ದಾನೆ. ಅವನಿಗೆ ಕನ್ಯಾದಾನವನ್ನು ಮಾಡು" ಎಂದು ಋಷಿಕನ್ಯೆಯರು ತಮ್ಮ ತಂದೆಗೆ ಹೇಳಿದರು. ಆದರಿಂದ ಆ ತೀರ್ಥಕ್ಕೆ ಋಷಿಕನ್ಯೆಯೆಂದು ಪ್ರಸಿದ್ಧಿ ಬಂದಿತು. ಅಲ್ಲಿ ಸ್ನಾನಮಾಡಿದರೆ ಮನುಷ್ಯನು ಸಕಲಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೧೫. ಅನಂತರ ಸ್ವರ್ಣಬಿಂದುವೆಂಬ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಮನುಷ್ಯನು ದುರ್ಗತಿಯ ಮುಖವನ್ನೇ ನೋಡುವುದಿಲ್ಲ.

ತತ್ರ ಸ್ನಾತ್ವಾ ನರೋ ರಾಜನ್ ದುರ್ಗತಿಂ ನ ಚ ಪಶ್ಯತಿ ।
ಅಪ್ಸರೇಶಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ॥೧೬॥

ಕ್ರೀಡತೇ ನಾಗಲೋಕಸ್ಥೋ ಹ್ಯಪ್ಸರೈಃ ಸಹ ಮೋದತೇ ।
ತತೋ ಗಚ್ಛೇತ್ತು ರಾಜೇಂದ್ರ ನರಕಂ ತೀರ್ಥಮುತ್ತಮಂ ॥೧೭॥

ತತ್ರ ಸ್ನಾತ್ವಾಽರ್ಚಯೇದ್ದೇವಂ ನರಕಂ ಚ ನ ಪಶ್ಯತಿ ।
ಭಾರಭೂತಿಂ ತತೋ ಗಚ್ಛೇದುಪವಾಸಪರೋ ಜನಃ ॥೧೮॥

ಏತತ್ತೀರ್ಥಂ ಸಮಾಸಾದ್ಯ ಚಾವತಾರಂ ತು ಶಾಂಭವಂ ।
ಅರ್ಚಯಿತ್ವಾ ವಿರೂಪಾಕ್ಷಂ ರುದ್ರಲೋಕೇ ಮಹೀಯತೇ ॥೧೯॥

ಅಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಭಾರಭೂತೌ ಮಹಾತ್ಮನಃ ।
ಯತ್ರ ಯತ್ರ ಮೃತಸ್ಯಾಪಿ ಧ್ರುವಂ ಗಾಣೇಶ್ವರೀ ಗತಿಃ ॥೨೦॥

---

೧೬-೧೭. ಅಪ್ಸರೇಶಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ನಾಗಲೋಕದಲ್ಲಿ ಅಪ್ಸರಸ್ತ್ರೀಯರೊಡನೆ ಸಂತೋಷಪಡುವನು. ಅಲ್ಲಿಂದ ಮುಂದೆ ನರಕವೆಂಬ ತೀರ್ಥವನ್ನು ಸೇರಿ, ಸ್ನಾನಮಾಡಿ ಮಹಾದೇವನನ್ನು ಪೂಜಿಸಿದರೆ ನರಕವನ್ನೇ ಕಾಣುವುದಿಲ್ಲ.

೧೮-೧೯. ಬಳಿಕ ಭಾರಭೂತಿಕ್ಷೇತ್ರಕ್ಕೆ ಹೋಗಿ, ಉಪವಾಸ ನಿರತನಾಗಿ, ಈಶ್ವರನ ಅವತಾರವೆನಿಸಿದ ವಿರೂಪಾಕ್ಷಮೂರ್ತಿಯನ್ನು ಆರಾಧಿಸಿದರೆ ರುದ್ರಲೋಕದಲ್ಲಿ ಮಾನ್ಯತೆಯನ್ನೈದುವನು.

೨೦. ಮಹಾತ್ಮನಾದ ಪರಮೇಶ್ವರನ ವಾಸಸ್ಥಾನವಾದ ಈ ಭಾರಭೂತಿ ತೀರ್ಥದಲ್ಲಿ ಸ್ನಾನಮಾಡಿದ ಮನುಷ್ಯನು ಎಲ್ಲೆಲ್ಲಿ ಮೃತನಾಗಲಿ ಅವನಿಗೆ ಗಣೇಶ್ವರ ಪದವಿ ತಪ್ಪದೆ ದೊರೆಯುವುದು.

**ಕಾರ್ತಿಕಸ್ಯ ತು ಮಾಸಸ್ಯ ಹ್ಯರ್ಚಯಿತ್ವಾ ಮಹೇಶ್ವರಂ ।**
**ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಣಃ ॥೨೧॥**

**ದೀಪಕಾನಾಂ ಶತಂ ತತ್ರ ಘೃತಪೂರ್ಣಂ ತು ದಾಪಯೇತ್ ।**
**ವಿಮಾನೈಃ ಸೂರ್ಯಸಂಕಾಶೈರ್ವ್ರಜತೇ ಯತ್ರ ಶಂಕರಃ ॥೨೨॥**

**ವೃಷಭಂ ಯಃ ಪ್ರಯುಂಜೀತ ಶಂಖಕುಂದೇಂದುಸಪ್ರಭಂ ।**
**ವೃಷಯುಕ್ತೇನ ಯಾನೇನ ರುದ್ರಲೋಕಂ ಸ ಗಚ್ಛತಿ ॥೨೩॥**

**ಧೇನುಮೇಕಾಂ ತು ಯೋ ದದ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।**
**ಪಾಯಸಂ ಮಧುಸಂಯುಕ್ತಂ ಭಕ್ಷ್ಯಾಣಿ ವಿವಿಧಾನಿ ಚ ॥೨೪॥**

**ಯಥಾಶಕ್ತ್ಯಾ ಚ ರಾಜೇಂದ್ರ ಬ್ರಾಹ್ಮಣಾನ್ ಭೋಜಯೇತ್ತತಃ ।**
**ತಸ್ಯ ತೀರ್ಥಪ್ರಭಾವೇಣ ಸರ್ವಂ ಕೋಟಿಗುಣಂ ಭವೇತ್ ॥೨೫॥**

---

೨೧. ಕಾರ್ತಿಕಮಾಸದಲ್ಲಿ ಮಹೇಶ್ವರನನ್ನು ಈ ತೀರ್ಥದಲ್ಲಿ ಅರ್ಚನೆ ಮಾಡಿದರೆ ಅಶ್ವಮೇಧದ ಹತ್ತರಷ್ಟು ಪುಣ್ಯ ಬರುತ್ತದೆಂದು ವಿದ್ವಾಂಸರು ಹೇಳುತ್ತಾರೆ.

೨೨. ತುಪ್ಪದಿಂದ ತುಂಬಿದ ನೂರು ದೀಪಗಳನ್ನು ದಾನಮಾಡುವಾತನು ಸೂರ್ಯಸಮಾನವಾದ ವಿಮಾನಗಳಲ್ಲಿ ಶಂಕರನಿರುವಲ್ಲಿಗೆ ತೆರಳುವನು.

೨೩. ಶಂಖ, ಮೊಲ್ಲೆಹೂ ಮತ್ತು ಚಂದ್ರರಂತೆ ಬೆಳ್ಳಗಿರುವ ವೃಷಭವನ್ನು ದಾನಮಾಡುವವನು ವೃಷಭವನ್ನು ಹೂಡಿದ ವಿಮಾನದಲ್ಲಿ ರುದ್ರಲೋಕಕ್ಕೆ ತೆರಳುವನು.

೨೪-೨೫. ಎಲೈ ಧರ್ಮರಾಜಾ, ಆ ತೀರ್ಥದಲ್ಲಿ ಒಂದು ಹಸುವನ್ನಾದರೂ ದಾನಮಾಡಬೇಕು. ಜೇನುಬೆರೆತ ಪಾಯಸ, ಬಗೆಬಗೆಯ ಭಕ್ಷ್ಯಗಳು ಇವನ್ನು ಕೊಟ್ಟು ತನ್ನ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಆ ತೀರ್ಥದ ಪ್ರಭಾವದಿಂದ ಎಲ್ಲವೂ ಕೋಟಿಪಾಲು ಅಧಿಕಫಲವನ್ನು ಕೊಡುವುವು.

ನರ್ಮದಾಯಾ ಜಲಂ ಪೀತ್ವಾ ಹ್ಯರ್ಚಯಿತ್ವಾ ವೃಷಧ್ವಜಂ।
ದುರ್ಗತಿಂ ಚ ನ ಪಶ್ಯಂತಿ ತಸ್ಯ ತೀರ್ಥಪ್ರಭಾವತಃ ॥೨೬॥

ಏತತ್ತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ವಿಮುಂಚತಿ।
ಸರ್ವಪಾಪವಿನಿರ್ಮುಕ್ತೋ ವ್ರಜೇದ್ಯತ್ರ ಶಂಕರಃ।
ಜಲಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥೨೭॥

ಹಂಸಯುಕ್ತೇನ ಯಾನೇನ ರುದ್ರಲೋಕಂ ಸ ಗಚ್ಛತಿ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಹಿಮವಾಂಶ್ಚ ಮಹೋದಧಿಃ ॥೨೮॥

ಗಂಗಾದ್ಯಾಃ ಸರಿತೋ ಯಾವತ್ತಾವತ್ಸ್ವರ್ಗೇ ಮಹೀಯತೇ।
ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥೨೯॥

---

೨೬-೨೭. ನರ್ಮದಾ ನದಿಯ ಜಲವನ್ನು ಪಾನಮಾಡಿ, ಪರಮೇಶ್ವರನನ್ನು ಪೂಜಿಸಿದರೆ ಆ ತೀರ್ಥದ ಮಹಿಮೆಯಿಂದ ಮನುಷ್ಯನು ದುರ್ಗತಿಗೀಡಾಗನು. ಈ ತೀರ್ಥಕ್ಕೆ ಬಂದು ಯಾವನು ಪ್ರಾಣಗಳನ್ನು ತೊರೆಯುತ್ತಾನೋ ಅವನು ಪಾಪಗಳೆಲ್ಲವನ್ನೂ ಕಳೆದುಕೊಂಡು ಈಶ್ವರನಲ್ಲಿಗೆ ಹೋಗುವನು. ಓ ರಾಜಾ, ಇಲ್ಲಿ ಜಲಪ್ರವೇಶವನ್ನು ಮಾಡುವಾತನು ಹಂಸಯುಕ್ತವಾದ ವಿಮಾನದಲ್ಲಿ ಕುಳಿತು ರುದ್ರಲೋಕವನ್ನೈದುವನು.

೨೮. ಚಂದ್ರ, ಸೂರ್ಯ, ಹಿಮವತ್ಪರ್ವತ, ಮಹಾಸಾಗರ ಮತ್ತು ಗಂಗಾ ನದಿಗಳು ಎಲ್ಲಿಯವರೆಗೆ ಇರುವುವೋ ಅಲ್ಲಿಯವರೆಗೆ ಆತನು ಸ್ವರ್ಗಲೋಕದಲ್ಲಿ ಗೌರವದಿಂದ ವಾಸಿಸುವನು.

೨೯. ಆ ತೀರ್ಥದಲ್ಲಿ ಪ್ರಾಯೋಪವೇಶ ವ್ರತವನ್ನು ಕೈಗೊಳ್ಳುವ ಮನುಷ್ಯನು ಮತ್ತೆ ತಾಯಿಯ ಗರ್ಭದಲ್ಲಿ ವಾಸಮಾಡುವುದಿಲ್ಲ.

**ಗರ್ಭವಾಸೇ ತು ರಾಜೇಂದ್ರ ನ ಪುನರ್ಜಾಯತೇ ಪುಮಾನ್ ।**
**ತತೋ ಗಚ್ಛೇತ್ತು ರಾಜೇಂದ್ರ ಆಷಾಢೀತೀರ್ಥಮುತ್ತಮಂ ॥೩೦॥**

**ತತ್ರ ಸ್ನಾತ್ವಾ ನರೋ ರಾಜನ್ನಿಂದ್ರಸ್ಯಾರ್ಧಾಸನಂ ಲಭೇತ್ ।**
**ಸ್ತ್ರಿಯಾಸ್ತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ॥೩೧॥**

**ತತ್ರಾಪಿ ಸ್ನಾತಮಾತ್ರಸ್ಯ ಧ್ರುವಂ ಗಾಣೇಶ್ವರೀ ಗತಿಃ ।**
**ಐರಂಡೀನರ್ಮದಾಯಾಶ್ಚ ಸಂಗಮಂ ಲೋಕವಿಶ್ರುತಂ ॥೩೨॥**

**ತಚ್ಚ ತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ।**
**ಉಪವಾಸಪರೋ ಭೂತ್ವಾ ನಿತ್ಯವ್ರತಪರಾಯಣಃ ॥೩೩॥**

**ತತ್ರ ಸ್ನಾತ್ವಾ ತು ರಾಜೇಂದ್ರ ಮುಚ್ಯತೇ ಬ್ರಹ್ಮಹತ್ಯಯಾ ।**
**ತತೋ ಗಚ್ಛೇಚ್ಚ ರಾಜೇಂದ್ರ ನರ್ಮದೋದಧಿಸಂಗಮಂ ॥೩೪॥**

---

೩೦. ಬಳಿಕ ಉತ್ತಮವಾದ ಆಷಾಢೀತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡುವಂತಹ ಮನುಷ್ಯನು ಇಂದ್ರನ ಅರ್ಧಾಸನದಲ್ಲಿ ಕುಳಿತುಕೊಳ್ಳುವಷ್ಟು ಪುಣ್ಯವನ್ನು ಪಡೆಯುವನು.

೩೧. ಸಕಲ ಪಾಪಗಳನ್ನೂ ಪರಿಹಾರಮಾಡುವ ಸ್ತ್ರೀತೀರ್ಥಕ್ಕೆ ತರುವಾಯ ಹೋಗಿ ಸ್ನಾನಮಾಡಿದ ಮಾತ್ರದಿಂದಲೇ ಗಣೇಶ್ವರಪದವಿ ತಪ್ಪದೆ ಪ್ರಾಪ್ತ ವಾಗುವುದು

೩೨-೩೩. ಐರಂಡೀ ಮತ್ತು ನರ್ಮದಾನದಿಗಳ ಸಂಗಮವು ಲೋಕಪ್ರಸಿದ್ಧ ವಾದುದು. ಅದು ಪಾಪಗಳೆಲ್ಲವನ್ನೂ ಪರಿಹರಿಸುವ ಮಹಾಪುಣ್ಯಕರವಾದ ತೀರ್ಥ. ಧರ್ಮರಾಜಾ, ಉಪವಾಸಮಾಡಿ ನಿತ್ಯವ್ರತಗಳಲ್ಲಿ ಆಸಕ್ತನಾಗಿ, ಅಲ್ಲಿ ಸ್ನಾನ ಮಾಡುವಾತನು ಬ್ರಹ್ಮಹತ್ಯೆಯಿಂದಲೂ ಕೂಡ ಬಿಡುಗಡೆ ಹೊಂದುವನು.

೩೪-೩೫. ಅನಂತರ ನರ್ಮದಾನದಿಯು ಸಮುದ್ರಕ್ಕೆ ಸಂಗಮವಾಗುವ ಕ್ಷೇತ್ರಕ್ಕೆ ಹೋಗಬೇಕು. ಪರಶುರಾಮಕ್ಷೇತ್ರವೆಂದು ಅದಕ್ಕೆ ಪ್ರಸಿದ್ಧಿಯುಂಟು.

ಜಾಮದಗ್ನ್ಯಮಿತಿ ಖ್ಯಾತಂ ಸಿದ್ಧೋ ಯತ್ರ ಜನಾರ್ದನಃ ।
ಯತ್ರೇಷ್ಟ್ವಾ ಬಹುಭಿರ್ಯಜ್ಞೈರಿಂದ್ರೋ ದೇವಾಧಿಪೋಽಭವತ್ ॥೩೫॥

ತತ್ರ ಸ್ನಾತ್ವಾ ತು ರಾಜೇಂದ್ರ ನರ್ಮದೋದಧಿಸಂಗಮೇ ।
ತ್ರಿಗುಣಂ ಚಾಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ॥೩೬॥

ಪಶ್ಚಿಮಸ್ಯೋದಧೇಃ ಸಂಧೌ ಸ್ವರ್ಗದ್ವಾರಮಪಾವೃತಂ ।
ತತ್ರ ದೇವಾಃ ಸಗಂಧರ್ವಾ ಋಷಯಃ ಸಿದ್ಧಚಾರಣಾಃ ॥೩೭॥

ಆರಾಧಯಂತಿ ದೇವೇಶಂ ತ್ರಿಸಂಧ್ಯಂ ವಿಮಲೇಶ್ವರಂ ।
ತತ್ರ ಸ್ನಾತ್ವಾ ನರೋ ರಾಜನ್ ರುದ್ರಲೋಕೇ ಮಹೀಯತೇ ॥೩೮॥

ವಿಮಲೇಶಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ।
ತತ್ರೋಪವಾಸಂ ಕೃತ್ವಾ ಯೇ ಪಶ್ಯಂತಿ ವಿಮಲೇಶ್ವರಂ ॥೩೯॥

---

ಅಲ್ಲಿ ಜನಾರ್ದನನು ಸಿದ್ಧಿಯನ್ನು ಪಡೆದನು. ಇಂದ್ರನು ಅನೇಕ ಯಜ್ಞಗಳನ್ನು ಮಾಡಿ ದೇವತೆಗಳ ಅಧಿಪತಿಯಾದನು.

೩೬. ಓ ಧರ್ಮರಾಜಾ, ನರ್ಮದೆಯು ಸಮುದ್ರವನ್ನು ಸೇರುವ ಆ ತೀರ್ಥದಲ್ಲಿ ಸ್ನಾನಮಾಡುವ ಮನುಷ್ಯನಿಗೆ ಅಶ್ವಮೇಧದ ಮೂರರಷ್ಟು ಫಲವು ಬರುವುದು.

೩೭-೩೮. ನರ್ಮದಾನದಿಯು ಪಶ್ಚಿಮಸಮುದ್ರಕ್ಕೆ ಸೇರುವ ಆ ಸಂಧಿ ಸ್ಥಲದಲ್ಲಿ ಸ್ವರ್ಗದ ಬಾಗಿಲು ತೆರೆದಿರುವುದು. ಅಲ್ಲಿ ದೇವತೆಗಳು, ಗಂಧರ್ವರು, ಋಷಿಗಳು ಸಿದ್ಧರು ಮತ್ತು ಚಾರಣರು ಮೂರು ಕಾಲದಲ್ಲೂ ದೇವಾಧಿಪನಾದ ವಿಮಲೇಶ್ವರನನ್ನು ಆರಾಧಿಸುತ್ತಿರುವರು. ರಾಜಾ, ಅಲ್ಲಿ ಸ್ನಾನಮಾಡಿದ ಮನುಷ್ಯನು ರುದ್ರಲೋಕದಲ್ಲಿ ಮಾನ್ಯತೆಯನ್ನು ಪಡೆಯುತ್ತಾನೆ.

೩೯. ವಿಮಲೇಶಕ್ಕಿಂತ ಶ್ರೇಷ್ಠವಾದ ತೀರ್ಥವು ಹಿಂದಿರಲಿಲ್ಲ; ಮುಂದೆ ಇರುವುದಿಲ್ಲ. ಅಲ್ಲಿ ಉಪವಾಸಮಾಡಿ ವಿಮಲೇಶ್ವರನನ್ನು ಸಂದರ್ಶಿಸುವ ಜನರು ಏಳು ಜನ್ಮಗಳಲ್ಲಿ ಮಾಡಿದ ಪಾಪವನ್ನು ಕಳೆದುಕೊಂಡು ಶಿವಸಾನ್ನಿಧ್ಯವನು ಸೇರುತ್ತಾರೆ.

ಸಪ್ತಜನ್ಮಕೃತಂ ಪಾಪಂ ಹಿತ್ವಾ ಯಾಂತಿ ಶಿವಾಲಯಂ ।
ತತೋ ಗಚ್ಛೇತ್ತು ರಾಜೇಂದ್ರ ಕೌಶಿಕೀತೀರ್ಥಮುತ್ತಮಂ ॥೪೦॥

ತತ್ರ ಸ್ನಾತ್ವಾ ನರೋ ರಾಜನ್ನುಪವಾಸಪರಾಯಣಃ ।
ಉಪೋಷ್ಯ ರಜನೀಮೇಕಾಂ ನಿಯತೋ ನಿಯತಾಶನಃ ॥೪೧॥

ಏತತ್ತೀರ್ಥಪ್ರಭಾವೇಣ ಮುಚ್ಯತೇ ಬ್ರಹ್ಮಹತ್ಯಯಾ ।
ಸರ್ವತೀರ್ಥಾಭಿಷೇಕಂ ತು ಯಃ ಪಶ್ಯೇತ್ಸಾಗರೇಶ್ವರಂ ॥೪೨॥

ಯೋಜನಾಭ್ಯಂತರೇ ತಿಷ್ಠನ್ನಾವರ್ತೇ ಸಂಸ್ಥಿತಃ ಶಿವಃ ।
ತಂ ದೃಷ್ಟ್ವಾ ಸರ್ವತೀರ್ಥಾನಿ ದೃಷ್ಟಾನ್ಯೇವ ನ ಸಂಶಯಃ ॥೪೩॥

ಸರ್ವಪಾಪವಿನಿರ್ಮುಕ್ತೋ ಯತ್ರ ರುದ್ರಃ ಸ ಗಚ್ಛತಿ ।
ನರ್ಮದಾಸಂಗಮಂ ಯಾವದ್ಯಾವಚ್ಚಾಮರಕಂಟಕಂ ॥೪೪॥

---

೪೦-೪೧. ಧರ್ಮರಾಜಾ, ಅಲ್ಲಿಂದ ಉತ್ತಮವಾದ ಕೌಶಿಕೀ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸವ್ರತದಲ್ಲಿದ್ದು ಜಿತೇಂದ್ರಿಯನೂ, ಮಿತಾಹಾರಿಯೂ ಆದ ಮನುಷ್ಯನು ಆ ತೀರ್ಥದ ಪ್ರಭಾವದಿಂದ ಬ್ರಹ್ಮಹತ್ಯಾಪಾತಕವನ್ನು ಸಹ ಕಳೆದುಕೊಳ್ಳುವನು.

೪೨-೪೩. ಸಾಗರೇಶ್ವರದ ದರ್ಶನವನ್ನು ಮಾಡಿದರೆ ಸಾಕು. ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡಿದಷ್ಟು ಫಲ ಬರುತ್ತದೆ. ಯೋಜನದಷ್ಟು ದೂರದಲ್ಲಿ ಪರಮೇಶ್ವರನು ಸುಳಿಯಲ್ಲಿ ನಿಂತಿರುವನು. ಆತನನ್ನು ಕಂಡರೆ ಸರ್ವತೀರ್ಥಗಳನ್ನೂ ದರ್ಶನಮಾಡಿದಂತೆಯೇ ಸರಿ; ಸಂದೇಹವಿಲ್ಲ. ಸಕಲ ಪಾಪಗಳೂ ದೂರ ವಾಗುವುವು. ರುದ್ರಸಾನ್ನಿಧ್ಯವು ಲಭಿಸುವುದು.

೪೪. ಮಹಾರಾಜಾ, ಅಮರಕಂಟಕಪರ್ವತದಿಂದ ಹಿಡಿದು ಸಮುದ್ರವನ್ನು ಸೇರುವವರೆಗೆ ನರ್ಮದಾನದಿಯಲ್ಲಿ ಹತ್ತುಕೋಟಿ ಪುಣ್ಯತೀರ್ಥಗಳಿವೆಯೆಂದು ಹೇಳುತ್ತಾರೆ.

ಅತ್ರಾಂತರೇ ಮಹಾರಾಜ ತೀರ್ಥಕೋಟ್ಯೋ ದಶ ಸ್ಮೃತಾಃ ।
ತೀರ್ಥಾತ್ತೀರ್ಥಾಂತರಂ ಯತ್ರ ಋಷಿಕೋಟಿನಿಷೇವಿತಂ ॥೪೫॥

ಸಾಗ್ನಿಹೋತ್ರೈಸ್ತು ವಿದ್ವದ್ಭಿಃ ಸರ್ವೈರ್ಧ್ಯಾನಪರಾಯಣೈಃ ।
ಸೇವಿತಾಽನೇನ ರಾಜೇಂದ್ರ ತ್ವೀಪ್ಸಿತಾರ್ಥಪ್ರದಾಯಿಕಾ ॥೪೬॥

ಯಸ್ತ್ವಿದಂ ವೈ ಪಠೇನ್ನಿತ್ಯಂ ಶೃಣುಯಾದ್ವಾಽಪಿ ಭಾವತಃ ।
ತಸ್ಯ ತೀರ್ಥಾನಿ ಸರ್ವಾಣಿ ಹ್ಯಭಿಷಿಂಚಂತಿ ಪಾಂಡವ ॥೪೭॥

ನರ್ಮದಾ ಚ ಸದಾ ಪ್ರೀತಾ ಭವೇದ್ವೈ ನಾತ್ರ ಸಂಶಯಃ ।
ಪ್ರೀತಸ್ತಸ್ಯ ಭವೇದ್ರುದ್ರೋ ಮಾರ್ಕಂಡೇಯೋ ಮಹಾಮುನಿಃ ॥೪೮॥

ವಂಧ್ಯಾ ಚೈವ ಲಭೇತ್ಪುತ್ರಾನ್ ದುರ್ಭಗಾ ಸುಭಗಾ ಭವೇತ್ ।
ಕನ್ಯಾ ಲಭೇತ ಭರ್ತಾರಂ ಯಚ್ಚ ವಾಂಛೇತ್ತು ಯತ್ಫಲಂ ।
ತದೇವ ಲಭತೇ ಸರ್ವಂ ನಾತ್ರ ಕಾರ್ಯಾ ವಿಚಾರಣಾ ॥೪೯॥

---

೪೫-೪೬. ಆ ನದಿಯಲ್ಲಿ ಒಂದು ತೀರ್ಥದಿಂದ ಮತ್ತೊಂದಕ್ಕೆ ಹೋಗಿ ಕೋಟಿಗಟ್ಟಲೆ ಋಷಿಗಳು ಸ್ನಾನಾದಿಗಳನ್ನು ನಡೆಸುತ್ತಿರುವರು. ಅಗ್ನಿಹೋತ್ರಿಗಳು, ವಿದ್ವಾಂಸರು, ಭಗವಧ್ಯಾನಪರಾಯಣರು ಇವರೆಲ್ಲ ಇದನ್ನು ಅರ್ಚಿಸುವರು. ಆ ನದಿ ಕೋರಿದ ಬಯಕೆಗಳೆಲ್ಲವನ್ನೂ ಕೊಡುವುದು.

೪೭-೪೮. ಈ ತೀರ್ಥಮಹಿಮಾವರ್ಣನೆಯನ್ನು ನಿತ್ಯವೂ ಪಾರಾಯಣ ಮಾಡಲಿ, ಭಕ್ತಿಯಿಂದ ಕೇಳಲಿ ಆತನಿಗೆ ಎಲ್ಲ ತೀರ್ಥಗಳೂ ಅಭಿಷೇಕಮಾಡುವುವು. ನರ್ಮದಾನದಿ, ಮಹೇಶ್ವರ, ಮಹಾಮುನಿಯಾದ ಮಾರ್ಕಂಡೇಯ ಈ ಮೂವರೂ ಆತನಲ್ಲಿ ಪ್ರೀತರಾಗುವರು.

೪೯. ಬಂಜೆಗೂ ಕೂಡ ಮಕ್ಕಳಾಗುವುವು. ಅದೃಷ್ಟಹೀನೆಯು ಸೌಭಾಗ್ಯ ಶಾಲಿನಿಯಾಗುವಳು. ಕನ್ಯೆ ಅನುರೂಪನಾದ ಪತಿಯನ್ನು ಪಡೆಯುವಳು. ಯಾವನು ಏನನ್ನು ಬಯಸಲಿ ಅದೆಲ್ಲ ಕೈಗೂಡುವುದು. ಸಂದೇಹವಿಲ್ಲ.

**ಬ್ರಾಹ್ಮಣೋ ವೇದಮಾಪ್ನೋತಿ ಕ್ಷತ್ರಿಯೋ ವಿಜಯೀ ಭವೇತ್ ।**
**ವೈಶ್ಯಸ್ತು ಲಭತೇ ಲಾಭಂ ಶೂದ್ರಃ ಪ್ರಾಪ್ನೋತಿ ಸದ್ಗತಿಂ ॥೫೦॥**
**ಮೂರ್ಖಸ್ತು ಲಭತೇ ವಿದ್ಯಾಂ ತ್ರಿಸಂಧ್ಯಂ ಯಃ ಪಠೇನ್ನರಃ ।**
**ನರಕಂ ಚ ನ ಪಶ್ಯೇತ್ತು ವಿಯೋಗಂ ಚ ನ ಗಚ್ಛತಿ ॥೫೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನರ್ಮದಾಮಾಹಾತ್ಮ್ಯಂ ನಾಮ ಚತುರ್ನವತ್ಯಧಿಕಶತತಮೋಽಧ್ಯಾಯಃ**

---

೫೦. ಬ್ರಾಹ್ಮಣನು ವೇದಸಂಪನ್ನನಾಗುತ್ತಾನೆ. ಕ್ಷತ್ರಿಯನು ಜಯಶಾಲಿಯಾಗುತ್ತಾನೆ. ವೈಶ್ಯನು ಲಾಭಸಂಪಾದಿಸುತ್ತಾನೆ. ಶೂದ್ರನು ಸದ್ಗತಿಯನ್ನು ಪಡೆಯುತ್ತಾನೆ.

೫೧. ಮೂರ್ಖನು ವಿದ್ಯಾವಂತನಾಗುತ್ತಾನೆ. ಮೂರುಕಾಲವೂ ಇದನ್ನು ಪಠಿಸುವ ಮನುಷ್ಯನು ನರಕವನ್ನು ನೋಡುವುದಿಲ್ಲ. ಬಂಧುಜನರನ್ನು ಅಗಲುವುದಿಲ್ಲ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನರ್ಮದಾ ಮಾಹಾತ್ಮ್ಯವರ್ಣನವು ಸಮಾಪ್ತವಾಗುತ್ತದೆ.

ನರ್ಮದಾನದಿಯು ಅಮರಕಂಟಕದಲ್ಲಿ ಹುಟ್ಟಿ ಪಶ್ಚಿಮಸಮುದ್ರವನ್ನು ಸೇರುತ್ತದೆ. ಮೊದಲಿಂದ ಕೊನೆಯವರೆಗೆ ಅದರಲ್ಲಿ ಹತ್ತುಕೋಟಿ ಪುಣ್ಯ ತೀರ್ಥಗಳಿವೆ. ಹಿಂದೆ ಹೇಳಿರುವ ಹಲವು ತೀರ್ಥಗಳಲ್ಲದೆ ಅಶ್ವತೀರ್ಥ, ಸಾವಿತ್ರೀ ತೀರ್ಥ, ಮಾನಸತೀರ್ಥ ಮುಂತಾದುವು ಇನ್ನೂ ಲೆಕ್ಕವಿಲ್ಲದಷ್ಟಿವೆ. ಈ ತೀರ್ಥ ಮಹಿಮಾವರ್ಣನವನ್ನು ಪಾರಾಯಣಮಾಡುವ ಸಕಲ ವರ್ಣದವರೂ ಶ್ರೇಯಸ್ಸಿಗೆ ಪಾತ್ರರಾಗುತ್ತಾರೆ. ಮಹೇಶ್ವರ, ನರ್ಮದಾನದಿ ಮತ್ತು ಮಾರ್ಕಂಡೇಯ ಮಹಾಮುನಿ ಈ ಮೂವರೂ ಅವರಲ್ಲಿ ಪ್ರೀತರಾಗುತ್ತಾರೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರ್ಮದಾಮಾಹಾತ್ಮ್ಯವೆಂಬ
ನೂರ ತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಪಂಚನವತ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಇತ್ಯಾಕರ್ಣ್ಯ ಸ ರಾಜೇಂದ್ರ ಓಂಕಾರಸ್ಯಾಭಿವರ್ಣನಂ ।
ತತಃ ಪಪ್ರಚ್ಛ ದೇವೇಶಂ ಮತ್ಸ್ಯರೂಪಂ ಜಲಾರ್ಣವೇ || ೧ ||

|| ಮನುರುವಾಚ ||

ಋಷೀಣಾಂ ನಾಮ ಗೋತ್ರಾಣಿ ವಂಶಾವತರಣಂ ತಥಾ ।
ಪ್ರವರಾಣಾಂ ತಥಾ ಸಾಮ್ಯಮಸಾಮ್ಯಂ ವಿಸ್ತರಾದ್ವದ || ೨ ||

ಮಹಾದೇವೇನ ಋಷಯಃ ಶಪ್ತಾಃ ಸ್ವಾಯಂಭುವೇಽಂತರೇ ।
ತೇಷಾಂ ವೈವಸ್ವತೇ ಪ್ರಾಪ್ತೇ ಸಂಭವಂ ಮಮ ಕೀರ್ತಯ || ೩ ||

ದಾಕ್ಷಾಯಿಣೀನಾಂ ಚ ತಥಾ ಪ್ರಜಾಃ ಕೀರ್ತಯ ಮೇ ಪ್ರಭೋ ।
ಋಷೀಣಾಂ ಚ ತಥಾ ವಂಶಂ ಭೃಗುವಂಶವಿವರ್ಧನಂ || ೪ ||

---

೧. ಸೂತಪೌರಾಣಿಕನು ಹೇಳಿದನು.—ಓಂಕಾರ ಸ್ವರೂಪವಾದ ನರ್ಮದಾ ನದಿಯ ವರ್ಣನವನ್ನು ಕೇಳಿ ವೈವಸ್ವತ ಮನುಚಕ್ರವರ್ತಿಯು ಮಹಾಸಮುದ್ರ ಮಧ್ಯದಲ್ಲಿ ಮತ್ಸ್ಯರೂಪನಾದ ಭಗವಂತನನ್ನು ಪ್ರಶ್ನಿಸಿದನು.

೨. ಮನುಚಕ್ರವರ್ತಿ ಹೇಳಿದನು.—ಋಷಿಗಳ ಹೆಸರನ್ನೂ, ಗೋತ್ರಗಳನ್ನೂ, ವಂಶಾನುಕ್ರಮವನ್ನೂ ಪ್ರವರಗಳ ಸಾಮ್ಯವೈಷಮ್ಯಗಳನ್ನೂ ವಿಸ್ತರದಿಂದ ಹೇಳು.

೩. ಸ್ವಾಯಂಭುವ ಮನ್ವಂತರದಲ್ಲಿ ಮಹಾದೇವನು ಋಷಿಗಳಿಗೆ ಶಾಪವನ್ನು ಕೊಟ್ಟನಷ್ಟೆ. ಅವರು ಮತ್ತೆ ವೈವಸ್ವತ ಮನ್ವಂತರದಲ್ಲಿ ಹುಟ್ಟಿದುದೆಂತು? ಅದನ್ನು ನನಗೆ ತಿಳಿಸು.

೪. ದೇವಾ, ದಕ್ಷಬ್ರಹ್ಮನ ಹೆಣ್ಣುಮಕ್ಕಳ ಸಂತತಿಯನ್ನು ವರ್ಣಿಸಿ ಹೇಳು. ಋಷಿಗಳ ವಂಶವನ್ನೂ ಭೃಗುಮುನಿಯ ವಂಶವಿಸ್ತಾರವನ್ನೂ ತಿಳಿಸು.

॥ ಮತ್ಸ್ಯ ಉವಾಚ ॥

ಮನ್ವಂತರೇऽಸ್ಮಿನ್ ಸಂಪ್ರಾಪ್ತೇ ಪೂರ್ವಂ ವೈವಸ್ವತೇ ತಥಾ ।
ಚರಿತ್ರಂ ಕಥ್ಯತೇ ರಾಜನ್ ಬ್ರಹ್ಮಣಃ ಪರಮೇಷ್ಠಿನಃ ॥ ೫ ॥

ಮಹಾದೇವಸ್ಯ ಶಾಪೇನ ತ್ಯಕ್ತ್ವಾ ದೇಹಂ ಸ್ವಯಂ ತಥಾ ।
ಋಷಯಶ್ಚ ಸಮುದ್ಭೂತಾಶ್ಚ್ಯುತೇ ಶುಕ್ರೇ ಮಹಾತ್ಮನಃ ॥ ೬ ॥

ದೇವಾನಾಂ ಮಾತರೋ ದೃಷ್ಟ್ವಾ ದೇವಪತ್ನ್ಯಸ್ತಥೈವ ಚ ।
ಸ್ಕನ್ನಂ ಶುಕ್ರಂ ಮಹಾರಾಜ ಬ್ರಹ್ಮಣಃ ಪರಮೇಷ್ಠಿನಃ ॥ ೭ ॥

ತಜ್ಜುಹಾವ ತತೋ ಬ್ರಹ್ಮಾ ತತೋ ಜಾತಾ ಹುತಾಶನಾತ್ ।
ತತೋ ಜಾತೋ ಮಹಾತೇಜಾ ಭೃಗುಶ್ಚ ತಪಸಾಂ ನಿಧಿಃ ॥ ೮ ॥

ಅಂಗಾರೇಷ್ವಂಗಿರಾ ಜಾತೋ ಹ್ಯರ್ಚಿರ್ಭ್ಯೋऽತ್ರಿಸ್ತಥೈವ ಚ ।
ಮರೀಚಿಭ್ಯೋ ಮರೀಚಿಸ್ತು ತತೋ ಜಾತೋ ಮಹಾತಪಾಃ ॥ ೯ ॥

---

೫. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಹಿಂದಿನ ಮನ್ವಂತರದಲ್ಲಿಯೂ ಈ ವೈವಸ್ವತಮನ್ವಂತರವು ಬಂದಮೇಲೂ ನಡೆದ ಚತುರ್ಮುಖಬ್ರಹ್ಮನ ಚರಿತ್ರವನ್ನು ಹೇಳುವೆನು ಕೇಳು.

೬. ಮಹಾದೇವನ ಶಾಪದಿಂದ ಋಷಿಗಳು ತಾವೇ ದೇಹಪರಿತ್ಯಾಗ ಮಾಡಿದರು. ಬಳಿಕ ಮಹಾತ್ಮನಾದ ಬ್ರಹ್ಮನ ರೇತಸ್ಸು ಸ್ಖಲನವಾಗಲು ಅದರಿಂದ ಮತ್ತೆ ಜನಿಸಿದರು.

೭. ದೇವಮಾತೆಯರನ್ನೂ, ದೇವಪತ್ನಿಯರನ್ನೂ ನೋಡಿ ಸತ್ಯಲೋಕಾಧೀಶನಾದ ಬ್ರಹ್ಮನ ವೀರ್ಯವು ಸ್ಖಲಿತವಾಯಿತು.

೮-೯. ಬಳಿಕ ಬ್ರಹ್ಮನು ಆ ವೀರ್ಯವನ್ನು ಅಗ್ನಿಯಲ್ಲಿ ಹೋಮಮಾಡಿದನು. ಅನಂತರ ಅಗ್ನಿಯಿಂದ ಋಷಿಗಳು ಉತ್ಪನ್ನರಾದರು. ತಪೋನಿಧಿಯೂ ಮಹಾತೇಜಸ್ವಿಯೂ ಆದ ಭೃಗು ಜನಿಸಿದನು. ಕೆಂಡಗಳಿಂದ ಅಂಗಿರಸನೂ, ಜ್ವಾಲೆಗಳಿಂದ ಅತ್ರಿಯೂ, ಕಿರಣಗಳಿಂದ ಮಹಾತೇಜಸ್ವಿಯಾದ ಮರೀಚಿಯೂ ಸಂಭವಿಸಿದರು.

ಕೇಶೈಸ್ತು ಕಪಿಶೋ ಜಾತಃ ಪುಲಸ್ತ್ಯಶ್ಚ ಮಹಾತಪಾಃ ।
ಕೇಶೈಃ ಪ್ರಲಂಬೈಃ ಪುಲಹಸ್ತತೋ ಜಾತೋ ಮಹಾತಪಾಃ ॥೧೦॥

ವಸುಮಧ್ಯಾತ್ಸಮುತ್ಪನ್ನೋ ವಸಿಷ್ಠಸ್ತು ತಪೋಧನಃ
ಭೃಗುಃ ಪುಲೋಮ್ನಸ್ತು ಸುತಾಂ ದಿವ್ಯಾಂ ಭಾರ್ಯಾಮವಿಂದತ ॥೧೧॥

ತಸ್ಯಾಮಸ್ಯ ಸುತಾ ಜಾತಾ ದೇವಾ ದ್ವಾದಶ ಯಾಜ್ಞಿಕಾಃ ।
ಭುವನೋ ಭೌವನಶ್ಚೈವ ಸುಜನ್ಯಃ ಸುಜನಸ್ತಥಾ ॥೧೨॥

ಕ್ರತುರ್ವಸುಶ್ಚ ಮೂರ್ಧಾ ಚ ತ್ಯಾಜ್ಯಶ್ಚ ವಸುದಶ್ಚ ಹ ।
ಪ್ರಭವಶ್ಚಾವ್ಯಯಶ್ಚೈವ ದಕ್ಷೋಽಥ ದ್ವಾದಶಸ್ತಥಾ ॥೧೩॥

ಇತ್ಯೇತೇ ಭೃಗವೋ ನಾಮ ದೇವಾ ದ್ವಾದಶ ಕೀರ್ತಿತಾಃ ।
ಪೌಲೋಮ್ಯಾಂ ಜನಯಿನ್ವಿಪ್ರಾ ದೇವಾನಾಂ ತು ಕನೀಯಸಃ ॥೧೪॥

---

೧೦. ಕೇಶಗಳಿಂದ ಕಪಿಶನೂ ಬಹುತಪಸ್ವಿಯಾದ ಪುಲಸ್ತ್ಯನೂ ಉತ್ಪನ್ನರಾದರು. ಬಳಿಕ ಜೋಲಾಡುವ ಕೂದಲುಗಳಿಂದ ತಪೋನಿಧಿಯಾದ ಪುಲಹನು ಜನಿಸಿದನು.

೧೧. ತಪೋನಿಧಿಯಾದ ವಸಿಷ್ಠನು ಅಗ್ನಿಮಧ್ಯದಿಂದ ಉತ್ಪನ್ನನಾದನು. ಭೃಗುಮುನಿಯು ರೂಪಸಂಪನ್ನಳೂ ಪುಲೋಮನ ಮಗಳೂ ಆದ ಪೌಲೋಮಿಯನ್ನು ಮದುವೆಯಾದನು.

೧೨–೧೩. ಅವಳಲ್ಲಿ ಈತನಿಗೆ ಯಜ್ಞಾಭಿಮಾನಿಗಳಾದ ಹನ್ನೆರಡು ಜನ ದೇವತೆಗಳು ಪುತ್ರರಾಗಿ ಜನಿಸಿದರು. ಭವನ, ಭೌವನ, ಸುಜನ, ಕ್ರತು, ವಸ್ತು, ಮೂರ್ಧ, ತ್ಯಾಜ್ಯ, ವಸುದ, ಪ್ರಭವ, ಅವ್ಯಯ ಮತ್ತು ದಕ್ಷ ಎಂದು ಅವರ ಹೆಸರು. ಈ ಹನ್ನೆರಡು ಜನ ದೇವತೆಗಳಿಗೂ ಭೃಗುಗಳೆಂದೇ ಹೆಸರು.

೧೪. ಪೌಲೋಮಿಯಲ್ಲಿ ಹಲವರು ಬ್ರಾಹ್ಮಣರೂ ಕೂಡ ಜನಿಸಿದರು. ಇವರು ಮೇಲೆ ಹೇಳಿದ ದೇವತೆಗಳಿಗಿಂತ ಕಿರಿಯುವರು.

ಚ್ಯವನಂ ತು ಮಹಾಭಾಗಮಾಪ್ನುವಾನಂ ತಥೈವ ಚ ।
ಆಪ್ನುವಾನಾತ್ಮಜಶ್ಚೌರ್ವೋ ಜಮದಗ್ನಿಸ್ತದಾತ್ಮಜಃ ॥೧೫॥

ಔರ್ವೋ ಗೋತ್ರಕರಸ್ತೇಷಾಂ ಭಾರ್ಗವಾಣಾಂ ಮಹಾತ್ಮನಾಂ ।
ತತ್ರ ಗೋತ್ರಕರಾನ್ ವಕ್ಷ್ಯೇ ಭೃಗೋರ್ವೈ ದೀಪ್ತತೇಜಸಃ ॥೧೬॥

ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವ ಚ ।
ಔರ್ವಶ್ಚ ಜಮದಗ್ನಿಶ್ಚ ವಾತ್ಸ್ಯೋ ದಂಡಿರ್ನಡಾಯನಃ ॥೧೭॥

ವೈಗಾಯನೋ ವೀತಿಹವ್ಯಃ ಪೈಲಶ್ಚೈವಾತ್ರ ಶೌನಕಃ ।
ಶೌನಕಾಯನಜೀವಂತಿರಾವೇದಃ ಕಾರ್ಷಣಿಸ್ತಥಾ ॥೧೮॥

ವೈಹೀನರಿರ್ವಿರೂಪಾಕ್ಷೋ ರೌಹಿತ್ಯಾಯನಿರೇವ ಚ ।
ವೈಶ್ವಾನರಿಸ್ತಥಾ ನೀಲೋ ಲುಬ್ಧಃ ಸಾವರ್ಣಿಕಶ್ಚ ಸಃ ॥೧೯॥

ವಿಷ್ಣುಃ ಪೌರೋಽಪಿ ಬಾಲಾಕಿರ್ಐಲಿಕೋಽನಂತಭಾಗಿನಃ ।
ಮೃಗಮಾರ್ಗೇಯಮಾರ್ಕಂಡಜವಿನೋ ನೀತಿನಸ್ತಥಾ ॥೨೦॥

---

೧೫. ಮಹಾಮಹಿಮನಾದ ಚ್ಯವನ, ಮತ್ತು ಆಪ್ನುವಾನ ಇವರು ಭೃಗುವಿನ ಪುತ್ರರು. ಆಪ್ನುವಾನನ ಪುತ್ರ ಔರ್ವ; ಅವನ ಸುತ ಜಮದಗ್ನಿ.

೧೬. ಮಹಾತ್ಮರಾದ ಆ ಭಾರ್ಗವರಲ್ಲಿ ಔರ್ವನು ಗೋತ್ರಸ್ಥಾಪಕನೆನಿಸಿದನು. ಹೀಗೆಯೇ ಅತಿ ತೇಜಸ್ವಿಯಾದ ಆ ಭೃಗುಮಹರ್ಷಿಯ ವಂಶವನ್ನು ಅಭಿವೃದ್ಧಿಗೊಳಿಸಿ, ಗೋತ್ರಕಾರರೆಂದು ಪ್ರಖ್ಯಾತರಾದ ಋಷಿಗಳ ಹೆಸರನ್ನು ಹೇಳುವೆನು; ಕೇಳು.

೧೭-೨೯. ಈ ಮುಂದೆ ಹೇಳಿರುವವರು ಭೃಗುವಿನ ವಂಶದಲ್ಲಿ ಪ್ರಸಿದ್ಧರಾದ ಗೋತ್ರಕಾರರು. ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿ, ವಾತ್ಸ್ಯ, ದಂಡಿ, ನಡಾಯನ, ವೈಗಾಯನ, ವೀತಿಹವ್ಯ, ಪೈಲ, ಶೌನಕ, ಶೌನಕಾಯನ,

ಮುಂಡಮಾಂಡವ್ಯಮಾಂಡೂಕಫೇನಪಾಃ ಸ್ತನಿತಸ್ತಥಾ ।
ಸ್ಥಲಪಿಂಡಃ ಶಿಖಾವರ್ಣಃ ಶಾರ್ಕರಾಕ್ಷಿಸ್ತಥೈವ ಚ ॥೨೧॥

ಜಾಲಧಿಃ ಸೌಧಿಕಃ ಕ್ಷುಭ್ಯಃ ಕುತ್ಸೋಽನ್ಯೋ ಮೌದ್ಗಲಾಯನಃ ।
ಮಾಂಕಾಯನೋ ದೇವಪತಿಃ ಪಾಂಡುರೋಚಿಃ ಸಗಾಲವಃ ॥೨೨॥

ಸಾಂಕೃತ್ಯಶ್ಚಾತಕಿಃ ಸಾರ್ಪಿರ್ಯಜ್ಞಪಿಂಡಾಯನಸ್ತಥಾ ।
ಗಾರ್ಗ್ಯಾಯಣೋ ಗಾಯನಶ್ಚ ಋಷಿರ್ಗಾಹಾರ್ಯಣಸ್ತಥಾ ॥೨೩॥

ಗೋಷ್ಠಾಯನೋ ವಾಹ್ಯಾಯನೋ ವೈಶಂಪಾಯನ ಏವ ಚ ।
ವೈಕರ್ಣಿನಿಃ ಶಾರ್ಙ್ಗರವೋ ಯಾಜ್ಞೇಯಿರ್ಭ್ರಾಷ್ಟ್ರಕಾಯಣಿಃ ॥೨೪॥

ಲಾಲಾಟಿರ್ನಾಕುಲಿಶ್ಚೈವ ಲೌಕ್ಷಿಣ್ಯೋಪರಿಮಂಡಲೌ ।
ಆಲುಕಿಃ ಸೌಚಕಿಃ ಕೌತ್ಸಸ್ತಥಾಽನ್ಯಃ ಪೈಂಗಲಾಯನಿಃ ॥೨೫॥

ಸಾತ್ಯಾಯನಿರ್ಮಾಲಾಯನಿಃ ಕೌಟಲಿಃ ಕೌಚಹಸ್ತಿಕಃ ।
ಸೌಹಃ ಸೋಕ್ತಿಃ ಸಕೌವಾಕ್ಷಿಃ ಕೌಸಿಶ್ಚಾಂದ್ರಮಸಿಸ್ತಥಾ ॥೨೬॥

---

ಜೀವಂತಿ, ಆವೇದ, ಕಾರ್ಷಣಿ, ವೈಹೀನರಿ, ವಿರೂಪಾಕ್ಷ, ರೌಹಿತ್ಯಾಯನಿ, ವೈಶ್ವಾನರಿ, ನೀಲ, ಲುಬ್ಧ, ಸಾರ್ವಣಿಕ, ವಿಷ್ಣು ಪೌರ, ಬಾಲಾಕಿ, ಐಲಿಕ, ಅನಂತ ಭಾಗಿನ, ಮೃಗ, ಮಾರ್ಗೇಯ, ಮಾರ್ಕಂಡ, ಜವಿನ, ನೀತಿನ, ಮುಂಡ, ಮಾಂಡೂಕ, ಫೇನಪ, ಸ್ತನಿತ, ಸ್ಥಲಪಿಂಡ, ಶಿಖಾವರ್ಣ, ಶಾರ್ಕರಾಕ್ಷಿ, ಜಾಲಧಿ, ಸೌಧಿಕ, ಕ್ಷುಭ್ಯ, ಕುತ್ಸ, ಮೌದ್ಗಲಾಯನ, ಮಾಂಕಾಯನ, ದೇವಪತಿ, ಪಾಂಡುರೋಚಿ, ಗಾಲವ, ಸಾಂಕೃತ್ಯ, ಚಾತಕಿ, ಸಾರ್ಪಿ, ಯಜ್ಞಪಿಂಡಾಯನ, ಗಾರ್ಗ್ಯಾಯಣ, ಗಾಯನ, ಗಾಹಾರ್ಯಣ, ಗೋಷ್ಠಾಯನ, ವಾಹ್ಯಾಯನ, ವೈಶಂಪಾಯನ, ವೈಕರ್ಣಿನಿ, ಶಾರ್ಙ್ಗರವ, ಯಾಜ್ಞೇಯಿ, ಭ್ರಾಷ್ಟ್ರಕಾಯಣಿ, ಲಾಲಾಟಿ, ನಾಕುಲಿ, ಲೌಕ್ಷಿಣ್ಯ, ಉಪರಿಮಂಡಲ, ಆಲುಕಿ, ಸೌಚಕಿ, ಕೌತ್ಸ,

ನೈಕಜಿಹ್ವೋ ಜಿಹ್ವಕಶ್ಚ ವ್ಯಾಥಾಜ್ಯೋ ಲೌಹವೈರಿಣಃ ।
ಶಾರದ್ರತಿಕನೇತಿಷ್ಯೌ ಲೋಲಾಕ್ಷಿಶ್ಚಲಕುಂಡಲಃ ॥೭೭॥

ವಾಗಾಯನಿಶ್ಚಾನುಮತಿಃ ಪೂರ್ಣಿಮಾಗತಿಕೋಽಸಕೃತ್ ।
ಸಾಮಾನ್ಯೇನ ಯಥಾ ತೇಷಾಂ ಪಂಚೈತೇ ಪ್ರವರಾ ಮತಾಃ ॥೭೮॥

ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವಚ ।
ಔರ್ವಶ್ಚ ಜಮದಗ್ನಿಶ್ಚ ಪಂಚೈತೇ ಪ್ರವರಾ ಮತಾಃ ॥೭೯॥

ಅತಃ ಪರಂ ಪ್ರವಕ್ಷ್ಯಾಮಿ ಶೃಣು ತ್ವನ್ಯಾನ್ ಭೃಗೂದ್ವಹಾನ್ ।
ಜಮದಗ್ನಿರ್ಬಿದಶ್ಚೈವ ಪೌಲಸ್ತ್ಯೋ ಬೈಜಭೃತ್ತಥಾ ॥೩೦॥

ಋಷಿಶ್ಚೋಭಯಜಾತಶ್ಚ ಕಾಯನಿಃ ಶಾಕಟಾಯನಿಃ ।
ಔರ್ವೇಯಾ ಮಾರುತಾಶ್ಚೈವ ಸರ್ವೇಷಾಂ ಪ್ರವರಾಃ ಶುಭಾಃ ॥೩೧॥

ಭೃಗುಶ್ಚ ಚ್ಯವನಶ್ಚೈವ ಆಪ್ನುವಾನಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೩೨॥

---

ಪೈಂಗಲಾಯನಿ, ಸಾತ್ಯಾಯನಿ, ಮಾಲಾಯನಿ, ಕೌಟಲಿ, ಕೌಚಹಸ್ತಿಕ, ಸೌಹ, ಸೋಕ್ತಿ, ಸಕೌವಾಕ್ಷಿ, ಕೌಸಿ, ಚಾಂದ್ರಮಸಿ, ನೈಕಜಿಹ್ವ, ಜಿಹ್ವಕ, ವ್ಯಾಥಾಜ್ಯ, ಲೌಹವೈರಿಣ, ಶಾರಪ್ರತಿಕ, ನೇತಿಷ್ಯ, ಲೋಲಾಕ್ಷಿ, ಚಲಕುಂಡಲ, ವಾಗಾಯನಿ, ಅನುಮತಿ, ಪೂರ್ಣಿಮಾಗತಿಕ, ಅಸಕೃತ್. ಇವರಲ್ಲಿ ಭೃಗು, ಚ್ಯವನ, ಆಪ್ನುವಾನ, ಔರ್ವ, ಜಮದಗ್ನಿಗಳೆಂಬ ಐವರನ್ನೂ ಬಹು ಪ್ರಸಿದ್ಧರೆಂದು ಎಣಿಸಿದ್ದಾರೆ. ಇವರು ಪ್ರವರರ್ಷಿಗಳು.

೩೦-೩೧. ಭೃಗುವಂಶೋತ್ಪನ್ನರಾದ ಇನ್ನೂ ಉಳಿದವರನ್ನು ಹೇಳುವೆನು ಕೇಳು. ಜಮದಗ್ನಿ, ಬಿದ, ಪೌಲಸ್ತ್ಯ, ಬೈಜಭೃತ್, ಉಭಯಜಾತ, ಕಾಯನಿ, ಶಾಕಟಾಯನಿ. ಔರ್ವನ ವಂಶಸ್ಥರು, ಮರುತ್ತಿನ ವಂಶಸ್ಥರು ಇವರೆಲ್ಲ ಮುಂದೆ ಹೇಳುವ ಪ್ರವರರ್ಷಿಗಳ ಪರಂಪರೆಗೆ ಸೇರಿದವರು.

೩೨. ಭೃಗು, ಚ್ಯವನ, ಆಪ್ನುವಾನ ಈ ಮೂವರೂ ಪ್ರವರರ್ಷಿಗಳು. ಮೇಲೆಹೇಳಿದ ಋಷಿಗಳು ಒಬ್ಬರೊಡನೊಬ್ಬರು ವಿವಾಹ ಸಂಬಂಧವನ್ನು ಬೆಳೆಸ ಕೂಡದು.

ಭೃಗುದಾಸೋ ಮಾರ್ಗಪಥೋ ಗ್ರಾಮ್ಯಾಯಣಿಕಟಾಯನೀ ।
ಆಪಸ್ತಂಭಿಸ್ತಥಾ ಬಿಲ್ವಿರ್ನೈಕಶಿಃ ಕಪಿರೇವ ಚ ॥೩೩॥

ಆರ್ಷ್ಟಿಷೇಣೋ ಗಾರ್ದಭಿಶ್ಚ ಕಾರ್ದಮಾಯನಿರೇವ ಚ ।
ಆಶ್ವಾಯನಿಸ್ತಥಾ ರೂಪಿಃ ಪಂಚಾರ್ಷೇಯಾಃ ಪ್ರಕೀರ್ತಿತಾಃ ॥೩೪॥

ಭೃಗುಶ್ಚ ಚ್ಯವನಶ್ಚೈವ ಆಪ್ನವಾನಸ್ತಥೈವ ಚ
ಆರ್ಷ್ಟಿಷೇಣಸ್ತಥಾ ರೂಪಿಃ ಪ್ರವರಾಃ ಪಂಚ ಕೀರ್ತಿತಾಃ ॥೩೫॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಯಸ್ಕೋ ವಾ ವೀತಿಹವ್ಯೋ ವಾ ಮಥಿತಸ್ತು ತಥಾ ದಮಃ ॥೩೬॥

ಜೀವಂತ್ಯಾಯನಿರ್ಮೌಂಜಶ್ಚ ಪಿಲಿಶ್ಚೈವ ಚಲಿಸ್ತಥಾ ।
ಭಾಗಿಲೋ ಭಾಗವಿತ್ತಿಶ್ಚ ಕೌಶಾಪಿಸ್ತ್ವಥ ಕಾಶ್ಯಪಿಃ ॥೩೭॥

ಬಾಲಪಿಃ ಶ್ರಮದಾಗೋಪಿಃ ಸೌರಸ್ತಿಥಿಸ್ತಥೈವ ಚ ।
ಗಾರ್ಗೀಯಸ್ತ್ವಥ ಜಾಬಾಲಿಸ್ತಥಾ ಪೌಣ್ಯಾಯನೋ ಹ್ಯೃಷಿಃ ॥೩೮॥

---

೩೩-೩೪. ಭೃಗುದಾಸ, ಮಾರ್ಗಪಥ, ಗ್ರಾಮ್ಯಾಯಣಿ, ಕಟಾಯನಿ, ಆಪಸ್ತಂಬಿ, ಬಿಲ್ವಿ, ನೈಕಶಿ, ಕಪಿ, ಆರ್ಷ್ಟಿಷೇಣ, ಗಾರ್ದಭಿ, ಕಾರ್ದಮಾಯನಿ, ಆಶ್ವಾಯನಿ, ರೂಪಿ ಇವರೆಲ್ಲ ಪಂಚಾರ್ಷೇಯರು ಎಂದರೆ ಭೃಗು, ಚ್ಯವನ, ಆಪ್ನುವಾನ, ಔರ್ವ ಮತ್ತು ಜಮದಗ್ನಿಗಳೆಂಬ ಐವರು ಮಹರ್ಷಿಗಳ ಪರಂಪರೆಗೆ ಸೇರಿದವರು.

೩೫. ಭೃಗು, ಚ್ಯವನ, ಆಪ್ನುವಾನ, ಆರ್ಷ್ಟಿಷೇಣ, ರೂಪಿ ಎಂಬ ಈ ಐವರು ಪ್ರಸಿದ್ಧರಾದ ಋಷಿಗಳನ್ನೂ ಪ್ರವರರ್ಷಿಗಳೆಂದು ಹೇಳುತ್ತಾರೆ. ಇವರ ವಂಶಸ್ಥರು ಒಬ್ಬರೊಡನೊಬ್ಬರು ವೈವಾಹಿಕ ಸಂಬಂಧವನ್ನು ಮಾಡಬಾರದು.

೩೬-೩೯. ಯಸ್ಕ, ವೀತಿಹವ್ಯ, ಮಥಿತ, ದಮ, ಜೀವಂತ್ಯಾಯನಿ, ಮೌಂಜ, ಪಿಲಿ, ಚಲಿ, ಭಾಗಿಲ, ಭಾಗವಿತ್ತಿ, ಕೌಶಾಪಿ, ಕಾಶ್ಯಪಿ, ಬಾಲಪಿ, ಶ್ರಮದಾಗೋಪಿ, ಸೌರ, ತಿಥಿ, ಗಾರ್ಗೀಯ, ಜಾಬಾಲಿ, ಪೌಣ್ಯಾಯನ, ರಾಮೋದ ಇವರು ಭೃಗು, ವೀತಿಹವ್ಯ, ರೈವಸ, ವೈವಸ ಈ ಮಹರ್ಷಿಗಳ ಪರಂಪರೆಗೆ

ರಾಮೋದಶ್ಚ ತಥೈತೇಷಾಮಾರ್ಷೇಯಾಃ ಪ್ರವರಾಃ ಸ್ಮೃತಾಃ ।
ಭೃಗುಶ್ಚ ವೀತಿಹವ್ಯಶ್ಚ ತಥಾ ರೈವಸವೈವಸಾ ॥೩೯॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಶಾಲಾಯನಿಃ ಶಾಕಟಾಕ್ಷೋ ಮೈತ್ರೇಯಃ ಖಾಂಡವಸ್ತಥಾ ॥೪೦॥

ದ್ರೌಣಾಯನೋ ರೌಕ್ಮಾಯಣಿರಾಪಿಶಿಶ್ಚಾಪಿಕಾಯನಿಃ ।
ಹಂಸಜಿಹ್ವಸ್ತಥೈತೇಷಾಮಾರ್ಷೇಯಾಃ ಪ್ರವರಾ ಮತಾಃ ॥೪೧॥

ಭೃಗುಶ್ಚೈವಾಥ ವಧ್ರ್ಯಶ್ವೋ ದಿವೋದಾಸಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೪೨॥

ಏಕಾಯನೋ ಯಜ್ಞಪತಿರ್ಮತ್ಸ್ಯಗಂಧಸ್ತಥೈವ ಚ ।
ಪ್ರತ್ಯಹಶ್ಚ ತಥಾ ಸೌರಿಶ್ಚೌಕ್ಷಿರ್ವೈ ಕಾರ್ದಮಾಯನಿಃ ॥೪೩॥

ತಥಾ ಗೃತ್ಸಮದೋ ರಾಜನ್ ಸನಕಶ್ಚ ಮಹಾನೃಷಿಃ ।
ಪ್ರವರಾಸ್ತು ತಥೋಕ್ತಾನಾಮಾರ್ಷೇಯಾಃ ಪರಿಕೀರ್ತಿತಾಃ ॥೪೪॥

---

ಸೇರಿದವರು ಇವರು ಒಬ್ಬರೊಡನೊಬ್ಬರು ವಿವಾಹಸಂಬಂಧವನ್ನು ಮಾಡ ಕೂಡದು.

೪೦-೪೧. ಶಾಲಾಯನಿ, ಶಾಕಟಾಕ್ಷ, ಮೈತ್ರೇಯ, ಖಾಂಡವ, ದ್ರೌಣಾಯನ, ರೌಕ್ಮಾಯಣಿ, ಆಪಿಶಿ, ಆಪಿಕಾಯನಿ, ಹಂಸಜಿಹ್ವ ಈ ಋಷಿಗಳು ತ್ರ್ಯಾರ್ಷೇಯರು. ಎಂದರೆ ಮುಂದೆ ಹೇಳುವ ಮೂವರು ಪ್ರವರರ್ಷಿಗಳ ಪರಂಪರೆಗೆ ಸೇರಿದವರು.

೪೨. ಭೃಗು, ವಧ್ರ್ಯಶ್ವ, ದಿವೋದಾಸ ಈ ಮೂವರೇ ಆ ಮಹರ್ಷಿಗಳು. ಇವರ ವಂಶದವರು ಒಬ್ಬರಿಗೊಬ್ಬರು ಹೆಣ್ಣುಕೊಟ್ಟು ತರಬಾರದು.

೪೩-೪೪. ಏಕಾಯನ, ಯಜ್ಞಪತಿ, ಮತ್ಸ್ಯಗಂಧ, ಪ್ರತ್ಯಹ, ಸೌರಿ, ಚೌಕ್ಷಿ, ಕಾರ್ದಮಾಯಾನಿ, ಗೃತ್ಸಮದ, ಋಷಿಶ್ರೇಷ್ಠನಾದ ಸನಕ ಇವರು ದ್ವ್ಯಾರ್ಷೇಯರು.

ಭೃಗುರ್ಗೃತ್ಸಮದಶ್ಚೈವ ಆರ್ಷಾವೇತೌ ಪ್ರಕೀರ್ತಿತೌ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥೪೫॥

ಏತೇ ತವೋಕ್ತಾ ಭೃಗುವಂಶಜಾತಾ ।
ಮಹಾನುಭಾವಾ ನೃಪ ಗೋತ್ರಕಾರಾಃ ।
ಏಷಾಂ ಸುನಾಮ್ನಾಂ ಪರಿಕೀರ್ತನೇನ
ಪಾಪಂ ಸಮಗ್ರಂ ವಿಜಹಾತಿ ಜಂತುಃ ॥೪೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಭೃಗುವಂಶಪ್ರವರಕೀರ್ತನಂ ನಾಮ ಪಂಚನವತ್ಯಧಿಕಶತತಮೋಽಧ್ಯಾಯಃ

---

೪೫. ಭೃಗು, ಗೃತ್ಸಮದ, ಎಂಬ ಮಹರ್ಷಿಗಳಿಬ್ಬರ ಪರಂಪರೆಯಿಂದ ಬಂದವರು. ಇವರು ತಮ್ಮತಮ್ಮಲ್ಲಿ ಪರಸ್ಪರ ವಿವಾಹಸಂಬಂಧವನ್ನು ಬೆಳಸಬಾರದು.

೪೬. ಎಲೈ ಧರ್ಮರಾಜಾ, ಭೃಗುವಂಶೋತ್ಪನ್ನರಾದ ಈ ಮಹಾನುಭಾವರ ಹೆಸರುಗಳನ್ನು ನಿನಗೆ ಹೇಳಿದೆನು. ಇವರೆಲ್ಲರೂ ಗೋತ್ರಪ್ರವರ್ತಕರು. ಇವರ ಹೆಸರುಗಳನ್ನು ಹೇಳಿದರೆ ಮನುಷ್ಯನ ಸಕಲ ಪಾಪಗಳೂ ಪರಿಹಾರವಾಗುತ್ತವೆ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಭೃಗುವಂಶದವರ ಪ್ರವರವನ್ನು ಹೇಳಿದೆ.

ದೇವಮಾತೆಯರನ್ನು ನೋಡಿ ಬ್ರಹ್ಮನ ರೇತಸ್ಸು ಸ್ಖಲಿತವಾಯಿತು. ಅವನು ಅದನ್ನು ಅಗ್ನಿಯಲ್ಲಿ ಬಿಟ್ಟನು. ಆದರಿಂದ ಭೃಗು, ಅಂಗಿರಸ, ಅತ್ರಿ ಮುಂತಾದ ಮಹರ್ಷಿಗಳು ಜನಿಸಿದರು. ಭೃಗುಮುನಿಯು ಪೌಲೋಮಿಯನ್ನು ವರಿಸಿದನು. ಅವಳಲ್ಲಿ ಭುವನ, ಭೌವನ ಮೊದಲಾದ ಹನ್ನೆರಡು ಜನ ದೇವತೆಗಳು ಹುಟ್ಟಿದರು. ಅಲ್ಲದೆ ಚ್ಯವನ ಮತ್ತು ಆಪ್ನುವಾನರೆಂಬ ಬ್ರಾಹ್ಮಣರೂ ಹುಟ್ಟಿದರು. ಭೃಗು

ವಂಶದ ಋಷಿಪರಂಪರೆ ಇಲ್ಲಿಂದ ಪ್ರಾರಂಭವಾಗುವುದು. ಭೃಗು, ಚ್ಯವನ, ಆಪ್ನುವಾನ, ಔರ್ವ ಮತ್ತು ಜಮದಗ್ನಿ ಈ ಐವರೂ ಭೃಗುವಂಶದಲ್ಲಿ ಅತ್ಯಂತ ಪ್ರಸಿದ್ಧರು. ಇವರನ್ನು ಪ್ರವರರ್ಷಿಗಳೆಂದು ಹೇಳುತ್ತಾರೆ. ಈ ಕಾರಣದಿಂದಲೇ ಇವರ ವಂಶಜರು ಪಂಚಾರ್ಷೇಯರು ಎಂದರೆ ಐವರು ಋಷಿಗಳ ಪರಂಪರೆಯಿಂದ ಬಂದವರು ಎನಿಸಿಕೊಳ್ಳುವರು.

ಇವರಲ್ಲದೆ ಭೃಗುವಂಶಜರಾದ ಎಷ್ಟೋ ಮಹರ್ಷಿಗಳ ಹೆಸರನ್ನು ಈ ಅಧ್ಯಾಯದಲ್ಲಿ ತಿಳಿಸಿದೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಭೃಗುವಂಶಪ್ರವರಕೀರ್ತನವೆಂಬ<br>ನೂರ ತೊಂಬತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಣ್ಣವತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಮರೀಚಿತನಯಾ ರಾಜನ್ ಸುರೂಪಾ ನಾಮ ವಿಶ್ರುತಾ ।
ಭಾರ್ಯಾ ಚಾಂಗಿರಸೋ ದೇವಾಸ್ತಸ್ಯಾಃ ಪುತ್ರಾ ದಶ ಸ್ಮೃತಾಃ || ೧ ||

ಆತ್ಮಾಯುರ್ದಮನೋ ದಕ್ಷಃ ಸದಃ ಪ್ರಾಣಸ್ತಥೈವ ಚ ।
ಹವಿಷ್ಮಾಂಶ್ಚ ಗವಿಷ್ಠಶ್ಚ ಋತಃ ಸತ್ಯಶ್ಚ ತೇ ದಶ || ೨ ||

ಏತೇ ಚಾಂಗಿರಸೋ ನಾಮ ದೇವಾ ವೈ ಸೋಮಪಾಯಿನಃ ।
ಸುರೂಪಾ ಜನಯಾಮಾಸ ಋಷೀನ್ ಸರ್ವೇಶ್ವರಾನಿಮಾನ್ || ೩ ||

ಬೃಹಸ್ಪತಿಂ ಗೌತಮಂ ಚ ಸಂವರ್ತಮೃಷಿಸತ್ತಮಂ ।
ಉತಥ್ಯಂ ವಾಮದೇವಂ ಚ ಅಜಸ್ಯಮೃಷಿಜಂ ತಥಾ || ೪ ||

ಇತ್ಯೇತೇ ಋಷಯಃ ಸರ್ವೇ ಗೋತ್ರಕಾರಾಃ ಪ್ರಕೀರ್ತಿತಾಃ ।
ತೇಷಾಂ ಗೋತ್ರಸಮುತ್ಪನ್ನಾನ್ ಗೋತ್ರಕಾರಾನ್ನಿಬೋಧ ಮೇ || ೫ ||

---

೧. ಮತ್ಸ್ಯರೂಪಿಯಾದ ಭಗವಂತನು ಹೇಳಿದನು.—ಓ ರಾಜಾ, ಮರೀಚಿ ಮಹರ್ಷಿಗೆ ಪ್ರಸಿದ್ಧಳಾದ ಸುರೂಪೆಯೆಂಬ ಮಗಳಿದ್ದಳು. ಅವಳು ಅಂಗಿರಸನ ಪತ್ನಿ. ಆಕೆಯ ಮಕ್ಕಳು ಹತ್ತು ಜನ. ಅವರೆಲ್ಲರೂ ದೇವತೆಗಳು.

೨. ಆತ್ಮ, ಆಯು, ದಮನ, ದಕ್ಷ, ಸದ, ಪ್ರಾಣ, ಹವಿಷ್ಮಂತ, ಗವಿಷ್ಠ, ಋತ, ಸತ್ಯ ಇವರೇ ಆ ಹತ್ತು ಜನರು.

೩. ಈ ದೇವತೆಗಳು ಆಂಗಿರಸರೆಂದು ಪ್ರಖ್ಯಾತರಾದರು. ಇವರಿಗೆ ಯಜ್ಞ ಭಾಗದಲ್ಲಿ ಅರ್ಹತೆಯುಂಟು. ಇವರನ್ನಲ್ಲದೆ ಸುರೂಪೆಯು ಸರ್ವಸಮರ್ಥರಾದ ಈ ಮುಂದಿನ ಋಷಿಗಳಿಗೆ ಸಹ ಜನ್ಮವನ್ನಿತ್ತಳು.

೪-೫. ಬೃಹಸ್ಪತಿ, ಗೌತಮ, ಸಂವರ್ತ, ಉತಥ್ಯ, ವಾಮದೇವ, ಅಜಸ್ಯ ಋಷಿಜ ಎಂಬ ಈ ಋಷಿಗಳೆಲ್ಲರೂ ಗೋತ್ರಕಾರರು. ಎಂದರೆ ಆಯಾವಂಶಗಳ ಮೂಲಪುರುಷರು. ಇವರ ಗೋತ್ರದಲ್ಲಿ ಹುಟ್ಟಿ ಮತ್ತೆ ತಮ್ಮತಮ್ಮ ಮನೆತನಗಳನ್ನು ಸ್ಥಾಪಿಸಿದ ಋಷಿಗಳ ಹೆಸರನ್ನು ಹೇಳುವೆನು ಕೇಳಿರಿ.

ಉತಥ್ಯೋ ಗೌತಮಶ್ಚೈವ ತ್ರೈಲೇಯೋಭಿಜಿತಸ್ತಥಾ ।
ಸಾರ್ಧನೇಮಿಃ ಸಲೌಗಾಕ್ಷಿಃ ಕ್ಷೀರಃ ಕೌಷ್ಟಿಕಿರೇವ ಚ ॥ ೬ ॥

ರಾಹುಕರ್ಣಿಃ ಸೌಪುರಿಶ್ಚ ಕೈರಾತಿಃ ಸಾಮಲೋಮಕಿಃ ।
ಪೌಷಾಜಿತಿರ್ಭಾರ್ಗವತೋ ಹ್ಯೃಷಿಶ್ಚೈರೀಡವಸ್ತಥಾ ॥ ೭ ॥

ಕಾರೋಟಕಃ ಸಜೀವೀ ಚ ಉಪಬಿಂದುಸುರ್ೖಷಿಣೌ ।
ವಾಹಿನೀಪತಿರ್ವೈಶಾಲೀ ಕ್ರೋಷ್ಟಾ ಚೈವಾರುಣಾಯನಿಃ ॥ ೮ ॥

ಸೋಮೋಽತ್ರಾಯನಿಕಾಸೋರುಕೌಶಲ್ಯಾಃ ಪಾರ್ಥಿವಾಸ್ತಥಾ ।
ರೌಹಿಣ್ಯಾಯನಿರೇವಾಗ್ನೀ ಮೂಲಪಃ ಪಾಂಡುರೇವ ಚ ॥ ೯ ॥

ಕ್ಷಪಾವಿಶ್ವಕರೋಽರಿಶ್ಚ ಪಾರಿಕಾರಾರಿರೇವ ಚ ।
ಆರ್ಷೇಯಾಃ ಪ್ರವರಾಶ್ಚೈವ ತೇಷಾಂ ಚ ಪ್ರವರಾಞ್ಛೃಣು ॥೧೦॥

ಅಂಗಿರಾಃ ಸುವಚೋತಥ್ಯ ಉಶಿಜಶ್ಚ ಮಹಾನೃಷಿಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೧೧॥

---

೬-೧೦. ಉತಥ್ಯ, ಗೌತಮ, ತ್ರೈಲೇಯ, ಅಭಿಜಿತ, ಸಾರ್ಧನೇಮಿ, ಲೌಗಾಕ್ಷಿ, ಕ್ಷೀರ, ಕೌಷ್ಟಿಕಿ, ರಾಹುಕರ್ಣಿ, ಸೌಪುರಿ, ಕೈರಾತಿ, ಸಾಮಲೋಮಕಿ, ಪೌಷಾಜಿತಿ, ಭಾರ್ಗವತ, ಐರೀಡವ, ಕಾರೋಟಕ, ಸಜೀವಿ, ಉಪಬಿಂದು, ಸುರ್ೖಷಿಣ, ವಾಹಿನೀಪತಿ, ವೈಶಾಲಿ, ಕ್ರೋಷ್ಟ, ಆರುಣಾಯನಿ, ಸೋಮ, ಅತ್ರಾಯನಿ, ಕಾಸೋರು, ಕೌಶಲ್ಯ, ಪಾರ್ಥಿವ, ರೌಹಿಣ್ಯಾಯನಿ, ರೇವಾಗ್ನಿ, ಮೂಲಪ, ಪಾಂಡು ಕ್ಷಪಾವಿಶ್ವಕರ, ಅರಿ, ಪಾರಿಕಾರಾರಿ ಇವರೇ ಗೋತ್ರಕಾರರು. ಋಷಿಪರಂಪರಾ ಗತವಾದ ಇವರ ಪ್ರವರವನ್ನು ಹೇಳುವೆನು ಕೇಳು.

೧೧. ಅಂಗಿರಸ್ಸು, ಸುವಚ, ಉತಥ್ಯ, ಋಷಿಶ್ರೇಷ್ಠನಾದ ಉಶಿಜ ಇವರು ಪ್ರವರರ್ಷಿಗಳು. ಈ ಋಷಿಗಳ ಸಂತತಿಯವರು ಪರಸ್ಪರ ವಿವಾಹಸಂಬಂಧವನ್ನು ಬೆಳಸಬಾರದು.

ಆತ್ರೇಯಾಯಣಿಸೌವೇಷ್ಟ್ಯಾವಗ್ನಿವೇಶ್ಯಃ ಶಿಲಾಸ್ಥಲಿಃ ।
ಬಾಲಿಶಾಯನಿಶ್ಚೈಕೇಷೀ ವಾರಾಹಿರ್ಬಾಷ್ಕಲಿಸ್ತಥಾ ॥೧೨॥

ಸೌಟಿಶ್ಚ ತೃಣಕರ್ಣಿಶ್ಚ ಪ್ರಾವಹಿಶ್ಚಾಶ್ವಲಾಯನಿಃ ।
ವಾರಾಹಿರ್ಬರ್ಹಿಸಾದೀ ಚ ಶಿಖಾಗ್ರೀವಿಸ್ತಥೈವ ಚ ॥೧೩॥

ಕಾರಕಿಶ್ಚ ಮಹಾಕಾಪಿಸ್ತಥಾ ಚೋಡುಪತಿಃ ಪ್ರಭುಃ
ಕೌಚಕಿರ್ಧಮಿತಶ್ಚೈವ ಪುಷ್ಪಾನ್ವೇಷಿಸ್ತಥೈವ ಚ ॥೧೪॥

ಸೋಮತನ್ವಿರ್ಬ್ರಹ್ಮತನ್ವಿಃ ಸಾಲಡಿರ್ಬಾಲಡಿಸ್ತಥಾ ।
ದೇವರಾರಿರ್ದೇವಸ್ಥಾನಿರ್ಹಾರಿಕರ್ಣಿಃ ಸರಿದ್ಭುವಿಃ ॥೧೫॥

ಪ್ರಾವೇಪಿಃ ಸಾದ್ಯಸುಗ್ರೀವಿಸ್ತಥಾ ಗೋಮೇದಗಂಧಿಕಃ ।
ಮತ್ಸ್ಯಾಚ್ಛಾದ್ಯೋ ಮೂಲಹರಃ ಫಲಾಹಾರಸ್ತಥೈವ ಚ ॥೧೬॥

ಗಾಂಗೋದಧಿಃ ಕೌರುಪತಿಃ ಕೌರುಕ್ಷೇತ್ರಿಸ್ತಥೈವ ಚ ।
ನಾಯಕಿರ್ಜೈತ್ಯದ್ರೌಣಿಶ್ಚ ಜೈಹ್ವಲಾಯನಿರೇವ ಚ ॥೧೭॥

ಆಪಸ್ತಂಬಿರ್ಮೌಂಜವೃಷ್ಟಿರ್ಮಾರ್ಷ್ಟಿಪಿಂಗಲಿರೇವ ಚ ।
ಪೈಲಶ್ಚೈವ ಮಹಾತೇಜಾಃ ಶಾಲಂಕಾಯನಿರೇವ ಚ ॥೧೮॥

---

೧೨-೨೦. ಆತ್ರೇಯಾಯಣಿ, ಸೌವೇಷ್ಟ್ಯ, ಅಗ್ನಿವೇಶ್ಯ, ಶಿಲಾಸ್ಥಲಿ, ಬಾಲಿಶಾಯನಿ, ಏಕೇಷಿ, ವಾರಾಹಿ, ಬಾಷ್ಕಲಿ, ಸೌಟಿ, ತೃಣಕರ್ಣಿ, ಪ್ರಾವಹಿ, ಆಶ್ವಲಾಯನಿ, ವಾರಾಹಿ, ಬರ್ಹಿಸಾದಿ, ಶಿಖಾಗ್ರೀವಿ, ಕಾರಕಿ, ಮಹಾಕಾಪಿ, ಉಡುಪತಿ, ಕೌಚಕಿ, ಧಮಿತ, ಪುಷ್ಪಾನ್ವೇಷಿ, ಸೋಮತನ್ವಿ, ಬ್ರಹ್ಮತನ್ವಿ, ಸಾಲಡಿ, ಬಾಲಡಿ, ದೇವರಾರಿ, ದೇವಸ್ಥಾನಿ, ಹಾರಿಕರ್ಣಿ, ಸರಿದ್ಭುವಿ, ಪ್ರಾವೇಪಿ, ಸಾದ್ಯಸುಗ್ರೀವಿ, ಗೋಮೇದಗಂಧಿಕ, ಮತ್ಸ್ಯಾಚ್ಛಾದ್ಯ, ಮೂಲಹರ, ಫಲಾಹಾರ, ಗಾಂಗೋದಧಿ, ಕೌರುಪತಿ, ಕೌರುಕ್ಷೇತ್ರಿ, ನಾಯಕಿ, ಜೈತ್ಯ, ದ್ರೌಣಿ, ಜೈಹ್ವ

ದ್ವಾಖ್ಯೇಯೋ ಮಾರುತಶ್ಚೈಷಾಂ ತ್ರ್ಯಾರ್ಷೇಯಃ ಪ್ರವರೋ ನೃಪ ।
ಅಂಗಿರಾಃ ಪ್ರಥಮಸ್ತೇಷಾಂ ದ್ವಿತೀಯಶ್ಚ ಬೃಹಸ್ಪತಿಃ ॥೧೯॥

ತೃತೀಯಶ್ಚ ಭರದ್ವಾಜಃ ಪ್ರವರಾಃ ಪರಿಕೀರ್ತಿತಾಃ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥೨೦॥

ಕಾಣ್ವಾಯನಾಃ ಕೋಪಚಯಾಸ್ತಥಾ ವಾತ್ಸ್ಯತರಾಯಣಾಃ ।
ಭ್ರಾಷ್ಟ್ರಕೃದ್ರಾಷ್ಟ್ರಪಿಂಡೀ ಚ ಲೈಂದ್ರಾಣಿಃ ಸಾಯಕಾಯನಿಃ ॥೨೧॥

ಕ್ರೋಷ್ಟಾಕ್ಷೀ ಬಹುವೀತೀ ಚ ಕಾಲಕೃನ್ಮಧುರಾವಹಃ ।
ಲಾವಕೃದ್ಗಾಲವಿದ್ಗಾಥೀ ಮಾರ್ಕಟಿಃ ಪೌಲಿಕಾಯನಿಃ ॥೨೨॥

ಸ್ಕಂದಸಶ್ಚ ತಥಾ ಚಕ್ರೀ ಗಾರ್ಗ್ಯಃ ಶ್ಯಾಮಾಯನಿಸ್ತಥಾ ।
ಬಾಲಾಕಿಃ ಸಾಹರಿಶ್ಚೈವ ಪಂಚಾರ್ಷೇಯಾಃ ಪ್ರಕೀರ್ತಿತಾಃ ॥೨೩॥

ಅಂಗಿರಾಶ್ಚ ಮಹಾತೇಜಾ ದೇವಾಚಾರ್ಯೋ ಬೃಹಸ್ಪತಿಃ ।
ಭರದ್ವಾಜಸ್ತಥಾ ಗರ್ಗಃ ಸೈತ್ಯಶ್ಚ ಭಗವಾನೃಷಿಃ ॥೨೪॥

---

ಲಾಯನಿ, ಆಪಸ್ತಂಬಿ, ಮೌಂಜವೃಷ್ಟಿ, ಮಾಷ್ಟ್ರಪಿಂಗಲಿ, ಪೈಲ, ಮಹಾತೇಜಸ್ವಿಯಾದ ಶಾಲಂಕಾಯನಿ, ದ್ವ್ಯಾಖ್ಯೇಯ, ಮಾರುತ ಇವರ ಸಂತತಿಗಳು ಅಂಗಿರಸ್ಸು, ಬೃಹಸ್ಪತಿ ಮತ್ತು ಭರದ್ವಾಜರೆಂಬ ಮೂವರು ಮಹರ್ಷಿಗಳ ಪ್ರವರದಿಂದ ಅಂಕಿತವಾಗಿವೆ. ಆದುದರಿಂದ ಇವರನ್ನು ತ್ರ್ಯಾರ್ಷೇಯರೆನ್ನುತ್ತಾರೆ. ಇವರು ಪರಸ್ಪರ ವಿವಾಹ ಸಂಬಂಧವನ್ನು ಬೆಳಸಬಾರದು.

೨೧–೨೪. ಕಾಣ್ವಾಯನರು, ಕೋಪಚಯರು, ವಾತ್ಸ್ಯತರಾಯಣರು, ಭ್ರಾಷ್ಟ್ರಕೃತ್, ರಾಷ್ಟ್ರಪಿಂಡಿ, ಲೈಂದ್ರಾಣಿ, ಸಾಯಕಾಯನಿ, ಕ್ರೋಷ್ಟಾಕ್ಷಿ, ಬಹುವೀತಿ, ಕಾಲಕೃತ್, ಮಧುರಾವಹ, ಲಾವಕೃತ್, ಗಾಲವಿತ್, ಗಾಥಿ, ಮಾರ್ಕಟಿ, ಪೌಲಿಕಾಯನಿ, ಸ್ಕಂದಸ, ಚಕ್ರಿ, ಗಾರ್ಗ್ಯ, ಶ್ಯಾಮಾಯನಿ, ಬಾಲಾಕಿ, ಸಾಹರಿ ಇವರೆಲ್ಲರೂ ಪಂಚಾರ್ಷೇಯರು. ಬಹುತೇಜೋವಂತನಾದ ಅಂಗಿರಸ್ಸು, ದೇವತೆಗಳ ಆಚಾರ್ಯನಾದ ಬೃಹಸ್ಪತಿ, ಭರದ್ವಾಜ, ಗರ್ಗ ಮತ್ತು ಪೂಜ್ಯನಾದ ಸೈತ್ಯ ಇವರೇ ಆ ಐವರು ಪ್ರವರರ್ಷಿಗಳು. ಮೇಲೆ ಹೇಳಿದ ಕಾಣ್ವಾಯನಾದಿಗಳ ಸಂತತಿಯವರು ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಕಪೀತರಃ ಸ್ವಸ್ತಿತರೋ ದಾಕ್ಷಿಃ ಶಕ್ತಿಃ ಪತಂಜಲಿಃ ॥೨೫॥

ಭೂಯುಸಿರ್ಜಲಸಂಧಿಶ್ಚ ಬಿಂದುರ್ಮಾದಿಃ ಕುಸೀದಕಿಃ ।
ಊರ್ವಸ್ತು ರಾಜಕೇಶೀ ಚ ವೌಷಧಿಃ ಶಂಸಪಿಸ್ತಥಾ ॥೨೬॥

ಶಾಲಶ್ಚ ಕಲಶೀ ಕಂಠಋಷಿಃ ಕಾರೀರಯಸ್ತಥಾ ।
ಕಾಟ್ಯೋ ಧಾನ್ಯಾಯನಿಶ್ಚೈವ ಭಾವಾಸ್ಯಾಯನಿರೇವ ಚ ॥೨೭॥

ಭರದ್ವಾಜಿಃ ಸೌಬುಧಿಶ್ಚ ಲಖ್ವೀ ದೇವಮತಿಸ್ತಥಾ ।
ತ್ರ್ಯಾರ್ಷೇಯೋಽಭಿಮತಶ್ಚೈಷಾಂ ಪ್ರವರೋ ಭೂಮಿಪೋತ್ತಮ ॥೨೮॥

ಅಂಗಿರಾ ದಮವಾಹ್ಯಶ್ಚ ತಥಾ ಚೈವಾಪ್ಯುರುಕ್ಷಯಃ ।
ಪರಸ್ಪರಮನ್ವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೨೯॥

ಸಂಕೃತಿಶ್ಚ ತ್ರಿಮಾರ್ಷ್ಟಿಶ್ಚ ಮನುಃ ಸಂಬಂಧಿರೇವ ವಾ ।
ತಂಡಿಶ್ಚೇನಾತಕಿಶ್ಚೈವ ತೈಲಕೋ ದಕ್ಷ ಏವ ಚ ॥೩೦॥

---

೨೫-೨೯. ಕಪೀತರ, ಸ್ವಸ್ತಿತರ, ದಾಕ್ಷಿ, ಶಕ್ತಿ ಪತಂಜಲಿ, ಭೂಯುಸಿ, ಜಲಸಂಧಿ, ಬಿಂದು, ಮಾದಿ, ಕುಸೀದಕಿ, ಊರ್ವ, ರಾಜಕೇಶಿ, ವೌಷಧಿ, ಶಂಸಪಿ, ಶಾಲಿ, ಕಲಶಿ, ಕಂಠರ್ಷಿ, ಕಾರೀರಯ, ಕಾಟ್ಯ, ಧ್ಯಾನಾಯನಿ, ಭಾವಾಸ್ಯಾಯನಿ, ಭರದ್ವಾಜಿ, ಸೌಬುಧಿ, ಲಖ್ವಿ, ದೇವಮತಿ ಇವರು ತ್ರ್ಯಾರ್ಷೇಯರು ಎಂದರೆ ಇವರ ವಂಶಪರಂಪರೆಯು ಅಂಗಿರಸ್ಸು, ದಮವಾಹ ಮತ್ತು ಉರುಕ್ಷಯರೆಂಬ ಮೂವರು ಮಹರ್ಷಿಗಳಿಂದ ಪ್ರಸಿದ್ಧವಾದುದು. ಓ ಭೂಪೇಂದ್ರಾ, ಈಗ ಹೇಳಿದ ಋಷಿಗಳ ವಂಶದವರು ಪರಸ್ಪರ ಹೆಣ್ಣುಕೊಟ್ಟು ತರಬಾರದು.

೩೦-೩೨. ಸಂಕೃತಿ, ತ್ರಿಮಾರ್ಷ್ಟಿ, ಮನು, ಸಂಬಂಧಿ ತಂಡಿ, ಚೇನಾತಕಿ, ತೈಲಕ, ದಕ್ಷ, ನಾರಾಯಣಿ, ಚಾರ್ಷಣಿ, ಲೌಕ್ಷಿ, ಗಾರ್ಗ್ಯ, ಹರಿ, ಗಾಲವ,

ನಾರಾಯಣಿಶ್ಶಾರ್ಷಣಿಶ್ಚ ಲೌಕ್ಷಿಗಾರ್ಗ್ಯಹರಿಸ್ತಥಾ ।
ಗಾಲವಶ್ಚ ಅನೇಹಶ್ಚ ಸರ್ವೇಷಾಂ ಪ್ರವರೋ ಮತಃ ॥೩೧॥

ಅಂಗಿರಾಃ ಸಂಕೃತಿಶ್ಚೈವ ಗೌರವೀತಿಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೩೨॥

ಕಾತ್ಯಾಯನೋ ಹರಿತಕಃ ಕೌತ್ಸಃ ಪಿಂಗಸ್ತಥೈವ ಚ ।
ಹಂಡಿದಾಸೋ ವಾತ್ಸ್ಯಾಯನಿರ್ಮಾದ್ರಿರ್ಮೌಲಿಃ ಕುಬೇರಣಿಃ ॥೩೩॥

ಭೀಮವೇಗಃ ಶಾಶ್ವದರ್ಭಿಃ ಸರ್ವೇ ತ್ರಿಪ್ರವರಾಃ ಸ್ಮೃತಾಃ ।
ಅಂಗಿರಾ ಬೃಹದಶ್ವಶ್ಚ ಜೀವನಾಶ್ವಸ್ತಥೈವ ಚ ॥೩೪॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಬೃಹದುಕ್ಥೋ ವಾಮದೇವಸ್ತಥಾ ತ್ರಿಪ್ರವರಾ ಮತಾಃ ॥೩೫॥

ಅಂಗಿರಾ ಬೃಹದುಕ್ಥಶ್ಚ ವಾಮದೇವಸ್ತಥೈವ ಚ ।
ಪರಸ್ಪರಮವೈವಾಹ್ಯಾ ಇತ್ಯೇತೇ ಪರಿಕೀರ್ತಿತಾಃ ॥೩೬॥

---

ಅನೇಹ ಇವರೆಲ್ಲ ತ್ರ್ಯಾರ್ಷೇಯರು ; ಎಂದರೆ ಇವರ ಪ್ರವರವು ಅಂಗಿರಸ್ಸು, ಸಂಕೃತಿ ಗೌರವೀತಿಗಳೆಂಬ ಮೂವರು ಮಹರ್ಷಿಗಳಿಂದ ಅಂಕಿತವಾಗಿದೆ.

೩೩-೩೪. ಕಾತ್ಯಾಯನ, ಹರಿತಕ, ಕೌತ್ಸ, ಪಿಂಗ, ಹಂಡಿದಾಸ, ವಾತ್ಸ್ಯಾಯನಿ, ಮಾದ್ರಿ, ಮೌಲಿ, ಕುಬೇರಣಿ, ಭೀಮವೇಗ, ಶಾಶ್ವದರ್ಭಿ ಇವರು ತ್ರ್ಯಾರ್ಷೇಯರು. ಅಂಗಿರಸ್ಸು, ಬೃಹದಶ್ವ ಮತ್ತು ಜೀವನಾಶ್ವರೆಂಬ ಮೂವರು ಪ್ರವರರ್ಷಿಗಳ ಪರಂಪರೆಯಿಂದ ಬಂದವರು. ಇವರ ಸಂತತಿಯವರು ಒಬ್ಬರೊಡನೊಬ್ಬರು ವೈವಾಹಿಕಸಂಬಂಧವನ್ನು ನಡೆಸಬಾರದು.

೩೫-೩೬. ಬೃಹದುಕ್ಥ, ವಾಮದೇವ ಇವರೂ ಸಹ ತ್ರಯಾರ್ಷೇಯರು ; ಎಂದರೆ ಅಂಗಿರಸ್ಸು, ಬೃಹದುಕ್ಥ, ವಾಮದೇವರೆಂಬ ಮೂವರು ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರ ಸಂತತಿಯವರು ಪರಸ್ಪರ ವಿವಾಹಕ್ಕೆ ಅರ್ಹರಲ್ಲ.

**ಕುತ್ಸಗೋತ್ರೋದ್ಭವಾಶ್ಚೈವ ತಥಾ ತ್ರಿಪ್ರವರಾ ಮತಾಃ ।**
**ಅಂಗಿರಾಶ್ಚ ಸದಸ್ಯಶ್ಚ ಪುರುಕುತ್ಸಸ್ತಥೈವ ಚ ।**
**ಕುತ್ಸಾಃ ಕುತ್ಸೈರವೈವಾಹ್ಯಾ ಏವಮಾಹುಃ ಪುರಾತನಾಃ ॥೩೭॥**

**ರಥೀತರಾಣಾಂ ಪ್ರವರಾಸ್ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।**
**ಅಂಗಿರಾಶ್ಚ ವಿರೂಪಶ್ಚ ತಥೈವ ಚ ರಥೀತರಃ ।**
**ರಥೀತರಾ ಹ್ಯವೈವಾಹ್ಯಾ ನಿತ್ಯಮೇವ ರಥೀತರೈಃ ॥೩೮॥**

**ವಿಷ್ಣುಸಿದ್ಧಿಃ ಶಿವಮತಿರ್ಜತೃಣಃ ಕತೃಣಸ್ತಥಾ ।**
**ಪುತ್ರವಶ್ಚ ಮಹಾತೇಜಾಸ್ತಥಾ ವೈರಪರಾಯಣಃ ॥೩೯॥**

**ತ್ರ್ಯಾರ್ಷೇಯೋಽಭಿಮತಸ್ತೇಷಾಂ ಸರ್ವೇಷಾಂ ಪ್ರವರೋ ನೃಪ ।**
**ಅಂಗಿರಾಶ್ಚ ವಿರೂಪಶ್ಚ ವೃಷಪರ್ವಸ್ತಥೈವ ಚ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೪೦॥**

---

೩೭. ಕುತ್ಸಗೋತ್ರದಲ್ಲಿ ಹುಟ್ಟಿದವರ ಪ್ರವರವು ಅಂಗಿರಸ್ಸು, ಸದಸ್ಯ ಮತ್ತು ಪುರುಕುತ್ಸಗಳೆಂಬ ಮೂವರು ಮಹರ್ಷಿಗಳಿಂದ ಕೂಡಿದೆ. ಆದುದರಿಂದ ಇವರು ತ್ರ್ಯಾರ್ಷೇಯರು. ಇವರು ತಮ್ಮ ಗೋತ್ರದವರೇ ಆದ ಉಳಿದವರೊಡನೆ ವಿವಾಹವನ್ನು ನಡೆಸಕೂಡದು.

೩೮. ರಥೀತರರು ಅಂಗಿರಸ್ಸು, ವಿರೂಪ, ರಥೀತರ ಎಂಬ ಮೂವರು ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರು ತ್ರ್ಯಾರ್ಷೇಯರೆನಿಸಿಕೊಳ್ಳುವರು. ರಥೀತರರು ರಥೀತರರೊಡನೆ ಎಂದಿಗೂ ವಿವಾಹಸಂಬಂಧವನ್ನು ಮಾಡಬಾರದು.

೩೯-೪೦. ಓ ರಾಜಾ, ವಿಷ್ಣುಸಿದ್ಧಿ, ಶಿವಮತಿ, ಜತೃಣ, ಕತೃಣ, ಮಹಾತೇಜಸ್ವಿಯಾದ ಪುತ್ರವ, ವೈರಪರಾಯಣ ಈ ಎಲ್ಲ ಋಷಿಗಳೂ ತ್ರ್ಯಾರ್ಷೇಯರು. ಅಂಗಿರಸ್ಸು, ವಿರೂಪ ಮತ್ತು ವೃಷಪರ್ವರೆಂಬ ಮೂವರು ಪ್ರವರರ್ಷಿಗಳ ಪರಂಪರೆಯಿಂದ ಬಂದವರು. ಇವರು ತಮ್ಮತಮ್ಮಲ್ಲಿ ವಿವಾಹವನ್ನು ನಡೆಸಬಾರದು.

ಸಾತ್ಯಮುಗ್ರಿರ್ಮಹಾತೇಜಾ ಹಿರಣ್ಯಸ್ತಂಬಿಮುದ್ಗಲೌ ।
ತ್ರ್ಯಾರ್ಷೇಯೋ ಹಿ ಮತಸ್ತೇಷಾಂ ಸರ್ವೇಷಾಂ ಪ್ರವರೋ ನೃಪ ॥೪೧॥

ಅಂಗಿರಾ ಮತ್ಸ್ಯದಗ್ಧಶ್ಚ ಮುದ್ಗಲಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೪೨॥

ಹಂಸಜಿಹ್ವೋ ದೇವಜಿಹ್ವೋ ಹ್ಯಗ್ನಿಜಿಹ್ವೋ ವಿರಾಡಪಃ ।
ಅಪಾಗ್ನೇಯಸ್ತ್ವಶ್ವಯುಶ್ಚ ಪರಣ್ಯಸ್ತಾ ವಿಮೌದ್ಗಲಾಃ ॥೪೩॥

ತ್ರ್ಯಾರ್ಷೇಯಾಭಿಮತಾಸ್ತೇಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ಅಂಗಿರಾಶ್ಚೈವ ತಂಡಿಶ್ಚ ಮೌದ್ಗಲ್ಯಶ್ಚ ಮಹಾತಪಾಃ ॥೪೪॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಅಪಾಂಡುಶ್ಚ ಗುರುಶ್ಚೈವ ತೃತೀಯಃ ಶಾಕಟಾಯನಃ ।
ತತಃ ಪ್ರಾಗಾಥಮಾ ನಾರೀ ಮಾರ್ಕಂಡೋ ಮರಣಃ ಶಿವಃ ॥೪೫॥

---

೪೧-೪೨. ಬಹು ತೇಜಸ್ವಿಯಾದ ಸಾತ್ಯಮುಗ್ರಿ, ಹಿರಣ್ಯಸ್ತಂಬಿ, ಮುದ್ಗಲ, ಇವರ ಪ್ರವರವೂ ಸಹ ತ್ರ್ಯಾರ್ಷೇಯವೇ. ಅಂಗಿರಸ್ಸು, ಮತ್ಸ್ಯದಗ್ಧ ಮತ್ತು ಮಹಾತಪಸ್ವಿಯಾದ ಮುದ್ಗಲ ಇವರು ಆ ಪರಂಪರೆಯಲ್ಲಿ ಅತ್ಯಂತ ಪ್ರಸಿದ್ಧರಾದ ಮಹರ್ಷಿಗಳು. ಇವರ ಸಂತತಿಯವರು ಒಬ್ಬರೊಡನೊಬ್ಬರು ವಿವಾಹಸಂಬಂಧ ವನ್ನು ಬೆಳೆಸಬಾರದು.

೪೩-೪೪. ಹಂಸಜಿಹ್ವ, ದೇವಜಿಹ್ವ, ಅಗ್ನಿಜಿಹ್ವ, ವಿರಾಡಪ, ಅಪಾಗ್ನೇಯ, ಅಶ್ವಯು, ಪರಣ್ಯಸ್ತ, ವಿಮೌದ್ಗಲ ಇವರ ಪ್ರವರಗಳು ಅಂಗಿರಸ್ಸು, ತಂಡಿ ಮತ್ತು ಮಹಾತಪಸ್ವಿಯಾದ ಮೌದ್ಗಲ್ಯ ಎಂಬ ಮೂವರು ಮಹರ್ಷಿಗಳಿಂದ ಅಂಕಿತ ವಾಗಿವೆ. ಇವರು ಪರಸ್ಪರ ವಿವಾಹಸಂಬಂಧಕ್ಕೆ ಅರ್ಹರಲ್ಲ.

೪೫-೪೭. ಅಪಾಂಡು, ಗುರು, ಶಾಕಟಾಯನ, ಪ್ರಾಗಾಥಮೆಯೆಂಬ ಸ್ತ್ರೀ, ಮಾರ್ಕಂಡ, ಮರಣ, ಶಿವ, ಕಟು, ಮರ್ಕಟಪ, ನಾಡಾಯನ, ಶ್ಯಾಮಾಯನ

**ಕಟುರ್ಮರ್ಕಟಪಶ್ಚೈವ ತಥಾ ನಾಡಾಯನೋ ಹ್ಯೃಷಿಃ ।**
**ಶ್ಯಾಮಾಯನಸ್ತಥೈವೈಷಾಂ ತ್ರ್ಯಾರ್ಷೇಯಾಃ ಪ್ರವರಾಃ ಶುಭಾಃ ॥೪೬॥**

**ಅಂಗಿರಾಶ್ಚಾಜಮೀಢಶ್ಚ ಕಟ್ಯಶ್ಚೈವ ಮಹಾತಪಾಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೪೭॥**

**ತಿತ್ತಿರಿಃ ಕಪಿಭೂಶ್ಚೈವ ಗಾರ್ಗ್ಯಶ್ಚೈವ ಮಹಾನೃಷಿಃ ।**
**ತ್ರ್ಯಾರ್ಷೇಯೋ ಹಿ ಮತಸ್ತೇಷಾಂ ಸರ್ವೇಷಾಂ ಪ್ರವರಃ ಶುಭಃ ॥೪೮॥**

**ಅಂಗಿರಾಸ್ತಿತ್ತಿರಿಶ್ಚೈವ ಕಪಿಭೂಶ್ಚ ಮಹಾನೃಷಿಃ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೪೯॥**

**ಅಥ ಋಕ್ಷಭರದ್ವಾಜೌ ಋಷಿರ್ವಾಮೋ ನರಸ್ತಥಾ ।**
**ಋಷಿರ್ಮೈತ್ರವರಶ್ಚೈವ ಪಂಚಾರ್ಷೇಯಾಃ ಪ್ರಕೀರ್ತಿತಾಃ ॥೫೦॥**

**ಅಂಗಿರಾಃ ಸಭರದ್ವಾಜಸ್ತಥೈವ ಚ ಬೃಹಸ್ಪತಿಃ ।**
**ಋಷಿರ್ಮಿತ್ರವರಶ್ಚೈವ ಋಷಿಶ್ಚಾತ್ಮನವಸ್ತಥಾ ।**
**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೫೧॥**

---

ಈ ಋಷಿಗಳ ಪ್ರವರಗಳು ಅಂಗಿರಸ್ಸು, ಅಜಮೀಢ, ಮಹಾತಪಸ್ವಿಯಾದ ಕಟ್ಯ ಈ ಮೂವರು ಮಹರ್ಷಿಗಳ ನಾಮಾಂಕಿತವಾಗಿ ತ್ರ್ಯಾರ್ಷೇಯವೆನಿಸಿಕೊಂಡಿವೆ. ಇವರು ಪರಸ್ಪರ ವಿವಾಹ ಸಂಬಂಧವನ್ನು ಬೆಳೆಸಬಾರದು.

೪೮-೪೯. ತಿತ್ತಿರಿ, ಕಪಿಭು, ಋಷಿವರ್ಯನಾದ ಗಾರ್ಗ್ಯ ಇವರ ಪ್ರವರವು ಅಂಗಿರಸ್ಸು, ತಿತ್ತಿರಿ ಮತ್ತು ಋಷಿಶ್ರೇಷ್ಠನಾದ ಕಪಿಭು ಈ ಮೂವರು ಮಹರ್ಷಿಗಳಿಂದ ಯುಕ್ತವಾಗಿದೆ. ಇವರು ಒಬ್ಬರೊಡನೊಬ್ಬರು ವೈವಾಹಿಕಸಂಬಂಧವನ್ನು ಮಾಡಬಾರದು.

೫೦-೫೧. ಋಕ್ಷ, ಭರದ್ವಾಜ, ವಾಮ, ನರ, ಮೈತ್ರವರ ಇವರೆಲ್ಲ ಪಂಚಾರ್ಷೇಯರು; ಅಂಗಿರಸ್ಸು, ಭರದ್ವಾಜ, ಬೃಹಸ್ಪತಿ, ಮಿತ್ರವರ, ಆತ್ಮನವ ಎಂಬ ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರು ಪರಸ್ಪರ ಹೆಣ್ಣುಕೊಟ್ಟು ತರಕೂಡದು.

ಭರದ್ವಾಜೋ ಹುತಃ ಶೌಂಗಃ ಶೈಶಿರೇಯಸ್ತಥೈವ ಚ ।
ಇತ್ಯೇತೇ ಕಥಿತಾಃ ಸರ್ವೇ ದ್ವ್ಯಾಮುಷ್ಯಾಯಣಗೋತ್ರಜಾಃ । ||೫೨||

ಪಂಚಾರ್ಷೇಯಾಸ್ತಥಾ ಹ್ಯೇಷಾಂ ಪ್ರವರಾಃ ಪರಿಕೀರ್ತಿತಾಃ ।
ಅಂಗಿರಾಶ್ಚ ಭರದ್ವಾಜಸ್ತಥೈವ ಚ ಬೃಹಸ್ಪತಿಃ ||೫೩||

ಮೌದ್ಗಲ್ಯಃ ಶೈಶಿರಶ್ಚೈವ ಪ್ರವರಾಃ ಪರಿಕೀರ್ತಿತಾಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ||೫೪||

ಏತೇ ತವೋಕ್ತಾಂಗಿರಸಸ್ತು ವಂಶೇ
ಮಹಾನುಭಾವಾ ಋಷಿಗೋತ್ರಕಾರಾಃ ।
ಯೇಷಾಂ ತು ನಾಮ್ನಾ ಪರಿಕೀರ್ತಿತೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ||೫೫||

ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇಽಂಗಿರೋ
ವಂಶಕೀರ್ತನಂ ನಾಮ ಷಣ್ಣವತ್ಯಧಿಕಶತತಮೋಽಧ್ಯಾಯಃ

---

೫೨-೫೪. ಭರದ್ವಾಜ, ಹುತ, ಶೌಂಗ, ಶೈಶಿರೇಯ ಎಂಬ ಋಷಿಗಳು ದ್ವ್ಯಾಮುಷ್ಯಾಯಣರು ಎಂದರೆ ಎರಡು ಗೋತ್ರಗಳಿಗೆ ಸೇರಿದವರು. (ಹೆತ್ತ ತಂದೆ, ದತ್ತು ತೆಗೆದುಕೊಂಡ ತಂದೆ, ಪಿತೃವಂಶ ಮಾತೃವಂಶ ಹೀಗೆ ಎರಡು ಸಂತತಿಗಳ ಉತ್ತರಾಧಿಕಾರಿಗಳು) ಇವರು ಪಂಚಾರ್ಷೇಯರು. ಅಂಗಿರಸ್ಸು, ಭರದ್ವಾಜ, ಬೃಹಸ್ಪತಿ, ಮೌದ್ಗಲ್ಯ ಮತ್ತು ಶೈಶಿರರೆಂಬ ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರು ಪರಸ್ಪರ ವಿವಾಹ ಸಂಬಂಧವನ್ನು ಮಾಡಕೂಡದು.

೫೫. ಅಂಗಿರಸಮಹಾಮುನಿಯ ವಂಶದಲ್ಲಿ ಹುಟ್ಟಿದ ಮಹಾಮಹಿಮರಾದ ಹಲವರು ಋಷಿಗಳ ಹೆಸರನ್ನು ಹೇಳಿದ್ದೇನೆ. ಇವರೆಲ್ಲರೂ ಗೋತ್ರಕಾರರು ; ಎಂದರೆ ತಮ್ಮತಮ್ಮ ಮನೆತನಗಳಿಗೆ ಮೂಲಪುರುಷರಾದವರು. ಇವರ ನಾಮಗಳನ್ನು ಉಚ್ಚರಿಸಿದರೆ ಸಾಕು ; ಮನುಷ್ಯನು ತನ್ನ ಪಾಪಗಳನ್ನೆಲ್ಲ ಕಳೆದುಕೊಳ್ಳುವನು.

ಅಧ್ಯಾಯ ೧೯೬

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅಂಗಿರಸಮಹಾಮುನಿಯ ವಂಶದಲ್ಲಿ ಹುಟ್ಟಿದ ಗೋತ್ರಕಾರರಾದ ಹಲವರು ಋಷಿಗಳ ಹೆಸರನ್ನು ಹೇಳಿದೆ.

ಈ ಋಷಿಗಳಲ್ಲಿ ಬೇರೆ ಬೇರೆ ಗಣಗಳಿವೆ. ಪ್ರವರದ ಭೇದದಿಂದ ಈ ಗಣಗಳು ಏರ್ಪಟ್ಟಿವೆ. ಒಂದೊಂದು ಗಣದವರೂ ತಮ್ಮತಮ್ಮಲ್ಲಿ ವಿವಾಹಸಂಬಂಧವನ್ನು ಬೆಳೆಸಬಾರದು. ಭೃಗುವಂಶದವರಂತೆಯೇ ಅಂಗಿರಸವಂಶದವರಲ್ಲಿಯೂ ಕೆಲವರು ತ್ರ್ಯಾರ್ಷೇಯರು ; ಮತ್ತೆ ಕೆಲವರು ಪಂಚಾರ್ಷೇಯರು. ಇವರ ನಾಮಸ್ಮರಣದಿಂದ ಮನುಷ್ಯನ ಪಾಪಗಳೆಲ್ಲ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ಅಂಗಿರಸಮುನಿಯ ವಂಶಕೀರ್ತನವೆಂಬ ನೂರತೊಂಬತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತನವತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಅತ್ರಿವಂಶಸಮುತ್ಪನ್ನಾನ್ ಗೋತ್ರಕಾರಾನ್ನಿಬೋಧ ಮೇ ।
ಕರ್ದಮಾಯನಶಾಖೇಯಾಸ್ತಥಾ ಶಾರಾಯಣಾಶ್ಚ ಯೇ ॥ ೧ ॥

ಉದ್ದಾಲಕಿಃ ಶೌಣಕರ್ಣಿರಥಾ ಶೌಕ್ರತವಶ್ಚ ಯೇ ।
ಗೌರಗ್ರೀವಾ ಗೌರಜಿನಸ್ತಥಾ ಚೈತ್ರಾಯಣಾಶ್ಚ ಯೇ ॥ ೨ ॥

ಅರ್ಧಪಣ್ಯಾ ವಾಮರಥ್ಯಾ ಗೋಪನಾಸ್ತಕಿಬಿಂದವಃ ।
ಕರ್ಣಜಿಹ್ವೋ ಹರಪ್ರೀತಿರ್ಲೈದ್ರಾಣಿಃ ಶಾಕಲಾಯನಿಃ ॥ ೩ ॥

ತೈಲಪಶ್ಚ ಸವೈಲೇಯೋ ಅತ್ರಿರ್ಗೋಣೀಪತಿಸ್ತಥಾ ।
ಜಲದೋ ಭಗಪಾದಶ್ಚ ಸೌಪುಷ್ಪಿಶ್ಚ ಮಹಾತಪಾಃ ॥ ೪ ॥

ಛಂದೋಗೇಯಸ್ತಥೈತೇಷಾಂ ತ್ರ್ಯಾರ್ಷೇಯಾಃ ಪ್ರವರಾ ಮತಾಃ ।
ಶ್ಯಾವಾಶ್ವಶ್ಚ ತಥಾತ್ರಿಶ್ಚ ಆರ್ಚನಾನಶ ಏವಚ ॥ ೫ ॥

---

೧-೫. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಅತ್ರಿಮಹರ್ಷಿಯ ವಂಶದಲ್ಲಿ ಹುಟ್ಟಿ ಗೋತ್ರಸಂಸ್ಥಾಪಕರೆನಿಸಿದ ಋಷಿಗಳ ಹೆಸರನ್ನು ಹೇಳುವೆನು ಕೇಳು. ಕರ್ದಮಾಯನ, ಶಾರಾಯಣ, ಉದ್ದಾಲಕಿ, ಶೌಣ, ಕರ್ಣಿರಥ, ಶೌಕ್ರತು, ಗೌರಗ್ರೀವ, ಗೌರಜಿನ, ಚೈತ್ರಾಯಣ, ಅರ್ಧಪಣ್ಯ, ವಾಮರಥ್ಯ, ಗೋಪನ, ತಕಿಬಿಂದು, ಕರ್ಣಜಿಹ್ವ, ಹರಪ್ರೀತಿ, ಲೈದ್ರಾಣಿ, ಶಾಕಲಾಯನಿ, ತೈಲಪ, ವೈಲೇಯ, ಅತ್ರಿ, ಗೋಣೀಪತಿ, ಜಲದ, ಭಗಪಾದ, ತಪಸ್ವಿವರ್ಯನಾದ ಸೌಪುಷ್ಪಿ, ಛಂದೋಗೇಯ ಇವರೆಲ್ಲರೂ ಗೋತ್ರಕಾರರು ; ಇವರು ತ್ರ್ಯಾರ್ಷೇಯರು. ಶ್ಯಾವಾಶ್ವ, ಅತ್ರಿ ಮತ್ತು ಆರ್ಚನಾನಶರೆಂಬ ಮೂವರು ಸುಪ್ರಸಿದ್ಧರಾದ ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರ ಸಂತತಿಯವರು ಒಬ್ಬರೊಡನೊಬ್ಬರು ವಿವಾಹಸಂಬಂಧವನ್ನು ಬೆಳೆಸಬಾರದು.

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ದಾಕ್ಷಿರ್ಬಲಿಃ ಪರ್ಣವಿಶ್ಚ ಊರ್ಣನಾಭಿಃ ಶಿಲಾರ್ದನಿಃ ॥ ೬ ॥

ಬೀಜವಾಪೀ ಶಿರೀಷಶ್ಚ ಮೌಂಜಿಕೇಶೋ ಗವಿಷ್ಠಿರಃ ।
ಭಲಂದನಸ್ತಥೈತೇಷಾಂ ತ್ರ್ಯಾರ್ಷೇಯಾಃ ಪ್ರವರಾ ಮತಾಃ ॥ ೭ ॥

ಅತ್ರಿರ್ಗವಿಷ್ಠಿರಶ್ಚೈವ ತಥಾ ಪೂರ್ವಾತಿಥಿಃ ಸ್ಮೃತಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೮ ॥

ಆತ್ರೇಯಪುತ್ರಿಕಾಪುತ್ರಾನತ ಊರ್ಧ್ವಂ ನಿಬೋಧ ಮೇ ।
ಕಾಲೇಯಾಶ್ಚ ಸಬಾಲೇಯಾ ವಾಮರಥ್ಯಾಸ್ತಥೈವ ಚ ॥ ೯ ॥

ಧಾತ್ರೇಯಾಶ್ಚೈವ ಮೈತ್ರೇಯಾಸ್ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।
ಅತ್ರಿಶ್ಚ ವಾಮರಥ್ಯಶ್ಚ ಪೌತ್ರಿಶ್ಚೈವ ಮಹಾನೃಷಿಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೧೦॥

೬-೮. ದಾಕ್ಷಿ, ಬಲಿ, ಪರ್ಣವಿ, ಊರ್ಣನಾಭಿ, ಶಿಲಾರ್ದನಿ, ಬೀಜವಾಪಿ, ಶಿರೀಷ, ಮೌಂಜಕೇಶ, ಗವಿಷ್ಠಿರ, ಭಲಂದನ, ಇವರು ತ್ರ್ಯಾರ್ಷೇಯರು; ಅತ್ರಿ, ಗವಿಷ್ಠಿರ ಮತ್ತು ಪೂರ್ವಾತಿಥಿಗಳೆಂಬ ಮೂವರು ಪ್ರವರರ್ಷಿಗಳ ಪರಂಪರೆಗೆ ಸೇರಿದವರು. ಇವರು ಪರಸ್ಪರ ವಿವಾಹಸಂಬಂಧವನ್ನು ನಡೆಸಬಾರದು.

೯-೧೦. ಇನ್ನುಮುಂದೆ ಅತ್ರಿಮಹರ್ಷಿಯ ದೌಹಿತ್ರರನ್ನು ಎಂದರೆ ಮಗಳ ಮಕ್ಕಳನ್ನು ಹೇಳುವೆನು ಕೇಳು. ಕಾಲೇಯರು, ಬಾಲೇಯರು, ವಾಮರಥ್ಯರು, ಧಾತ್ರೇಯರು, ಮೈತ್ರೇಯರು ಇವರೆಲ್ಲರೂ ಅತ್ರಿ, ವಾಮರಥ್ಯ ಮತ್ತು ಪೌತ್ರಿಗಳೆಂಬ ಮೂವರು ಮಹರ್ಷಿಗಳ ಪರಂಪರೆಗೆ ಸೇರಿದವರು. ಇವರು ಒಬ್ಬರೊಡನೊಬ್ಬರು ವಿವಾಹಸಂಬಂಧವನ್ನು ಬೆಳೆಸಬಾರದು.

**ಇತ್ಯತ್ರಿವಂಶಪ್ರಭವಾಸ್ತವೋಕ್ತಾ**
**ಮಹಾನುಭಾವಾ ನೃಪ ಗೋತ್ರಕಾರಾಃ ।**
**ಯೇಷಾಂ ತು ನಾಮ್ನಾ ಪರಿಕೀರ್ತಿತೇನ**
**ಪಾಪಂ ಸಮಗ್ರಂ ಪುರುಷೋ ಜಹಾತಿ ॥೧೧॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇಽತ್ರಿವಂಶಾನು ಕೀರ್ತನಂ ನಾಮ ಸಪ್ತನವತ್ಯಧಿಕಶತತಮೋಽಧ್ಯಾಯಃ**

---

೧೧. ಓ ರಾಜಾ, ಅತ್ರಿಮಹರ್ಷಿಯ ವಂಶದಲ್ಲಿ ಹುಟ್ಟಿ ಗೋತ್ರಗಳ ಮೂಲ ಪುರುಷರೆನಿಸಿಕೊಂಡ ಮಹಾನುಭಾವರನ್ನು ನಿನಗೆ ಹೇಳಿದ್ದೇನೆ. ಅವರ ಹೆಸರನ್ನು ಉಚ್ಚರಿಸಿದ ಮಾತ್ರದಿಂದ ಮನುಷ್ಯನು ತನ್ನ ಪಾಪವೆಲ್ಲವನ್ನು ಪರಿಹರಿಸಿ ಕೊಳ್ಳುತ್ತಾನೆ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಅತ್ರಿಮಹರ್ಷಿಯ ವಂಶೋದ್ಭವರೂ ಗೋತ್ರಕಾರರೂ ಆದ ಋಷಿಗಳ ಹೆಸರನ್ನು ಹೇಳಿದೆ. ಇವರಲ್ಲಿ ಮೂರುಗಣಗಳಿವೆ. ಎಲ್ಲರೂ ತ್ರ್ಯಾರ್ಷೇಯರೇ ಆಗಿರುವರು. ಇವರ ನಾಮಸ್ಮರಣದಿಂದ ಪಾಪವು ಪರಿಹಾರ ವಾಗುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ಅತ್ರಿವಂಶಾನು ಕೀರ್ತನವೆಂಬ ನೂರತೊಂಬತ್ತೇಳನೆಯ ಅಧ್ಯಾಯವು ಮುಗಿದುದು.



## ಅಥಾಽಷ್ಟನವತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಅತ್ರೇರೇವಾಪರಂ ವಂಶಂ ತವ ವಕ್ಷ್ಯಾಮಿ ಪಾರ್ಥಿವ ।
ಅತ್ರೇಃ ಸೋಮಃ ಸುತಃ ಶ್ರೀಮಾಂಸ್ತಸ್ಯ ವಂಶೋದ್ಭವೋ ನೃಪ ॥ ೧ ॥

ವಿಶ್ವಾಮಿತ್ರಸ್ತು ತಪಸಾ ಬ್ರಾಹ್ಮಣ್ಯಂ ಸಮವಾಪ್ತವಾನ್ ।
ತಸ್ಯ ವಂಶಮಹಂ ವಕ್ಷ್ಯೇ ತನ್ಮೇ ನಿಗದತಃ ಶೃಣು ॥ ೨ ॥

ವಿಶ್ವಾಮಿತ್ರೋ ದೇವರಾತಸ್ತಥಾ ವೈಕೃತಿಗಾಲವಃ ।
ವರಂಡಶ್ಚ ಶಲಂಕಶ್ಚ ಹ್ಯಭಯಶ್ಚಾಯತಾಯನಃ ॥ ೩ ॥

ಶ್ಯಾಮಾಯನಾ ಯಾಜ್ಞವಲ್ಕ್ಯ ಜಾಬಾಲಾಃ ಸೈಂಧವಾಯನಾಃ ।
ಬಾಭ್ರವ್ಯಾಶ್ಚ ಕರೀಷಾಶ್ಚ ಸಂಶ್ರುತ್ಯಾ ಅಥ ಸಂಶ್ರುತಾಃ ॥ ೪ ॥

ಉಲೂಪಾ ಔಪಹಾವಾಶ್ಚ ಪಯೋದಜನಪಾದಪಾಃ ।
ಖರವಾಚೋ ಹಲಯಮಾಃ ಸಾಧಿತಾ ವಾಸ್ತುಕೌಶಿಕಾಃ ॥ ೫ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಎಲೈ ರಾಜಾ, ಅತ್ರಿ ಮಹರ್ಷಿಯ ಮತ್ತೊಂದು ವಂಶವನ್ನು ಹೇಳುವೆನು ಕೇಳು. ಸಂಪದ್ಯುಕ್ತನಾದ ಚಂದ್ರನು ಅತ್ರಿಯ ಮಗ. ಅವನು ವಂಶವನ್ನು ಮುಂದಕ್ಕೆ ಬೆಳೆಸಿದವನು.

೨. ವಿಶ್ವಾಮಿತ್ರನು ತನ್ನ ತಪಸ್ಸಿನ ಮಹಿಮೆಯಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿದನು. ಅವನ ವಂಶವನ್ನು ಹೇಳುವೆನು ಕೇಳು.

೩-೬. ವಿಶ್ವಾಮಿತ್ರ, ದೇವರಾತ, ವೈಕೃತಿಗಾಲವ, ವರಂಡ, ಶಲಂಕ, ಅಭಯ, ಆಯತಾಯನ, ಶ್ಯಾಮಾಯನ, ಯಾಜ್ಞವಲ್ಕ್ಯ, ಜಾಬಾಲ, ಸೈಂಧ ವಾಯನ, ಬಾಭ್ರವ್ಯ, ಕರೀಷ, ಸಂಶ್ರುತ್ಯ, ಸಂಶ್ರುತ, ಉಲೂಪ, ಔಪಹಾವ, ಪಯೋದ, ಜನಪಾದಪ, ಖರವಾಚ, ಹಲಯಮ, ಸಾಧಿತ, ವಾಸ್ತುಕೌಶಿಕ

ತ್ರ್ಯಾರ್ಷೇಯಾಃ ಪ್ರವರಾಸ್ತೇಷಾಂ ಸರ್ವೇಷಾಂ ಪರಿಕೀರ್ತಿತಾಃ ।
ವಿಶ್ವಾಮಿತ್ರೋ ದೇವರಾತ ಉದ್ದಾಲಶ್ಚ ಮಹಾಯಶಾಃ ॥ ೬ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ದೇವಶ್ರವಾಃ ಸುಜಾತೇಯಾಃ ಸೌಮುಕಾಃ ಕಾರುಕಾಯಣಾಃ ॥ ೭ ॥

ತಥಾ ವೈ ದೇಹರಾತಾ ಯೇ ಕುಶಿಕಾಶ್ಚ ನರಾಧಿಪ ।
ತ್ರ್ಯಾರ್ಷೇಯೋಽಭಿಮತಸ್ತೇಷಾಂ ಸರ್ವೇಷಾಂ ಪ್ರವರಃ ಶುಭಃ ॥ ೮ ॥

ದೇವಶ್ರವಾ ದೇವರಾತೋ ವಿಶ್ವಾಮಿತ್ರಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥ ೯ ॥

ಧನಂಜಯಃ ಕಪರ್ದೇಯಃ ಪರಿಕೂಟಶ್ಚ ಪಾರ್ಥಿವ ।
ಪಾಣಿನಿಶ್ಚೈವ ತ್ರ್ಯಾರ್ಷೇಯಾಃ ಸರ್ವ ಏತೇ ಪ್ರಕೀರ್ತಿತಾಃ ॥೧೦॥

ವಿಶ್ವಾಮಿತ್ರಸ್ತಥಾದ್ಯಶ್ಚ ಮಾಧುಚ್ಛಂದಸ ಏವ ಚ ।
ತ್ರ್ಯಾರ್ಷೇಯಾಃ ಪ್ರವರಾ ಹ್ಯೇತೇ ಋಷಯಃ ಪರಿಕೀರ್ತಿತಾಃ ॥೧೧॥

ವಿಶ್ವಾಮಿತ್ರೋ ಮಧುಚ್ಛಂದಾಸ್ತಥಾ ಚೈವಾಘಮರ್ಷಣಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೧೨॥

---

ಇವರೆಲ್ಲರ ಪ್ರವರಗಳು ವಿಶ್ವಾಮಿತ್ರ, ದೇವರಾತ, ಮಹಾಯಶಸ್ವಿಯಾದ ಉದ್ದಾಲ ಈ ಮೂವರು ಮಹರ್ಷಿಗಳ ನಾಮಾಂಕಿತವಾಗಿವೆ. ಇವರು ಪರಸ್ಪರ ವಿವಾಹಾರ್ಹರಲ್ಲ.

೭-೯. ದೇವಶ್ರವರು, ಸುಜಾತೇಯರು, ಸೌಮುಕರು, ಕಾರುಕಾಯಣರು, ವೈದೇಹರಾತರು, ಕುಶಿಕರು ಇವರೆಲ್ಲರೂ ತ್ರ್ಯಾರ್ಷೇಯರು; ದೇವಶ್ರವ, ದೇವರಾತ, ವಿಶ್ವಾಮಿತ್ರ ಎಂಬ ಮೂವರು ಮಹರ್ಷಿಗಳ ಪರಂಪರೆಗೆ ಸೇರಿದವರು. ಈ ಋಷಿಗಳೆಲ್ಲರೂ ಪರಸ್ಪರ ವೈವಾಹಿಕ ಸಂಬಂಧವನ್ನು ಮಾಡಬಾರದು.

೧೦-೧೨. ಓ ರಾಜಾ, ಧನಂಜಯ, ಕಪರ್ದೇಯ, ಪರಿಕೂಟ, ಪಾಣಿನಿ ಇವರು ತ್ರ್ಯಾರ್ಷೇಯರು ; ವಿಶ್ವಾಮಿತ್ರ, ಆದ್ಯ ಮತ್ತು ಮಾಧುಚ್ಛಂದಸ ಇವರ ಪರಂಪರೆಗೆ ಸೇರಿದವರು. ವಿಶ್ವಾಮಿತ್ರ, ಮಧುಚ್ಛಂದ ಮತ್ತು ಅಘಮರ್ಷಣರೆಂಬ ಋಷಿಗಳ ಸಂತತಿಯವರು ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

ಕಾಮುಲಾಯನಿಜಶ್ಚೈವ ಅಶ್ಮರಥ್ಯಸ್ತಥೈವ ಚ ।
ವಂಜುಲಿಶ್ಚಾಪಿ ತ್ರ್ಯಾರ್ಷೇಯಃ ಸರ್ವೇಷಾಂ ಪ್ರವರೋ ಮತಃ ॥೧೩॥

ವಿಶ್ವಾಮಿತ್ರಶ್ಚಾಶ್ವರಥೋ ವಂಜುಲಿಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೧೪॥

ವಿಶ್ವಾಮಿತ್ರೋ ಲೋಹಿತಶ್ಚ ಅಷ್ಟಕಃ ಪೂರಣಸ್ತಥಾ ।
ವಿಶ್ವಾಮಿತ್ರೋ ಪೂರಣಶ್ಚ ತಯೋರ್ದ್ವೌ ಪ್ರವರೌ ಸ್ಮೃತೌ ॥೧೫॥

ಪರಸ್ಪರಮವೈವಾಹ್ಯಾಃ ಪೂರಣಾಶ್ಚ ಪರಸ್ಪರಂ ।
ಲೋಹಿತಾ ಅಷ್ಟಕಾಶ್ಚೈಷಾಂ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥೧೬॥

ವಿಶ್ವಾಮಿತ್ರೋ ಲೋಹಿತಶ್ಚ ಅಷ್ಟಕಶ್ಚ ಮಹಾತಪಾಃ ।
ಅಷ್ಟಕಾ ಲೋಹಿತೈರ್ನಿತ್ಯಮವೈವಾಹ್ಯಾಃ ಪರಸ್ಪರಂ ॥೧೭॥

---

೧೩-೧೪. ಕಾಮುಲಾಯ ನಿಜ, ಅಶ್ಮರಥ್ಯ, ವಂಜುಲಿ ಇವರ ಪ್ರವರಗಳು ತ್ರ್ಯಾರ್ಷೇಯವೆನಿಸಿವೆ. ವಿಶ್ವಾಮಿತ್ರ, ಅಶ್ವರಥ, ವಂಜುಲಿ ಇವರೇ ಪ್ರವರರ್ಷಿಗಳು. ಈ ಋಷಿಗಳ ಸಂತತಿಯವರು ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

೧೫-೧೭. ವಿಶ್ವಾಮಿತ್ರ, ಲೋಹಿತ, ಅಷ್ಟಕ ಮತ್ತು ಪೂರಣರೆಂಬ ಮಹರ್ಷಿಗಳ ಪರಂಪರೆಯಿಂದ ಕೂಡಿದ ಚತುರಾರ್ಷೇಯವಾದ ಒಂದು ಪ್ರವರವೂ ವಿಶ್ವಾಮಿತ್ರ ಮತ್ತು ಪೂರಣರೆಂಬ ಮಹರ್ಷಿಗಳಿಂದ ಕೂಡಿದ ದ್ವ್ಯಾರ್ಷೇಯವಾದ ಮತ್ತೊಂದು ಪ್ರವರವೂ ಉಂಟು. ಪೂರಣರು ತಮ್ಮತಮ್ಮಲ್ಲೇ ವಿವಾಹವನ್ನು ಬೆಳೆಸಬಾರದು. ಲೋಹಿತರೂ ಅಷ್ಟಕರೂ ತ್ರ್ಯಾರ್ಷೇಯರು. ವಿಶ್ವಾಮಿತ್ರ, ಲೋಹಿತ, ಅಷ್ಟಕ ಎಂಬ ಮೂವರು ಮಹರ್ಷಿಗಳಿಂದ ಅವರ ಪ್ರವರವು ಯುಕ್ತವಾಗಿದೆ. ಅಷ್ಟಕರೂ ಲೋಹಿತರೂ ಪರಸ್ಪರ ವಿವಾಹಾರ್ಹರಲ್ಲ.

ಉದರೇಣುಃ ಕ್ರಥಕಶ್ಚ ಋಷಿಶ್ಚೋದಾವಹಿಸ್ತಥಾ ।
ಆರ್ಷೇಯೋಽಭಿಮತಸ್ತೇಷಾಂ ಸರ್ವೇಷಾಂ ಪ್ರವರಃ ಸ್ಮೃತಃ ॥೧೮॥

ಋಣವಾನ್ ಗತಿನಶ್ಚೈವ ವಿಶ್ವಾಮಿತ್ರಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೧೯॥

ಉದುಂಬರಃ ಸೌಪರಿಟಿರ್ಋಷಿಸ್ತ್ರಾಕ್ಷಾಯಣಿಸ್ತಥಾ ।
ಶಾಟ್ಯಾಯನಿಃ ಕರೀರಾಶೀ ಶಾಲಂಕಾಯನಿಲಾವಕೀ ।
ಮೌಂಜಾಯನಿಶ್ಚ ಭಗವಾಂಸ್ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥೨೦॥

ಖಿಲಿಖಿಲಿಸ್ತಥಾ ವಿದ್ಯೋ ವಿಶ್ವಾಮಿತ್ರಸ್ತಥೈವ ಚ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ॥೨೧॥

ಏತೇ ತವೋಕ್ತಾಃ ಕುಶಿಕಾ ನರೇಂದ್ರ
ಮಹಾನುಭಾವಾಃ ಸತತಂ ದ್ವಿಜೇಂದ್ರಾಃ ।
ಯೇಷಾಂ ತು ನಾಮ್ನಾ ಪರಿಕೀರ್ತಿತೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥೨೨॥

ಇತಿ ಶ್ರೀ ಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇ
ವಿಶ್ವಾಮಿತ್ರವಂಶವರ್ಣನಂ ನಾಮಾಷ್ಟನವತ್ಯಧಿಕಶತತಮೋಽಧ್ಯಾಯಃ

೧೮-೧೯. ಉದರೇಣು, ಕ್ರಥಕ, ಉದಾವಹಿ ಇವರು ಋಣವಂತ, ಗತಿನ, ವಿಶ್ವಾಮಿತ್ರ ಎಂಬ ಮಹರ್ಷಿಗಳ ಪರಂಪರೆಗೆ ಸೇರಿದವರು. ಈ ಋಷಿಗಳು ಪರಸ್ಪರ ವಿವಾಹಸಂಬಂಧಕ್ಕೆ ಅರ್ಹರಲ್ಲ.

೨೦-೨೧. ಉದುಂಬರ, ಸೌಪರಿಟಿ, ತ್ರಾಕ್ಷಾಯಣಿ, ಶಾಟ್ಯಾಯನಿ, ಕರೀರಾಶಿ, ಶಾಲಂಕಾಯನಿ, ಲಾವಕಿ, ಪೂಜ್ಯನಾದ ಮೌಂಜಾಯನಿ ಇವರೆಲ್ಲರೂ ತ್ರ್ಯಾರ್ಷೇಯರು. ಖಿಲಿಖಿಲಿ, ವಿದ್ಯ, ವಿಶ್ವಾಮಿತ್ರ ಇವರೇ ಪ್ರವರರ್ಷಿಗಳು. ಉದುಂಬರ ಮುಂತಾದ ಋಷಿಗಳ ಸಂತತಿಯವರು ಪರಸ್ಪರ ವಿವಾಹವನ್ನು ಬೆಳೆಸಬಾರದು.

೨೨. ಎಲೈ ನರೇಂದ್ರಾ, ವಿಶ್ವಾಮಿತ್ರನ ವಂಶದಲ್ಲಿ ಹುಟ್ಟಿದ ಮಹಾನುಭಾವರಾದ ದ್ವಿಜೋತ್ತಮರನ್ನು ನಿನಗೆ ತಿಳಿಸಿದೆನು. ಇವರ ನಾಮಕೀರ್ತನದಿಂದ ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಸಂಪೂರ್ಣವಾಗಿ ಕಳೆದುಕೊಳ್ಳುತ್ತಾನೆ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವಿಶ್ವಾಮಿತ್ರರ ವಂಶವನ್ನು ವರ್ಣಿಸಿದೆ.

ವಿಶ್ವಾಮಿತ್ರರು ತಮ್ಮ ತಪಸ್ಸಿನ ಮಹಿಮೆಯಿಂದ ಬ್ರಾಹ್ಮಣ್ಯವನ್ನು ಸಂಪಾದಿಸಿದ ಮಹಾನುಭಾವರು. ಇವರ ವಂಶದಲ್ಲಿ ಗೋತ್ರಕಾರರಾದ ಎಷ್ಟೋ ಜನ ಋಷಿಗಳು ಆವಿರ್ಭವಿಸಿದರು. ಅವರ ನಾಮೋಚ್ಚಾರಣದಿಂದ ಪಾಪಗಳೆಲ್ಲ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ವಿಶ್ವಾಮಿತ್ರವಂಶಾನು ವರ್ಣನವೆಂಬ ನೂರ ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು.



## ಅಥ ನವನವತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಮರೀಚೇಃ ಕಶ್ಯಪಃ ಪುತ್ರಃ ಕಶ್ಯಪಸ್ಯ ತಥಾ ಕುಲೇ ।
ಗೋತ್ರಕಾರಾನೃಷೀನ್ ವಕ್ಷ್ಯೇ ತೇಷಾಂ ನಾಮಾನಿ ಮೇ ಶೃಣು || ೧ ||

ಆಶ್ರಾಯಣಿಋಷಿಗಣೋ ಮೇಷಕೀರಿಟಕಾಯನಾಃ ।
ಉದಗ್ರಜಾ ಮಾಠರಾಶ್ಚ ಭೋಜಾ ವಿನಯಲಕ್ಷಣಾಃ || ೨ ||

ಶಾಲಾಹಲೇಯಾಃ ಕೌರಿಷ್ಟಾಃ ಕನ್ಯಕಾಶ್ಚಾಸುರಾಯಣಾಃ ।
ಮಂದಾಕಿನ್ಯಾಂ ವೈ ಮೃಗಯಾಃ ಶ್ರೋತನಾ ಭೌತಪಾಯನಾಃ || ೩ ||

ದೇವಯಾನಾ ಗೋಮಯಾನಾ ಹ್ಯಧಶ್ಛಾಯಾಭಯಾಶ್ಚ ಯೇ ।
ಕಾತ್ಯಾಯನಾಃ ಶಕ್ರಯಣಾ ಬರ್ಹಿಯೋಗಗದಾಯನಾಃ || ೪ ||

ಭವನಂದಿರ್ಮಹಾಚಕ್ರಿರ್ದಾಕ್ಷಪಾಯಣ ಏವ ಚ ।
ಯೋಧಯಾನಾಃ ಕಾರ್ತಿವಯೋ ಹಸ್ತಿದಾನಾಸ್ತಥೈವ ಚ || ೫ ||

ವಾತ್ಸ್ಯಾಯನಾ ನಿಕೃತಜಾ ಹ್ಯಾಶ್ವಲಾಯನಿನಸ್ತಥಾ ।
ಪ್ರಾಗಾಯಣಾಃ ಪೈಲಿಮೌಲಿರಾಶ್ವವಾತಾಯನಸ್ತಥಾ || ೬ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಕಶ್ಯಪನು ಮರೀಚಿಯ ಪುತ್ರ. ಇವನ ವಂಶದಲ್ಲಿ ಹುಟ್ಟಿ ಗೋತ್ರಸಂಸ್ಥಾಪಕರೆಂದು ಪ್ರಸಿದ್ಧರಾದ ಋಷಿಗಳ ಹೆಸರನ್ನು ಹೇಳುವೆನು ಕೇಳು.

೨-೧೦. ಆಶ್ರಾಯಣಿ ಋಷಿಗಣಕ್ಕೆ ಸೇರಿದವರು, ಮೇಷ, ಕೀರಿಟ ಕಾಯನ, ಉದಗ್ರಜರು, ಮಾಠರರು, ವಿನಯವೇ ಮುಖ್ಯಲಕ್ಷಣವಾದ ಭೋಜರು, ಶಾಲಾಹಲೇಯರು, ಕೌರಿಷ್ಟರು, ಕನ್ಯಕರು, ಆಸುರಾಯಣರು, ಮಂದಾಕಿನಿಯಲ್ಲಿ ಜನಿಸಿದ ಮೃಗಯರು, ಶ್ರೋತನರು, ಭೌತಪಾಯನರು, ದೇವಯಾನರು, ಸೋಮ ಯಾನರು, ಛಾಯಾಭಯರು, ಕಾತ್ಯಾಯನರು, ಶಕ್ರಯಣರು, ಬರ್ಹಿಯೋಗರು

**ಕೌಬೇರಕಾಶ್ಚ ಶ್ಯಾಕಾರಾ ಅಗ್ನಿಶರ್ಮಾಯಣಾಶ್ಚ ಯೇ ।**
**ಮೇಷಪಾಃ ಕೈಕರಸಪಾಸ್ತಥಾ ಚೈವ ತು ಬಭ್ರವಃ ॥ ೭ ॥**

**ಪ್ರಾಚೇಯೋ ಜ್ಞಾನಸಂಜ್ಞೇಯಾ ಆಗ್ನಾ ಪ್ರಾಸೇವ್ಯ ಏವ ಚ ।**
**ಶ್ಯಾಮೋದರಾ ವೈವಶಪಾಸ್ತಥಾ ಚೈವೋದ್ವಲಾಯನಾಃ ॥ ೮ ॥**

**ಕಾಷ್ಠಾಹಾರಿಣಮಾರೀಚಾ ಆಜಿಹಾಯನಹಾಸ್ತಿಕಾಃ ।**
**ವೈಕರ್ಣೇಯಾಃ ಕಾಶ್ಯಪೇಯಾಃ ಸಾಸಿಸಾಹಾರಿತಾಯನಾಃ ॥ ೯ ॥**

**ಮಾತಂಗಿನಶ್ಚ ಭೃಗವಸ್ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ।**
**ವತ್ಸರಃ ಕಶ್ಯಪಶ್ಚೈವ ನಿಧ್ರುವಶ್ಚ ಮಹಾತಪಾಃ ॥೧೦॥**

**ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।**
**ಅತಃ ಪರಂ ಪ್ರವಕ್ಷ್ಯಾಮಿ ದ್ವ್ಯಾಮುಷ್ಯಾಯಣಗೋತ್ರಜಾನ್ ॥೧೧॥**

**ಅನಸೂಯೋ ನಾಕುರಯಃ ಸ್ನಾತಪೋ ರಾಜವರ್ತಪಃ ।**
**ಶೈಶಿರೋದವಹಿಶ್ಚೈವ ಸೈರಂಧ್ರಿ ರೌಪಸೇವಕಿಃ ॥೧೨॥**

ಗದಾಯನರು, ಭವನಂದಿ, ಮಹಾಚಕ್ರಿ, ದಾಕ್ಷಪಾಯಣ, ಯೋಧಯಾನ, ಕಾರ್ತಿವಿಗಳು, ಹಸ್ತಿದಾನರು, ವಾತ್ಸ್ಯಾಯನರು, ನಿಕೃತಜರು, ಆಶ್ವಲಾಯನಿಗಳು, ಪ್ರಾಗಾಯಣರು, ಪೈಲಿಮೌಲಿ, ಆಶ್ವವಾತಾಯನ, ಕೌಬೇರಕರು, ಶ್ಯಾಕಾರರು, ಅಗ್ನಿಶರ್ಮಾಯಣರು, ಮೇಷಪರು, ಕೈಕರಸಪರು, ಬಭ್ರುಗಳು, ಪ್ರಾಚೇಯ, ಜ್ಞಾನಸಂಜ್ಞೇಯರು, ಆಗ್ನರು, ಪ್ರಾಸೇವ್ಯ, ಶ್ಯಾಮೋದರರು, ವೈವಶಪರು, ಉದ್ವಲಾಯನರು, ಕಾಷ್ಠಾಹಾರಿಣರು, ಮಾರೀಚರು, ಆಜಿಹಾಯನರು, ಹಾಸ್ತಿಕರು, ವೈಕರ್ಣೇಯರು, ಕಾಶ್ಯಪೇಯರು, ಸಾಸಿಸರು, ಹಾರಿತಾಯನರು, ಮಾತಂಗಿಗಳು, ಭೃಗುಗಳು ಇವರೆಲ್ಲರೂ ತ್ರ್ಯಾರ್ಷೇಯರು. ವತ್ಸರ, ಕಶ್ಯಪ, ಮಹಾತಪಸ್ವಿಯಾದ ನಿಧ್ರುವ ಈ ಮೂವರೂ ಇವರ ಪ್ರವರರ್ಷಿಗಳು. ಇವರ ಸಂತತಿಯವರು ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

೧೧-೧೪. ಇನ್ನು ಮುಂದೆ ದ್ವ್ಯಾಮುಷ್ಯಾಯಣಗೋತ್ರದರವನ್ನು ಎಂದರೆ ಎರಡು ಗೋತ್ರಗಳಿಗೆ ಸೇರಿದವರನ್ನು ಹೇಳುವೆನು ಕೇಳು. ಅನಸೂಯ, ನಾಕುರಯ, ಸ್ನಾತಪ, ರಾಜವರ್ತಪ, ಶೈಶಿರ, ದವಹಿ, ಸೈರಂಧ್ರಿ, ರೌಪಸೇವಕಿ,

ಯಾಮುನಿಃ ಕಾದ್ರುಪಿಂಗಾಕ್ಷಿಃ ಸಜಾತಂಬಿಸ್ತಥೈವ ಚ ।
ದಿವಾವಷ್ಟ್ರಾಶ್ಚ ಇತ್ಯೇತೇ ಭಕ್ತ್ಯಾ ಜ್ಞೇಯಾಶ್ಚ ಕಾಶ್ಯಪಾಃ ॥೧೩॥

ತ್ರ್ಯಾರ್ಷೇಯಾಶ್ಚ ತಥೈವೈಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ವತ್ಸರಃ ಕಾಶ್ಯಪಶ್ಚೈವ ವಸಿಷ್ಠಶ್ಚ ಮಹಾತಪಾಃ ॥೧೪॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಸಂಯಾತಿಶ್ಚ ನಭಶ್ಚೋಭೌ ಪಿಪ್ಪಲ್ಯೋऽಥ ಜಲಂಧರಃ ॥೧೫॥

ಭುಜಾತಪೂರಃ ಪೂರ್ಯಶ್ಚ ಕರ್ದನೋ ಗರ್ದಭೀಮುಖಃ ।
ಹಿರಣ್ಯಬಾಹುಕ್ಯೈರಾತಾವುಭೌ ಕಾಶ್ಯಪಗೋಭಿಲೌ ॥೧೬॥

ಕುಲಹೋ ವೃಷಕಂಠಶ್ಚ ಮೃಗಕೇತುಸ್ತಥೋತ್ತರಃ ।
ನಿದಾಘಮಸೃಣೌ ಭರ್ತ್ಸ್ಯಾ ಮಹಾಂತಃ ಕೇರಲಾಶ್ಚ ಯೇ ॥೧೭॥

ಶಾಂಡಿಲ್ಯೋ ದಾನವಶ್ಚೈವ ತಥಾ ವೈ ದೇವಜಾತಯಃ ।
ಪೈಪ್ಪಲಾದಿಃ ಸಪ್ರವರಾ ಋಷಯಃ ಪರಿಕೀರ್ತಿತಾಃ । ॥೧೮॥

---

ಯಾಮುನಿ, ಕಾದ್ರುಪಿಂಗಾಕ್ಷಿ, ಸಜಾತಂಬಿ, ದಿವಾವಷ್ಟ್ರ ಇವರೆಲ್ಲರೂ ಕಶ್ಯಪನ ವಂಶದವರೆಂದು ತಿಳಿಯಬೇಕು. ಇವರು ತ್ರ್ಯಾರ್ಷೇಯರು. ವತ್ಸರ, ಕಾಶ್ಯಪ, ಮಹಾತಪಸ್ವಿಯಾದ ವಸಿಷ್ಠ ಇವರೇ ಪ್ರಸಿದ್ಧರಾದ ಮೂವರು ಪ್ರವರರ್ಷಿಗಳು. ಈ ಋಷಿಗಳೆಲ್ಲರೂ ತಮ್ಮತಮ್ಮಲ್ಲಿ ವಿವಾಹಸಂಬಂಧವನ್ನು ಮಾಡಬಾರದು.

೧೫-೧೯. ಸಂಯಾತಿ, ನಭ, ಪಿಪ್ಪಲ್ಯ, ಜಲಂಧರ, ಭುಜಾತಪೂರ, ಪೂರ್ಯ, ಕರ್ದಮ, ಗರ್ದಭೀಮುಖ, ಹಿರಣ್ಯಬಾಹು, ಕೈರಾತ, ಕಾಶ್ಯಪ, ಗೋಭಿಲ, ಕುಲಹ, ವೃಷಕಂಠ, ಮೃಗಕೇತು, ಉತ್ತರ, ನಿದಾಘ, ಮಸೃಣ, ಭರ್ತ್ಸ್ಯರು, ಮಹಾತ್ಮರಾದ ಕೇರಲರು, ಶಾಂಡಿಲ್ಯ, ದಾನವ, ದೇವಜಾತಿಯವರು, ಪೈಪ್ಪಲಾದಿ ಈ ಋಷಿಗಳೆಲ್ಲರ ಪ್ರವರವೂ ಒಂದೇ. ಇವರು ತ್ರ್ಯಾರ್ಷೇಯರು. ಅಸಿತ, ದೇವಲ

ತ್ರ್ಯಾರ್ಷೇಯಾಭಿಮತಾಶ್ಚೈಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ಅಸಿತೋ ದೇವಲಶ್ಚೈವ ಕಶ್ಯಪಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ||೧೯||

ಋಷಿಪ್ರಧಾನಸ್ಯ ತು ಕಶ್ಯಪಸ್ಯ
ದಾಕ್ಷಾಯಣೀಭ್ಯಃ ಸಕಲಂ ಪ್ರಸೂತಂ ।
ಜಗತ್ಸಮಗ್ರಂ ಮನುಸಿಂಹ ಪುಣ್ಯಂ
ಕಿಂ ತೇ ಪ್ರವಕ್ಷ್ಯಾಮ್ಯಹಮುತ್ತರಂ ತು ||೨೦||

ಇತಿ ಶ್ರೀಮತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇ ಕಶ್ಯಪವಂಶ
ವರ್ಣನಂ ನಾಮ ನವನವತ್ಯಧಿಕಶತತಮೋಽಧ್ಯಾಯಃ

---

ಮತ್ತು ತಪಸ್ವಿಶ್ರೇಷ್ಠನಾದ ಕಶ್ಯಪ ಈ ಮೂವರೇ ಪ್ರವರರ್ಷಿಗಳು. ಮೇಲೆ ಹೇಳಿದ ಸಂಯಾತಿ ಮೊದಲಾದವರು ಪರಸ್ಪರ ವಿವಾಹಾರ್ಹರಲ್ಲ.

೨೦. ಋಷಿಗಳಲ್ಲಿ ಪ್ರಧಾನನಾದ ಕಶ್ಯಪನಿಂದ ದಕ್ಷಬ್ರಹ್ಮನ ಪುತ್ರಿಯರಾದ ದಾಕ್ಷಾಯಣಿಗಳು ಈ ಸಕಲ ಜಗತ್ತನ್ನೂ ಹೆತ್ತರು. ಓ ಮನುಚಕ್ರವರ್ತೀ, ಪುಣ್ಯಕರವಾದ ಮತ್ತಾವ ವಿಷಯವನ್ನು ಇನ್ನು ನಿನಗೆ ಹೇಳಲಿ ?

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಶ್ಯಪಮಹಾಮುನಿಯ ವಂಶವನ್ನು ವರ್ಣಿಸಿದೆ.

ಕಶ್ಯಪನ ವಂಶದಲ್ಲಿ ಪ್ರಸಿದ್ಧವಾದ ಮೂರು ಋಷಿಗಣಗಳು ಏರ್ಪಟ್ಟವು. ಇವುಗಳ ಪ್ರವರವು ತ್ರ್ಯಾರ್ಷೇಯವೆನಿಸಿರುವುದು. ಅನಸೂಯ, ನಾಕರಯ ಮುಂತಾದವರು ದ್ವ್ಯಾಮುಷ್ಯಾಯಣ ಗೋತ್ರದವರು ಎಂದರೆ ಎರಡು ಗೋತ್ರಗಳಿಗೆ ಸೇರಿದವರು. ಕಶ್ಯಪನ ಪತ್ನಿಯರಾದ ದಾಕ್ಷಾಯಣಿಯರಿಂದ ಜಗತ್ತಿನ ವಿಧವಿಧವಾದ ಜೀವರಾಶಿಗಳು ಜನಿಸಿದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ಕಶ್ಯಪವಂಶ
ವರ್ಣನವೆಂಬ ನೂರತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ವಸಿಷ್ಠವಂಶಜಾನ್ವಿಪ್ರಾನ್ ನಿಬೋಧ ವದತೋ ಮಮ ।
ಏಕಾರ್ಷೇಯಸ್ತು ಪ್ರವರೋ ವಾಸಿಷ್ಠಾನಾಂ ಪ್ರಕೀರ್ತಿತಃ ॥ ೧ ॥

ವಸಿಷ್ಠಾ ಏವ ವಾಸಿಷ್ಠಾ ಅವಿವಾಹ್ಯಾ ವಸಿಷ್ಠಜೈಃ ।
ವ್ಯಾಘ್ರಪಾದಾ ಔಪಗವಾ ವೈಕ್ಲವಾಃ ಶಾದ್ವಲಾಯನಾಃ ॥ ೨ ॥

ಕಪಿಷ್ಠಲಾ ಔಪಲೋಮಾ ಅಲಬ್ಧಾಶ್ಚ ಶಠಾಃ ಕಠಾಃ ।
ಗೋಪಾಯನಾ ಬೋಧಪಾಶ್ಚ ದಾಕವ್ಯಾ ಹ್ಯಥ ವಾಹ್ಯಕಾಃ ॥ ೩ ॥

ಬಾಲಿಶಯಾಃ ಪಾಲಿಶಯಾಸ್ತತೋ ವಾಗ್ಗ್ರಂಥಯಶ್ಚ ಯೇ ।
ಆಪಸ್ಥೂಣಾಃ ಶೀತವೃತ್ತಾಸ್ತಥಾ ಬ್ರಾಹ್ಮಪುರೇಯಕಾಃ ॥ ೪ ॥

ಲೋಮಾಯನಾಃ ಸ್ವಸ್ತಿಕರಾಃ ಶಾಂಡಿಲಿಗೌಡಿನಿಸ್ತಥಾ ।
ವಾಡೋಹಲಿಶ್ಚ ಸುಮನಾಶ್ಚೋಪಾವೃದ್ಧಿಸ್ತಥೈವ ಚ ॥ ೫ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವಸಿಷ್ಠಮಹರ್ಷಿಯ ವಂಶದಲ್ಲಿ ಹುಟ್ಟಿದ ದ್ವಿಜೋತ್ತಮರನ್ನು ಹೇಳುವೆನು. ಕೇಳು. ಈ ವಂಶಸ್ಥರೆಲ್ಲರ ಪ್ರವರವೂ ಏಕಾರ್ಷೇಯವಾದುದು. ಎಂದರೆ ಒಬ್ಬನೇ ಪ್ರವರರ್ಷಿಯಿಂದ ಎಂದರೆ ವಸಿಷ್ಠಮಹರ್ಷಿಯಿಂದ ಕೂಡಿದುದು. ವಾಸಿಷ್ಠರುತಮ್ಮ ತಮ್ಮಲ್ಲಿ ವಿವಾಹ ಸಂಬಂಧವನ್ನು ಬೆಳಸಬಾರದು.

೨-೬. ವ್ಯಾಘ್ರಪಾದರು, ಔಪಗವರು, ವೈಕ್ಲವರು, ಶಾದ್ವಲಾಯನರು, ಕಪಿಷ್ಠಲರು, ಔಪಲೋಮರು, ಅಲಬ್ಧರು, ಶಠರು, ಕಠರು, ಗೌಪಾಯನರು, ಬೋಧಪರು, ದಾಕವ್ಯರು, ವಾಹ್ಯಕರು, ಬಾಲಿಶಯರು, ಪಾಲಿಶಯರು, ವಾಗ್ಗ್ರಂಥಿಗಳು, ಆಪಸ್ಥೂಣರು, ಶೀತವೃತ್ತರು, ಬ್ರಾಹ್ಮಪುರೇಯಕರು, ಲೋಮಾಯನರು, ಸ್ವಸ್ತಿಕರರು, ಶಾಂಡಿಲಿ, ಗೌಡಿನಿ, ವಾಡೋಹಲಿ, ಸುಮನಸ,

ಚೌಲಿರ್ವೌಲಿರ್ಬ್ರಹ್ಮಬಲಃ ಪೌಲಿಃ ಶ್ರವಸ ಏವ ಚ ।
ಪೌಡವೋ ಯಾಜ್ಞವಲ್ಕ್ಯಶ್ಚ ಏಕಾರ್ಷೇಯಾ ಮಹರ್ಷಯಃ ॥ ೬ ॥

ವಸಿಷ್ಠ ಏಷಾಂ ಪ್ರವರೋ ಹ್ಯವೈವಾಹ್ಯಾಃ ಪರಸ್ಪರಂ ।
ಶೈಲಾಲಯೋ ಮಹಾಕರ್ಣಃ ಕೌರವ್ಯಃ ಕ್ರೋಧಿನಸ್ತಥಾ ॥ ೭ ॥

ಕಪಿಂಜಲಾ ವಾಲಖಿಲ್ಯಾ ಭಾಗವಿತ್ತಾಯನಾಶ್ಚ ಯೇ ।
ಕೌಲಾಯನಃ ಕಾಲಶಿಖಃ ಕೋರಕೃಷ್ಣಾಃ ಸುರಾಯಣಾಃ ॥ ೮ ॥

ಶಾಕಾಹಾರ್ಯಾಃ ಶಾಕಧಿಯಃ ಕಾಣ್ವಾ ಉಪಲಪಾಶ್ಚ ಯೇ ।
ಶಾಕಾಯನಾ ಉಹಾಕಾಶ್ಚ ಅಥ ಮಾಷಶರಾವಯಃ ॥ ೯ ॥

ದಾಕಾಯನಾ ಬಾಲವಯೋ ವಾಕಯೋ ಗೋರಥಾಸ್ತಥಾ ।
ಲಂಬಾಯನಾಃ ಶ್ಯಾಮವಯೋ ಯೇ ಚ ಕ್ರೋಡೋದರಾಯಣಾಃ ॥೧೦॥

ಪ್ರಲಂಬಾಯನಾಶ್ಚ ಋಷಯ ಔಪಮನ್ಯವ ಏವ ಚ ।
ಸಾಂಖ್ಯಾಯನಾಶ್ಚ ಋಷಯಸ್ತಥಾ ವೈ ವೇದಶೇರಕಾಃ ॥೧೧॥

---

ಉಪಾವೃದ್ಧಿ, ಚೌಲಿ, ವೌಲಿ, ಬ್ರಹ್ಮಬಲ, ಪೌಲಿ, ಶ್ರವಸ, ಪೌಢವ, ಯಾಜ್ಞವಲ್ಕ್ಯ ಇವರೆಲ್ಲರೂ ಏಕಾರ್ಷೇಯರು. ಇವರ ಪ್ರವರರ್ಷಿಯೆಂದರೆ ವಸಿಷ್ಠರು. ಈ ಋಷಿಗಳು ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

೭-೧೩. ಶೈಲಾಲಿಗಳು, ಮಹಾಕರ್ಣ, ಕೌರವ್ಯ, ಕ್ರೋಧಿನ, ಕಪಿಂಜಲರು, ವಾಲಖಿಲ್ಯರು, ಭಾಗವಿತ್ತಾಯನರು, ಕೌಲಾಯನ, ಕಾಲಶಿಖ, ಕೋರಕೃಷ್ಣರು, ಸುರಾಯಣರು, ಶಾಕಾಹಾರ್ಯರು, ಶಾಕಧೀಗಳು, ಕಾಣ್ವರು, ಉಪಲಪರು, ಶಾಕಾಯನರು, ಉಹಾಕರು, ಮಾಷಶರಾವಯರು, ದಾಕಾಯನರು, ಬಾಲವಿಗಳು, ವಾಕಾಯರು, ಗೋರಥರು, ಲಂಬಾಯನರು, ಶ್ಯಾಮವಿಗಳು, ಕ್ರೋಡೋದರಾಯಣರು, ಪ್ರಲಂಬಾಯನರು, ಔಪಮನ್ಯುಗಳು, ಸಾಂಖ್ಯಾಯನರು, ವೇದಶೇರಕರು, ಪಾಲಂಕಾಯನರು, ಉದ್ಗಾಹರು, ಬಲೇಕ್ಷುಗಳು, ಮಾತೇಯರು,

ಪಾಲಂಕಾಯನ ಉದ್ಗ್ರಾಹಾ ಋಷಯಶ್ಚ ಬಲೇಕ್ಷವಃ ।
ಮಾತೇಯಾ ಬ್ರಹ್ಮಬಲಿನಃ ಪನ್ನಗಾರಿಸ್ತಥೈವ ಚ ॥೧೨॥

ತ್ರ್ಯಾರ್ಷೇಯೋಽಭಿಮತಶ್ಚೈಷಾಂ ಸರ್ವೇಷಾಂ ಪ್ರವರಸ್ತಥಾ ।
ಭಗೀವಸುರ್ವಸಿಷ್ಠಶ್ಚ ಇಂದ್ರಪ್ರಮದಿರೇವ ಚ ॥೧೩॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಔಪಸ್ಥಲಾಃ ಸ್ವಸ್ಥಲಯೋ ಬಾಲೋ ಹಾಲೋ ಹಲಾಶ್ಚ ಯೇ ॥೧೪॥

ಮಾಧ್ಯಂದಿನೋ ಮಾಕ್ಷತಯಃ ಪೈಪ್ಪಲಾದಿರ್ವಿಚಕ್ಷುಷಃ ।
ತ್ರೈಶೃಂಗಾಯಣಸೈಬಲ್ಕಾಃ ಕುಂಡಿನಶ್ಚ ನರೋತ್ತಮ ॥೧೫॥

ತ್ರ್ಯಾರ್ಷೇಯಾಭಿಮತಾಶ್ಚೈಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ವಸಿಷ್ಠಮಿತ್ರಾವರುಣೌ ಕುಂಡಿನಶ್ಚ ಮಹಾತಪಾಃ ॥೧೬॥

ದಾನಕಾಯಾ ಮಹಾವೀರ್ಯಾ ನಾಗೇಯಾಃ ಪರಮಾಸ್ತಥಾ ।
ಆಲಂಬಾ ವಾಯನಶ್ಚಾಪಿ ಯೇ ಚ ಕ್ರೋಡಾದಯೋ ನರಾಃ ॥೧೭॥

---

ಬ್ರಹ್ಮಬಲಿಗಳು, ಪನ್ನಗಾರಿ ಈ ಋಷಿಗಳೆಲ್ಲ ತ್ರ್ಯಾರ್ಷೇಯರು. ಭಗೀವಸು, ವಸಿಷ್ಠ ಮತ್ತು ಇಂದ್ರಪ್ರಮದಿಗಳೆಂಬ ಮೂವರು ಮಹರ್ಷಿಗಳ ಪರಂಪರೆಗೆ ಇವರು ಸೇರಿದವರು. ಇವರು ಪರಸ್ಪರ ವಿವಾಹಸಂಬಂಧಕ್ಕೆ ಅರ್ಹರಲ್ಲ.

೧೪-೧೬. ಔಪಸ್ಥಲರು, ಸ್ವಸ್ಥಲಿಗಳು, ಬಾಲ, ಹಾಲ, ಹಲ, ಮಾಧ್ಯಂದಿನ, ಮಾಕ್ಷತಿಗಳು, ಪೈಪ್ಪಲಾದಿ, ವಿಚಕ್ಷುಷರು, ತ್ರೈಶೃಂಗಾಯಣರು, ಸೈಬಲ್ಕರು, ಕುಂಡಿನ ಈ ಋಷಿಗಳೆಲ್ಲ ತ್ರ್ಯಾರ್ಷೇಯರು. ವಸಿಷ್ಠ, ಮಿತ್ರಾವರುಣ, ಮಹಾತಪಸ್ವಿಯಾದ ಕುಂಡಿನ ಈ ಮೂವರೂ ಇವರ ಪ್ರವರರ್ಷಿಗಳು.

೧೭. ಮಹಾವೀರ್ಯರಾದ ದಾನಕಾಯರು, ಶ್ರೇಷ್ಠರಾದ ನಾಗೇಯರು, ಆಲಂಬರು, ವಾಯನ, ಕ್ರೋಡಾದಿಗಳು ಈ ಋಷಿಗಳೆಲ್ಲ ಪರಸ್ಪರ ವಿವಾಹ ಸಂಬಂಧವನ್ನು ಬೆಳೆಸಬಾರದು.

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಶಿವಕರ್ಣೋ ವಯಶ್ಚೈವ ಪಾದಪಶ್ಚ ತಥೈವ ಚ ||೧೮||

ತ್ರ್ಯಾರ್ಷೇಯೋಭಿಮತಶ್ಚೈಷಾಂ ಸರ್ವೇಷಾಂ ಪ್ರವರಸ್ತಥಾ ।
ಜಾತೂಕರ್ಣ್ಯೋ ವಸಿಷ್ಠಶ್ಚ ತಥೈವಾತ್ರಿಶ್ಚ ಪಾರ್ಥಿವ ।
ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ||೧೯||

ವಸಿಷ್ಠವಂಶೇಽಭಿಹಿತಾ ಮಯೈತೇ ।
ಋಷಿಪ್ರಧಾನಾಃ ಸತತಂ ದ್ವಿಜೇಂದ್ರಾಃ ।
ಯೇಷಾಂ ತು ನಾಮ್ನಾಂ ಪರಿಕೀರ್ತನೇನ ।
ಪಾಪಂ ಸಮಗ್ರಂ ಪುರುಷೋ ಜಹಾತಿ ||೨೦||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇ ವಸಿಷ್ಠ ಗೋತ್ರಾನುವರ್ಣನಂ ನಾಮದ್ವಿಶತತಮೋಽಧ್ಯಾಯಃ

೧೮-೧೯. ಶಿವಕರ್ಣ, ವಯ, ಪಾದಪ ಇವರು ಜಾತೂಕರ್ಣ್ಯ, ವಸಿಷ್ಠ, ಅತ್ರಿ ಈ ಮೂವರು ಮಹರ್ಷಿಗಳ ಪರಂಪರೆಗೆ ಸೇರಿದವರು. ಓ ರಾಜಾ, ಈ ಋಷಿಗಳು ಪರಸ್ಪರ ವೈವಾಹಿಕಸಂಬಂಧವನ್ನು ಬೆಳೆಸಬಾರದು.

೨೦. ವಸಿಷ್ಠಮಹರ್ಷಿಗಳ ವಂಶದಲ್ಲಿ ಜನಿಸಿದ ಬ್ರಾಹ್ಮಣೋತ್ತಮರಾದ ಋಷಿಶ್ರೇಷ್ಠರ ಹೆಸರನ್ನು ಹೇಳಿದ್ದೇನೆ. ಇವರ ನಾಮೋಚ್ಚಾರಣ ಮಾತ್ರದಿಂದಲೇ ಮನುಷ್ಯನು ಸಕಲ ಪಾಪಗಳಿಂದಲೂ ಮುಕ್ತನಾಗುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ವಸಿಷ್ಠಮಹರ್ಷಿಗಳ ವಂಶವನ್ನು ವರ್ಣಿಸಿದೆ.

ಪೂಜ್ಯರಾದ ವಸಿಷ್ಠಮಹರ್ಷಿಗಳ ವಂಶದಲ್ಲಿ ಬೇರೆ ಬೇರೆ ಗಣಗಳ ಋಷಿಗಳು ಜನಿಸಿದರು. ಅವರಲ್ಲಿ ಕೆಲವರು ಏಕಾರ್ಷೇಯರು; ಉಳಿದವರು ತ್ರ್ಯಾರ್ಷೇಯರು. ಇವರ ದಿವ್ಯನಾಮಗಳನ್ನು ಕೀರ್ತನಮಾಡುವುದರಿಂದ ಸಕಲ ಪಾಪಗಳೂ ಪರಿಹಾರವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನವಲ್ಲಿ ವಸಿಷ್ಠಗೋತ್ರಾನು ವರ್ಣನವೆಂಬ ಇನ್ನೂರನೆಯ ಅಧ್ಯಾಯವು ಮುಗಿದುದು.

## ಅಥೈಕಾಧಿಕದ್ವಿಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ವಸಿಷ್ಠಸ್ತು ಮಹಾತೇಜಾ ನಿಮೇಃ ಪೂರ್ವಪುರೋಹಿತಃ ।
ಬಭೂವ ಪಾರ್ಥಿವಶ್ರೇಷ್ಠ ಯಜ್ಞಾಸ್ತಸ್ಯ ಸಮಂತತಃ || ೧ ||

ಶ್ರಾಂತಾತ್ಮಾ ಪಾರ್ಥಿವಶ್ರೇಷ್ಠ ವಿಶಶ್ರಾಮ ತಥಾ ಗುರುಃ ।
ತಂ ಗತ್ವಾ ಪಾರ್ಥಿವಶ್ರೇಷ್ಠೋ ನಿಮಿರ್ವಚನಮಬ್ರವೀತ್ || ೨ ||

ಭಗವನ್ ಯಷ್ಟುಮಿಚ್ಛಾಮಿ ತನ್ಮಾಂ ಯಾಜಯ ಮಾ ಚಿರಂ ।
ತಮುವಾಚ ಮಹಾತೇಜಾ ವಸಿಷ್ಠಃ ಪಾರ್ಥಿವೋತ್ತಮಂ || ೩ ||

ಕಂಚಿತ್ಕಾಲಂ ಪ್ರತೀಕ್ಷಸ್ವ ತವ ಯಜ್ಞೈಃ ಸುಸತ್ತಮೈಃ ।
ಶ್ರಾಂತೋಽಸ್ಮಿ ರಾಜನ್ ವಿಶ್ರಮ್ಯ ಯಾಜಯಿಷ್ಯಾಮಿ ತೇ ನೃಪ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಎಲೈ ರಾಜೇಂದ್ರಾ, ಮಹಾತೇಜಸ್ವಿಯಾದ ವಸಿಷ್ಠಮಹರ್ಷಿಯು ನಿಮಿಚಕ್ರವರ್ತಿಗೆ ಆದಿಯಿಂದಲೂ ಪುರೋಹಿತನಾಗಿದ್ದನು. ಆತನು ಬಿಡುವಿಲ್ಲದಂತೆ ಎಲ್ಲಕಡೆಗಳಿಗೂ ಹೋಗಿ ಯಜ್ಞಗಳನ್ನು ಮಾಡಿಸಬೇಕಾಗಿದ್ದಿತು.

೨. ಅದರಿಂದ ಆ ಮುನಿಗೆ ಬಹಳ ಆಯಾಸವಾಯಿತು. ಅವನು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು. ಚಕ್ರವರ್ತಿಯಾದ ನಿಮಿ ಅವನಲ್ಲಿಗೆ ಹೋಗಿ ಇಂತೆಂದನು.

೩. “ಸ್ವಾಮೀ, ಯಾಗಮಾಡಬೇಕೆಂದಿದ್ದೇನೆ. ಆದುದರಿಂದ ಬೇಗನೆ ನನ್ನಿಂದ ಯಜ್ಞವನ್ನು ಮಾಡಿಸಿರಿ” ಎಂದು ರಾಜನು ಬೇಡಿಕೊಳ್ಳಲು ಮಹಾತೇಜಸ್ವಿಯಾದ ವಸಿಷ್ಠಮುನಿ ಆ ರಾಜೋತ್ತಮನಿಗೆ ಇಂತು ಉತ್ತರವಿತ್ತನು.

೪. “ಸ್ವಲ್ಪ ಕಾಲ ತಾಳು; ಬೇಕಾದಂತಹ ಯಾಗಗಳನ್ನು ಮಾಡುವೆಯಂತೆ. ರಾಜಾ, ನನಗೆ ಆಯಾಸವಾಗಿದೆ. ವಿಶ್ರಾಂತಿ ತೆಗೆದುಕೊಂಡ ಬಳಿಕ ನಿನ್ನ ಯಜ್ಞಗಳನ್ನು ಮಾಡಿಸುವೆನು”.

ಏವಮುಕ್ತಃ ಪ್ರತ್ಯುವಾಚ ವಸಿಷ್ಠಂ ನೃಪಸತ್ತಮಃ ।
ಪಾರಲೌಕಿಕಕಾರ್ಯೇತು ಕಃ ಪ್ರತೀಕ್ಷಿತುಮುತ್ಸಹೇತ್ ॥ ೫ ॥

ನ ಚ ಮೇ ಸೌಹೃದಂ ಬ್ರಹ್ಮನ್ ಕೃತಾಂತೇನ ಬಲೀಯಸಾ ।
ಧರ್ಮಕಾರ್ಯೇ ತ್ವರಾ ಕಾರ್ಯಾ ಚಲಂ ಯಸ್ಮಾದ್ಧಿ ಜೀವಿತಂ ॥ ೬ ॥

ಧರ್ಮಪಥ್ಯೌದನೋ ಜಂತುರ್ಮೃತೋಽಪಿ ಸುಖಮಶ್ನುತೇ ।
ಶ್ವಃಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಂ ॥ ೭ ॥

ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಂ ಚಾಸ್ಯ ನ ವಾ ಕೃತಂ ।
ಕ್ಷೇತ್ರಾಪಣಗೃಹಾಸಕ್ತಮನ್ಯತ್ರ ಗತಮಾನಸಂ ॥ ೮ ॥

ವೃಕೀವೋರಣಮಾಸಾದ್ಯ ಮೃತ್ಯುರಾದಾಯ ಗಚ್ಛತಿ ।
ನೈಕಾಂತೇನ ಪ್ರಿಯಃ ಕಶ್ಚಿದ್ದ್ವೇಷ್ಯಶ್ಚಾಸ್ಯ ನ ವಿದ್ಯತೇ ॥ ೯ ॥

---

೫. ವಸಿಷ್ಠಮಹರ್ಷಿ ಹೀಗೆ ಹೇಳಲು, ನಿಮಿಚಕ್ರವರ್ತಿ ಉತ್ತರವಿತ್ತನು. "ಪರಲೋಕಸಾಧನವಾದ ಕಾರ್ಯದಲ್ಲಿ ತಡಮಾಡುವುದಕ್ಕೆ ಯಾರಿಗೆ ತಾನೆ ಮನಸ್ಸು ಬಂದೀತು.

೬. ಎಲೈ ಬ್ರಾಹ್ಮಣೋತ್ತಮನೇ, ಯಮನು ಬಲಿಷ್ಠ; ಅವನೊಡನೆ ನನಗೆ ಸ್ನೇಹವಿಲ್ಲ. ಧರ್ಮಕಾರ್ಯದಲ್ಲಿ ತ್ವರೆಯಿರಬೇಕು. ಏಕೆಂದರೆ ಪ್ರಾಣವು ಚಂಚಲವಾದುದು.

೭. ಧರ್ಮವೆಂಬ ಬುತ್ತಿಯ ಅನ್ನವಿದ್ದರೆ ಪ್ರಾಣಿಯು ಮೃತಪಟ್ಟರೂ ಸುಖವನ್ನು ಪಡೆಯುವುದು. ನಾಳೆಯ ಕೆಲಸವನ್ನು ಇಂದೇ ಮಾಡಬೇಕು. ಮಧ್ಯಾಹ್ನದ ಕಾರ್ಯವನ್ನು ಪ್ರಾತಃಕಾಲದಲ್ಲೇ ಮುಗಿಸಬೇಕು.

೮-೯. ಇವನು ತನ್ನ ಕರ್ತವ್ಯವನ್ನು ಮುಗಿಸಿದ್ದಾನೆಯೋ ಇಲ್ಲವೋ ಎಂದು ಮೃತ್ಯು ಕಾಯುವುದಿಲ್ಲ. ಹೊಲ, ಅಂಗಡಿ, ಮನೆ ಇವುಗಳಲ್ಲಿ ಆಸಕ್ತನಾಗಿರಲಿ, ಬೇರೆ ಕಡೆ ಮನಸ್ಸನ್ನು ಕೊಟ್ಟಿರಲಿ ಮೃತ್ಯು ಥಟ್ಟನೆ ಬಂದು, ತೋಳನು ಕುರಿಯನ್ನು ಎತ್ತಿಕೊಂಡು ಹೋಗುವಂತೆ ಮನುಷ್ಯನನ್ನು ಹೊತ್ತುಕೊಂಡು ಹೋಗುತ್ತದೆ. ಅದಕ್ಕೆ "ಇವನು ನನಗೆ ಬಹಳ ಆಪ್ತ; ಇವನು ನನಗೆ ದ್ವೇಷಿ" ಎಂಬ ಭಾವನೆ ಸ್ವಲ್ಪವೂ ಇಲ್ಲ.

ಆಯುಷ್ಯೇ ಕರ್ಮಣಿ ಕ್ಷೀಣೇ ಪ್ರಸಹ್ಯ ಹರತೇ ಜನಂ ।
ಪ್ರಾಣವಾಯೋಶ್ಚಲತ್ವಂ ಚ ತ್ವಯಾ ವಿದಿತಮೇವ ಚ ॥೧೦॥

ಯದತ್ರ ಜೀವ್ಯತೇ ಬ್ರಹ್ಮನ್ ಕ್ಷಣಮಾತ್ರಂ ತದದ್ಭುತಂ ।
ಶರೀರಂ ಶಾಶ್ವತಂ ಮನ್ಯೇ ವಿದ್ಯಾಭ್ಯಾಸೇ ಧನಾರ್ಜನೇ ॥೧೧॥

ಅಶಾಶ್ವತಂ ಧರ್ಮಕಾರ್ಯೇ ಋಣವಾನಸ್ಮಿ ಸಂಕಟೇ ।
ಸೋಽಹಂ ಸಂಭೃತಸಂಭಾರೋ ಭವನ್ಮೂಲಮುಪಾಗತಃ ॥೧೨॥

ನ ಚೇದ್ಯಾಜಯಸೇ ಮಾಂ ತ್ವಮನ್ಯಂ ಯಾಸ್ಯಾಮಿ ಯಾಜಕಂ ।
ಏವಮುಕ್ತಸ್ತದಾ ತೇನ ನಿಮಿನಾ ಬ್ರಾಹ್ಮಣೋತ್ತಮಃ ॥೧೩॥

ಶಶಾಪ ತಂ ನಿಮಿಂ ಕ್ರೋಧಾದ್ವಿದೇಹಸ್ತ್ವಂ ಭವಿಷ್ಯಸಿ ।
ಶ್ರಾಂತಂ ಮಾಂ ತ್ವಂ ಸಮುತ್ಸೃಜ್ಯ ಯಸ್ಮಾದನ್ಯಂ ದ್ವಿಜೋತ್ತಮಂ ॥೧೪॥

---

೧೦. ಮನುಷ್ಯನ ಆಯುಸ್ಸಿಗೆ ಪುಣ್ಯವು ಕಾರಣ. ಅದು ಕ್ಷಯಿಸುವಾಗ ಅವನನ್ನು ಬಲಾತ್ಕಾರವಾಗಿ ಎಳೆದೊಯ್ಯುತ್ತದೆ. ಪ್ರಾಣವಾಯು ಎಷ್ಟು ಅಸ್ಥಿರವಾದುದೆಂಬುದು ನಿನಗೆ ತಿಳಿದೇ ಇದೆ.

೧೧. ಎಲೈ ಬ್ರಹ್ಮಜ್ಞನೇ, ಕ್ಷಣಕಾಲವಾದರೂ ನಾವು ಬದುಕಿದ್ದೇವಲ್ಲಾ ಅದೇ ಬಹಳ ಆಶ್ಚರ್ಯ. ವಿದ್ಯೆಯನ್ನೂ ಹಣವನ್ನೂ ಗಳಿಸುವಾಗ ಶರೀರವು ಸ್ಥಿರವಾದುದೆಂದೂ, ಧರ್ಮಕಾರ್ಯವನ್ನು ಮಾಡಬೇಕಾಗಿ ಬಂದಾಗ ಅದು ಶಾಶ್ವತವಲ್ಲವೆಂದೂ ತಿಳಿದಿರುವೆನು. ಇಂತಹ ಕಷ್ಟಕಾಲದಲ್ಲಿ ನನ್ನ ಮೇಲೆ ಧರ್ಮಕಾರ್ಯದ ಸಾಲವು ಬಿದ್ದಿದೆ.

೧೨. ಈಗ ನಾನು ಸಾಮಗ್ರಿಗಳೆಲ್ಲವನ್ನೂ ಸಿದ್ಧಪಡಿಸಿ ನಿನ್ನ ಬಳಿಗೆ ಬಂದಿರುವೆನು. ಯಾಗವನ್ನು ಮಾಡಿಸುವುದಕ್ಕೆ ನಿನಗೆ ಸಾಧ್ಯವಿಲ್ಲದಿದ್ದರೆ ಬೇರೆ ಪುರೋಹಿತನ ಬಳಿಗೆ ಹೋಗುವೆನು.''

೧೩-೧೪. ನಿಮಿಯು ಹೀಗೆ ಹೇಳಲು ಬ್ರಾಹ್ಮಣೋತ್ತಮನಾದ ವಸಿಷ್ಠ ಮುನಿಯು ಕೋಪಗೊಂಡು ಅವನಿಗೆ ಶಾಪವನ್ನು ಕೊಟ್ಟನು. "ನಾನು ಆಯಾಸಗೊಂಡಿರುವೆನೆಂದು ತಿಳಿದೂ ಕೂಡ ನನ್ನನ್ನು ಬಿಟ್ಟು ಮತ್ತೊಬ್ಬ ಬ್ರಾಹ್ಮಣನನ್ನು ಪುರೋಹಿತನನ್ನಾಗಿ ಮಾಡಿಕೊಳ್ಳಬೇಕೆಂದಿರುವೆ. ಓ ರಾಜಾ, ನಿನಗಾದರೋ ಧರ್ಮವು ಚೆನ್ನಾಗಿ ಗೊತ್ತು. ಆದುದರಿಂದ ನೀನು ದೇಹವಿಲ್ಲದವನಾಗುವೆ."

ಧರ್ಮಜ್ಞಸ್ತು ನರೇಂದ್ರ ತ್ವಂ ಯಾಜಕಂ ಕರ್ತುಮಿಚ್ಛಸಿ ।
ನಿಮಿಸ್ತಂ ಪ್ರತ್ಯುವಾಚಾಥ ಧರ್ಮಕಾರ್ಯರತಸ್ಯ ಮೇ ||೧೫||

ವಿಘ್ನಂ ಕರೋಷಿ ನಾನ್ಯೇನ ಯಾಜನಂ ಚ ತಥೇಚ್ಛಸಿ ।
ಶಾಪಂ ದದಾಸಿ ಯಸ್ಮಾತ್ತ್ವಂ ವಿದೇಹೋಽಥ ಭವಿಷ್ಯಸಿ ||೧೬||

ಏವಮುಕ್ತೌ ತು ತೌ ಜಾತೌ ವಿದೇಹೌ ದ್ವಿಜಪಾರ್ಥಿವೌ ।
ದೇಹಹೀನೌ ತಯೋರ್ಜೀವೌ ಬ್ರಹ್ಮಾಣಮುಪಜಗ್ಮತುಃ ||೧೭||

ತಾವಾಗತೌ ಸಮೀಕ್ಷ್ಯಾಥ ಬ್ರಹ್ಮಾ ವಚನಮಬ್ರವೀತ್ ।
ಅದ್ಯ ಪ್ರಭೃತಿ ತೇ ಸ್ಥಾನಂ ನಿಮೇ ಜೀವ ದದಾಮ್ಯಹಂ ||೧೮||

ನೇತ್ರಪಕ್ಷ್ಮಸು ಸರ್ವೇಷಾಂ ತ್ವಂ ವಸಿಷ್ಯಸಿ ಪಾರ್ಥಿವ ।
ತ್ವತ್ಸಂಬಂಧಾತ್ತಥಾ ತೇಷಾಂ ನಿಮೇಷಃ ಸಂಭವಿಷ್ಯತಿ ||೧೯||

---

೧೫-೧೬. ಬಳಿಕ ನಿಮಿ ಉತ್ತರವಿತ್ತನು. "ನಾನು ಧರ್ಮಕಾರ್ಯದಲ್ಲಿ ಆಸಕ್ತನಾಗಿರುವಾಗ ನೀನು ನನಗೆ ಅಡ್ಡಿಯನ್ನು ಮಾಡುತ್ತಿರುವೆ. ಬೇರೊಬ್ಬರಿಂದ ಯಾಗವನ್ನು ಮಾಡಿಸೋಣವೆಂದರೆ ಅದನ್ನೂ ಬೇಡವೆನ್ನುವೆ. ಸಾಲದುದಕ್ಕೆ ನನಗೇ ಶಾಪವನ್ನು ಕೊಟ್ಟಿರುವೆ. ಆದುದರಿಂದ ನೀನೂ ದೇಹವಿಲ್ಲದವನಾಗು."

೧೭. ನಿಮಿಯೂ ಹೀಗೆ ಹೇಳಲು ಆ ಮುನಿ ಮತ್ತು ಆ ರಾಜ ಇಬ್ಬರೂ ದೇಹರಹಿತರಾದರು. ಅವರ ಜೀವಗಳು ದೇಹದ ಆಸರೆ ತಪ್ಪಿಹೋಗಲು ಬ್ರಹ್ಮನ ಬಳಿಗೆ ಹೋದುವು.

೧೮-೧೯. ಜೀವಗಳೆರಡೂ ಬಂದುದನ್ನು ಕಂಡು ಬ್ರಹ್ಮನು ಹೀಗೆ ಹೇಳಿದನು. "ಓ ನಿಮೀ, ನೀನು ಬದುಕು. ಈ ದಿನ ಮೊದಲುಗೊಂಡು ನಿನಗೆ ಸ್ಥಳವನ್ನು ಕೊಡುವೆನು. ಓ ರಾಜಾ, ಎಲ್ಲರ ಕಣ್ಣು ರೆಪ್ಪೆಗಳಲ್ಲಿಯೂ ನೀನು ವಾಸ ಮಾಡು. ನಿನ್ನ ಸಂಬಂಧದಿಂದ ಅವರಿಗೆ ನಿಮೇಷವೆಂಬ ಕಾಲಪರಿಮಾಣವು ಉಂಟಾಗುತ್ತದೆ. ಅದರ ಸೂಚಕವಾಗಿ ಅವರು ಕಣ್ಣು ರೆಪ್ಪೆಗಳನ್ನು ಅಲುಗಾಡಿಸುವರು."

**ಚಾಲಯಿಷ್ಯಂತಿ ತು ತದಾ ನೇತ್ರಪಕ್ಷ್ಮಾಣಿ ಮಾನವಾಃ ।**
**ಏವಮುಕ್ತೇ ಮನುಷ್ಯಾಣಾಂ ನೇತ್ರಪಕ್ಷ್ಮಸು ಸರ್ವಶಃ ॥೨೦॥**

**ಜಗಾಮ ನಿಮಿಜೀವಸ್ತು ವರದಾನಾತ್ಸ್ವಯಂಭುವಃ ।**
**ವಸಿಷ್ಠಜೀವಂ ಭಗವಾನ್ ಬ್ರಹ್ಮಾ ವಚನಮಬ್ರವೀತ್ ॥೨೧॥**

**ಮಿತ್ರಾವರುಣಯೋಃ ಪುತ್ರೋ ವಸಿಷ್ಠ ತ್ವಂ ಭವಿಷ್ಯಸಿ ।**
**ವಸಿಷ್ಠೇತಿ ಚ ತೇ ನಾಮ ತತ್ರಾಪಿ ಚ ಭವಿಷ್ಯತಿ ॥೨೨॥**

**ಜನ್ಮದ್ವಯಮತೀತಂ ಚ ತತ್ರಾಪಿ ತ್ವಂ ಸ್ಮರಿಷ್ಯಸಿ ।**
**ಏತಸ್ಮಿನ್ನೇವ ಕಾಲೇ ತು ಮಿತ್ರಶ್ಚ ವರುಣಸ್ತಥಾ ॥೨೩॥**

**ಬದರ್ಯಾಶ್ರಮಮಾಸಾದ್ಯ ತಪಸ್ತೇಪತುರವ್ಯಯಂ ।**
**ತಪಸ್ಯತೋಸ್ತಯೋರೇವಂ ಕದಾಚಿನ್ಮಾಧವೇ ಋತೌ ॥೨೪॥**

**ಪುಷ್ಪಿತದ್ರುಮಸಂಸ್ಥಾನೇ ಶುಭೇ ದಯಿತಮಾರುತೇ ।**
**ಊರ್ವಶೀ ತು ವರಾರೋಹಾ ಕುರ್ವತೀ ಕುಸುಮೋಚ್ಚಯಂ ॥೨೫॥**

---

೨೦. ಬ್ರಹ್ಮನು ಹೀಗೆ ಹೇಳಲು ಅವನ ವರದಿಂದ ನಿಮಿಯ ಜೀವವು ಮನುಷ್ಯರ ಕಣ್ಣುರೆಪ್ಪೆಗಳಲ್ಲಿ ವಾಸಮಾಡುವುದಕ್ಕಾಗಿ ಎಲ್ಲ ಕಡೆಗೂ ಹೋಯಿತು.

೨೧-೨೨. ಪೂಜ್ಯನಾದ ಬ್ರಹ್ಮನು ವಸಿಷ್ಠನ ಆತ್ಮವನ್ನು ನೋಡಿ ಇಂತೆಂದನು. "ನೀನು ಮಿತ್ರ, ವರುಣ ಇವರಿಬ್ಬರ ಮಗನಾಗು. ಆಗಲೂ ನಿನಗೆ ವಸಿಷ್ಠನೆಂದೇ ಹೆಸರಿರುವುದು. ಕಳೆದ ಜನ್ಮಗಳೆರಡರ ವೃತ್ತಾಂತವನ್ನೂ ನೀನು ಸ್ಮರಿಸಿಕೊಳ್ಳಬಲ್ಲೆ."

೨೩. ಇದೇ ವೇಳೆಗೆ ಮಿತ್ರನೂ ವರುಣನೂ ಬದರಿಕಾಶ್ರಮಕ್ಕೆ ಹೋಗಿ ಉಗ್ರವಾದ ತಪಸ್ಸಿಗೆ ತೊಡಗಿದರು.

೨೪-೨೫. ಅವರು ಹೀಗೆ ತಪಸ್ಸುಮಾಡುತ್ತಿರುವಾಗ ಒಂದಾನೊಂದು ವಸಂತರ್ತುವಿನಲ್ಲಿ ಎಲ್ಲೆಲ್ಲಿಯೂ ಹೂ ಬಿಟ್ಟಿರಲು, ಇಂಪಾಗಿ ಗಾಳಿ ಬೀಸುತ್ತಿರಲು, ತ್ರಿಲೋಕಸುಂದರಿಯಾದ ಊರ್ವಶಿಯು ಹೂಗಳನ್ನು ಕೊಯ್ಯುತ್ತಾ ಬಂದು ಅವರಿಬ್ಬರ ಕಣ್ಣಿಗೆ ಬಿದ್ದಳು. ಅವಳು ನವುರಾದ ಕೆಂಪು ಸೀರೆಯನ್ನು ಉಟ್ಟಿದ್ದಳು.

**ಸುಸೂಕ್ಷ್ಮರಕ್ತವಸನಾ ತಯೋರ್ದೃಷ್ಟಿಪಥಂ ಗತಾ ।**
**ತಾಂ ದೃಷ್ಟ್ವೇಂದುಮುಖೀಂ ಸುಭ್ರೂಂ ನೀಲನೀರಜಲೋಚನಾಂ ॥೨೬॥**

**ಉಭೌ ಚುಕ್ಷುಭತುರ್ದೇವೌ ತದ್ರೂಪಪರಿಮೋಹಿತೌ ।**
**ತಪಸ್ಯತೋಸ್ತಯೋರ್ವೀರ್ಯಮಸ್ಖಲಚ್ಚ ಮೃಗಾಸನೇ ॥೨೭॥**

**ಸ್ಕನ್ನಂ ರೇತಸ್ತತೋ ದೃಷ್ಟ್ವಾ ಶಾಪಭೀತಾ ವರಾಪ್ಸರಾ ।**
**ಚಕಾರ ಕಲಶೇ ಶುಕ್ರಂ ತೋಯಪೂರ್ಣೇ ಮನೋರಮೇ ॥೨೮॥**

**ತಸ್ಮಾದೃಷಿವರೌ ಜಾತೌ ತೇಜಸಾಽಪ್ರತಿಮೌ ಭುವಿ ।**
**ವಸಿಷ್ಠಶ್ಚಾಪ್ಯಗಸ್ತ್ಯಶ್ಚ ಮಿತ್ರಾವರುಣಯೋರ್ದ್ವಯೋಃ ॥೨೯॥**

**ವಸಿಷ್ಠಸ್ತೂಪಯೇಮೇಽಥ ಭಗಿನೀಂ ನಾರದಸ್ಯ ತು ।**
**ಅರುಂಧತೀಂ ವರಾರೋಹಾಂ ತಸ್ಯಾಂ ಶಕ್ತಿಮಜೀಜನತ್ ॥೩೦॥**

**ಶಕ್ತೇಃ ಪರಾಶರಃ ಪುತ್ರಸ್ತಸ್ಯ ವಂಶಂ ನಿಬೋಧ ಮೇ ।**
**ಯಸ್ಯ ದ್ವೈಪಾಯನಃ ಪುತ್ರಃ ಸ್ವಯಂ ವಿಷ್ಣುರಜಾಯತ ॥೩೧॥**

---

೨೬. ಚಂದ್ರನಂತೆ ಮುಖವೂ, ಕನ್ನೈದಿಲೆಯಂತೆ ಕಣ್ಣುಗಳೂ ಉಳ್ಳ ಆ ಸುಂದರಿಯನ್ನು ನೋಡಿ ದೇವತೆಗಳಿಬ್ಬರೂ ಅವಳ ರೂಪಕ್ಕೆ ಮೋಹಿತರಾದರು. ಅವರ ಮನಸ್ಸು ಕದಡಿತು.

೨೭-೨೮. ತಪಸ್ಸಿನಲ್ಲಿದ್ದ ಅವರಿಬ್ಬರ ವೀರ್ಯವೂ ಕೃಷ್ಣಾಜಿನದ ಆಸನದ ಮೇಲೆ ಬಿದ್ದಿತು. ಅದನ್ನು ಕಂಡು ಊರ್ವಶಿ ಶಾಪಬಂದೀತೆಂದು ಹೆದರಿ, ಆ ರೇತಸ್ಸನ್ನು ನೀರು ತುಂಬಿದ ಅಂದವಾದ ಪಾತ್ರೆಯಲ್ಲಿ ಕೂಡಿಟ್ಟಳು.

೨೯. ಹೀಗೆ ಮಿತ್ರ, ವರುಣ ಇವರಿಬ್ಬರ ವೀರ್ಯದಿಂದ ಪ್ರಪಂಚದಲ್ಲಿ ಅಸಮಾನತೇಜಸ್ವಿಗಳಾದ ವಸಿಷ್ಠನೂ ಅಗಸ್ತ್ಯನೂ ಜನಿಸಿದರು.

೩೦. ವಸಿಷ್ಠಮುನಿಯು ನಾರದನ ಸಹೋದರಿಯಾದ ಅರುಂಧತಿಯನ್ನು ಮದುವೆಯಾದನು. ಆಕೆಯಲ್ಲಿ ಶಕ್ತಿ ಜನಿಸಿದನು.

೩೧-೩೨. ಶಕ್ತಿಯ ಮಗ ಪರಾಶರ. ಅವನ ವಂಶವನ್ನು ಹೇಳುತ್ತೇನೆ ಕೇಳು. ಆತನಿಗೆ ಸಾಕ್ಷಾದ್ವಿಷ್ಣುವೇ ದ್ವೈಪಾಯನನೆಂಬ ಹೆಸರಿನಿಂದ ಮಗನಾದನು.

**ಪ್ರಕಾಶೋ ಜನಿತೋ ಯೇನ ಲೋಕೇ ಭಾರತಚಂದ್ರಮಾಃ |**
**ಪರಾಶರಸ್ಯ ತಸ್ಯ ತ್ವಂ ಶೃಣು ವಂಶಮನುತ್ತಮಂ ||೩೨||**

**ಕಾಂಡಶಯೋ ವಾಹನಪೋ ಜೈಹ್ಮಪೋ ಭೌಮತಾಪನಃ |**
**ಗೋಪಾಲಿರೇಷಾಂ ಪಂಚಮಃ ಏತೇ ಗೌರಾಃ ಪರಾಶರಾ ||೩೩||**

**ಪ್ರಪೋಹಯಾ ವಾಹ್ಯಮಥಾಃ ಖ್ಯಾತೇಯಾಃ ಕೌತುಜಾತಯಃ |**
**ಹರ್ಯಶ್ವಿಃ ಪಂಚಮೋ ಹ್ಯೇಷಾಂ ನೀಲಾ ಜ್ಞೇಯಾಃ ಪರಾಶರಾಃ ||೩೪||**

**ಕಾಷ್ಣಾರ್ಯಯನಾಃ ಕಪಿಮುಖಾಃ ಕಾಕೇಯಸ್ಥಾ ಜಪಾತಯಃ |**
**ಪುಷ್ಕರಃ ಪಂಚಮಶ್ಚೈಷಾಂ ಕೃಷ್ಣಾ ಜ್ಞೇಯಾಃ ಪರಾಶರಾಃ ||೩೫||**

**ಶ್ರಾವಿಷ್ಠಾಯನಬಾಲೇಯಾಃ ಸ್ವಾಯಷ್ಟಾಶ್ಚೋಪಯಾಶ್ಚ ಯೇ |**
**ಇಷೀಕಹಸ್ತಶ್ಚೈತೇ ವೈ ಪಂಚ ಶ್ವೇತಾಃ ಪರಾಶರಾಃ ||೩೬||**

---

ಆತನಿಂದ ಮಹಾಭಾರತವೆಂಬ ಚಂದ್ರನ ದಿವ್ಯಪ್ರಕಾಶವು ಲೋಕದಲ್ಲಿ ಹರಡಿತು. ಆ ಪರಾಶರನ ಶ್ರೇಷ್ಠವಾದ ವಂಶವನ್ನು ವಿವರಿಸುವೆನು ಕೇಳು.

೩೩. ಕಾಂಡಶಯ, ವಾಹನಪ, ಜೈಹ್ಮಪ, ಭೌಮತಾಪನ, ಗೋಪಾಲಿ ಈ ಐವರಿಗೂ ಗೌರಪರಾಶರರೆಂಬ ಹೆಸರು ಬಂದಿದೆ.

೩೪. ಪ್ರಪೋಹಯರು, ವಾಹ್ಯಮಥರು, ಖ್ಯಾತೇಯರು, ಕೌತುಜಾತಿಗಳು, ಹರ್ಯಶ್ವಿ ಈ ಐವರಿಗೂ ನೀಲಪರಾಶರರೆಂದು ಪ್ರಸಿದ್ಧಿಯುಂಟು.

೩೫. ಕಾಷ್ಣಾರ್ಯಯನರು, ಕಪಿಮುಖರು, ಕಾಕೇಯಸ್ಥರು, ಜಪಾತಿಗಳು, ಪುಷ್ಕರ ಈ ಐವರೂ ಕೃಷ್ಣಪರಾಶರರೆಂದು ಪ್ರಸಿದ್ಧರಾಗಿರುವರು.

೩೬. ಶ್ರಾವಿಷ್ಠಾಯನರು. ಬಾಲೇಯರು, ಸ್ವಾಯಷ್ಟರು, ಉಪಯರು, ಇಷೀಕಹಸ್ತ ಈ ಐವರೂ ಶ್ವೇತಪರಾಶರರು.

ವಾಟಿಕೋ ಬಾದರಿಶ್ಚೈವ ಸ್ತಂಬಾ ವೈ ಕ್ರೋಧನಾಯನಾಃ ।
ಕ್ಷೌಮಿರೇಷಾಂ ಪಂಚಮಸ್ತು ಏತೇ ಶ್ಯಾಮಾಃ ಪರಾಶರಾಃ ॥೩೭॥

ಖಾಲ್ಯಾಯನಾ ವಾರ್ಷ್ಣಾಯನಾಸ್ತೈಲೇಯಾಃ ಖಲು ಯೂಥಪಾಃ ।
ತಂತಿರೇಷಾಂ ಪಂಚಮಸ್ತು ಏತೇ ಧೂಮ್ರಾಃ ಪರಾಶರಾಃ ॥೩೮॥

ಪರಾಶರಾಣಾಂ ಸರ್ವೇಷಾಂ ತ್ರ್ಯಾರ್ಷೇಯಃ ಪ್ರವರೋ ಮತಃ ।
ಪರಾಶರಶ್ಚ ಶಕ್ತಿಶ್ಚ ವಸಿಷ್ಠಶ್ಚ ಮಹಾತಪಾಃ ॥೩೯॥
ಪರಸ್ಪರಮವೈವಾಹ್ಯಾಃ ಸರ್ವ ಏತೇ ಪರಾಶರಾಃ
ಉಕ್ತಾಸ್ತ್ವೇತೇ ನೃಪ ವಂಶಮುಖ್ಯಾಃ
ಪರಾಶರಾಃ ಸೂರ್ಯಸಮಪ್ರಭಾವಾಃ
ಯೇಷಾಂ ತು ನಾಮ್ನಾ ಪರಿಕೀರ್ತಿತೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥೪೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇ ಪರಾಶರವಂಶ ವರ್ಣನಂ ನಾಮೈಕಾಧಿಕದ್ವಿಶತತಮೋಽಧ್ಯಾಯಃ

---

೩೭. ವಾಟಿಕ, ಬಾದರಿ, ಸ್ತಂಬರು, ಕ್ರೋಧನಾಯನರು, ಕ್ಷೌಮಿ ಇವರು ಶ್ಯಾಮಪರಾಶರರು.

೩೮. ಖಾಲ್ಯಾಯನರು, ವಾರ್ಷ್ಣಾಯನರು, ತೈಲೇಯರು, ಯೂಥಪರು, ತಂತಿ ಇವರನ್ನು ಧೂಮ್ರಪರಾಶರರೆಂದು ಕರೆಯುತ್ತಾರೆ.

೩೯. ಮೇಲೆ ಹೇಳಿದ ಎಲ್ಲ ಪರಾಶರರ ಪ್ರವರವೂ ತ್ರ್ಯಾರ್ಷೇಯ ವೆನಿಸಿದೆ. ಪರಾಶರ, ಶಕ್ತಿ, ಮಹಾತಪಸ್ವಿಯಾದ ವಸಿಷ್ಠ ಇವರೇ ಆ ಮೂವರು ಪ್ರವರರ್ಷಿಗಳು. ಪರಾಶರರ ವಂಶಜರು ಪರಸ್ಪರ ವಿವಾಹಸಂಬಂಧವನ್ನು ಮಾಡ ಲಾಗದು.

೪೦. ಓ ರಾಜಾ, ಪರಾಶರಮಹರ್ಷಿಯ ವಂಶಸ್ಥರೂ, ಸೂರ್ಯನಂತೆ ತೇಜಸ್ವಿಗಳೂ ಸುಪ್ರಸಿದ್ಧರೂ ಆದ ಋಷಿಗಳನ್ನು ಹೇಳಿದ್ದೇನೆ. ಇವರ ನಾಮ ಸಂಕೀರ್ತನದಿಂದ ಮನುಷ್ಯನ ಪಾಪಗಳೆಲ್ಲವೂ ಪರಿಹಾರವಾಗುತ್ತವೆ.

## ಅಧ್ಯಾಯದ ಸಾರಾಂಶ

**ಈ** ಅಧ್ಯಾಯದಲ್ಲಿ ವಸಿಷ್ಠಮಹರ್ಷಿಯ ವೃತ್ತಾಂತವೂ ಪರಾಶರ ಮಹರ್ಷಿಯ ವಂಶವರ್ಣನವೂ ಉಕ್ತವಾಗಿವೆ.

ವಸಿಷ್ಠಮುನಿಯು ಬಿಡುವಿಲ್ಲದೆ ಯಜ್ಞಯಾಗಗಳನ್ನು ಮಾಡಿಸಿ ಬಹಳ ಬಳಲಿದ್ದನು. ಆಗ ನಿಮಿಚಕ್ರವರ್ತಿ ಅವನ ಬಳಿಗೆ ಬಂದು ತಾನು ಯಾಗವೊಂದನ್ನು ಮಾಡಬೇಕೆಂದಿರುವುದಾಗಿ ತಿಳಿಸಿ, ಅದಕ್ಕೆ ಪೌರೋಹಿತ್ಯವನ್ನು ವಹಿಸಬೇಕೆಂದು ಅವನನ್ನು ಪ್ರಾರ್ಥಿಸಿದನು. ತನಗೆ ಆಯಾಸವಾಗಿರುವುದರಿಂದ ಕೆಲಕಾಲ ಕಳೆದ ಬಳಿಕ ಅವನ ಇಷ್ಟವನ್ನು ನೆರವೇರಿಸುವುದಾಗಿ ಮುನಿ ಉತ್ತರವಿತ್ತನು. ಧರ್ಮ ಕಾರ್ಯಕ್ಕೆ ತಡಮಾಡುವುದು ನ್ಯಾಯವಲ್ಲವಾದುದರಿಂದ ತಾನು ಬೇರೆ ಪುರೋಹಿತ ನನ್ನು ಗೊತ್ತುಮಾಡಿಕೊಂಡು ಯಾಗವನ್ನು ನಡೆಸುವುದಾಗಿ ರಾಜನು ಹೇಳಿದನು. ವಸಿಷ್ಠನಿಗೆ ಕೋಪ ಬಂದಿತು. ಅಶರೀರಕನಾಗುವಂತೆ ಅವನಿಗೆ ಶಾಪವಿತ್ತನು. ಅವನೂ ಹಾಗೆಯೇ ಪ್ರತಿಶಾಪವನ್ನು ಕೊಟ್ಟನು. ಇಬ್ಬರೂ ದೇಹರಹಿತರಾದರು. ಅವರ ಆತ್ಮಗಳೆರಡೂ ಬ್ರಹ್ಮನ ಬಳಿಗೆ ಹೋದುವು. ಜನಗಳ ರೆಪ್ಪೆಗಳಲ್ಲಿ ವಾಸಮಾಡು ತ್ತಿರುವಂತೆ ನಿಮಿರಾಜನಿಗೂ, ಮಿತ್ರಾವರುಣರ ಪುತ್ರನಾಗಿ ಜನಿಸುವಂತೆ ವಸಿಷ್ಠ ಮುನಿಗೂ ಅವನು ಅಪ್ಪಣೆಕೊಟ್ಟನು. ಮರುಹುಟ್ಟಿನಲ್ಲಿ ಸಹ ವಸಿಷ್ಠನಿಗೆ ಅದೇ ಹೆಸರು ಬಂದಿತು. ವಸಿಷ್ಠಮಹರ್ಷಿಯ ಪೌತ್ರನೇ ಪರಾಶರಮುನಿ. ಮಹಾಭಾರತ ವನ್ನು ರಚಿಸಿದ ಕೃಷ್ಣದ್ವೈಪಾಯನಮಹರ್ಷಿ ಈತನ ಪುತ್ರ. ಪರಾಶರರ ಸಂತತಿ ಯಲ್ಲಿ ಪ್ರಖ್ಯಾತರಾದ ಇನ್ನೂ ಎಷ್ಟೋ ಜನ ಋಷಿಗಳು ಉತ್ಪನ್ನರಾದರು. ಅವರೆಲ್ಲರೂ ತ್ರ್ಯಾರ್ಷೇಯರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ಪರಾಶರವಂಶ ವರ್ಣನವೆಂಬ ಇನ್ನೂರೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಅತಃ ಪರಮಗಸ್ತ್ಯಸ್ಯ ವಕ್ಷ್ಯೇ ವಂಶೋದ್ಭವಾನ್ ದ್ವಿಜಾನ್ ।
ಅಗಸ್ತಯಃ ಕರಂಭಯಃ ಕೌಶಲ್ಯಾಃ ಶಕಟಾಸ್ತಥಾ ॥ ೧ ॥

ಸುಮೇಧಸೋ ಮಯೋಭುವಸ್ತಥಾ ಗಾಂಧಾರಕಾಯಣಾಃ ।
ಪೌಲಸ್ತ್ಯಾಃ ಪೌಲಹಾಶ್ಚೈವ ಕ್ರತುವಂಶಭವಾಸ್ತಥಾ ॥ ೨ ॥

ತ್ರ್ಯಾರ್ಷೇಯಾಭಿಮತಾಶ್ಚೈಷಾಂ ಸರ್ವೇಷಾಂ ಪ್ರವರಾಃ ಶುಭಾಃ ।
ಅಗಸ್ತ್ಯಶ್ಚ ಮಹೇಂದ್ರಶ್ಚ ಋಷಿಶ್ಚೈವ ಮಯೋಭುವಃ ॥ ೩ ॥

ಪರಸ್ಪರಮವೈವಾಹ್ಯಾ ಋಷಯಃ ಪರಿಕೀರ್ತಿತಾಃ ।
ಪೌರ್ಣಮಾಸಾಃ ಪಾರಣಾಶ್ಚ ತ್ರ್ಯಾರ್ಷೇಯಾಃ ಪರಿಕೀರ್ತಿತಾಃ ॥ ೪ ॥

ಅಗಸ್ತ್ಯಃ ಪೌರ್ಣಮಾಸಶ್ಚ ಪಾರಣಶ್ಚ ಮಹಾತಪಾಃ ।
ಪರಸ್ಪರಮವೈವಾಹ್ಯಾಃ ಪೌರ್ಣಮಾಸಾಸ್ತು ಪಾರಣೈಃ ॥ ೫ ॥

---

೧-೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಇನ್ನು ಮುಂದೆ ಅಗಸ್ತ್ಯಮುನಿಯ ವಂಶದಲ್ಲಿ ಹುಟ್ಟಿದ ದ್ವಿಜೋತ್ತಮರನ್ನು ಹೇಳುವೆನು. ಅಗಸ್ತಿಗಳು, ಕರಂಭಿಗಳು. ಕೌಶಲ್ಯರು, ಶಕಟರು, ಸುಮೇಧಸರು, ಮಯೋಭುಗಳು, ಗಾಂಧಾರ ಕಾಯಣರು, ಪೌಲಸ್ತ್ಯರು, ಪೌಲಹರು, ಕ್ರತುವಂಶಭವರು ಇವರೆಲ್ಲರೂ ತ್ರ್ಯಾರ್ಷೇಯರು. ಅಗಸ್ತ್ಯ, ಮಹೇಂದ್ರ, ಮಯೋಭವ ಎಂಬ ಮೂವರು ಮಹರ್ಷಿಗಳ ಪರಂಪರೆಯಲ್ಲಿ ಜನಿಸಿದವರು. ಈ ಋಷಿಗಳು ಒಬ್ಬರೊಡನೊಬ್ಬರು ವಿವಾಹಸಂಬಂಧವನ್ನು ಬೆಳೆಸಬಾರದು.

೪-೫. ಪೌರ್ಣಮಾಸರು ಮತ್ತು ಪಾರಣರು ತ್ರ್ಯಾರ್ಷೇಯರು. ಅಗಸ್ತ್ಯ, ಪೌರ್ಣಮಾಸ ಮತ್ತು ಮಹಾತಪಸ್ವಿಯಾದ ಪಾರಣ ಈ ಮೂವರೂ ಇವರ ಪೂರ್ವಜರಾದ ಪ್ರವರರ್ಷಿಗಳು. ಪೌರ್ಣಮಾಸರೂ ಪಾರಣರೂ ಪರಸ್ಪರ ವಿವಾಹ ವನ್ನು ಬೆಳೆಸಬಾರದು.

**ಏವಮುಕ್ತೋ ಋಷೀಣಾಂ ತು ವಂಶ ಉತ್ತಮಪೌರುಷಃ ।**
**ಅತಃ ಪರಂ ಪ್ರವಕ್ಷ್ಯಾಮಿ ಕಿಂ ಭವಾನದ್ಯ ಕಥ್ಯತಾಂ ॥ ೬ ॥**

**॥ ಮನುರುವಾಚ ॥**

**ಪುಲಹಸ್ಯ ಪುಲಸ್ತ್ಯಸ್ಯ ಕ್ರತೋಶ್ಚೈವ ಮಹಾತ್ಮನಃ ।**
**ಅಗಸ್ತ್ಯಸ್ಯ ತಥಾ ಚೈವ ಕಥಂ ವಂಶಸ್ತದುಚ್ಯತಾಂ ॥ ೭ ॥**

**॥ ಮತ್ಸ್ಯ ಉವಾಚ ॥**

**ಕ್ರತುಃ ಖಲ್ವನಪತ್ಯೋಽಭೂದ್ರಾಜನ್ವೈವಸ್ವತೇಽಂತರೇ ।**
**ಇಧ್ಮವಾಹಂ ಸ ಪುತ್ರತ್ವೇ ಜಗ್ರಾಹ ಋಷಿಸತ್ತಮಃ ॥ ೮ ॥**

**ಅಗಸ್ತ್ಯಪುತ್ರಂ ಧರ್ಮಜ್ಞಮಾಗಸ್ತ್ಯಾಃ ಕ್ರತವಸ್ತತಃ ।**
**ಪುಲಹಸ್ಯ ತಥಾ ಪುತ್ರಾಸ್ತ್ರಯಶ್ಚ ಪೃಥಿವೀಪತೇ ॥ ೯ ॥**

**ತೇಷಾಂ ತು ಜನ್ಮ ವಕ್ಷ್ಯಾಮಿ ಉತ್ತರತ್ರ ಯಥಾವಿಧಿ ।**
**ಪುಲಹಸ್ತು ಪ್ರಜಾ ದೃಷ್ಟ್ವಾ ನಾತಿಪ್ರೀತಿಮನಾಃ ಸ್ವಕಾಃ ॥೧೦॥**

---

೬. ಅಪ್ರತಿಹತವಾದ ಬ್ರಹ್ಮತೇಜಸ್ಸಿನಿಂದ ಬೆಳಗುವ ಋಷಿಗಳ ವಂಶವನ್ನು ವಿವರಿಸಿದುದಾಯಿತು. ಇನ್ನು ಮುಂದೆ ಏನು ಹೇಳಲಿ? ತಿಳಿಸು.

೭. ಮನುಚಕ್ರವರ್ತಿ ಹೇಳಿದನು.—ಪುಲಹ, ಪುಲಸ್ತ್ಯ, ಮಹಾತ್ಮನಾದ ಕ್ರತು, ಅಗಸ್ತ್ಯ ಇವರ ವಂಶದ ವಿವರವೆಂತು? ಅದನ್ನು ನನಗೆ ತಿಳಿಯ ಹೇಳು.

೮. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಕ್ರತುವಿಗೆ ಮಕ್ಕಳಿರಲಿಲ್ಲ. ಅವನು ವೈವಸ್ವತಮನ್ವಂತರದಲ್ಲಿ ಅಗಸ್ತ್ಯನ ಪುತ್ರನೂ ಧರ್ಮಜ್ಞನೂ ಆದ ಇಧ್ಮವಾಹನೆಂಬ ಋಷಿವರ್ಯನನ್ನು ದತ್ತು ತೆಗೆದುಕೊಂಡನು. ಆದುದರಿಂದ ಅಗಸ್ತ್ಯವಂಶದವರು ಕ್ರತುವಂಶದವರೂ ಆದರು.

೯-೧೧. ಓ ಭೂಪಾಲಕಾ, ಪುಲಹನಿಗೆ ಮಕ್ಕಳು ಮೂವರು. ಅವರ ಜನ್ಮ ವೃತ್ತಾಂತವನ್ನು ಮುಂದೆ ಕ್ರಮವಾಗಿ ತಿಳಿಸುವೆನು. ಪುಲಹನಿಗೆ ತನ್ನ ಮಕ್ಕಳನ್ನು

ಅಗಸ್ತ್ಯಜಂ ದೃಢಾಸ್ಯಂ ತು ಪುತ್ರತ್ವೇ ವೃತವಾಂಸ್ತತಃ ।
ಪೌಲಹಾಶ್ಚ ತಥಾ ರಾಜನ್ನಾಗಸ್ತ್ಯಾಃ ಪರಿಕೀರ್ತಿತಾಃ ॥೧೧॥

ಪುಲಸ್ತ್ಯಾನ್ವಯಸಂಭೂ ೀರ್ತ ದೃಷ್ಟ್ವಾ ರಕ್ಷಃಸಮುದ್ಭವಾನ್ ।
ಅಗಸ್ತ್ಯಸ್ಯ ಸುತಂ ಧೀಮಾನ್ ಪುತ್ರತ್ವೇ ವೃತವಾಂಸ್ತತಃ ॥೧೨॥

ಪೌಲಸ್ತ್ಯಾಶ್ಚ ತಥಾ ರಾಜನ್ನಾಗಸ್ತ್ಯಾಃ ಪರಿಕೀರ್ತಿತಾಃ ।
ಸಗೋತ್ರತ್ವಾದಿಮೇ ಸರ್ವೇ ಪರಸ್ಪರಮನನ್ವಯಾಃ ॥೧೩॥

ಏತೇ ತವೋಕ್ತಾಃ ಪ್ರವರಾ ದ್ವಿಜಾನಾಂ
ಮಹಾನುಭಾವಾ ನೃಪ ವಂಶಕಾರಾಃ ।
ಏಷಾಂ ತು ನಾಮ್ನಾ ಪರಿಕೀರ್ತಿತೇನ
ಪಾಪಂ ಸಮಗ್ರಂ ಪುರುಷೋ ಜಹಾತಿ ॥೧೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪ್ರವರಾನುಕೀರ್ತನೇ
ದ್ವ್ಯಧಿಕಶತತಮೋಽಧ್ಯಾಯಃ

---

ನೋಡಿ ಅಷ್ಟು ಪ್ರೀತಿ ಹುಟ್ಟಲಿಲ್ಲ. ಅವನು ಬಳಿಕ ಅಗಸ್ತ್ಯಪುತ್ರನಾದ ದೃಢಾಸ್ಯನನ್ನು ದತ್ತು ತೆಗೆದುಕೊಂಡನು. ಎಲೈ ರಾಜೇಂದ್ರಾ, ಅಲ್ಲಿಂದ ಮುಂದೆ ಅಗಸ್ತ್ಯ ಸಂತತಿಯವರು ಪುಲಹವಂಶದವರೂ ಆದರು.

೧೨-೧೩. ಪ್ರಾಜ್ಞನಾದ ಪುಲಸ್ತ್ಯನು ತನ್ನ ವಂಶದಲ್ಲಿ ರಾಕ್ಷಸರು ಉತ್ಪನ್ನರಾದುದನ್ನು ಕಂಡು ಅಗಸ್ತ್ಯಮಹರ್ಷಿಯ ಪುತ್ರನೊಬ್ಬನನ್ನು ದತ್ತುತೆಗೆದು ಕೊಂಡನು. ಆದುದರಿಂದ ಅಗಸ್ತ್ಯವಂಶದವರು ಪುಲಸ್ತ್ಯವಂಶದವರೂ ಆದರು. ಇವರೆಲ್ಲರೂ ಒಂದೇ ಗೋತ್ರದವರಾದುದರಿಂದ ಒಬ್ಬರೊಡನೊಬ್ಬರು ವಿವಾಹ ಸಂಬಂಧವನ್ನು ಮಾಡಬಾರದು.

೧೪. ರಾಜಾ, ಮಹಾನುಭಾವರೂ, ಬ್ರಾಹ್ಮಣೋತ್ತಮರೂ, ಗೋತ್ರಗಳ ಮೂಲಪುರುಷರೂ ಆದ ಋಷಿವರ್ಯರ ಪರಂಪರೆಯನ್ನು ಹೇಳಿದುದಾಯಿತು. ಇವರ ಪವಿತ್ರನಾಮವನ್ನು ಉಚ್ಚರಿಸಿದರೆ ಸಾಕು ; ಮನುಷ್ಯನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

## ಅಧ್ಯಾಯದ ಸಾರಾಂಶ

ಪುಲಹ, ಪುಲಸ್ತ್ಯ ಮುಂತಾದ ಋಷಿಗಳ ಸಂತತಿಯನ್ನು ಈ ಅಧ್ಯಾಯದಲ್ಲಿ ತಿಳಿಸಿದೆ.

ಅಗಸ್ತ್ಯರ ವಂಶದಲ್ಲಿ ಅಗಸ್ತಿಗಳು, ಕರಂಭಿಗಳು, ಕೌಶಲ್ಯರು ಮುಂತಾದ ಋಷಿಗಳು ಉತ್ಪನ್ನರಾದರು. ಪುಲಹ, ಪುಲಸ್ತ್ಯ, ಕ್ರತು ಈ ಮೂವರೂ ಅಗಸ್ತ್ಯರ ಪುತ್ರರಲ್ಲಿ ಒಬ್ಬೊಬ್ಬರನ್ನು ದತ್ತು ತೆಗೆದುಕೊಂಡರು. ಅದರಿಂದ ಅಗಸ್ತ್ಯವಂಶದವರು ಈ ಋಷಿಗಳ ಸಂತತಿಯವರೂ ಆದರು. ಇವರೆಲ್ಲರೂ ಸಗೋತ್ರದವರಾದುದರಿಂದ ಪರಸ್ಪರ ವಿವಾಹಸಂಬಂಧವನ್ನು ಮಾಡಬಾರದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪ್ರವರಾನುಕೀರ್ತನದಲ್ಲಿ ಇನ್ನೂರೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರ್ಯಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಅಸ್ಮಿನ್ ವೈವಸ್ವತೇ ಪ್ರಾಪ್ತೇ ಶೃಣು ಧರ್ಮಸ್ಯ ಪಾರ್ಥಿವ ।
ದಾಕ್ಷಾಯಣೀಭ್ಯಃ ಸಕಲಂ ವಂಶಂ ದೈವತಮುತ್ತಮಂ ॥ ೧ ॥

ಪರ್ವತಾದಿಮಹಾದುರ್ಗಶರೀರಾಣಿ ನರಾಧಿಪ ।
ಅರುಂಧತ್ಯಾ ಪ್ರಸೂತಾನಿ ಧರ್ಮಾದ್ವೈವಸ್ವತೇಽಂತರೇ ॥ ೨ ॥

ಅಷ್ಟೌ ಚ ವಸವಃ ಪುತ್ರಾಃ ಸೋಮಪಾಶ್ಚ ವಿಭೋಸ್ತಥಾ ।
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಲಾನಿಲೌ ॥ ೩ ॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ಧರಸ್ಯ ಪುತ್ರೋ ದ್ರುವಿಣಃ ಕಾಲಃ ಪುತ್ರೋ ಧ್ರುವಸ್ಯ ತು ॥ ೪ ॥

ಕಾಲಸ್ಯಾವಯವಾನಾಂ ತು ಶರೀರಾಣಿ ನರಾಧಿಪ ।
ಮೂರ್ತಿಮಂತಿ ಚ ಕಾಲಾದ್ಧಿ ಸಂಪ್ರಸೂತಾನ್ಯಶೇಷತಃ ॥ ೫ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಈ ವೈವಸ್ವತಮನ್ವಂತರವು ಬಂದಾಗ ದೇವತೆಗಳ ವಂಶಗಳೆಲ್ಲವೂ ಧರ್ಮನ ಪತ್ನಿಯರಾದ ದಾಕ್ಷಾಯಣೀದೇವಿಯರಿಂದ ಉತ್ಪನ್ನವಾದುವು. ಆ ವಿವರವನ್ನು ಹೇಳುತ್ತೇನೆ ಕೇಳು.

೨. ವೈವಸ್ವತಮನ್ವಂತರದಲ್ಲಿ ಧರ್ಮನಿಂದ ಅರುಂಧತಿಯು ಪರ್ವತಗಳು, ದುರ್ಗಗಳು ಮುಂತಾದುವನ್ನು ಹೆತ್ತಳು.

೩. ವಸು ಎಂಬಾಕೆಯಲ್ಲಿ ಎಂಟುಜನ ವಸುಗಳೂ ಪಿತೃದೇವತೆಗಳೂ ಪೂಜ್ಯನಾದ ಧರ್ಮನಿಗೆ ಪುತ್ರರಾಗಿ ಜನಿಸಿದರು. ಧರ, ಧ್ರುವ, ಸೋಮ, ಆಪ, ಅನಲ, ಅನಿಲ, ಪ್ರತ್ಯೂಷ, ಪ್ರಭಾಸ ಇವರೇ ಎಂಟು ಮಂದಿ ವಸುಗಳು.

೪-೫. ಧರನ ಮಗ ದ್ರವಿಣ; ಧ್ರುವನ ಮಗ ಕಾಲ. ಕಾಲದ ಭಾಗಗಳಾದ ಮುಹೂರ್ತ, ದಿನ ಮೊದಲಾದುವೆಲ್ಲ ಕಾಲನ ಶರೀರಾವಯವರೂಪಗಳಾಗಿ ಅವನಿಂದಲೇ ನಿರ್ಮಿತವಾದುವು.

ಸೋಮಸ್ಯ ಭಗವಾನ್ ವರ್ಚಾಃ ಶ್ರೀಮಾಂಶ್ಚಾಪಸ್ಯ ಕೀರ್ತ್ಯತೇ ।
ಅನೇಕಜನ್ಮಜನನಃ ಕುಮಾರಸ್ತ್ವನಲಸ್ಯ ತು ॥ ೬ ॥

ಪುರೋಜವಾಶ್ಚಾನಿಲಸ್ಯ ಪ್ರತ್ಯೂಷಸ್ಯ ತು ದೇವಲಃ ।
ವಿಶ್ವಕರ್ಮಾ ಪ್ರಭಾಸಸ್ಯ ತ್ರಿದಶಾನಾಂ ಸ ವರ್ಧಕಿಃ ॥ ೭ ॥

ಶಮೀಹಿತಕರಾಃ ಪ್ರೋಕ್ತಾ ನಾಗವೀಥ್ಯಾದಯೋ ನವ ।
ಲಂಬಾಪುತ್ರಃ ಸ್ಮೃತೋ ಘೋಷೋ ಭಾನೋಃ ಪುತ್ರಾಶ್ಚ ಭಾನವಃ ॥ ೮ ॥

ಗ್ರಹರ್ಕ್ಷಾಣಾಂ ಚ ಸರ್ವೇಷಾಮನ್ಯೇಷಾಂ ಚಾಮಿತೌಜಸಾಂ ।
ಮರುತ್ವತ್ಯಾಂ ಮರುತ್ವಂತಃ ಸರ್ವೇ ಪುತ್ರಾಃ ಪ್ರಕೀರ್ತಿತಾಃ ॥ ೯ ॥

ಸಂಕಲ್ಪಾಯಾಶ್ಚ ಸಂಕಲ್ಪಸ್ತಥಾ ಪುತ್ರಃ ಪ್ರಕೀರ್ತಿತಃ ।
ಮುಹೂರ್ತಾಶ್ಚ ಮುಹೂರ್ತಾಯಾಃ ಸಾಧ್ಯಾಃ ಸಾಧ್ಯಾಸುತಾಃ ಸ್ಮೃತಾಃ ॥

---

೬. ಪೂಜ್ಯನಾದ ವರ್ಚಸ್ಸೆಂಬಾತನು ಸೋಮನ ಮಗ. ಶ್ರೀಮಂತನು ಆಪನ ಪುತ್ರ. ಕುಮಾರನು ಅನಲನ ಸುತ. ಅವನು ಎಷ್ಟೋ ಸಾರಿ ಜನ್ಮಗಳನ್ನೆತ್ತಿದನು.

೭. ಅನಿಲನಿಗೆ ಪುರೋಜವನೂ, ಪ್ರತ್ಯೂಷನಿಗೆ ದೇವಲನೂ, ಪ್ರಭಾಸನಿಗೆ ದೇವಶಿಲ್ಪಿಯಾದ ವಿಶ್ವಕರ್ಮನೂ ಪುತ್ರರಾದರು.

೮. ನಾಗವೀಥಿ ಮೊದಲಾದ ಒಂಬತ್ತು ಜನರು ಇಷ್ಟಾರ್ಥವನ್ನು ನಡೆಸಿಕೊಡತಕ್ಕವರು. ಲಂಬಾದೇವಿಯ ಮಗ ಘೋಷ, ಭಾನುವಿನ ಮಕ್ಕಳೇ ದ್ವಾದಶಾದಿತ್ಯರು. ಗ್ರಹಗಳು ನಕ್ಷತ್ರಗಳು ಇವುಗಳಿಗೆಲ್ಲ ಇವರು ಅಧಿಪತಿಗಳು.

೯-೧೦. ಮರುತ್ವತಿಗೆ ಮರುತ್ವಂತರೆಲ್ಲರೂ ಪುತ್ರರಾದರು. ಸಂಕಲ್ಪೆಗೆ ಸಂಕಲ್ಪನೂ ಮೂಹೂರ್ತೆಗೆ ಮುಹೂರ್ತಗಳೂ, ಸಾಧ್ಯೆಗೆ ಸಾಧ್ಯರೂ ಪುತ್ರರಾದರು.

ಮನೋ ಮನುಶ್ಚ ಪ್ರಾಣಶ್ಚ ನರೋ ಜಾತಶ್ಚ ವೀರ್ಯವಾನ್ ।
ಚಿತ್ತಹಾರ್ಯೋಽಯನಶ್ಚೈವ ಹಂಸೋ ನಾರಾಯಣಸ್ತಥಾ ॥೧೧॥

ವಿಭುಶ್ಚಾಪಿ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ।
ವಿಶ್ವಾಯಾಶ್ಚ ತಥಾ ಪುತ್ರಾ ವಿಶ್ವೇದೇವಾಃ ಪ್ರಕೀರ್ತಿತಾಃ ॥೧೨॥

ಕ್ರತುರ್ದಕ್ಷೋ ವಸುಃ ಸತ್ಯಃ ಕಾಲಕಾಮೋ ಮುನಿಸ್ತಥಾ ।
ಕುರಜೋ ಮನುಜೋ ವೀಜೋ ರೋಚಮಾನಸ್ಯ ತೇ ದಶ ॥೧೩॥

ಏತಾವದುಕ್ತಸ್ತವ ಧರ್ಮವಂಶಃ
ಸಂಕ್ಷೇಪತಃ ಪಾರ್ಥಿವವಂಶಮುಖ್ಯ ।
ವ್ಯಾಸೇನ ವಕ್ತುಂ ಹಿ ನ ಶಕ್ಯಮಸ್ತಿ
ರಾಜನ್ ವಿನಾ ವರ್ಷಶತೈರನೇಕೈಃ ॥೧೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಧರ್ಮವಂಶವರ್ಣನೇ ಧರ್ಮ
ಪ್ರವರಾನುಕೀರ್ತನಂ ನಾಮ ತ್ರ್ಯಧಿಕದ್ವಿಶತತಮೋಽಧ್ಯಾಯಃ

---

೧೧. ಮನ, ಮನು, ಪ್ರಾಣ, ನರ, ಜಾತ, ವೀರ್ಯವಂತ, ಚಿತ್ತಹಾರ್ಯ, ಅಯನ, ಹಂಸ, ನಾರಾಯಣ, ವಿಭು, ಪ್ರಭು ಈ ಹನ್ನೆರಡು ಮಂದಿಗೂ ಸಾಧ್ಯರೆಂದು ಹೆಸರು.

೧೨-೧೩. ವಿಶ್ವಾದೇವಿಯ ಮಕ್ಕಳಿಗೆ ವಿಶ್ವೇದೇವರೆಂದು ಪ್ರಸಿದ್ಧಿಯುಂಟು. ಕ್ರತು, ದಕ್ಷ, ವಸು, ಸತ್ಯ, ಕಾಲಕಾಮ, ಮುನಿ, ಕುರಜ, ಮನುಜ, ವೀಜ, ರೋಚಮಾನ ಎಂದು ಅವರು ಹತ್ತು ಜನ.

೧೪. ಓ ರಾಜೋತ್ತಮಾ, ಧರ್ಮನ ವಂಶವನ್ನು ಇಷ್ಟು ಮಟ್ಟಿಗೆ ನಿನಗೆ ಸಂಗ್ರಹವಾಗಿ ಹೇಳಿದ್ದೇನೆ. ಅದನ್ನು ವಿಸ್ತಾರವಾಗಿ ಹೇಳುವುದಂತೂ ಅಸಾಧ್ಯವೇ ಸರಿ. ಹಾಗೆ ಹೇಳಬೇಕಾದರೆ ಸಾವಿರಾರು ವರ್ಷಗಳ ಕಾಲ ಬೇಕಾಗುವುದು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಧರ್ಮನ ವಂಶವನ್ನು ಹೇಳಿದೆ.

ವೈವಸ್ವತಮನ್ವಂತರವು ಹುಟ್ಟಿದ ಬಳಿಕ ಧರ್ಮನು ದಕ್ಷಬ್ರಹ್ಮನ ಪುತ್ರಿಯರಾದ ದಾಕ್ಷಾಯಣಿಗಳನ್ನು ಮದುವೆಯಾಗಿ ಅವರಿಂದ ದೇವತೆಗಳ ವಂಶವೆಲ್ಲವನ್ನೂ ಪಡೆದನು. ವಸುಗಳು, ಆದಿತ್ಯರು, ವಿಶ್ವೇದೇವತೆಗಳು, ಸಾಧ್ಯರು ಇವರೆಲ್ಲರೂ ಧರ್ಮನ ಪುತ್ರರು ; ಬೇರೆ ಬೇರೆ ಪತ್ನಿಯರಲ್ಲಿ ಜನಿಸಿದವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಧರ್ಮವಂಶವರ್ಣನದಲ್ಲಿ ಧರ್ಮಪ್ರವರಾನುಕೀರ್ತನವೆಂಬ ಇನ್ನೂರಮೂರನೆಯ ಅಧ್ಯಾಯವು ಮುಗಿದುದು



## ಅಥ ಚತುರಧಿಕದ್ವಿಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಏತದ್ವಂಶಭವಾ ವಿಪ್ರಾಃ ಶ್ರಾದ್ಧೇ ಭೋಜ್ಯಾಃ ಪ್ರಯತ್ನತಃ |
ಪಿತೄಣಾಂ ವಲ್ಲಭಂ ಯಸ್ಮಾದೇಷು ಶ್ರಾದ್ಧಂ ನರೇಶ್ವರ ||೧||

ಅತಃ ಪರಂ ಪ್ರವಕ್ಷ್ಯಾಮಿ ಪಿತೃಭಿರ್ಯಾಃ ಪ್ರಕೀರ್ತಿತಾಃ |
ಗಾಥಾಃ ಪಾರ್ಥಿವಶಾರ್ದೂಲ ಕಾಮಯದ್ಭಿಃ ಪುರೇ ಸ್ವಕೇ ||೨||

ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯೋ ನೋ ದದ್ಯಾಜ್ಜಲಾಂಜಲಿಂ |
ನದೀಷು ಬಹುತೋಯಾಸು ಶೀತಲಾಸು ವಿಶೇಷತಃ ||೩||

ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯಃ ಶ್ರಾದ್ಧಂ ನಿತ್ಯಮಾಚರೇತ್ |
ಪಯೋಮೂಲಫಲೈರ್ಭಕ್ಷ್ಯೈಸ್ತಿಲತೋಯೇನ ವಾ ಪುನಃ ||೪||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಮೇಲೆ ಹೇಳಿದ ಋಷಿಗಳ ವಂಶದಲ್ಲಿ ಹುಟ್ಟಿದ ಬ್ರಾಹ್ಮಣರನ್ನು ಪ್ರಯತ್ನಪೂರ್ವಕವಾಗಿ ಕರೆದು ಶ್ರಾದ್ಧದಲ್ಲಿ ಭೋಜನಮಾಡಿಸಬೇಕು. ಹೀಗೆ ಮಾಡಿದ ಶ್ರಾದ್ಧವು ಪಿತೃಗಳಿಗೆ ಪ್ರಿಯವಾಗುವುದು.

೨. ಎಲೈ ರಾಜೇಂದ್ರಾ, ಪಿತೃಗಳು ಅಭಿಲಾಷೆಯಿಂದ ತಮ್ಮ ನಗರದಲ್ಲಿ ಹಾಡುವ ಗೀತಗಳನ್ನು ಇನ್ನು ಮುಂದೆ ಹೇಳುವೆನು.

೩. ಪ್ರವಾಹದಿಂದ ಪೂರ್ಣವಾಗಿ ತಣ್ಣಗಿರುವ ನೀರಿನಿಂದ ತುಂಬಿ ಹರಿಯುವ ನದಿಗಳಲ್ಲಿ ನಮಗೆ ತಿಲೋದಕವನ್ನು ಕೊಡುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ ?

೪. ನೀರು, ಗೆಡ್ಡೆ, ಗೆಣಸು, ಭಕ್ಷ್ಯ, ತಿಲೋದಕ ಇವುಗಳಿಂದ ನಿತ್ಯವೂ ಶ್ರಾದ್ಧವನ್ನು ಮಾಡುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯೋ ನೋ ದದ್ಯಾತ್ತ್ರಯೋದಶೀಂ ।**
**ಪಾಯಸಂ ಮಧುಸರ್ಪಿರ್ಭ್ಯಾಂ ವರ್ಷಾಸು ಚ ಮಘಾಸು ಚ ॥ ೫ ॥**

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಖಡ್ಗಮಾಂಸೇನ ಯಃ ಸಕೃತ್ ।**
**ಶ್ರಾದ್ಧಂ ಕುರ್ಯಾತ್ಪ್ರಯತ್ನೇನ ಕಾಲಶಾಕೇನ ವಾ ಪುನಃ ॥ ೬ ॥**

**ಕಾಲಶಾಕಂ ಮಹಾಶಾಕಂ ಮಧು ಮುನ್ಯನ್ನಮೇವ ಚ ।**
**ವಿಷಾಣವರ್ಜಾ ಯೇ ಖಡ್ಗಾ ಆಸೂರ್ಯಂ ತದಶೀಮಹಿ ॥ ೭ ॥**

**ಗಯಾಯಾಂ ದರ್ಶನೇ ರಾಹೋಃ ಖಡ್ಗಮಾಂಸೇನ ಯೋಗಿನಾಂ ।**
**ಭೋಜಯೇತ್ಕಃ ಕುಲೇಸ್ಮಾಕಂ ಛಾಯಾಯಾಂ ಕುಂಜರಸ್ಯ ಚ ॥ ೮ ॥**

---

೫. ಮಘಾನಕ್ಷತ್ರಯುಕ್ತವಾದ ಭಾದ್ರಪದ ಕೃಷ್ಣತ್ರಯೋದಶಿಯ ದಿನ ಜೇನುತುಪ್ಪ, ತುಪ್ಪ ಇವುಗಳೊಡನೆ ಬೆರೆತ ಪಾಯಸವನ್ನು ನಮಗೆ ಕೊಡುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

೬. ಖಡ್ಗಮೃಗದ ಮಾಂಸವನ್ನಾಗಲಿ ಕಾಲಶಾಕವೆಂಬ ತರಕಾರಿಯನ್ನಾಗಲಿ ಪ್ರಯತ್ನದಿಂದ ಸಂಪಾದಿಸಿ ಒಂದು ಸಾರಿಯಾದರೂ ಶ್ರಾದ್ಧವನ್ನು ಮಾಡುವಾತನು ನಮ್ಮ ಕುಲದಲ್ಲಿ ಹುಟ್ಟಿಯಾನೇ ?

೭. ಕಾಯಿಪಲ್ಯಗಳಲ್ಲೆಲ್ಲ ಶ್ರೇಷ್ಠವಾದ ಕಾಲಶಾಕ, ಮಹಾಶಾಕ, ಜೇನುತುಪ್ಪ, ಮುನಿಗಳಿಗೆ ಯೋಗ್ಯವಾದ ಸಾತ್ವಿಕವಾದ ಆಹಾರ, ಇನ್ನೂ ಕೊಂಬು ಹುಟ್ಟದಿರುವ ಖಡ್ಗಮೃಗದ ಮಾಂಸ ಇವುಗಳನ್ನು ಉಪಯೋಗಿಸಿ ಶ್ರಾದ್ಧವನ್ನು ಮಾಡಿದರೆ ಸೂರ್ಯನಿರುವ ವರೆಗೂ ನಮಗೆ ಅದರಿಂದ ತೃಪ್ತಿಯಾಗುತ್ತದೆ.

೮. ಚಂದ್ರಸೂರ್ಯರ ಗ್ರಹಣಕಾಲದಲ್ಲಿಯೂ, ಮಘಾನಕ್ಷತ್ರಯುಕ್ತವಾದ ಕನ್ಯಾ ಕೃಷ್ಣತ್ರಯೋದಶಿಯ ದಿನ ದಲ್ಲಿಯೂ (ಈ ದಿನವನ್ನೇ ಗಜಚ್ಛಾಯೆಯೆನ್ನುವರು)* ಗಯಾಕ್ಷೇತ್ರದಲ್ಲಿ ಖಡ್ಗಮೃಗದ ಮಾಂಸದಿಂದ ಯೋಗಿಗಳಿಗೆ ಭೋಜನ ಮಾಡಿಸುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

---

* **ಯದೇಂದುಃ ಪಿತೃದೈವತ್ಯೇ ಹಂಸಶ್ಚೈವ ಕರೇಸ್ಥಿತಃ ।**
**ಯಾಮ್ಯಾ ತಿಥಿರ್ಭವೇತ್ಸಾ ಹಿ ಗಜಚ್ಛಾಯಾ ಪ್ರಕೀರ್ತಿತಾ ॥**
**ಎಂದು ಗಜಚ್ಛಾಯೆಯೆಂಬ ಪುಣ್ಯಕಾಲದ ಲಕ್ಷಣವು ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿದೆ.**

ಆಕಲ್ಪಕಾಲಿಕೀ ತೃಪ್ತಿಸ್ತೇನಾಸ್ಮಾಕಂ ಭವಿಷ್ಯತಿ ।
ದಾತಾ ಸರ್ವೇಷು ಲೋಕೇಷು ಕಾಮಚಾರೋ ಭವಿಷ್ಯತಿ ॥ ೯ ॥

ಆಭೂತಸಂಪ್ಲವಂ ಕಾಲಂ ನಾತ್ರ ಕಾರ್ಯಾ ವಿಚಾರಣಾ ।
ಯದೇತತ್ಪಂಚಕಂ ತಸ್ಮಾದೇಕೇನಾಪಿ ಚ ಯಃ ಸದಾ ॥೧೦॥

ತೃಪ್ತಿಂ ಪ್ರಾಪ್ಸ್ಯಾಮ ಚಾನಂತ್ಯಾಂ ಕಿಂ ಪುನಃ ಸರ್ವಸಂಪದಾ ।
ಅಪಿ ಸ್ಯಾತ್ಸ ಕುಲೇಽಸ್ಮಾಕಂ ದದ್ಯಾತ್ಕೃಷ್ಣಾಜಿನಂ ಚ ಯಃ ॥೧೧॥

ಅಪಿ ಸ್ಯಾತ್ಸ ಕುಲೇಽಸ್ಮಾಕಂ ಕಶ್ಚಿತ್ಪುರುಷಸತ್ತಮಃ ।
ಪ್ರಸೂಯಮಾನಾಂ ಯೋ ಧೇನುಂ ದದ್ಯಾದ್ಬ್ರಾಹ್ಮಣಪುಂಗವೇ ॥೧೨॥

ಅಪಿ ಸ್ಯಾತ್ಸ ಕುಲೇಽಸ್ಮಾಕಂ ವೃಷಭಂ ಯಃ ಸಮುತ್ಸೃಜೇತ್ ।
ಸರ್ವವರ್ಣವಿಶೇಷೇಣ ಶುಕ್ಲನೀಲಂ ವೃಷಂ ತಥಾ ॥೧೩॥

---

೯. ಅದರಿಂದ ನಮಗೆ ಪ್ರಳಯಕಾಲದವರೆಗೂ ತೃಪ್ತಿಯುಂಟಾಗುತ್ತದೆ. ಶ್ರಾದ್ಧಮಾಡಿದ ಯಜಮಾನನೂ ಕೂಡ ಸಕಲಲೋಕಗಳಲ್ಲಿಯೂ ತನ್ನ ಇಷ್ಟ ಬಂದಂತೆ ಸಂಚರಿಸಲು ಶಕ್ತನಾಗುತ್ತಾನೆ. ಈ ಸಾಮರ್ಥ್ಯವು ಅವನಿಗೆ ಮಹಾ ಪ್ರಳಯದ ವರೆಗೂ ಇರುತ್ತದೆ. ಇದರಲ್ಲಿ ಸಂದೇಹವೇ ಬೇಕಾಗಿಲ್ಲ.

೧೦. ಮೇಲೆ ಹೇಳಿದ ಕಾಲಶಾಕ, ಮಹಾಶಾಕ ಮೊದಲಾದ ಐದರಲ್ಲಿ ಯಾವುದಾದರೂ ಒಂದನ್ನು ನಮಗೆ ಅರ್ಪಿಸಿದರೂ ಸಾಕು. ಅದರಿಂದ ಅನಂತವಾದ ತೃಪ್ತಿಯಾಗುತ್ತದೆ. ಹೀಗಿರುವಾಗ ಸಕಲಸಂಪತ್ತುಗಳಿಂದಲೂ ನಮ್ಮನ್ನು ಆರಾಧಿಸಿದರೆ ನಮಗುಂಟಾಗುವ ತೃಪ್ತಿಯನ್ನು ಎಷ್ಟೆಂದು ಹೇಳೋಣ ?

೧೧-೧೨. ಕೃಷ್ಣಾಜಿನವನ್ನು ದಾನವಾಗಿ ಕೊಡುವಾತನು ನಮ್ಮ ವಂಶದಲ್ಲಿ ಯಾವನಾದರೂ ಹುಟ್ಟಿಯಾನೇ ? ಕರುಹಾಕುತ್ತಿರುವ ಹಸುವನ್ನು ಬ್ರಾಹ್ಮಣೋತ್ತಮನಿಗೆ ದಾನಮಾಡುವ ಮಹಾಪುರುಷನು ನಮ್ಮ ವಂಶದಲ್ಲಿ ಜನಿಸುವನೇ !

೧೩. ಎಲ್ಲ ಬಣ್ಣಗಳಿಂದಲೂ ಕೂಡಿ, ಮುಖ್ಯವಾಗಿ ಬಿಳಿಪುಬೆರೆತ ಕಪ್ಪು ಬಣ್ಣದ ಗೂಳಿಯನ್ನು ನಮ್ಮ ತೃಪ್ತಿಗಾಗಿ ಬಿಡುವಾತನು ನಮ್ಮ ಕುಲದಲ್ಲಿ ಹುಟ್ಟಿಯಾನೇ !

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ ।**
**ಸುವರ್ಣದಾನಂ ಗೋದಾನಂ ಪೃಥಿವೀದಾನಮೇವ ಚ ॥೧೪॥**

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಕಶ್ಚಿತ್ಪುರುಷಸತ್ತಮಃ ।**
**ಕೂಪಾರಾಮತಡಾಗಾನಾಂ ವಾಪೀನಾಂ ಯಶ್ಚ ಕಾರಕಃ ॥೧೫॥**

**ಅಪಿ ಸ್ಯಾತ್ಸ ಕುಲೇಽಸ್ಮಾಕಂ ಸರ್ವಭಾವೇನ ಯೋ ಹರಿಂ ।**
**ಪ್ರಯಾಯಾಚ್ಛರಣಂ ವಿಷ್ಣುಂ ದೇವೇಶಂ ಮಧುಸೂದನಂ ॥೧೬॥**

**ಅಪಿ ನಃ ಸ ಕುಲೇ ಭೂಯಾತ್ಕಶ್ಚಿದ್ವಿದ್ವಾನ್ ವಿಚಕ್ಷಣಃ ।**
**ಧರ್ಮಶಾಸ್ತ್ರಾಣಿ ಯೋ ದದ್ಯಾದ್ವಿಧಿನಾ ವಿದುಷಾಮಪಿ ॥೧೭॥**

**ಏತಾವದುಕ್ತಂ ತವ ಭೂಮಿಪಾಲ ।**
**ಶ್ರಾದ್ಧಸ್ಯ ಕಲ್ಪಂ ಮುನಿಸಂಪ್ರದಿಷ್ಟಂ ।**

---

೧೪. ಸುವರ್ಣದಾನ, ಗೋದಾನ, ಭೂದಾನ ಇವುಗಳನ್ನು ಶ್ರದ್ಧೆಯಿಂದ ಮಾಡುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

೧೫. ಬಾವಿ, ಕೆರೆ, ಕೊಳ ಇವುಗಳನ್ನು ತೋಡಿಸಿ ತೋಪನ್ನು ಹಾಕಿಸುವ ಯಾವನಾದರೂ ಪುಣ್ಯಾತ್ಮನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

೧೬. ದೇವದೇವನೂ, ಮಧುವೈರಿಯೂ, ಪಾಪಪರಿಹಾರಕನೂ ಆದ ವಿಷ್ಣುವನ್ನು ಪರಿಪೂರ್ಣವಾದ ಮನಸ್ಸಿನಿಂದ ಮರೆಹೊಗುವಾತನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

೧೭. ಉಳಿದ ಶಾಸ್ತ್ರವನ್ನು ತಿಳಿದವರು, ತಿಳಿಯದವರು ಎಲ್ಲರಿಗೂ ಧರ್ಮಶಾಸ್ತ್ರವನ್ನು ನಿಯಮಾನುಸಾರವಾಗಿ ಹೇಳಿಕೊಡುವಂತಹ ವಿದ್ವಾಂಸನೂ ಮೇಧಾವಿಯೂ ಆದ ಪುರುಷನು ನಮ್ಮ ವಂಶದಲ್ಲಿ ಹುಟ್ಟಿಯಾನೇ !

೧೮. ಎಲೈ ರಾಜಾ, ಮುನಿಗಳು ಅಪ್ಪಣೆ ಕೊಡಿಸಿದ ರೀತಿಯಲ್ಲಿ ಶ್ರಾದ್ಧ ಕಲ್ಪವನ್ನು ಇಷ್ಟುಮಟ್ಟಿಗೆ ನಿನಗೆ ಹೇಳಿರುವೆನು. ಇದು ಪಾಪಗಳನ್ನು ಪರಿಹರಿಸು

**ಪಾಪಾಪಹಂ ಪುಣ್ಯವಿವರ್ಧನಂ ಚ**
**ಲೋಕೇಷು ಮುಖ್ಯತ್ವಕರಂ ತಥೈವ ||೧೮||**

**ಇತ್ಯೇತಾಂ ಪಿತೃಗಾಥಾಂ ತು ಶ್ರಾದ್ಧಕಾಲೇ ತು ಯಃ ಪಿತೄನ್ ।**
**ಶ್ರಾವಯೇತ್ತಸ್ಯ ಪಿತರೋ ಲಂಭತೇ ದತ್ತಮಕ್ಷಯಂ ||೧೯||**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪಿತೃಗಾಥಾಕೀರ್ತನಂ ನಾಮ ಚತುರಧಿಕದ್ವಿಶತತಮೋಽಧ್ಯಾಯಃ**

---

ವುದು. ಪುಣ್ಯವನ್ನು ವೃದ್ಧಿಗೊಳಿಸುವುದು. ಲೋಕಗಳಲ್ಲಿ ಪ್ರಖ್ಯಾತಿಯನ್ನೂ ಉಂಟುಮಾಡುವುದು.

೧೯. ಈಗ ಹೇಳಿದ ಪಿತೃಗೀತೆಯನ್ನು ಶ್ರಾದ್ಧಕಾಲದಲ್ಲಿ ಪಿತೃಗಳು ಕೇಳುವಂತೆ ಕೀರ್ತನೆ ಮಾಡಿದರೆ ಆತನು ಮಾಡಿದ ಶ್ರಾದ್ಧವು ಪಿತೃಗಳಿಗೆ ಅಕ್ಷಯವಾದ ಫಲವನ್ನು ಕೊಡುತ್ತದೆ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪಿತೃಗೀತೆಗಳನ್ನು ಹೇಳಿದೆ.

ಮಹಾನದಿಗಳಲ್ಲಿ ತಿಲೋದಕದಾನ, ನಿತ್ಯಶ್ರಾದ್ಧ, ಗೋದಾನ, ವೃಷಭೋತ್ಸರ್ಜನ ಇವೆಲ್ಲ ಪಿತೃಗಳಿಗೆ ಬಹು ಪ್ರಿಯವಾದುವು. ಇವುಗಳನ್ನು ಶ್ರದ್ಧೆಯಿಂದ ಆಚರಿಸುವಾತನು ತಮ್ಮ ವಂಶದಲ್ಲಿ ಹುಟ್ಟುವನೇ ಎಂದು ಅವರು ತಮ್ಮ ನಗರದಲ್ಲಿ ಹಾಡುತ್ತಾರೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪಿತೃಗಾಥಾಕೀರ್ತನವೆಂಬ ಇನ್ನೂರನಾಲ್ಕನೆಯ ಅಧ್ಯಾಯವು ಮುಗಿದುದು

## ಅಥ ಪಂಚಾಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ಪ್ರಸೂಯಮಾನಾ ದಾತವ್ಯಾ ಧೇನುರ್ಬ್ರಾಹ್ಮಣಪುಂಗವೇ ।
ವಿಧಿನಾ ಕೇನ ಧರ್ಮಜ್ಞ ದಾನಂ ದದ್ಯಾಚ್ಚ ಕಿಂ ಫಲಂ || ೧ ||

|| ಮತ್ಸ್ಯ ಉವಾಚ ||

ಸುವರ್ಣಶೃಂಗೀಂ ರೌಪ್ಯಖುರಾಂ ಮುಕ್ತಾಲಾಂಗೂಲಭೂಷಿತಾಂ ।
ಕಾಂಸ್ಯೋಪದೋಹನಾಂ ರಾಜನ್ ಸವತ್ಸಾಂ ದ್ವಿಜಪುಂಗವೇ || ೨ ||

ಪ್ರಸೂಯಮಾನಾಂ ಗಾಂ ದತ್ವಾ ಮಹತ್ಪುಣ್ಯಫಲಂ ಲಭೇತ್ ।
ಯಾವದ್ವತ್ಸೋ ಯೋನಿಗತೋ ಯಾವದ್ಗರ್ಭಂ ನ ಮುಂಚತಿ || ೩ ||

ತಾವದ್ವೈ ಪೃಥಿವೀ ಜ್ಞೇಯಾ ಸಶೈಲವನಕಾನನಾ ।
ಪ್ರಸೂಯಮಾನಾಂ ಯೋ ದದ್ಯಾದ್ಧೇನುಂ ದ್ರವಿಣಸಂಯುತಾಂ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಸಕಲ ಧರ್ಮಗಳನ್ನೂ ಬಲ್ಲ ಓ ದೇವಾಧಿದೇವಾ, ಕರುಹಾಕುತ್ತಿರುವ ಹಸುವನ್ನು ಬ್ರಾಹ್ಮಣೋತ್ತಮನಿಗೆ ದಾನ ಮಾಡಬೇಕೆಂದು ಹೇಳಿದೆಯಷ್ಟೆ! ಆ ದಾನದ ವಿಧಾನವಾವುದು? ಅದರಿಂದ ಬರುವ ಫಲವೇನು?

೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಚಿನ್ನದಿಂದ ಕೊಂಬುಗಳನ್ನೂ, ಬೆಳ್ಳಿಯಿಂದ ಗೊರಸುಗಳನ್ನೂ, ಮುತ್ತುಗಳಿಂದ ಬಾಲವನ್ನೂ ಅಲಂಕರಿಸಿ, ಕರುಹಾಕುತ್ತಿರುವ ಹಸುವನ್ನು ಹಿಂದಿನ ಕರುವಿನ ಸಹಿತವಾಗಿ, ಹಾಲು ಕರೆಯುವ ಕಂಚಿನ ಪಾತ್ರೆಯೊಡನೆ ಬ್ರಾಹ್ಮಣಪುಂಗವನಿಗೆ ದಾನಮಾಡಿದರೆ ಬಹಳ ಪುಣ್ಯವು ಬರುತ್ತದೆ.

೩-೫. ಯೋನಿಯಿಂದ ಹೊರಕ್ಕೆ ಕಾಣಿಸಿಕೊಂಡ ಕರು ಗರ್ಭವನ್ನು ಬಿಡುವುದಕ್ಕೆ ಮೊದಲೇ ಹಸುವನ್ನು ದಾನಕೊಟ್ಟರೆ ಬೆಟ್ಟಗಳು ಮತ್ತು ಕಾಡುಗಳಿಂದ ತುಂಬಿದ ಭೂಮಿಯನ್ನು ದಾನಕೊಟ್ಟಷ್ಟು ಫಲ ಬರುತ್ತದೆ. ಕರು ಹಾಕುತ್ತಿರುವ

**ಸಸಮುದ್ರಗುಹಾ ತೇನ ಸಶೈಲವನಕಾನನಾ ।**
**ಚತುರಂತಾ ಭವೇದ್ದತ್ತಾ ಪೃಥಿವೀ ನಾತ್ರ ಸಂಶಯಃ ॥ ೫ ॥**

**ಯಾವಂತಿ ಧೇನುರೋಮಾಣಿ ವತ್ಸಸ್ಯ ಚ ನರಾಧಿಪ ।**
**ತಾವತ್ಸಂಖ್ಯಂ ಯುಗಗಣಂ ದೇವಲೋಕೇ ಮಹೀಯತೇ ॥ ೬ ॥**

**ಪಿತೄನ್ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾನ್ ।**
**ಉದ್ಧರಿಷ್ಯತ್ಯಸಂದೇಹಾನ್ನರಕಾದ್ಭೂರಿದಕ್ಷಿಣಃ ॥ ೭ ॥**

**ಘೃತಕ್ಷೀರವಹಾಃ ಕುಲ್ಯಾ ದಧಿಪಾಯಸಕರ್ದಮಾಃ ।**
**ಯತ್ರ ಯತ್ರ ಗತಿಸ್ತಸ್ಯ ದ್ರುಮಾಶ್ಚೇಪ್ಸಿತಕಾಮದಾಃ ।**
**ಗೋಲೋಕಃ ಸುಲಭಸ್ತಸ್ಯ ಬ್ರಹ್ಮಲೋಕಶ್ಚ ಪಾರ್ಥಿವ ॥ ೮ ॥**

---

ಹಸುವನ್ನು ದಕ್ಷಿಣಾಸಹಿತವಾಗಿ ದಾನಮಾಡಿದರೆ ಗಿರಿವನಗಳಿಂದ ತುಂಬಿ ನಾಲ್ಕು ಸಮುದ್ರಗಳ ವರೆಗೆ ವ್ಯಾಪಿಸಿರುವ ಸಕಲ ಭೂಮಂಡಲವನ್ನೂ ಕೊಟ್ಟಂತಾಗವುದು. ಸಂದೇಹವಿಲ್ಲ.

೬. ರಾಜಾ, ಆ ಹಸುವಿನ ಮತ್ತು ಕರುವಿನ ಶರೀರದಲ್ಲಿ ಎಷ್ಟು ಕೂದಲುಗಳು ಇರುವುವೋ ಅಷ್ಟು ಯುಗಗಳ ಕಾಲ ಆತನು ದೇವಲೋಕದಲ್ಲಿ ಮನ್ನಣೆಯನ್ನು ಪಡೆದು ಸುಖದಿಂದ ಬಾಳುವನು.

೭. ಯಥೇಚ್ಛವಾಗಿ ದಕ್ಷಿಣೆಯನ್ನು ಕೊಟ್ಟು ಆತನು ತನ್ನ ಪಿತೃಗಳನ್ನೂ, ಪಿತಾಮಹರನ್ನೂ, ಪ್ರಪಿತಾಮಹರನ್ನೂ ನರಕದಿಂದ ಉದ್ಧರಿಸುವನು, ಸಂದೇಹವಿಲ್ಲ.

೮. ಆತನು ಹೋದ ಕಡೆಗಳಲ್ಲೆಲ್ಲ ಹಾಲುತುಪ್ಪಗಳ ಕಾಲುವೆಗಳು ಹರಿಯುವುವು. ಮೊಸರುಪಾಯಸಗಳ ಕೆಸರು ತುಂಬಿರುವುದು. ಮರಗಳು ಇಷ್ಟಾರ್ಥಗಳನ್ನು ಸಲ್ಲಿಸುವುವು. ಓ ರಾಜಾ, ಅವನಿಗೆ ಗೋಲೋಕವೂ ಬ್ರಹ್ಮಲೋಕವೂ ಸುಲಭವಾಗಿ ಪ್ರಾಪ್ತವಾಗುವುವು.

ಸ್ತ್ರಿಯಶ್ಚ ತಂ ಚಂದ್ರಸಮಾನವಕ್ತ್ರಾಃ
ಪ್ರತಪ್ತಜಾಂಬೂನದತುಲ್ಯರೂಪಾಃ ।
ಮಹಾನಿತಂಬಾಸ್ತನುವೃತ್ತಮಧ್ಯಾ
ಭಜಂತ್ಯಜಸ್ರಂ ನಲಿನಾಭನೇತ್ರಾಃ ॥ ೯ ॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಧೇನುದಾನಂ ನಾಮ
ಪಂಚಾಧಿಕದ್ವಿಶತತಮೋಽಧ್ಯಾಯಃ

---

೯. ಚಂದ್ರನಿಗೆ ಸಮಾನವಾದ ಮುಖ, ಪುಟವಿಟ್ಟ ಚಿನ್ನದಂತಹ ಮೈಬಣ್ಣ, ದೊಡ್ಡದಾದ ನಿತಂಬ, ಸೂಕ್ಷ್ಮವಾದ ಗುಂಡುನಡು, ತಾವರೆಯಂತಹ ಕಣ್ಣುಗಳು ಇವುಗಳಿಂದ ಮೆರೆಯುವ ಸುಂದರಿಯರು ಆತನನ್ನು ಎಡೆಬಿಡದೆ ಸೇವಿಸುವರು.

**ಅಧ್ಯಾಯದ ಸಾರಾಂಶ**

ಈ ಅಧ್ಯಾಯದಲ್ಲಿ ಗೋದಾನವಿಧಿಯನ್ನು ವರ್ಣಿಸಿದೆ.

ಕರುಹಾಕುತ್ತಿರುವ ಹಸುವನ್ನು ಚಿನ್ನಬೆಳ್ಳಿಯ ಒಡವೆಗಳಿಂದ ಅಲಂಕರಿಸಿ ದಕ್ಷಿಣೆಯೊಡನೆ ದಾನಮಾಡಿದವನಿಗೆ ಸಕಲ ಭೂಮಂಡಲವನ್ನೂ ದಾನಮಾಡಿದಷ್ಟು ಫಲ ಬರುತ್ತದೆ. ಅನಂತಕಾಲ ಆತನು ಪುಣ್ಯಲೋಕಗಳಲ್ಲಿ ವಿಧವಿಧವಾದ ಭೋಗಗಳನ್ನು ಅನುಭವಿಸುತ್ತಾನೆ.

ಶ್ರೀಮತ್ಸ್ಯಮಹಾಪುರಾಣದಲ್ಲಿ ಧೇನುದಾನವೆಂಬ ಇನ್ನೂರೈದನೆಯ
ಅಧ್ಯಾಯವು ಮುಗಿದುದು.

## ಅಥ ಷಡಧಿಕದ್ವಿಶತತಮೋಽಧ್ಯಾಯಃ

|| ಮನುರುವಾಚ ||

ಕೃಷ್ಣಾಜಿನಪ್ರದಾನಸ್ಯ ವಿಧಿಕಾಲೌ ಮಮಾನಘ ।
ಬ್ರಾಹ್ಮಣಂ ಚ ತಥಾಚಕ್ಷ್ವ ತತ್ರ ಮೇ ಸಂಶಯೋ ಮಹಾನ್ || ೧ ||

|| ಮತ್ಸ್ಯ ಉವಾಚ ||

ವೈಶಾಖೀ ಪೌರ್ಣಮಾಸೀ ಚ ಗ್ರಹಣೇ ಶಶಿಸೂರ್ಯಯೋಃ ।
ಪೌರ್ಣಮಾಸೀ ತು ಯಾ ಮಾಘೇ ಹ್ಯಾಷಾಢೀ ಕಾರ್ತಿಕೀ ತಥಾ || ೨ ||

ಉತ್ತರಾಯಣದ್ವಾದಶೀ ವಾ ತಸ್ಯಾಂ ದತ್ತಂ ಮಹಾಫಲಂ ।
ಆಹಿತಾಗ್ನಿರ್ದ್ವಿಜೋ ಯಸ್ತು ತದ್ದೇಯಂ ತಸ್ಯ ಪಾರ್ಥಿವ || ೩ ||

ಯಥಾ ಯೇನ ವಿಧಾನೇನ ತನ್ಮೇ ನಿಗದತಃ ಶೃಣು ।
ಗೋಮಯೇನೋಪಲಿಪ್ತೇ ತು ಶುಚೌ ದೇಶೇ ನರಾಧಿಪ || ೪ ||

---

೧. ಮನುಚಕ್ರವರ್ತಿ ಹೇಳಿದನು.—ಮಂಗಳಸ್ವರೂಪನಾದ ಓ ದೇವಾ, ಕೃಷ್ಣಾಜಿನವನ್ನು ದಾನಮಾಡುವ ವಿಧಿಯೆಂತು? ಅದಕ್ಕೆ ಉಕ್ತವಾದ ಕಾಲ ವಾವುದು? ಅದನ್ನು ತೆಗೆದುಕೊಳ್ಳುವ ಬ್ರಾಹ್ಮಣನ ಲಕ್ಷಣಗಳೇನು? ಇದೆಲ್ಲವನ್ನೂ ನನಗೆ ಹೇಳು. ಈ ವಿಷಯದಲ್ಲಿ ನನಗೆ ದೊಡ್ಡ ಸಂದೇಹವಿದೆ.

೨-೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವೈಶಾಖ ಪೌರ್ಣಮಿ, ಚಂದ್ರಸೂರ್ಯರ ಗ್ರಹಣ, ಮಾಘಪೌರ್ಣಮಿ, ಆಷಾಢಪೌರ್ಣಮಿ, ಕಾರ್ತಿಕಪೌರ್ಣಮಿ, ಉತ್ತರಾಯಣದ್ವಾದಶಿ ಈ ದಿನಗಳಲ್ಲಿ ಕೃಷ್ಣಾಜಿನವನ್ನು ದಾನಮಾಡಿದರೆ ಅನಂತವಾದ ಫಲ ಬರುತ್ತದೆ. ರಾಜಾ, ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಅದನ್ನು ಕೊಡಬೇಕು.

೪-೫. ಇನ್ನು ದಾನದ ವಿಧಾನವನ್ನು ಹೇಳುತ್ತೇನೆ ಕೇಳು. ಎಲೈ ನರೇಂದ್ರಾ, ಗೋಮಯದಿಂದ ಸಾರಿಸಿದ ಪರಿಶುದ್ಧವಾದ ಸ್ಥಳದಲ್ಲಿ ಮೊದಲು ಉಣ್ಣೆಯ

**ಆದಾವೇವ ಸಮಾಸ್ತೀರ್ಯ ಶೋಭನಂ ವಸ್ತ್ರಮಾನಿಕಂ ।**
**ತತಃ ಸಶೃಂಗಂ ಸಖುರಮಾಸ್ತರೇತ್ ಕೃಷ್ಣಮಾರ್ಗಕಂ ॥ ೫ ॥**

**ಕರ್ತವ್ಯಂ ರುಕ್ಮಶೃಂಗಂ ತದ್ರೌಪ್ಯಂ ದಂತಂ ತಥೈವ ಚ ।**
**ಲಾಂಗೂಲಂ ಮೌಕ್ತಿಕೈರ್ಯುಕ್ತಂ ತಿಲಚ್ಛನ್ನಂ ತಥೈವ ಚ ॥ ೬ ॥**

**ತಿಲೈಃ ಸುಪೂರಿತಂ ಕೃತ್ವಾ ವಾಸಸಾಽಽಚ್ಛಾದಯೇದ್ಬುಧಃ ।**
**ಸುವರ್ಣನಾಭಂ ತತ್ಕುರ್ಯಾದಲಂಕುರ್ಯಾದ್ವಿಶೇಷತಃ ॥ ೭ ॥**

**ರತ್ನೈರ್ಗಂಧೈರ್ಯಥಾಶಕ್ತ್ಯಾ ತಸ್ಯ ದಿಕ್ಷು ಚ ವಿನ್ಯಸೇತ್ ।**
**ಕಾಂಸ್ಯಪಾತ್ರಾಣಿ ಚತ್ವಾರಿ ತೇಷು ದದ್ಯಾದ್ಯಥಾಕ್ರಮಂ ॥ ೮ ॥**

**ಮೃನ್ಮಯೇಷು ಚ ಪಾತ್ರೇಷು ಪೂರ್ವಾದಿಷು ಯಥಾಕ್ರಮಂ ।**
**ಘೃತಂ ಕ್ಷೀರಂ ದಧಿ ಕ್ಷೌದ್ರಮೇವಂ ದದ್ಯಾದ್ಯಥಾವಿಧಿ ॥ ೯ ॥**

---

ಬಟ್ಟೆಯನ್ನು ಹಾಕಿ ಅದರ ಮೇಲೆ ಕೊಂಬುಗಳೂ ಗೊರಸುಗಳೂ ಇರುವ ಕೃಷ್ಣಾಜಿನವನ್ನು ಹಾಸಬೇಕು.

೬. ಕೊಂಬನ್ನು ಚಿನ್ನದಿಂದಲೂ, ಹಲ್ಲನ್ನು ಬೆಳ್ಳಿಯಿಂದಲೂ, ಬಾಲವನ್ನು ಮುತ್ತುಗಳಿಂದಲೂ ಅಲಂಕರಿಸಿ ಎಳ್ಳಿನಿಂದ ಮುಚ್ಚಬೇಕು.

೭. ಎಳ್ಳನ್ನು ಮೇಲೆಲ್ಲ ಹರಡಿದಬಳಿಕ ಬಟ್ಟೆಯಿಂದ ಮುಚ್ಚಬೇಕು. ಹೊಕ್ಕುಳಿನ ಬಳಿ ಸುವರ್ಣಶಕಲವನ್ನಿಟ್ಟು ಅತಿಶಯವಾಗಿ ಶೃಂಗರಿಸಬೇಕು.

೮. ತನ್ನ ಶಕ್ತಿಗೆ ತಕ್ಕಂತೆ ರತ್ನಗಳಿಂದಲೂ ಗಂಧದಿಂದಲೂ ಅಲಂಕರಿಸಬೇಕು. ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಕಂಚಿನ ಪಾತ್ರೆಗಳನ್ನಿಟ್ಟು ಅವುಗಳಲ್ಲಿ ಕ್ರಮವಾಗಿ ಮುಂದೆ ಹೇಳುವ ವಸ್ತುಗಳನ್ನು ಇರಿಸಬೇಕು.

೯. ಪೂರ್ವಾದಿದಿಕ್ಕುಗಳಲ್ಲಿ ಕ್ರಮವಾಗಿ ತುಪ್ಪ, ಹಾಲು, ಮೊಸರು, ಜೇನು ಇವುಗಳಿಂದ ತುಂಬಿದ ನಾಲ್ಕು ಮಣ್ಣಿನ ಪಾತ್ರೆಗಳನ್ನು ಕೂಡ ಇಡಬೇಕು.

ಚಂಪಕಸ್ಯ ತಥಾ ಶಾಖಾಮುವ್ರಣಂ ಕುಂಭಮೇವ ಚ ।
ಬಾಹ್ಯೋಪಸ್ಥಾಪನಂ ಕೃತ್ವಾ ಶುಭಚಿತ್ತೋ ನಿವೇಶಯೇತ್ ॥೧೦॥

ನವ್ಯವಸ್ತ್ರಂ ಶುಭಂ ಪೀತಂ ಸರ್ವಾಂಗೇಷು ನಿವೇಶಯೇತ್ ।
ತಥಾ ಧಾತುಮಯಂ ಪಾತ್ರಂ ಪಾದಯೋಸ್ತಸ್ಯ ದಾಪಯೇತ್ ॥೧೧॥

ಯಾನಿ ಕಾನಿ ಚ ಪಾಪಾನಿ ಮಯಾ ಲೋಭಕೃತಾನಿ ವೈ ।
ಲೋಹಪಾತ್ರಾದಿದಾನೇನ ಪ್ರಣಶ್ಯಂತು ಮಮಾಶು ವೈ ॥೧೨॥

ತಿಲಪೂರ್ಣಂ ತತಃ ಕೃತ್ವಾ ವಾಮಪಾದೇ ನಿವೇಶಯೇತ್ ।
ಯಾನಿ ಕಾನಿ ಚ ಪಾಪಾನಿ ಕರ್ಮೋತ್ಥಾನಿ ಕೃತಾನಿ ಚ ॥೧೩॥

ಕಾಂಸ್ಯಪಾತ್ರಪ್ರದಾನೇನ ತಾನಿ ನಶ್ಯಂತು ಮೇ ಸದಾ ।
ಮಧುಪೂರ್ಣಂ ತು ತತ್ಕೃತ್ವಾ ಪಾದೇ ವೈ ದಕ್ಷಿಣೇ ನ್ಯಸೇತ್ ॥೧೪॥

---

೧೦. ಮೃಗಚರ್ಮದ ಹೊರಗಡೆಯಲ್ಲಿ ಬಿರುಕೂ ತೂತೂ ಇಲ್ಲದ ಪೂರ್ಣಕುಂಭವನ್ನು ಶುದ್ಧ ಚಿತ್ತದಿಂದ ಸ್ಥಾಪಿಸಿ ಸಂಪಿಗೆಮರದ ಕೊನೆಯಿಂದ ಅದನ್ನು ಅಲಂಕರಿಸಬೇಕು.

೧೧. ಹಳದಿಬಣ್ಣದ ಅಂದವಾದ ಹೊಸಬಟ್ಟೆಯನ್ನು ಎಲ್ಲ ಅಂಗಗಳಿಗೂ ಹೊದಿಸಬೇಕು. ಹಿಂಗಡೆಯ ಕಾಲುಗಳೆರಡರ ಬಳಿಯಲ್ಲಿಯೂ ಕಬ್ಬಿಣದ ಪಾತ್ರೆಗಳನ್ನು ಇರಿಸಬೇಕು.

೧೨. "ಲೋಭವಶದಿಂದ ನಾನು ಯಾವ ಯಾವ ಪಾಪಗಳನ್ನು ಮಾಡಿರುವೆನೋ ಅವೆಲ್ಲವೂ ಈ ಕಬ್ಬಿಣದ ಪಾತ್ರೆ ಮೊದಲಾದುವುಗಳ ದಾನದಿಂದ ಬೇಗನೆ ನಾಶವಾಗಲಿ" ಎಂದು ಹೇಳಿ, ಪಾತ್ರೆಯನ್ನು ಎಳ್ಳಿನಿಂದ ತುಂಬಿ ಮೃಗಾಜಿನದ ಹಿಂಗಡೆಯ ಎಡಗಾಲಿನ ಬಳಿಯಲ್ಲಿ ಇಡಬೇಕು.

೧೩-೧೪. "ನನ್ನ ಕರ್ಮವಶದಿಂದ ಯಾವ ಯಾವ ಪಾತಕಗಳು ಬಂದುವೋ, ಅಲ್ಲದೆ ನಾನಾಗಿ ಯಾವ ಪಾಪಗಳನ್ನೂ ಮಾಡಿದೆನೋ ಅವೆಲ್ಲವೂ ಕಂಚಿನ ಪಾತ್ರೆಯ ದಾನದಿಂದ ನಾಶವಾಗಲಿ" ಎಂದು ಹೇಳಿ ಜೇನುತುಪ್ಪದಿಂದ ಅದನ್ನು ತುಂಬಿ ಬಲಗಾಲಿನ ಹತ್ತಿರದಲ್ಲಿ ಇರಿಸಬೇಕು.

**ಪರಾಪವಾದಪೈಶುನ್ಯಾದ್ವೃಥಾ ಮಾಂಸಸ್ಯ ಭಕ್ಷಣಾತ್ ।**
**ತತ್ಥೋತ್ಥಿತಂ ಚ ಮೇ ಪಾಪಂ ತಾಮ್ರಪಾತ್ರಾತ್ಪ್ರಣಶ್ಯತು ॥೧೫॥**

**ಕನ್ಯಾನೃತಂ ಗವಾಂ ಚೈವ ಪರದಾರಪ್ರಹರ್ಷಣಂ ।**
**ರೌಪ್ಯಪಾತ್ರಪ್ರದಾನಾದ್ಧಿ ಕ್ಷಿಪ್ರಂ ನಾಶಂ ಪ್ರಯಾತು ಮೇ ॥೧೬॥**

**ಊರ್ಧ್ವಪಾದೇ ತ್ರಿಮೇ ಕಾರ್ಯೇ ತಾಮ್ರಸ್ಯ ರಜತಸ್ಯ ಚ ।**
**ಜನ್ಮಾಂತರಸಹಸ್ರೇಷು ಕೃತಂ ಪಾಪಂ ಕುಬುದ್ಧಿನಾ ॥೧೭॥**

**ಸುವರ್ಣಪಾತ್ರದಾನಾತ್ತು ನಾಶಯಾಶು ಜನಾರ್ದನ ।**
**ಹೇಮಮುಕ್ತಾವಿದ್ರುಮಂ ಚ ದಾಡಿಮಂ ಬೀಜಪೂರಕಂ ॥೧೮॥**

**ಪ್ರಶಸ್ತಪಾತ್ರೇ ಶ್ರವಣೇ ಖುರೇ ಶೃಂಗಾಟಕಾನಿ ಚ ।**
**ಏವಂ ಕೃತ್ವಾ ಯಥೋಕ್ತೇನ ಸರ್ವಶಾಕಫಲಾನಿ ಚ ॥೧೯॥**

---

೧೫. ಇತರರ ಮೇಲೆ ದೂರುಹೊರಿಸುವುದು, ಚಾಡಿಹೇಳುವುದು, ಯಜ್ಞ ಶೇಷವಲ್ಲದ ಮಾಂಸವನ್ನು ಭಕ್ಷಿಸುವುದು ಇವುಗಳಿಂದ ನನಗೆ ಒದಗಿದ ಪಾತಕವು ತಾಮ್ರಪಾತ್ರದ ದಾನದಿಂದ ದೂರವಾಗಲಿ.

೧೬. ಕನ್ಯೆಯರ ನಿಮಿತ್ತವಾಗಿ, ಹಸುಗಳ ನಿಮಿತ್ತವಾಗಿ ಆಡಿದ ಸುಳ್ಳು, ಪರಸ್ತ್ರೀಯರ ವಿಷಯದಲ್ಲಿ ನಡೆಸಿದ ಅತ್ಯಾಚಾರ ಇವುಗಳಿಂದ ನನಗೆ ಬಂದ ಪಾಪವು ಬೆಳ್ಳಿಯಪಾತ್ರೆಯ ದಾನದಿಂದ ಬೇಗನೆ ಪರಿಹಾರವಾಗಲಿ.

೧೭-೧೯. ತಾಮ್ರದ ಮತ್ತು ಬೆಳ್ಳಿಯ ಪಾತ್ರೆಗಳನ್ನು ಮುಂದುಗಡೆಯ ಕಾಲುಗಳ ಬಳಿ ಇರಿಸಬೇಕು. "ಎಲೈ ಜನಾರ್ದನಾ, ಬುದ್ಧಿದೋಷದಿಂದ ಕಳೆದ ಸಾವಿರಾರು ಜನ್ಮಗಳಲ್ಲಿ ನಾನು ಮಾಡಿದ ಪಾಪವನ್ನು ಸುವರ್ಣಪಾತ್ರದ ದಾನದಿಂದ ಬೇಗನೆ ಪರಿಹಾರಮಾಡು" ಎಂದು ಬೇಡಿ ಚಿನ್ನ, ಮುತ್ತು, ಹವಳ, ದಾಳಿಂಬೆ ಮತ್ತು ಸೀಬೆಯ ಹಣ್ಣು ಇವುಗಳನ್ನು ಚಿನ್ನದ ಪಾತ್ರೆಯಲ್ಲಿ ತುಂಬಿ ಕಿವಿ, ಗೊರಸು ಮತ್ತು ಕೊಂಬುಗಳ ಮಧ್ಯದೇಶದಲ್ಲಿ ಇರಿಸಬೇಕು. ಹೀಗೆಯೇ ಎಲ್ಲ ಬಗೆಯ ಕಾಯಿಪಲ್ಯಗಳನ್ನೂ ಹಣ್ಣುಗಳನ್ನೂ ಇರಿಸಬೇಕು.

ತತ್ಪ್ರತಿಗ್ರಹವಿದ್ವಿದ್ವಾನಾಹಿತಾಗ್ನಿರ್ದ್ವಿಜೋತ್ತಮಃ ।
ಸ್ನಾತೋ ವಸ್ತ್ರಯುಗಚ್ಛನ್ನಃ ಸ್ವಶಕ್ತ್ಯಾ ಚಾಪ್ಯಲಂಕೃತಃ ॥೨೦॥

ಪ್ರತಿಗ್ರಹಶ್ಚ ತಸ್ಯೋಕ್ತಃ ಪುಚ್ಛದೇಶೇ ಮಹೀಪತೇ ।
ತತ ಏವಂ ಸಮೀಪೇ ತು ಮಂತ್ರಮೇನಮುದೀರಯೇತ್ ॥೨೧॥

ಕೃಷ್ಣಾಜಿನೇತಿ ವೈ ಕೃಷ್ಣಾನ್ಹಿರಣ್ಯಂ ಮಧುಸರ್ಪಿಷೀ ।
ದದಾತಿ ಯಸ್ತು ವಿಪ್ರಾಯ ಸರ್ವಂ ತರತಿ ದುಷ್ಕೃತಂ ॥೨೨॥

ಯಸ್ತು ಕೃಷ್ಣಾಜಿನಂ ದದ್ಯಾತ್ಸಖುರಂ ಶೃಂಗಸಂಯುತಂ ।
ತಿಲೈಃ ಪ್ರಚ್ಛಾದ್ಯ ವಾಸೋಭಿಃ ಸರ್ವವಸ್ತ್ರೈರಲಂಕೃತಂ ॥೨೩॥

ವೈಶಾಖ್ಯಾಂ ಪೌರ್ಣಮಾಸ್ಯಾಂ ತು ವಿಶಾಖಾಯಾಂ ವಿಶೇಷತಃ ।
ಸಸಮುದ್ರಗುಹಾ ತೇನ ಸಶೈಲವನಕಾನನಾ ॥೨೪॥

---

೨೦. ಕೃಷ್ಣಾಜಿನವನ್ನು ದಾನತೆಗೆದುಕೊಳ್ಳುವ ವಿಪ್ರೋತ್ತಮನು ಶಾಸ್ತ್ರಜ್ಞನೂ ಅಗ್ನಿಹೋತ್ರಿಯೂ ಆಗಿರಬೇಕು. ಆತನು ಸ್ನಾನಮಾಡಿ ಪಂಚೆಯನ್ನುಟ್ಟು, ಧೋತ್ರವನ್ನು ಹೊದೆದು ತನ್ನ ಶಕ್ತಿಗೆ ತಕ್ಕಂತೆ ಗಂಧಾದಿಗಳಿಂದ ಅಲಂಕರಿಸಿ ಕೊಳ್ಳಬೇಕು.

೨೧. ಓ ರಾಜಾ, ಬಾಲವನ್ನು ಮುಟ್ಟುತ್ತ ಅವನು ಅದನ್ನು ಪ್ರತಿಗ್ರಹಿಸ ಬೇಕು. ಬಳಿಕ ಅದರ ಸಮೀಪದಲ್ಲಿ ಈ ಮಂತ್ರವನ್ನು ಉಚ್ಚರಿಸಬೇಕು.

೨೨. ಕೃಷ್ಣಾಜಿನವೆಂಬ ಮಂತ್ರದಿಂದ ಕೃಷ್ಣಧಾನ್ಯಗಳನ್ನೂ, ಸುವರ್ಣ ವನ್ನೂ, ಜೇನನ್ನೂ, ತುಪ್ಪವನ್ನೂ ಬ್ರಾಹ್ಮಣನಿಗೆ ದಾನಮಾಡುವಾತನು ಸಕಲ ಪಾತಕಗಳಿಂದಲೂ ಪಾರಾಗುತ್ತಾನೆ.

೨೩-೨೪. ಗೊರಸುಗಳಿಂದಲೂ ಕೊಂಬುಗಳಿಂದಲೂ ಸಹಿತವಾದ ಕೃಷ್ಣಾಜಿನವನ್ನು ಎಳ್ಳಿನಿಂದಲೂ ವಸ್ತ್ರಗಳಿಂದಲೂ ಮುಚ್ಚಿ, ಬಗೆಬಗೆಯ ವಸ್ತ್ರಗಳಿಂದ ಅಲಂಕರಿಸಿ, ವೈಶಾಖಮಾಸದ ಹುಣ್ಣಿಮೆಯಲ್ಲಿ, ಅದೂ ವಿಶಾಖಾ ನಕ್ಷತ್ರದ ಯೋಗವಿರುವ ಸಮಯದಲ್ಲಿ ದಾನಮಾಡಿದರೆ ಸಮುದ್ರಗಳು, ಗುಹೆಗಳು, ಬೆಟ್ಟಗಳು, ಕಾಡುಗಳು ಮತ್ತು ಸಪ್ತದ್ವೀಪಗಳು ಇವುಗಳಿಂದ ಕೂಡಿದ ಭೂಮಂಡಲ ವನ್ನೇ ಕೊಟ್ಟಷ್ಟು ಫಲ ಬರುತ್ತದೆ.

ಸಪ್ತದ್ವೀಪಾನ್ವಿತಾ ದತ್ತಾ ಪೃಥಿವೀ ನಾತ್ರ ಸಂಶಯಃ ।
ಕೃಷ್ಣಃ ಕೃಷ್ಣಾಂಗಲೋ ದೇವಃ ಕೃಷ್ಣಾಜಿನ ನಮೋಽಸ್ತು ತೇ ॥೨೫॥

ಸುವರ್ಣದಾನಾತ್ತ್ವದ್ದಾನಾದ್ಧುತಪಾಪಸ್ಯ ಪ್ರೀಯತಾಂ ।
ತ್ರಯಸ್ತ್ರಿಂಶತ್ಸುರಾಣಾಂ ತ್ವಮಾಧಾರತ್ವೇ ವ್ಯವಸ್ಥಿತಃ ॥೨೬॥

ಕೃಷ್ಣೋಽಸಿ ಮೂರ್ತಿಮಾನ್ ಸಾಕ್ಷಾತ್ಕೃಷ್ಣಾಜಿನ ನಮೋಽಸ್ತು ತೇ ।
ಸುವರ್ಣನಾಭಿಕಂ ದದ್ಯಾತ್ಪ್ರೀಯತಾಂ ವೃಷಭಧ್ವಜಃ ॥೨೭॥

ಕೃಷ್ಣಃ ಕೃಷ್ಣಗಲೋ ದೇವಃ ಕೃಷ್ಣಾಜಿನಧರಸ್ತಥಾ ।
ತದ್ದಾನಾದ್ಧೂತಪಾಪಸ್ಯ ಪ್ರೀಯತಾಂ ವೃಷಭಧ್ವಜಃ ॥೨೮॥

ಅನೇನ ವಿಧಿನಾ ದತ್ವಾ ಯಥಾವತ್ಕೃಷ್ಣಮಾರ್ಗಕಂ ।
ನ ಸ್ಪೃಶ್ಯೋಽಸೌ ದ್ವಿಜೋ ರಾಜಂಶ್ಚಿತಿಯೂಪಸಮೋ ಹಿ ಸಃ ॥೨೯॥

---

೨೫-೨೬. "ಎಲೈ ಕೃಷ್ಣಾಜಿನವೇ, ನಿನಗೆ ನಮಸ್ಕಾರ. ಸುವರ್ಣದಾನದಿಂದಲೂ ನಿನ್ನ ದಾನದಿಂದಲೂ ನನ್ನ ಪಾಪವು ಪರಿಹಾರವಾಗಲಿ. ನೀಲದೇಹನಾದ ಶ್ರೀಕೃಷ್ಣಪರಮಾತ್ಮನು ತೃಪ್ತನಾಗಲಿ. ಮೂವತ್ತು ಮೂರುಕೋಟಿ ದೇವತೆಗಳಿಗೆ ನೀನು ಆಧಾರವಾಗಿರುವೆ.

೨೭. ಓ ಕೃಷ್ಣಾಜಿನವೇ, ನಿನಗೆ ನಮಸ್ಕಾರ. ನೀನು ಸಾಕ್ಷಾತ್ಕೃಷ್ಣ ಸ್ವರೂಪವೇ ಆಗಿರುವೆ. ಪರಮೇಶ್ವರನು ಈ ದಾನದಿಂದ ಪ್ರೀತನಾಗಲಿ" ಎಂದು ಹೇಳಿ ನಾಭಿಯಲ್ಲಿ ಸುವರ್ಣದಿಂದ ಅಲಂಕೃತವಾದ ಕೃಷ್ಣಾಜಿನವನ್ನು ದಾನವಾಗಿ ಕೊಡಬೇಕು.

೨೮ ಐಹಿಕಾಮುಷ್ಮಿಕಫಲದಾತನೂ, ನೀಲಕಂಠನೂ, ಕೃಷ್ಣಾಜಿನ ಧಾರಿಯೂ ಆದ ಪರಮೇಶ್ವರನು ಕೃಷ್ಣಾಜಿನದ ದಾನದಿಂದ ಪಾಪನಿರ್ಮುಕ್ತನಾದ ನನ್ನಲ್ಲಿ ಪ್ರೀತನಾಗಲಿ.

೨೯. ಈ ವಿಧಾನದಿಂದ ಕೃಷ್ಣಾಜಿನವನ್ನು ದಾನಮಾಡಬೇಕು. ಓ ರಾಜಾ, ದಾನವನ್ನು ಸ್ವೀಕರಿಸಿದ ಬ್ರಾಹ್ಮಣನನ್ನು ಮುಟ್ಟಬಾರದು. ಚಿತೆಯ ಕಾಷ್ಠದಿಂದ ನಿರ್ಮಿಸಿದ ಯೂಪಸ್ತಂಭಕ್ಕೆ ಆತನು ಸಮಾನನು.

ತಂ ದಾನೇ ಶ್ರಾದ್ಧಕಾಲೇ ಚ ದೂರತಃ ಪರಿವರ್ಜಯೇತ್ ।
ಸ್ವಗೃಹಾತ್ಪ್ರೇಷ್ಯ ತಂ ವಿಪ್ರಂ ಮಂಗಲಸ್ನಾನಮಾಚರೇತ್ ॥೩೦॥

ಪೂರ್ಣಕುಂಭೇನ ರಾಜೇಂದ್ರ ಶಾಖಯಾ ಚಂಪಕಸ್ಯ ತು ।
ಕೃತ್ವಾಚಾರ್ಯಶ್ಚ ಕಲಶಂ ಮಂತ್ರೇಣಾನೇನ ಮೂರ್ಧನಿ ॥೩೧॥

ಆಪ್ಯಾಯಸ್ವ ಸಮುದ್ರಜ್ಯೇಷ್ಠಾ ಋಚಾ ಸಂಸ್ನಾಪ್ಯ ಷೋಡಶ ।
ಅಹತೇ ವಾಸಸೀ ವೀತ ಆಚಾಂತಃ ಶುಚಿತಾಮಿಯಾತ್ ॥೩೨॥

ತದ್ವಾಸಃ ಕುಂಭಸಹಿತಂ ನೀತ್ವಾ ಕ್ಷೇಪ್ಯಂ ಚತುಷ್ಪಥೇ ।
ತತೋ ಮಂಡಲಮಾವಿಶೇತ್ಕೃತ್ವಾ ದೇವಾರ್ಚ ಪ್ರದಕ್ಷಿಣಂ ॥೩೩॥

ಪೂತೇ ವೃತ್ತೇ ಸಪತ್ನೀಕಂ ಮಾರ್ಜಯೇದ್ಯಾಜಕಂ ದ್ವಿಜಃ ।
ಮಾರ್ಜಯೇನ್ಮುಕ್ತಿಕಾಮಂ ತು ಬ್ರಾಹ್ಮಣೇನ ಘಟೇನ ವೈ ॥೩೪॥

---

೩೦ ಅವನು ಉಳಿದ ದಾನಕ್ಕಾಗಲಿ ಶ್ರಾದ್ಧಕ್ಕಾಗಲಿ ಅರ್ಹನಲ್ಲ. ಮನೆಯಿಂದ ಆ ಬ್ರಾಹ್ಮಣನನ್ನು ಬೀಳ್ಕೊಟ್ಟ ಬಳಿಕ ಯಜಮಾನನು ಮಂಗಳ ಸ್ನಾನವನ್ನು ಮಾಡಬೇಕು.

೩೧-೩೨. ಓ ರಾಜೇಂದ್ರಾ, ಹಿಂದೆ ಹೇಳಿದಂತೆ ಆಚಾರ್ಯನು ಪೂರ್ಣಕುಂಭದಲ್ಲಿ ಚಂಪಕವೃಕ್ಷದ ಶಾಖೆಯನ್ನಿಟ್ಟು ಕಲಶಸ್ಥಾಪನವನ್ನು ಮಾಡಿ, "ಆಪ್ಯಾಯಸ್ವ" "ಸಮುದ್ರ ಜ್ಯೇಷ್ಠಾ ಎಂಬ ಹದಿನಾರು ಮಂತ್ರಗಳಿಂದ ಯಜಮಾನನಿಗೆ ಮಂತ್ರೋದಕವನ್ನು ಪ್ರೋಕ್ಷಿಸಿ ಸ್ನಾನಮಾಡಿಸಬೇಕು. ಅನಂತರ ಯಜಮಾನನು ಹೊಸಪಂಚೆಯನ್ನುಟ್ಟು ಆಚಮನಮಾಡಿ ಪರಿಶುದ್ಧನಾಗಬೇಕು.

೩೩. ಕುಂಭವನ್ನೂ ಅವಕ್ಕೆ ಧರಿಸಿದ ವಸ್ತ್ರವನ್ನೂ ತೆಗೆದುಕೊಂಡು ಹೋಗಿ ನಾಲ್ಕು ಬೀದಿಗಳು ಸೇರುವ ಚೌಕದಲ್ಲಿ ಬಿಸಾಡಬೇಕು. ಬಳಿಕ ದೇವರಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಸಾರಿಸಿ ಸಿದ್ಧಪಡಿಸಿರುವ ಮಂಡಲಾಕಾರವಾದ ಸ್ಥಳಕ್ಕೆ ಹೋಗಬೇಕು.

೩೪. ಪರಿಶುದ್ಧವಾದ ಮಂಡಲದಲ್ಲಿ ಸಪತ್ನೀಕನಾಗಿ ಕುಳಿತಿರುವ ಯಜಮಾನನಿಗೆ ಆಚಾರ್ಯನು ಪ್ರೋಕ್ಷಣಮಾಡಬೇಕು. ಆತನು ಮೋಕ್ಷಾಭಿಲಾಷಿಯಾಗಿದ್ದರೆ ಬ್ರಹ್ಮದೇವತಾಕವಾದ ಕಲಶೋದಕದಿಂದ ಪ್ರೋಕ್ಷಿಸಬೇಕು.

ಶ್ರೀಕಾಮಂ ವೈಷ್ಣವೇನೇಹ ಕಲಶೇನ ತು ಪಾರ್ಥಿವ ।
ರಾಜ್ಯಕಾಮಂ ತಥಾ ಮೂರ್ಧ್ನಿ ಐಂದ್ರೇಣ ಕಲಶೇನ ತು ॥೩೫॥

ದ್ರವ್ಯಪ್ರತಾಪಕಾಮಂ ತು ಆಗ್ನೇಯಘಟವಾರಿಣಾ ।
ಮೃತ್ಯುಂಜಯವಿಧಾನಾಯ ಯಾಮ್ಯೇನ ಕಲಶೇನ ತು ॥೩೬॥

ತತಸ್ತು ತಿಲಕಂ ಕಾರ್ಯಂ ಬ್ರಾಹ್ಮಣೇಭ್ಯಸ್ತು ದಕ್ಷಿಣಾಂ ।
ದತ್ವಾ ತತ್ಕರ್ಮಸಿದ್ಧ್ಯರ್ಥಂ ಗ್ರಾಹ್ಯಾಶೀಸ್ತು ವಿಶೇಷತಃ ॥೩೭॥

ಕೃತೇನಾನೇನ ಯಾ ತುಷ್ಟಿರ್ನ ಸಾ ಶಕ್ಯಾ ಸುರೈರಪಿ ।
ವಕ್ತುಂ ಹಿ ನೃಪತಿಶ್ರೇಷ್ಠ ತಥಾಪ್ಯುದ್ದೇಶತಃ ಶೃಣು ॥೩೮॥

---

೩೫. ಸಂಪತ್ತಿನಲ್ಲಿ ಅಭಿಲಾಷೆಯುಳ್ಳವನಾಗಿದ್ದರೆ ವಿಷ್ಣುದೇವತಾಕವಾದ ಕಲಶದ ತೀರ್ಥದಿಂದಲೂ, ರಾಜ್ಯವನ್ನು ಅಪೇಕ್ಷಿಸತಕ್ಕವನಾಗಿದ್ದರೆ ಇಂದ್ರನನ್ನು ಆವಾಹನ ಮಾಡಿದ ಕುಂಭೋದಕದಿಂದಲೂ ಪ್ರೋಕ್ಷಿಸಬೇಕು.

೩೬. ಯಜಮಾನನು ದ್ರವ್ಯವನ್ನೂ ಪ್ರತಾಪವನ್ನೂ ಇಚ್ಛಿಸುವವನಾಗಿದ್ದರೆ ಅಗ್ನಿದೇವತಾಕವಾದ ಕಲಶ ತೀರ್ಥದಿಂದ ಪ್ರೋಕ್ಷಿಸಬೇಕು. ಮೃತ್ಯುವನ್ನು ಜಯಿಸ ಬೇಕೆಂದಿದ್ದರೆ ಯಮನನ್ನು ಆವಾಹನಮಾಡಿದ ಕುಂಭದ ಜಲದಿಂದ ಪ್ರೋಕ್ಷಿಸ ಬೇಕು.

೩೭. ತರುವಾಯ ಯಜಮಾನನು ತಿಲಕವನ್ನು ಧರಿಸಿ ಮಾಡಿದ ಕರ್ಮವು ಸಫಲವಾಗುವುದಕ್ಕಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಅನಂತರ ಅವರ ಆಶೀರ್ವಾದವನ್ನು ವಿಶೇಷವಾದ ಭಕ್ತಿಯಿಂದ ಪಡೆಯಬೇಕು.

೩೮. ಹೀಗೆ ಮಾಡಿದ ಈ ಕೃಷ್ಣಾಜಿನದಾನದಿಂದ ಆಗುವ ಭಗವತ್ಪ್ರೀತಿ ಯನ್ನು ದೇವತೆಗಳೂ ಸಹ ವಿವರಿಸಿ ಹೇಳಲಾರರು. ಓ ರಾಜಾ, ಆದರೂ ಸಂಕ್ಷೇಪ ವಾಗಿ ಹೇಳುವೆನು ಕೇಳು.

ಸಮಗ್ರಭೂಮಿದಾನಸ್ಯ ಫಲಂ ಪ್ರಾಪ್ನೋತ್ಯಸಂಶಯಂ ।
ಸರ್ವಾಂಲ್ಲೋಕಾಂಶ್ಚ ಜಯತಿ ಕಾಮಚಾರೀ ವಿಹಂಗವತ್ ॥೩೯॥

ಆಭೂತಸಂಪ್ಲವಂ ತಾವತ್ಸ್ವರ್ಗಮಾಪ್ನೋತ್ಯಸಂಶಯಂ ।
ನ ಪಿತಾ ಪುತ್ರಮರಣಂ ವಿಯೋಗಂ ಭಾರ್ಯಯಾ ಸಹ ।
ಧನದೇಶಪರಿತ್ಯಾಗಂ ನ ಚೈವೇಹಾಽಽಪ್ನುಯಾತ್ಕ್ವಚಿತ್ ॥೪೦॥

ಕೃಷ್ಣೇಪ್ಸಿತಂ ಕೃಷ್ಣಮೃಗಸ್ಯ ಚರ್ಮ
ದತ್ವಾ ದ್ವಿಜೇಂದ್ರಾಯ ಸಮಾಹಿತಾತ್ಮಾ ।
ಯಥೋಕ್ತಮೇತನ್ಮರಣಂ ನ ಶೋಚೇ
ತ್ಪ್ರಾಪ್ನೋತ್ಯಭೀಷ್ಟಂ ಮನಸಃ ಫಲಂ ತತ್ ॥೪೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕೃಷ್ಣಾಜಿನಪ್ರದಾನಂ ನಾಮ
ಷಡಧಿಕದ್ವಿಶತತಮೋಽಧ್ಯಾಯಃ

---

೩೯. ಸಕಲ ಭೂಮಂಡಲವನ್ನೂ ದಾನಮಾಡಿದರೆ ಬರುವ ಫಲವು ಕೃಷ್ಣಾಜಿನದಾನದಿಂದ ಬರುವುದು. ಆ ಯಜಮಾನನು ಎಲ್ಲ ಲೋಕಗಳನ್ನೂ ಜಯಿಸಿ, ಪಕ್ಷಿಯಂತೆ ಸ್ವೇಚ್ಛೆಯಿಂದ ಸಂಚರಿಸುತ್ತ ವಿಜಯಶಾಲಿಯೆನಿಸುವನು.

೪೦. ಅತನು ಮಹಾಪ್ರಳಯದವರೆಗೂ ಸ್ವರ್ಗದಲ್ಲಿ ವಾಸಿಸುವನು ; ಸಂದೇಹವಿಲ್ಲ. ತಂದೆಯಾದವನು ಪುತ್ರನ ಮರಣವನ್ನು ನೋಡುವುದಿಲ್ಲ. ಭಾರ್ಯಾವಿಯೋಗವಾಗಲಿ, ಧನಹಾನಿಯಾಗಲಿ, ದೇಶತ್ಯಾಗವಾಗಲಿ ಎಂದಿಗೂ ಆತನಿಗೆ ಒದಗದು.

೪೧. ಶ್ರೀಕೃಷ್ಣನಿಗೆ ಪ್ರಿಯವೆನಿಸಿದ ಕೃಷ್ಣಾಜಿನವನ್ನು ದೃಢಚಿತ್ತದಿಂದ ಬ್ರಾಹ್ಮಣೋತ್ತಮನಿಗೆ ದಾನಮಾಡಬೇಕು. ಆ ಮೃಗಕ್ಕೆ ಒದಗಿದ ಮರಣಕ್ಕಾಗಿ ದುಃಖಿಸಬಾರದು. ಇಂತಹ ದಾನಿಯು ಬಯಸಿದ ಕೋರಿಕೆಗಳೆಲ್ಲವನ್ನೂ ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕೃಷ್ಣಾಜಿನದ ದಾನದ ವಿಧಿಯನ್ನು ಹೇಳಿದೆ.

ಪರಿಶುದ್ಧವಾದ ಸ್ಥಳದಲ್ಲಿ ಕಂಬಳಿಯನ್ನು ಹರಡಿ ಅದರ ಮೇಲೆ ಕೃಷ್ಣಾಜಿನವನ್ನು ಹಾಸಿ, ಅದನ್ನು ಎಳ್ಳಿನಿಂದಲೂ ವಸ್ತ್ರದಿಂದಲೂ ಮುಚ್ಚಬೇಕು. ಮೃಗಚರ್ಮದ ಆಯಾ ಅವಯವಗಳನ್ನು ವಿಧ್ಯುಕ್ತವಾದ ರೀತಿಯಲ್ಲಿ ಶೃಂಗರಿಸಿ, ತುಪ್ಪ, ಜೇನು ಮುಂತಾದ ಪದಾರ್ಥಗಳನ್ನು ತುಂಬಿದ ಪಾತ್ರೆಗಳನ್ನು ನಾಲ್ಕು ಕಡೆಗಳಲ್ಲಿಯೂ ಇರಿಸಬೇಕು. ತರುವಾಯ ಶಾಸ್ತ್ರಜ್ಞನೂ ಆಹಿತಾಗ್ನಿಯೂ ಆದ ಬ್ರಾಹ್ಮಣನಿಗೆ ಅದನ್ನು ಮಂತ್ರಪೂರ್ವಕವಾಗಿ ದಾನಮಾಡಬೇಕು. ಬ್ರಾಹ್ಮಣರಿಗೆ ದಕ್ಷಿಣೆಯನ್ನಿತ್ತು ಅವರ ಆಶೀರ್ವಾದವನ್ನು ಪಡೆಯಬೇಕು. ಈ ದಾನದಿಂದ ಸಕಲ ಭೂಮಂಡಲವನ್ನೂ ಕೊಟ್ಟ ಪುಣ್ಯವು ಲಭಿಸುವುದು. ಶಾಶ್ವತವಾದ ಸದ್ಗತಿ ದೊರಕುವುದು. ಸಕಲವಿಧವಾದ ಇಷ್ಟಾರ್ಥಗಳೂ ಕೈಗೂಡುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕೃಷ್ಣಾಜಿನಪ್ರದಾನವೆಂಬ
ಇನ್ನೂರಾರನೆಯ ಅಧ್ಯಾಯವು ಮುಗಿದುದು



## ಅಥ ಸಪ್ತಾಧಿಕದ್ವಿಶತತಮೋಽಧ್ಯಾಯಃ

॥ ಮನುರುವಾಚ ॥

ಭಗವಞ್ಛ್ರೋತುಮಿಚ್ಛಾಮಿ ವೃಷಭಸ್ಯ ಚ ಲಕ್ಷಣಂ ।
ವೃಷೋತ್ಸರ್ಗವಿಧಿಂ ಚೈವ ತಥಾ ಪುಣ್ಯಫಲಂ ಮಹತ್ ॥ ೧ ॥

॥ ಮತ್ಸ್ಯ ಉವಾಚ ॥

ಧೇನುಮಾದೌ ಪರೀಕ್ಷೇತ ಸುಶೀಲಾಂ ಚ ಗುಣಾನ್ವಿತಾಂ ।
ಅವ್ಯಂಗಾಮಪರಿಕ್ಲಿಷ್ಟಾಂ ಜೀವವತ್ಸಾಮರೋಗಿಣೀಂ ॥ ೨ ॥

ಸ್ನಿಗ್ಧವರ್ಣಾಂ ಸ್ನಿಗ್ಧಖುರಾಂ ಸ್ನಿಗ್ಧಶೃಂಗೀಂ ತಥೈವ ಚ ।
ಮನೋಹರಾಕೃತಿಂ ಸೌಮ್ಯಾಂ ಸುಪ್ರಮಾಣಾಮನುದ್ಧತಾಂ ॥ ೩ ॥

ಆವರ್ತೈರ್ದಕ್ಷಿಣಾವರ್ತೈರ್ಯುಕ್ತಾಂ ದಕ್ಷಿಣತಸ್ತಥಾ ।
ವಾಮಾವರ್ತೈರ್ವಾಮತಶ್ಚ ವಿಸ್ತೀರ್ಣಜಘನಾಂ ತಥಾ ॥ ೪ ॥

---

೧. ಮನುಚಕ್ರವರ್ತಿ ಹೇಳಿದನು.—ದೇವಾ, ವೃಷಭದ ಲಕ್ಷಣವನ್ನೂ, ವೃಷೋತ್ಸರ್ಜನದ (ಗೂಳಿಯನ್ನು ಬಿಡುವ) ವಿಧಾನವನ್ನೂ, ಅದರಿಂದ ಬರುವ ಅತಿಶಯವಾದ ಪುಣ್ಯಫಲವನ್ನೂ ಕೇಳಬೇಕೆಂದು ಬಯಸುತ್ತೇನೆ.

೨-೮. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಮೊದಲು ಹಸುವನ್ನು ಪರೀಕ್ಷಿಸಬೇಕು. ಅದು ಒಳ್ಳೆಯ ನಡತೆಯೂ ಗುಣವೂ ಉಳ್ಳದಾಗಿರಬೇಕು. ಅದರ ಅಂಗದಲ್ಲಿ ನ್ಯೂನತೆಗಳಿರಬಾರದು. ಅದು ಆರೋಗ್ಯವಾಗಿದ್ದು ಅದರ ಕರುಗಳೆಲ್ಲ ಬದುಕಿರಬೇಕು. ಅದು ಕಷ್ಟಪಡುತ್ತಿರಬಾರದು. ಅದರ ಬಣ್ಣವು ಅಂದವಾಗಿಯೂ ಗೊರಸು ಮತ್ತು ಕೊಂಬುಗಳು ನುಣುಪಾಗಿಯೂ ಇರಬೇಕು. ಆಕಾರವು ಮನೋಹರವೂ, ಸೌಮ್ಯವೂ, ಪ್ರಮಾಣಾನುರೂಪವೂ

ಮೃದುಸಂಹತತಾಮ್ರೋಷ್ಠೀಂ ರಕ್ತಗ್ರೀವಾಂ ಸುಶೋಭಿತಾಂ ।
ಅಶ್ಯಾಮದೀರ್ಘಾ ಸ್ಫುಟಿತಾ ರಕ್ತಜಿಹ್ವಾ ತಥಾ ಚ ಯಾ ॥ ೫ ॥

ವಿಸ್ರಾವಾಮಲನೇತ್ರಾ ಚ ಶಫೈರವಿರಲೈರ್ದೃಢೈಃ ।
ವೈದೂರ್ಯಮಧುವರ್ಣೈಶ್ಚ ಜಲಬುದ್ಬುದಸಂನಿಭೈಃ ॥ ೬ ॥

ರಕ್ತಸ್ನಿಗ್ಧೈಶ್ಚ ನಯನೈಸ್ತಥಾ ರಕ್ತಕನೀನಕೈಃ ।
ಸಪ್ತಚತುರ್ದಶದಂತಾ ಚ ತಥಾ ವಾ ಶ್ಯಾಮತಾಲುಕಾ ॥ ೭ ॥

ಷಡುನ್ನತಾ ಸುಪಾರ್ಶ್ವೋರುಃ ಪೃಥುಪಂಚಸಮಾಯತಾ ।
ಅಷ್ಟಾಯತಶಿರೋಗ್ರೀವಾ ಯಾ ರಾರ್ಜ ಸಾ ಸುಲಕ್ಷಣಾ ॥ ೮ ॥

---

ಆಗಿರಬೇಕು. ಸ್ವಭಾವವೂ ಸಾಧುವಾಗಿರಬೇಕು. ಬಲಗಡೆಯಲ್ಲಿ ಸುಳಿಗಳು ಬಲಕ್ಕೆ ಸುತ್ತಿಕೊಂಡೂ, ಎಡಗಡೆಯಲ್ಲಿ ಎಡಕ್ಕೆ ತಿರುಗಿಕೊಂಡೂ ಇರಬೇಕು. ಪೃಷ್ಠಭಾಗವು ವಿಶಾಲವಾಗಿರಬೇಕು. ತುಟಿಗಳು ಕೋಮಲವಾಗಿಯೂ ಕೆಂಪಾಗಿಯೂ ಇದ್ದು ಒಂದರೊಡನೊಂದು ಸಂದುಬಿಡದೆ ಸೇರಿಕೊಳ್ಳುವಂತಿರಬೇಕು. ಕುತ್ತಿಗೆಯು ಕೆಂಪಗೆ ಅಂದವಾಗಿರಬೇಕು. ನಾಲಗೆ ಕಪ್ಪಿಲ್ಲದೆ ಉದ್ದವಾಗಿ, ಒಡೆಯದೆ ಕೆಂಪಾಗಿರಬೇಕು. ಗೊರಸುಗಳು ಸಂದುಬಿಟ್ಟುಕೊಂಡಿರದೆ ಒತ್ತಾಗಿಯೂ ಬಲವಾಗಿಯೂ ಇರಬೇಕು. ಕಣ್ಣುಗಳು ನೀರನ್ನು ಸುರಿಸುತ್ತಿರದೆ ನಿರ್ಮಲವಾಗಿರಬೇಕು. ರತ್ನದ ಮತ್ತು ಜೇನುತುಪ್ಪದ ಬಣ್ಣವನ್ನು ಹೋಲುತ್ತ ನೀರಿನ ಗುಳ್ಳೆಗಳಂತೆ ಹೊಳೆಯುತ್ತ ಮೂಲದಲ್ಲಿ ಕೆಂಪುಬಣ್ಣದಿಂದ ಕೂಡಿ ಸುಂದರವಾಗಿರಬೇಕು. ಕಡೆಗಣ್ಣುಗಳೂ ಕೂಡ ಕೆಂಪಗಿರಬೇಕು. ಕೆಳಗಡೆಯ ಸಾಲಿನಲ್ಲಿ ಏಳೂ, ಮೇಲ್ಗಡೆಯ ಸಾಲಿನಲ್ಲಿ ಹದಿನಾಲ್ಕೂ ಹಲ್ಲುಗಳಿರಬೇಕು. ಅವಯುವಗಳು ಶ್ಯಾಮವರ್ಣವಾಗಿರಬೇಕು. ಆರು ಸ್ಥಳಗಳು ಉನ್ನತವಾಗಿರಬೇಕು. ಪಾರ್ಶ್ವಗಳೂ ಎದೆಯೂ ಸುಂದರವಾಗಿರಬೇಕು. ಐದು ಸ್ಥಳಗಳು ಸಮವಾಗಿಯೂ ದೀರ್ಘವಾಗಿಯೂ ಇರಬೇಕು. ಎಂಟು ಸ್ಥಳಗಳು ವಿಸ್ತಾರವಾಗಿರಬೇಕು. ತಲೆಯೂ ಕೊರಳೂ ಅಗಲವಾಗಿರಬೇಕು. ಓ ರಾಜಾ, ಇಂತಹ ಹಸುವೇ ಸಲಕ್ಷಣವಾದುದು.

|| ಮನುರುವಾಚ ||

ಷಡುನ್ನತಾಃ ಕೇ ಭಗವನ್ ಕೇ ಚ ಪಂಚ ಸಮಾಯತಾಃ |
ಆಯತಾಶ್ಚ ತಥೈವಾಷ್ಟೌ ಧೇನೂನಾಂ ಕೇ ಶುಭಾವಹಾಃ || ೯ ||

|| ಮತ್ಸ್ಯ ಉವಾಚ ||

ಉರಃ ಪೃಷ್ಠಂ ಶಿರಃ ಕುಕ್ಷೀ ಶ್ರೋಣೀ ಚ ವಸುಧಾಧಿಪ |
ಷಡುನ್ನತಾನಿ ಧೇನೂನಾಂ ಪೂಜಯಂತಿ ವಿಚಕ್ಷಣಾಃ ||೧೦||

ಕರ್ಣೌ ನೇತ್ರೇ ಲಲಾಟಂ ಚ ಪಂಚ ಭಾಸ್ಕರನಂದನ |
ಸಮಾಯತಾನಿ ಶಸ್ಯಂತೇ ಪುಚ್ಛಂ ಸಾಸ್ನಾ ಚ ಸಕ್ಥಿನೀ ||೧೧||

ಚತ್ವಾರಶ್ಚ ಸ್ತನಾ ರಾಜಞ್ಜ್ಞೇಯಾ ಹ್ಯಷ್ಟೌ ಮನೀಷಿಭಿಃ |
ಶಿರೋ ಗ್ರೀವಾಯತಾಶ್ಚೈತೇ ಭೂಮಿಪಾಲ ದಶ ಸ್ಮೃತಾಃ ||೧೨||

---

೯. ಮನುಚಕ್ರವರ್ತಿ ಹೇಳಿದನು—ದೇವಾ, ಹಸುಗಳಿಗೆ ಉನ್ನತವಾಗಿರಬೇಕಾದ ಆರು ಸ್ಥಳಗಳು ಯಾವುವು? ಸಮವಾಗಿಯೂ ವಿಶಾಲವಾಗಿಯೂ ಇರಬೇಕಾದ ಐದುಪ್ರದೇಶಗಳು ಯಾವುವು? ಮತ್ತು ವಿಸ್ತಾರವಾಗಿರಬೇಕಾದ ಎಂಟು ಅವಯವಭಾಗಗಳು ಯಾವುವು.

೧೦. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಓ ರಾಜಾ, ಹಸುಗಳಿಗೆ ಎದೆ, ಬೆನ್ನು, ತಲೆ, ಹೊಟ್ಟೆ, ಹಿಂಗಡೆಗಳು ಎರಡು ಈ ಆರೂ ಉನ್ನತವಾಗಿದ್ದರೆ ಪ್ರಾಜ್ಞರು ಅವುಗಳನ್ನು ಗೌರವಿಸುವರು.

೧೧-೧೨. ಎರಡು ಕಿವಿಗಳು, ಎರಡು ಕಣ್ಣುಗಳು, ಹಣೆ ಈ ಐದೂ ಸಮವಾಗಿಯೂ ಅಗಲವಾಗಿಯೂ ಇರಬೇಕು. ಸೂರ್ಯಪುತ್ರನಾದ ಎಲೈ ಮನುಚಕ್ರವರ್ತೀ, ಬಾಲ, ಗಂಗೆದೊಗಲು, ತೊಡೆಗಳೆರಡು, ನಾಲ್ಕು ಸ್ತನಗಳು, ತಲೆ, ಕುತ್ತಿಗೆ ಈ ಹತ್ತು ಅವಯವಗಳೂ ದೀರ್ಘವಾಗಿರಬೇಕು.

ತಸ್ಯಾಃ ಸುತಂ ಪರೀಕ್ಷೇತ ವೃಷಭಂ ಲಕ್ಷಣಾನ್ವಿತಂ ।
ಉನ್ನತಸ್ಕಂಧಕಕುದಮೃಜುಲಾಂಗೂಲಕಂಬಲಂ ॥೧೩॥

ಮಹಾಕಟಿತಟಸ್ಕಂಧಂ ವೈಡೂರ್ಯಮಣಿಲೋಚನಂ ।
ಪ್ರವಾಲಗರ್ಭಶೃಂಗಾಗ್ರಂ ಸುದೀರ್ಘಪೃಥುವಾಲಧಿಂ ॥೧೪॥

ನವಾಷ್ಟಾದಶಸಂಖ್ಯೈರ್ವಾ ತೀಕ್ಷ್ಣಾಗ್ರೈರ್ದಶನೈಃ ಶುಭೈಃ ।
ಮಲ್ಲಿಕಾಕ್ಷಶ್ಚ ಮೋಕ್ತವ್ಯೋ ಗೃಹೇಽಪಿ ಧನಧಾನ್ಯದಃ ॥೧೫॥

ವರ್ಣತಸ್ತಾಮ್ರಕಪಿಲೋ ಬ್ರಾಹ್ಮಣಸ್ಯ ಪ್ರಶಸ್ಯತೇ ।
ಶ್ವೇತೋ ರಕ್ತಶ್ಚ ಕೃಷ್ಣಶ್ಚ ಗೌರಃ ಪಾಟಲ ಏವ ಚ ॥೧೬॥

---

೧೩-೧೫. ಇಂತಹ ಹಸುವಿನ ಹೊಟ್ಟೆಯಲ್ಲಿ ಹುಟ್ಟಿದ ಹೋರಿಯ ಲಕ್ಷಣಗಳನ್ನು ಪರೀಕ್ಷಿಸಬೇಕು. ಅದರ ಹಿಣಿಲೂ ಹೆಗಲೂ ಉನ್ನತವಾಗಿರಬೇಕು. ಬಾಲವು ಡೊಂಕಿಲ್ಲದೆ ನೇರವಾಗಿರಬೇಕು. ಸೊಂಟವೂ ಹೆಗ್ಗತ್ತೂ ದೊಡ್ಡವಾಗಿರಬೇಕು. ಕಣ್ಣು ವೈಡೂರ್ಯ ರತ್ನದಂತೆ ಹೊಳೆಯುತ್ತಿರಬೇಕು. ಕೊಂಬಿನ ತುದಿಯು ಹವಳದ ಒಳಭಾಗದ ಬಣ್ಣವಾಗಿರಬೇಕು. ಬಾಲವು ದಪ್ಪವಾಗಿಯೂ ಉದ್ದವಾಗಿಯೂ ಇರಬೇಕು. ಹಲ್ಲುಗಳು ಹರಿತವಾಗಿ ಮೇಲ್ಗಡೆ ಒಂಬತ್ತೂ ಕೆಳಗಡೆ ಹದಿನೆಂಟೂ ಇರಬೇಕು. ಕಣ್ಣುಗಳು ಮಲ್ಲಿಗೆಯ ಮೊಗ್ಗಿನಂತೆ ನೀಳವಾಗಿಯೂ ತುದಿಯಲ್ಲಿ ಚೂಪಾಗಿಯೂ ಇರಬೇಕು. ಇಂತಹ ಗೂಳಿಯನ್ನು ಬಿಡುವುದರಿಂದ ಮನೆಯಲ್ಲಿ ಧನಧಾನ್ಯಗಳು ಸಮೃದ್ಧಿಯಾಗುವುವು.

೧೬-೧೭. ಕೆಂಪು ಅಥವಾ ಗೋರೋಚನವರ್ಣದ ಹೋರಿಯು ಬ್ರಾಹ್ಮಣನಿಗೆ ಶ್ರೇಷ್ಠವಾದುದು. ಬಿಳುಪು, ಕೆಂಪು, ಕಪ್ಪು, ಹೊಂಬಣ್ಣ ಅಥವಾ ಮಾಸಲು ಕೆಂಪು ಬಣ್ಣವಾದರೂ ಆಗಬಹುದು. ಉದ್ದವಾದ ಕೊಂಬೂ, ಕೆಂಪಾದ ಬೆನ್ನೂ ಆಗಿ ಐದು ಬಣ್ಣದ ಕೂದಲುಗಳಿಂದ ಅಲ್ಲಲ್ಲಿ ಕೂಡಿರಬೇಕು. ಅಗಲವಾದ ಕಿವಿ, ದೊಡ್ಡ ಹೆಗಲು, ಒತ್ತಾದ ಕೂದಲು, ಕೆಂಪಾದ ಕಣ್ಣು ಮತ್ತು ಕೊಂಬುಗಳ

ಶೃಂಗಿಣಸ್ತಾಮ್ರಪೃಷ್ಠಶ್ಚ ಶಬಲಃ ಪಂಚವಾಲಕೈಃ ।
ಪೃಥುಕರ್ಣೋ ಮಹಾಸ್ಕಂಧಃ ಶ್ಲಕ್ಷ್ಣರೋಮಾ ಚ ಯೋ ಭವೇತ್ ॥೧೭॥

ಶ್ವೇತೋದರಃ ಕೃಷ್ಣಪಾರ್ಶ್ವೋ ಬ್ರಾಹ್ಮಣಸ್ಯ ತು ಶಸ್ಯತೇ ।
ಸ್ನಿಗ್ಧೋ ರಕ್ತೇನ ವರ್ಣೇನ ಕ್ಷತ್ರಿಯಸ್ಯ ಪ್ರಶಸ್ಯತೇ ॥೧೮॥

ಕಾಂಚನಾಭೇನ ವೈಶ್ಯಸ್ಯ ಕೃಷ್ಣೇನಾಪ್ಯಂತ್ಯಜನ್ಮನಃ ।
ಯಸ್ಯ ಪ್ರಾಗಾಯತೇ ಶೃಂಗೇ ತೂತ್ತರಾಭಿಮುಖೇ ಸದಾ ॥೧೯॥

ಸರ್ವೇಷಾಮೇವ ವರ್ಣಾನಾಂ ಸರ್ವಃ ಸರ್ವಾರ್ಥಸಾಧಕಃ ।
ಮಾರ್ಜಾರಪಾದಃ ಕಪಿಲೋ ಧನ್ಯಃ ಕಪಿಲಪಿಂಗಲಃ ॥೨೦॥

ಶ್ವೇತೋ ಮಾರ್ಜಾರಪಾದಸ್ತು ಧನ್ಯೋ ಮಣಿನಿಭೇಕ್ಷಣಃ ।
ಕರಟಃ ಪಿಂಗಲಶ್ಚೈವ ಶ್ವೇತಪಾದಸ್ತಥೈವ ಚ ॥೨೧॥

---

ಮೇಲ್ಮೈ, ಬಿಳಿಯ ಹೊಟ್ಟೆ, ಕರಿಯಪಾರ್ಶ್ವಗಳು ಇವುಗಳಿಂದ ಕಂಗೊಳಿಸುವ ಕಪಿಲವರ್ಣದ ವೃಷಭವು ಬ್ರಾಹ್ಮಣನಿಗೆ ಶ್ರೇಷ್ಠವಾದುದು.

೧೮-೧೯. ಕೆಂಪು ಬಣ್ಣದಿಂದ ಮಿಂಚುವತಹುದು ಕ್ಷತ್ರಿಯನಿಗೆ ಶ್ಲಾಘ್ಯವಾದುದು. ಹೊಂಬಣ್ಣವುಳ್ಳುದು ವೈಶ್ಯನಿಗೂ ಕಪ್ಪುಬಣ್ಣವುಳ್ಳುದು ಶೂದ್ರನಿಗೂ ಪ್ರಶಸ್ತವಾದುವು. ಕೊಂಬುಗಳು ಅಗಲವಾಗಿ ಮುಂದಕ್ಕೆ ಸ್ವಲ್ಪ ಬಗ್ಗಿ ಮೇಲ್ಗಡೆಗೆ ಬೆಳೆಯುತ್ತ ಹೋಗಬೇಕು. ಇಂತಹ ವೃಷಭವು ಸಕಲಮನೋರಥಗಳನ್ನೂ ಈಡೇರಿಸುವುದು. ಎಲ್ಲವರ್ಣದವರಿಗೂ ಇದು ಪ್ರಶಸ್ತವಾದುದು. ಇದಕ್ಕೆ ಸರ್ವವೆಂದು ಹೆಸರು.

೨೦-೨೧. ಮಾರ್ಜಾರದ ಪಾದದಂತೆ ಪಾದವೂ ಕಪಿಲವರ್ಣವೂ ಆದ ವೃಷಭವು ಧನ್ಯವೆನಿಸುವುದು. ಕಪಿಲ ಮತ್ತು ಪಿಂಗಲವರ್ಣಗಳು ಬೆರೆತಿದ್ದರೂ ಧನ್ಯವೇ. ಬೆಕ್ಕಿನ ಪಾದದಂತೆ ಪಾದವೂ ರತ್ನದಂತೆ ಹೊಳೆಯುವ ಕಣ್ಣುಗಳೂ ಇರುವ ಹೋರಿಯು ಇದೇ ಜಾತಿಗೆ ಸೇರಿದುದು. ಪಿಂಗಲವರ್ಣವೂ, ಬಿಳಿಯ ಕಾಲುಗಳೂ

**ಸರ್ವಪಾದಸಿತೋ ಯಶ್ಚ ದ್ವಿಪಾದಶ್ವೇತ ಏವ ಚ ।**
**ಕಪಿಂಜಲನಿಭೋ ಧನ್ಯಸ್ತಥಾ ತಿತ್ತಿರಿಸಂನಿಭಃ ॥೨೨॥**

**ಆಕರ್ಣಮೂಲಂ ಶ್ವೇತಂ ತು ಮುಖಂ ಯಸ್ಯ ಪ್ರಕಾಶತೇ ।**
**ನಂದೀಮುಖಃ ಸ ವಿಜ್ಞೇಯೋ ರಕ್ತವರ್ಣೋ ವಿಶೇಷತಃ ॥೨೩॥**

**ಶ್ವೇತಂ ತು ಜಠರಂ ಯಸ್ಯ ಭವೇತ್ಪೃಷ್ಠಂ ಚ ಗೋಪತೇಃ ।**
**ವೃಷಭಃ ಸ ಸಮುದ್ರಾಕ್ಷಃ ಸತತಂ ಕುಲವರ್ಧನಃ ॥೨೪॥**

**ಮಲ್ಲಿಕಾಪುಷ್ಪಚಿತ್ರಶ್ಚ ಧನ್ಯೋ ಭವತಿ ಪುಂಗವಃ ।**
**ಕಮಲೈರ್ಮಂಡಲೈಶ್ಚಾಪಿ ಚಿತ್ರೋ ಭವತಿ ಭಾಗ್ಯದಃ ॥೨೫॥**

**ಅತಸೀಪುಷ್ಪವರ್ಣಶ್ಚ ತಥಾ ಧನ್ಯತರಃ ಸ್ಮೃತಃ ।**
**ಏತೇ ಧನ್ಯಾಸ್ತಥಾಽಧನ್ಯಾನ್ ಕೀರ್ತಯಿಷ್ಯಾಮಿ ತೇ ನೃಪ ॥೨೬॥**

---

ಉಳ್ಳ ವೃಷಭವನ್ನು ಕರಟವೆನ್ನುವರು. ಕಾಲುಗಳೆಲ್ಲ ಬಿಳುಪಾಗಿರಲಿ ಅಥವಾ ಎರಡು ಮಾತ್ರ ಹಾಗಿರಲಿ, ಕಪಿಂಜಲ ಇಲ್ಲವೇ ತಿತ್ತಿರಿ ಪಕ್ಷಿಯ ಬಣ್ಣವನ್ನು ಮೈ ಬಣ್ಣವು ಹೋಲುತ್ತಿರಲಿ ಅಂತಹ ಹೋರಿಯನ್ನು ಸಹ ಧನ್ಯವೆಂದು ಹೇಳುತ್ತಾರೆ.

೨೩. ಕಿವಿಯ ಬುಡದವರೆಗೆ ಮುಖವು ಬಿಳುಪಾಗಿದ್ದು ಉಳಿದ ಭಾಗವೆಲ್ಲ ವಿಶೇಷವಾಗಿ ಕೆಂಪಗಿದ್ದರೆ ಆ ವೃಷಭವನ್ನು ನಂದೀಮುಖವೆನ್ನುತ್ತಾರೆ.

೨೪. ಹೊಟ್ಟೆಯೂ ಬೆನ್ನೂ ಬೆಳ್ಳಗಿರುವ ಹೋರಿಯನ್ನು ಸಮುದ್ರಾಕ್ಷವೆಂದು ಹೇಳುತ್ತಾರೆ. ಅದು ವಂಶವನ್ನು ಅಭಿವೃದ್ಧಿಗೊಳಿಸುವಂತಹುದು.

೨೫. ಮಲ್ಲಿಗೆಯ ಹೂವಿನ ಆಕಾರದ ಚುಕ್ಕಿಗಳಿಂದ ಕೂಡಿದ ವೃಷಭವು ಧನ್ಯವೆನಿಸಿಕೊಳ್ಳುತ್ತದೆ. ಕಮಲದ ಆಕಾರವಾದ ಗುಂಡುಚುಕ್ಕಿಗಳಿಂದ ಕಂಗೊಳಿಸುವ ವೃಷಭಕ್ಕೆ ಚಿತ್ರವೆಂದು ಹೆಸರು. ಅದು ಭಾಗ್ಯವನ್ನು ಕೊಡುತ್ತದೆ.

೨೬. ಅಗಸೇ ಹೂವಿನ ಬಣ್ಣವುಳ್ಳ ಹೋರಿಯನ್ನು ಧನ್ಯತರವೆನ್ನುತ್ತಾರೆ. ಓ ರಾಜಾ, ಇಲ್ಲಿಯವರೆಗೆ ಪ್ರಶಸ್ತವಾದ ವೃಷಭಗಳ ಜಾತಿಯನ್ನು ಹೇಳಿದುದಾಯಿತು. ಇನ್ನು ಮುಂದೆ ನಿಷಿದ್ಧವಾದ ಲಕ್ಷಣಗಳುಳ್ಳ ವೃಷಭಗಳನ್ನೆಲ್ಲ ಹೇಳುತ್ತೇನೆ ಕೇಳು.

ಕೃಷ್ಣತಾಲ್ವೋಷ್ಠವದನಾ ರೂಕ್ಷಶೃಂಗಶಫಾಶ್ಚ ಯೇ ।
ಅವ್ಯಕ್ತವರ್ಣಾ ಹ್ರಸ್ವಾಶ್ಚ ವ್ಯಾಘ್ರಸಿಂಹನಿಭಾಶ್ಚ ಯೇ ॥೨೭॥

ಧ್ವಾಂಕ್ಷಗೃಧ್ರಸವರ್ಣಾಶ್ಚ ತಥಾ ಮೂಷಕಸಂನಿಭಾಃ ।
ಕುಬ್ಜಾಃ ಕಾಣಾಸ್ತಥಾ ಖಂಜಾಃ ಕೇಕರಾಕ್ಷಾಸ್ತಥೈವ ಚ ॥೨೮॥

ವಿಷಮಶ್ವೇತಪಾದಾಶ್ಚ ಉದ್ಭ್ರಾಂತನಯನಾಸ್ತಥಾ ।
ನೈತೇ ವೃಷಾಃ ಪ್ರಮೋಕ್ತವ್ಯಾ ನ ಚ ಧಾರ್ಯಾಸ್ತಥಾ ಗೃಹೇ ॥೨೯॥

ಮೋಕ್ತವ್ಯಾನಾಂ ಚ ಧಾರ್ಯಾಣಾಂ ಭೂಯೋ ವಕ್ಷ್ಯಾಮಿ ಲಕ್ಷಣಂ ।
ಸ್ವಸ್ತಿಕಾಕಾರಶೃಂಗಾಶ್ಚ ತಥಾ ಮೇಘೌಘನಿಸ್ವನಾಃ ॥೩೦॥

ಮಹಾಪ್ರಮಾಣಾಶ್ಚ ತಥಾ ಮತ್ತಮಾತಂಗಗಾಮಿನಃ ।
ಮಹೋರಸ್ಕಾ ಮಹೋಚ್ಛ್ರಾಯಾ ಮಹಾಬಲಪರಾಕ್ರಮಾಃ ।
ಶಿರಃ ಕರ್ಣೌ ಲಲಾಟಂ ಚ ವಾಲಧಿಶ್ಚರಣಾಸ್ತಥಾ ॥೩೧॥

---

೨೭-೨೯. ಈ ಮುಂದೆ ಹೇಳುವ ಲಕ್ಷಣಗಳುಳ್ಳ ವೃಷಭಗಳನ್ನು ಬಿಡಬಾರದು. ಅವುಗಳನ್ನು ಮನೆಯಲ್ಲಿ ಇಟ್ಟುಕೊಳ್ಳಲೂ ಬಾರದು. ಅಂಗಗಳು, ತುಟಿ, ಬಾಯಿ ಇವು ಕಪ್ಪಗಿರತಕ್ಕುವು; ಕೊಂಬೂ ಗೊರಸೂ ಒರಟಾಗಿರತಕ್ಕುವು; ಇಂತಹುವೇ ಸರಿಯೆಂದು ಗೊತ್ತಾಗಿ ಹೇಳುವುದಕ್ಕೆ ಬಾರದ ಮೈಬಣ್ಣದವು; ಹುಲಿ, ಸಿಂಹ, ಕಾಗೆ, ಹದ್ದು ಇವುಗಳ ಬಣ್ಣದಲ್ಲಿ ಇರತಕ್ಕುವು; ಕುಳ್ಳು, ಕುರುಡು, ಮುಂತಾದ ನ್ಯೂನತೆಗಳಿಂದ ಕೂಡಿದಂತಹುವು; ಒಂದೇ ಸಮನಾಗಿಲ್ಲದ ಬಿಳಿಯ ಕಾಲಿನವು; ಗರಗರನೆ ಕಣ್ಣಿನ ಗುಡ್ಡೆ ತಿರುಗುವಂತಹುವು; ಇಂತಹ ಹೋರಿಗಳು ಪ್ರಶಸ್ತವಲ್ಲ.

೩೦-೩೭. ಬಿಡುವುದಕ್ಕೆ ಅರ್ಹವಾದ, ಮನೆಯಲ್ಲಿ ಇಟ್ಟುಕೊಳ್ಳುವುದಕ್ಕೆ ತಕ್ಕ ವೃಷಭಗಳ ಲಕ್ಷಣವನ್ನು ಮತ್ತೆ ಹೇಳುತ್ತೇನೆ ಕೇಳು. ಅವುಗಳ ಕೊಂಬುಗಳು ಸ್ವಸ್ತಿಕಾಕಾರವಾಗಿರಬೇಕು; ಎಂದರೆ ಮೇಲಕ್ಕೆ ಹೋಗುತ್ತ ಹೋಗುತ್ತ ಒಂದೇ ಮಟ್ಟದಲ್ಲಿ ಕ್ರಮವಾಗಿ ಅಗಲವಾಗಬೇಕು. ಧ್ವನಿ ಗುಡುಗಿನಂತಿರಬೇಕು. ಆಕಾರವು ದೊಡ್ಡದಾಗಿರಬೇಕು. ನಡಗೆಯು ಮದವೇರಿದ ಆನೆಯ ನಡಗೆಯನ್ನು ಹೋಲುತ್ತಿರಬೇಕು. ಎದೆಯು ವಿಶಾಲವಾಗಿರಬೇಕು. ಆ ವೃಷಭವು ಉನ್ನತ

**ನೇತ್ರೇ ಪಾರ್ಶ್ವೇ ಚ ಕೃಷ್ಣಾನಿ ಶಸ್ಯಂತೇ ಚಂದ್ರಭಾಸಿನಾಂ ।**
**ಶ್ವೇತಾನ್ಯೇತಾನಿ ಶಸ್ಯಂತೇ ಕೃಷ್ಣಸ್ಯ ತು ವಿಶೇಷತಃ ॥೩೨॥**

**ಭೂಮೌ ಕರ್ಷತಿ ಲಾಂಗೂಲಂ ಪ್ರಲಂಬಸ್ಥೂಲವಾಲಧಿಃ ।**
**ಪುರಸ್ತಾದುದ್ಯತೋ ನೀಲೋ ವೃಷಭಶ್ಚ ಪ್ರಶಸ್ಯತೇ ॥೩೩॥**

**ಶಕ್ತಿಧ್ವಜಪತಾಕಾಢ್ಯಾ ಯೇಷಾಂ ರಾಜೀ ವಿರಾಜತೇ ।**
**ಅನಡ್ವಾಹಸ್ತು ತೇ ಧನ್ಯಾಶ್ಚಿತ್ರಸಿದ್ಧಿಜಯಾವಹಾಃ ॥೩೪॥**

**ಪ್ರದಕ್ಷಿಣಂ ನಿರ್ವರ್ತಂತೇ ಸ್ವಯಂ ಯೇ ವಿನಿವರ್ತಿತಾಃ ।**
**ಸಮುನ್ನತಶಿರೋಗ್ರೀವಾ ಧನ್ಯಾಸ್ತೇ ಯೂಥವರ್ಧನಾಃ ॥೩೫॥**

**ರಕ್ತಶೃಂಗಾಗ್ರನಯನಃ ಶ್ವೇತವರ್ಣೋ ಭವೇದ್ಯದಿ ।**
**ಶಫೈಃ ಪ್ರವಾಲಸದೃಶೈರ್ನಾಸ್ತಿ ಧನ್ಯತರಸ್ತತಃ ॥೩೬॥**

---

ವಾಗಿಯೂ ಪರಾಕ್ರಮಶಾಲಿಯಾಗಿಯೂ ಇರಬೇಕು. ಅದರ ಬಣ್ಣವು ಬಿಳುಪಾಗಿದ್ದರೆ ತಲೆ, ಕಿವಿ, ಹಣೆ, ಬಾಲ, ಕಾಲು, ಕಣ್ಣು, ಪಾರ್ಶ್ವ ಇವು ಕಪ್ಪಗೂ, ಮೈ ಕಪ್ಪಗಿದ್ದರೆ ಇವು ಬೆಳ್ಳಗೂ ಇರಬೇಕು. ಇದು ಒಳ್ಳೆಯ ಲಕ್ಷಣ.

೩೩. ಬಾಲವು ನೆಲವನ್ನು ಸೋಕುವ, ತುದಿಯ ಕೂದಲಿನ ಗೊಂಚಲು ದಪ್ಪವಾಗಿ ಜೋಲಾಡುವ, ಮುಂದುಗಡೆ ಎತ್ತರವಾಗಿ ಗಂಭೀರವಾಗಿ ಕಾಣುವ ನೀಲವರ್ಣದ ಹೋರಿಯೂ ಸಹ ಶ್ಲಾಘ್ಯವಾದದು.

೩೪. ಶಕ್ತ್ಯಾಯುಧ, ಧ್ವಜಪತಾಕೆ ಮುಂತಾದ ಶುಭಚಿಹ್ನೆಗಳಿಂದ ಪ್ರಕಾಶಿಸುವ ವೃಷಭಗಳು ಶ್ರೇಷ್ಠವಾದುವು. ಅವು ಅದ್ಭುತವಾದ ಕಾರ್ಯಸಿದ್ಧಿಯನ್ನೂ ಜಯವನ್ನೂ ಕೊಡುವುವು.

೩೫. ಹಿಮ್ಮೆಟ್ಟಿಸಿದಾಗ ತಾವಾಗಿಯೇ ಪ್ರದಕ್ಷಿಣವಾಗಿ ಹಿಂದಿರುಗುವ, ತಲೆಯೂ ಕತ್ತೂ ಎತ್ತರವಾಗಿರುವ ಹೋರಿಗಳು ಉತ್ತಮವಾದುವು.

೩೬. ಮೈಯೆಲ್ಲ ಬಿಳುಪಾಗಿದ್ದು, ಕೊಂಬಿನ ತುದಿಯೂ ಕಣ್ಣೂ ಕೆಂಪಾಗಿ, ಗೊರಸುಗಳು ಹವಳದಂತೆ ಇದ್ದರೆ ಅದಕ್ಕಿಂತ ಶ್ರೇಷ್ಠವಾದ ವೃಷಭವು ಮತ್ತೊಂದು ದೊರೆಯಲಾರದು.

ಏತೇ ಧಾರ್ಯಾಃ ಪ್ರಯತ್ನೇನ ಮೋಕ್ತವ್ಯಾ ಯದಿ ವಾ ವೃಷಾಃ ।
ಧಾರಿತಾಶ್ಚ ತಥಾ ಮುಕ್ತಾ ಧನಧಾನ್ಯವಿವರ್ಧನಾಃ ॥೩೭॥

ಚರಣಾನಿ ಮುಖಂ ಪುಚ್ಛಂ ಯಸ್ಯ ಶ್ವೇತಾನಿ ಗೋಪತೇಃ ।
ಲಾಕ್ಷಾರಸಸವರ್ಣಶ್ಚ ತಂ ನೀಲಮಿತಿ ನಿರ್ದಿಶೇತ್ ॥೩೮॥

ವೃಷ ಏವ ಸ ಮೋಕ್ತವ್ಯೋ ನ ಸಂಧಾರ್ಯೋ ಗೃಹೇ ಭವೇತ್ ।
ತದರ್ಥಮೇಷಾ ಚರತೇ ಲೋಕೇ ಗಾಥಾ ಪುರಾತನೀ ॥೩೯॥

ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಗೌರೀಮುದ್ವಾಹಯೇತ್ಕನ್ಯಾಂ ನೀಲಂ ವಾ ವೃಷಮುತ್ಸೃಜೇತ್ಽ ॥೪೦॥

ಏವಂ ವೃಷಂ ಲಕ್ಷಣಸಂಪ್ರಯುಕ್ತಂ
ಗೃಹೋದ್ಭವಂ ಕ್ರೀತಮಥಾಪಿ ರಾಜನ್ ।

---

೩೭. ಮನೆಯಲ್ಲಿ ಸಾಕಬೇಕಾದರೂ ಅಥವಾ ಶಾಸ್ತ್ರೋಕ್ತವಾದ ರೀತಿಯಲ್ಲಿ ಬಿಡಬೇಕಾದರೂ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ ವೃಷಭಗಳನ್ನು ಪ್ರಯತ್ನದಿಂದ ಸಂಪಾದಿಸಬೇಕು. ಇಂತಹವುಗಳನ್ನು ಸಾಕಲಿ, ಗೂಳಿಬಿಡಲಿ ಧನಧಾನ್ಯಗಳು ಸಮೃದ್ಧವಾಗುವುವು.

೩೮. ಕಾಲುಗಳು, ಬಾಲ, ಮುಖ ಇವೆಲ್ಲವೂ ಬೆಳ್ಳಗಿದ್ದು ಮೈ ಅರಗಿನ ಬಣ್ಣವಾಗಿದ್ದರೆ ಆ ಹೋರಿಯನ್ನು ನೀಲವೆಂದು ಕರೆಯುತ್ತಾರೆ.

೩೯. ಈ ಲಕ್ಷಣಗಳುಳ್ಳ ಹೋರಿಯನ್ನು ಬಿಟ್ಟೇಬಿಡಬೇಕು. ಮನೆಯಲ್ಲಿ ಇಟ್ಟುಕೊಳ್ಳಬಾರದು. ಆದಕಾರಣದಿಂದಲೇ ಈ ಪುರಾತನವಾದ ಗಾದೆ ಲೋಕದಲ್ಲಿ ಬಳಕೆಯಾಗಿದೆ.

೪೦. "ಅನೇಕಜನ ಮಕ್ಕಳು ಹುಟ್ಟಲೆಂದು ಬಯಸಬೇಕು. ಏಕೆಂದರೆ ಅವರಲ್ಲಿ ಒಬ್ಬನಾದರೂ ಗಯಾಕ್ಷೇತ್ರಕ್ಕೆ ಹೋಗಿ ಪಿಂಡವನ್ನು ಹಾಕಿಯಾನು. ತನ್ನ ಮಗಳಿಗೆ ಎಂಟುವರ್ಷವಾಗಿರುವಾಗಲೇ ಮದುವೆಯನ್ನು ಮಾಡಿಯಾನು. ಅಥವಾ ನೀಲವೃಷಭವನ್ನು ಗೂಳಿಬಿಟ್ಟಾನು.''

೪೧. ಓ ರಾಜಾ, ಈ ಬಗೆಯ ಲಕ್ಷಣಗಳಿಂದ ಕೂಡಿದ ಹೋರಿಯನ್ನು —ಅದು ಮನೆಯಲ್ಲಿ ಹುಟ್ಟಿದುದಾಗಿರಲಿ ಬೆಲೆಗೆ ಕೊಂಡುದಾಗಿರಲಿ—ಗೂಳಿಬಿಡುವ

**ಮುಕ್ತ್ವಾ ನ ಶೋಚೇನ್ಮರಣಂ ಮಹಾತ್ಮಾ**
**ಮೋಕ್ಷಂ ಗತಶ್ಚಾಹಮತೋಽಭಿಧಾಸ್ಯೇ** ||೪೧||

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ವೃಷಲಕ್ಷಣಂ ನಾಮ ಸಪ್ತಾಧಿಕದ್ವಿಶತತಮೋಽಧ್ಯಾಯಃ**

---

ಮಹಾತ್ಮನು ಮರಣಕ್ಕಾಗಿ ದುಃಖಿಸಬೇಕಾಗಿಲ್ಲ. ಆತನಿಗೆ ಮೋಕ್ಷವು ಕೈಸೇರಿದಂತೆಯೇ ಭಾವಿಸಬೇಕು. ಆದುದರಿಂದಲೇ ನಾನು ಇಷ್ಟುವಿಧವಾಗಿ ಒತ್ತಿ ಒತ್ತಿ ಹೇಳುತ್ತಿದ್ದೇನೆ.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಗೂಳಿಬಿಡುವುದಕ್ಕೆ ತಕ್ಕ ಹೋರಿಯ ಲಕ್ಷಣವನ್ನು ಹೇಳಿದೆ.

ಮೊತ್ತಮೊದಲು ಹಸುವನ್ನು ಪರೀಕ್ಷಿಸಬೇಕು. ಅದು ಎಲ್ಲ ಬಗೆಯ ಸಲ್ಲಕ್ಷಣಗಳಿಂದಲೂ ಕೂಡಿರಬೇಕು. ಅನಂತರ ಅದರ ಹೊಟ್ಟೆಯಲ್ಲಿ ಹುಟ್ಟಿದ ಹೋರಿಗಳಲ್ಲಿ ಉತ್ತಮವಾದುದನ್ನು ಆರಿಸಬೇಕು. ಗೂಳಿಬಿಡುವ ವೃಷಭದ ಮೈ ಬಣ್ಣ, ಕೊಂಬು, ಕಣ್ಣು, ಮುಖ, ನಾಲಗೆ, ಗೊರಸು, ಬಾಲ ಇವೆಲ್ಲಕ್ಕೂ ನಿರ್ದಿಷ್ಟವಾದ ಲಕ್ಷಣಗಳುಂಟು. ಅಲ್ಲದೆ ನಾಲ್ಕು ವರ್ಣದವರೂ ಬೇರೆ ಬೇರೆ ಲಕ್ಷಣದ ಗೂಳಿಗಳನ್ನು ಬಿಡಬೇಕು. ಈ ವೃಷೋತ್ಸರ್ಜನದಿಂದ ಪಿತೃಗಳಿಗೆ ಅನಂತವಾದ ತೃಪ್ತಿಯುಂಟಾಗುವುದು. ಯಜಮಾನನಿಗೆ ಮೋಕ್ಷವು ನಿಸ್ಸಂಶಯವಾಗಿ ಲಭಿಸುವುದು.

ಶ್ರೀಮತ್ಸ್ಯಮಹಾಪುರಾಣದಲ್ಲಿ ವೃಷಭಲಕ್ಷಣವೆಂಬ ಇನ್ನೂರೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಾಧಿಕದ್ವಿಶತತಮೋಽಧ್ಯಾಯಃ

॥ ಸೂತ ಉವಾಚ ॥

ತತಃ ಸ ರಾಜಾ ದೇವೇಶಂ ಪಪ್ರಚ್ಛಾಮಿತವಿಕ್ರಮಃ ।
ಪತಿವ್ರತಾನಾಂ ಮಾಹಾತ್ಮ್ಯಂ ತತ್ಸಂಬದ್ಧಾಂ ಕಥಾಮಪಿ ॥ ೧ ॥

॥ ಮನುರುವಾಚ ॥

ಪತಿವ್ರತಾನಾಂ ಕಾ ಶ್ರೇಷ್ಠಾ ಕಯಾ ಮೃತ್ಯುಃ ಪರಾಜಿತಃ ।
ನಾಮಸಂಕೀರ್ತನಂ ಕಸ್ಯಾಃ ಕೀರ್ತನೀಯಂ ಸದಾ ನರೈಃ ।
ಸರ್ವಪಾಪಕ್ಷಯಕರಮಿದಾನೀಂ ಕಥಯಸ್ವ ಮೇ ॥ ೨ ॥

॥ ಮತ್ಸ್ಯ ಉವಾಚ ॥

ನೈಲೋಮ್ಯಂ ಧರ್ಮರಾಜೋಽಪಿ ನಾಚರತ್ಯಥ ಯೋಷಿತಾಂ ।
ಪತಿವ್ರತಾನಾಂ ಧರ್ಮಜ್ಞ ಪೂಜ್ಯಾಸ್ತಸ್ಯಾಪಿ ತಾಃ ಸದಾ ॥ ೩ ॥

---

೧. ಸೂತಪೌರಾಣಿಕನು ಹೇಳಿದನು.—ಬಳಿಕ ಅಪರಿಮಿತಪರಾಕ್ರಮಿಯಾದ ಮನುಚಕ್ರವರ್ತಿಯು ಪತಿವ್ರತೆಯರ ಮಾಹಾತ್ಮ್ಯವನ್ನೂ ಅದಕ್ಕೆ ಸಂಬಂಧಪಟ್ಟ ಕಥೆಯನ್ನೂ ಕುರಿತು ಪ್ರಶ್ನಿಸಿದನು.

೨. ಮನುಚಕ್ರವರ್ತಿ ಹೇಳಿದನು.—ಪತಿವ್ರತೆಯರಲ್ಲಿ ಶ್ರೇಷ್ಠಳಾದವಳು ಯಾರು? ಯಾವಾಕೆಗೆ ಮೃತ್ಯು ಸೋತನು? ಪಾಪನಾಶಕವಾದ ಯಾವಳ ದಿವ್ಯನಾಮವನ್ನು ಮನುಷ್ಯರು ಸದಾ ಜಪಿಸಬೇಕು? ಈ ವೃತ್ತಾಂತವನ್ನು ನನಗೆ ತಿಳಿಯಹೇಳು.

೩. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಪತಿವ್ರತೆಯರಾದ ಸ್ತ್ರೀಯರಿಗೆ ಯಮಧರ್ಮರಾಜನೂ ಸಹ ವಿರೋಧವನ್ನು ಮಾಡಲಾರನು. ಅವರು ಅವನಿಗೂ ಕೂಡ ನಿತ್ಯವೂ ಪೂಜಾರ್ಹರಾಗಿರುವರು.

**ಅತ್ರ ತೇ ವರ್ಣಯಿಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।**
**ಯಥಾ ವಿಮೋಕ್ಷಿತೋ ಭರ್ತಾ ಮೃತ್ಯುಪಾಶಗತಃ ಸ್ತ್ರಿಯಾ || ೪ ||**

**ಮದ್ರೇಷು ಶಾಕಲೋ ರಾಜಾ ಬಭೂವಾಶ್ವಪತಿಃ ಪುರಾ ।**
**ಅಪುತ್ರಸ್ತಪ್ಯಮಾನೋಽಸೌ ಪುತ್ರಾರ್ಥೀ ಸರ್ವಕಾಮದಾಂ || ೫ ||**

**ಆರಾಧಯತಿ ಸಾವಿತ್ರೀಂ ಲಕ್ಷಿತೋಽಸೌ ದ್ವಿಜೋತ್ತಮೈಃ ।**
**ಸಿದ್ಧಾರ್ಥಕೈರ್ಹೂಯಮಾನಾಂ ಸಾವಿತ್ರೀಂ ಪ್ರತ್ಯಹಂ ದ್ವಿಜೈಃ || ೬ ||**

**ಶತಸಂಖ್ಯೈಶ್ಚತುರ್ಥ್ಯಾಂ ತು ದಶಮಾಸಗತೇ ದಿನೇ ।**
**ಕಾಲೇ ತು ದರ್ಶಯಾಮಾಸ ಸ್ವಾಂ ತನುಂ ಮನುಜೇಶ್ವರ || ೭ ||**

**|| ಸಾವಿತ್ರ್ಯುವಾಚ ||**

**ರಾಜನ್ ಭಕ್ತೋಽಸಿ ಮೇ ನಿತ್ಯಂ ದಾಸ್ಯಾಮಿ ತ್ವಾಂ ಸುತಾಂ ಸದಾ ।**
**ತಾಂ ದತ್ತಾಂ ಮತ್ಪ್ರಸಾದೇನ ಪುತ್ರೀಂ ಪ್ರಾಪ್ಸ್ಯಸಿ ಶೋಭನಾಂ || ೮ ||**

---

೪. ಯಮನ ಪಾಶಕ್ಕೆ ಕಟ್ಟುಬಿದ್ದಿದ್ದ ಪತಿಯನ್ನು ಪತ್ನಿಯು ಹೇಗೆ ಬಿಡಿಸಿದಳೆಂಬ ವಿಚಾರವನ್ನು ಕುರಿತು ನಿನಗೆ ಕಥೆಯೊಂದನ್ನು ಹೇಳುವೆನು. ಅದು ಪಾಪವನ್ನು ಪರಿಹರಿಸುವ ಪವಿತ್ರವಾದ ಉಪಾಖ್ಯಾನ.

೫. ಶಕಲವಂಶೋದ್ಭವನಾದ ಅಶ್ವಪತಿಯೆಂಬ ರಾಜನು ಪೂರ್ವದಲ್ಲಿ ಮದ್ರದೇಶವನ್ನು ಆಳುತ್ತಿದ್ದನು. ಆತನು ಸಂತಾನವಿಲ್ಲದೆ ದುಃಖಿಸುತ್ತ ಬ್ರಾಹ್ಮಣೋತ್ತಮರ ಉಪದೇಶದಂತೆ ಸಕಲ ಮನೋರಥಗಳನ್ನೂ ಈಡೇರಿಸುವ ಸಾವಿತ್ರಿಯನ್ನು ಪೂಜಿಸಿದನು.

೬-೭. ನೂರುಮಂದಿ ಬ್ರಾಹ್ಮಣರು ಸಾವಿತ್ರೀದೇವಿಯ ಪ್ರೀತ್ಯರ್ಥವಾಗಿ ಸಾಸುವೆಕಾಳಿನಿಂದ ಪ್ರತಿದಿನವೂ ಹೋಮಮಾಡುತ್ತಿದ್ದರು. ಹತ್ತು ತಿಂಗಳು ಕಳೆದ ತರುವಾಯ ಚತುರ್ಥಿಯದಿನ ಸಾವಿತ್ರಿಯು ಅಶ್ವಪತಿ ರಾಜನಿಗೆ ತನ್ನ ದಿವ್ಯರೂಪ ದಿಂದ ಪ್ರತ್ಯಕ್ಷಳಾದಳು.

೮. ಸಾವಿತ್ರಿ ಹೇಳಿದಳು.—ಓ ರಾಜಾ, ನೀನು ಯಾವಾಗಲೂ ನನ್ನ ಭಕ್ತನಾಗಿರುವೆ. ನಿನಗೊಬ್ಬಳು ಮಗಳನ್ನು ಕರುಣಿಸುವೆನು. ನನ್ನ ಅನುಗ್ರಹದ ಫಲವಾಗಿ ಶುಭಲಕ್ಷಣಗಳಿಂದ ತುಂಬಿದ ಪುತ್ರಿಯನ್ನು ನೀನು ಪಡೆಯುವೆ.

ಏತಾವದುಕ್ತ್ವಾ ಸಾ ರಾಜ್ಞಃ ಪ್ರಣತಸ್ಯೈವ ಪಾರ್ಥಿವ ।
ಜಗಾಮಾದರ್ಶನಂ ದೇವೀ ಯಥಾ ವೈ ನೃಪ ಚಂಚಲಾ ॥ ೯ ॥

ಮಾಲತೀ ನಾಮ ತಸ್ಯಾಸೀದ್ರಾಜ್ಞಃ ಪತ್ನೀ ಪತಿವ್ರತಾ ।
ಸುಷುವೇ ತನಯಾಂ ಕಾಲೇ ಸಾವಿತ್ರೀಮಿವ ರೂಪತಃ ॥೧೦॥

ಸಾವಿತ್ರ್ಯಾ ಪ್ರೀತಯಾ ದತ್ತಾ ತದ್ರೂಪಸದೃಶೀ ತಥಾ ।
ಸಾವಿತ್ರೀ ಚ ಭವತ್ವೇಷಾ ಜಗಾದ ನೃಪತಿರ್ದ್ವಿಜಾನ್ ॥೧೧॥

ನಾಮಾಕುರ್ವನ್ದ್ವಿಜಶ್ರೇಷ್ಠಾಃ ಸಾವಿತ್ರೀತಿ ನೃಪೋತ್ತಮ ।
ಕಾಲೇನ ಯೌವನಂ ಪ್ರಾಪ್ತಾ ದದೌ ಸತ್ಯವತೇ ಪಿತಾ ।
ನಾರದಸ್ತು ತತಃ ಪ್ರಾಹ ರಾಜಾನಂ ದೀಪ್ತತೇಜಸಂ ॥೧೨॥

---

೯ ಎಲೈ ಭೂಪಾಲಕಾ. ದೇವಿಯು ಇಷ್ಟುಮಾತ್ರ ಹೇಳಿ ರಾಜನು ನಮಸ್ಕಾರಮಾಡುತ್ತಿದ್ದಂತೆಯೇ ಮಿಂಚಿನ ಹಾಗೆ ಅದೃಶ್ಯಳಾದಳು.

೧೦. ಪತಿವ್ರತೆಯಾದ ಮಾಲತಿಯೆಂಬ ಆ ರಾಜನ ಪತ್ನಿಯು ಕಾಲ ಕಳೆದ ಬಳಿಕ ರೂಪದಲ್ಲಿ ಸಾವಿತ್ರಿಯನ್ನೇ ಹೋಲುವ ಹೆಣ್ಣುಮಗುವನ್ನು ಹೆತ್ತಳು.

೧೧. "ಸಾವಿತ್ರೀದೇವಿಯು ನನ್ನಲ್ಲಿ ಪ್ರೀತಳಾಗಿ ಈ ಮಗುವನ್ನು ಕರುಣಿಸಿದಳು. ರೂಪದಲ್ಲಿ ಇದು ಅವಳನ್ನೇ ಹೋಲುವುದು. ಆದಕಾರಣ ಇದಕ್ಕೆ ಸಾವಿತ್ರಿಯೆಂದೇ ಹೆಸರಾಗಲಿ" ಎಂದು ರಾಜನು ಬ್ರಾಹ್ಮಣರಿಗೆ ಹೇಳಿದನು.

೧೨. ಎಲೈ ರಾಜೋತ್ತಮಾ, ಬ್ರಾಹ್ಮಣರು ಆಕೆಗೆ ಸಾವಿತ್ರಿಯೆಂದು ನಾಮಕರಣ ಮಾಡಿದರು. ಯೌವನವು ಬಂದಮೇಲೆ ಅವಳನ್ನು ಅಶ್ವಪತಿರಾಜನು ಸತ್ಯವಂತನೆಂಬಾತನಿಗೆ ಕೊಟ್ಟು ಮದುವೆಮಾಡಬೇಕೆಂದು ನಿಶ್ಚಯಿಸಿದನು. ಬಳಿಕ ನಾರದಮಹರ್ಷಿ ಬಂದು ತೇಜೋವಂತನಾದ ಆ ರಾಜನಿಗಿಂತೆಂದನು.

**ಸಂವತ್ಸರೇಣ ಕ್ಷೀಣಾಯುರ್ಭವಿಷ್ಯತಿ ನೃಪಾತ್ಮಜಃ ।**
**ಸಕೃತ್ಕನ್ಯಾಃ ಪ್ರದೀಯಂತೇ ಚಿಂತಯಿತ್ವಾ ನರಾಧಿಪಃ ॥೧೩॥**

**ತಥಾಪಿ ಪ್ರದದೌ ಕನ್ಯಾಂ ದ್ಯುಮತ್ಸೇನಾತ್ಮಜೇ ಶುಭೇ ।**
**ಸಾವಿತ್ರ್ಯಪಿ ಚ ಭರ್ತ್ತಾರಮಾಸಾಧ್ಯ ನೃಪಮಂದಿರೇ ॥೧೪॥**

**ನಾರದಸ್ಯ ತು ವಾಕ್ಯೇನ ದೂಯಮಾನೇನ ಚೇತಸಾ ।**
**ಶುಶ್ರೂಷಾಂ ಪರಮಾಂ ಚಕ್ರೇ ಭರ್ತೃಶ್ವಶುರಯೋರ್ವನೇ ॥೧೫॥**

**ರಾಜ್ಯಾದ್ಭ್ರಷ್ಟಃ ಸಭಾರ್ಯಸ್ತು ನಷ್ಟಚಕ್ಷುರ್ನರಾಧಿಪಃ ।**
**ನ ತುತೋಷ ಸಮಾಸಾದ್ಯ ರಾಜಪುತ್ರೀಂ ತಥಾ ಸ್ನುಷಾಂ ॥೧೬॥**

**ಚತುರ್ಥೇಽಹನಿ ಮರ್ತವ್ಯಂ ತಥಾ ಸತ್ಯವತಾ ದ್ವಿಜಾಃ ।**
**ಶ್ವಶುರೇಣಾಭ್ಯನುಜ್ಞಾತಾ ತದಾ ರಾಜಸುತಾಽಪಿ ಸಾ ॥೧೭॥**

---

೧೩. "ನಿನ್ನ ಮಗಳನ್ನು ಕೊಡಬೇಕೆಂದಿರುವ ರಾಜಪುತ್ರನ ಆಯುಸ್ಸು ಇನ್ನು ಒಂದು ವರ್ಷದಲ್ಲಿ ಮುಗಿಯುವುದು. ಹೆಣ್ಣುಮಕ್ಕಳಿಗೆ ಮದುವೆಮಾಡು ವುದೆಂದರೆ ಒಂದೇ ಸಲ. ಆದುದರಿಂದ ವಿಚಾರಮಾಡು." ನಾರದನು ಹೀಗೆ ಹೇಳಿದರೂ ರಾಜನು ಗುಣಶಾಲಿಯಾದ ಸತ್ಯವಂತನಿಗೇ ತನ್ನ ಮಗಳನ್ನು ಕೊಟ್ಟನು.

೧೪-೧೫. ಸಾವಿತ್ರಿಯೂ ಸಹ ಪತಿಯೊಡನೆ ಅವನ ಅರಮನೆಗೆ ಹೋದಳು. ನಾರದನ ಮಾತಿನಿಂದ ಆಕೆ ಮನದಲ್ಲಿಯೇ ಕೊರಗುತ್ತಿದ್ದಳು. ಶತ್ರುಗಳು ರಾಜ್ಯವನ್ನು ಆಕ್ರಮಿಸಿಕೊಂಡುದರಿಂದ ಮಾವನೂ ಪತಿಯೂ ಅರಣ್ಯಕ್ಕೆ ಹೋಗಲು ತಾನೂ ಅಲ್ಲಿಗೆ ಹೋಗಿ ಅವರಿಗೆ ಎಡೆಬಿಡದೆ ಉತ್ತಮವಾದ ಸೇವೆಯನ್ನು ಮಾಡುತ್ತಿದ್ದಳು.

೧೬. ದ್ಯುಮತ್ಸೇನಮಹಾರಾಜನು ರಾಜ್ಯವನ್ನು ಕಳೆದುಕೊಂಡನು. ಅವನ ಕಣ್ಣು ಕಾಣಿಸದಾದುವು. ಮನೆಗೆ ಸೊಸೆ ಬಂದರೂ ಅಂತಹ ಸ್ಥಿತಿಯಲ್ಲಿ ಅವನಿಗೂ ಅವನ ಪತ್ನಿಗೂ ಮನದಲ್ಲಿ ಸಂತೋಷವಿರಲಿಲ್ಲ.

೧೭-೧೮. ಎಲೈ ಬ್ರಾಹ್ಮಣರೇ, ಸತ್ಯವಂತನ ಮರಣಕ್ಕೆ ನಾಲ್ಕುದಿನ ಮಾತ್ರ ಉಳಿಯಿತು. ಧರ್ಮಜ್ಞಳಾದ ಸಾವಿತ್ರಿಯೂ ಸಹ ತನ್ನ ಮಾವನ

ಚಕ್ರೇ ತ್ರಿರಾತ್ರಂ ಧರ್ಮಜ್ಞಾ ಪ್ರಾಪ್ತೇ ತಸ್ಮಿಂಸ್ತದಾ ದಿನೇ ।
ದಾರುಪುಷ್ಪಫಲಾಹಾರೀ ಸತ್ಯವಾಂಸ್ತು ಯಯೌ ವನಂ ॥೧೮॥

ಶ್ವಶುರೇಣಾಭ್ಯನುಜ್ಞಾತಾ ಯಾಚನಾಭಂಗಭೀರುಣಾ ।
ಸಾವಿತ್ರ್ಯಪಿ ಜಗಾಮಾಽಽರ್ತಾ ಸಹ ಭರ್ತ್ರಾ ಮಹದ್ವನಂ ॥೧೯॥

ಚೇತಸಾ ದೂಯಮಾನೇನ ಗೂಹಮಾನಾ ಮಹದ್ಭಯಂ ।
ವನೇ ಪಪ್ರಚ್ಛ ಭರ್ತಾರಂ ದ್ರುಮಾಂಶ್ಚಾಸದೃಶಾಂಸ್ತಥಾ ॥೨೦॥

ಆಶ್ವಾಸಯಾಮಾಸ ಸ ರಾಜಪುತ್ರೀಂ
ಕ್ಲಾಂತಾಂ ವನೇ ಪದ್ಮವಿಶಾಲನೇತ್ರಾಂ
ಸಂದರ್ಶನೇನಾಥ ದ್ರುಮದ್ವಿಜಾನಾಂ
ತಥಾ ಮೃಗಾಣಾಂ ವಿಪಿನೇ ನೃವೀರಃ ॥೨೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ ಸಾವಿತ್ರೀವನ ಪ್ರವೇಶೋ ನಾಮಾಷ್ಟಾಧಿಕದ್ವಿಶತತಮೋಽಧ್ಯಾಯಃ

---

ಅಪ್ಪಣೆಯನ್ನು ಪಡೆದು ಮೂರು ದಿನಗಳನ್ನೂ ವ್ರತೋಪವಾಸಾದಿ ಧರ್ಮಕಾರ್ಯ ಗಳಲ್ಲಿ ಕಳೆದಳು. ಕೊನೆಗೆ ಆ ದಿನ ಬಂದಿತು. ಸೌದೆ, ಹೂ, ಹಣ್ಣು, ಇವುಗಳನ್ನು ತರುವುದಕ್ಕಾಗಿ ಸತ್ಯವಂತನು ಕಾಡಿಗೆ ಹೋದನು.

೧೯. ಸೊಸೆಯ ಪ್ರಾರ್ಥನೆಯನ್ನು ತಿರಸ್ಕರಿಸಬೇಕಲ್ಲಾ ಎಂದು ಚಿಂತಿಸಿ ಮಾವನು ಅನುಜ್ಞೆಯನ್ನು ಕೊಡಲು, ಸಾವಿತ್ರಿಯು ಪತಿಯೊಡನೆ ದೊಡ್ಡ ಕಾಡಿಗೆ ಹೋದಳು.

೨೦. ಅವಳು ಮನದಲ್ಲಿ ಕೊರಗುತ್ತಿದ್ದಳು. ತನಗೆ ಒದಗಿದ್ದ ದೊಡ್ಡ ಭಯವನ್ನು ಮರೆಮಾಚಿಕೊಂಡು, ಅಪೂರ್ವವಾದ ಕಾಡಿನ ಮರಗಳ ವಿಷಯವಾಗಿ ತನ್ನ ಪತಿಯನ್ನು ಪ್ರಶ್ನಿಸಿದಳು.

೨೧. ಮಹಾಧೀರನಾದ ಸತ್ಯವಂತನು ಕಾಡಿನಲ್ಲಿದ್ದ ಮರಗಳನ್ನೂ, ಪಕ್ಷಿ ಗಳನ್ನೂ, ಮೃಗಗಳನ್ನೂ ತನ್ನ ಪತ್ನಿಗೆ ತೋರಿಸುತ್ತ, ಕಣ್ಣುಗಳು ತಾವರೆಯಂತೆ ವಿಶಾಲವಾಗಿ ಹೊಳೆಯುತ್ತಿರಲು ಆಯಾಸಗೊಂಡಿದ್ದ ಆಕೆಯನ್ನು ಸಂತೈಸಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಸಾವಿತ್ರಿಯ ಉಪಾಖ್ಯಾನವು ಪ್ರಾರಂಭವಾಗುತ್ತದೆ.

ಮದ್ರದೇಶದ ಅರಸಾದ ಅಶ್ವಪತಿ ರಾಜನಿಗೆ ಸಾವಿತ್ರೀದೇವಿಯ ಅನುಗ್ರಹದಿಂದ ಒಬ್ಬ ಮಗಳು ಹುಟ್ಟಿದಳು. ಅವಳಿಗೆ ಸಾವಿತ್ರಿಯೆಂದೇ ಹೆಸರಿಟ್ಟರು. ಯೌವನವು ಬಂದ ಮೇಲೆ ಅವಳನ್ನು ದ್ಯುಮತ್ಸೇನನ ಪುತ್ರನಾದ ಸತ್ಯವಂತನಿಗೆ ಕೊಟ್ಟು ಮದುವೆಮಾಡಿದರು. ಆತನು ಅಲ್ಪಾಯುವೆಂದು ನಾರದನು ಮೊದಲೇ ಸೂಚಿಸಿದ್ದನು. ಸಾವಿತ್ರಿಯು ಬಹು ಭಕ್ತಿಯಿಂದ ತನ್ನ ಅತ್ತೆಮಾವಂದರಿಗೂ ಪತಿಗೂ ಸೇವೆ ಮಾಡುತ್ತಿದ್ದಳು. ಪತಿಯ ಮರಣದ ವಿಷಯಕ್ಕಾಗಿ ಯಾವಾಗಲೂ ಅವಳು ಕೊರಗುತ್ತಿದ್ದಳು. ಕೊನೆಗೆ ನಾರದಮುನಿ ಹೇಳಿದ್ದ ದುರ್ದೈವದ ದಿನ ಬಂದಿತು. ಸತ್ಯವಂತನು ಹೂಹಣ್ಣುಗಳನ್ನು ತರುವುದಕ್ಕಾಗಿ ಅರಣ್ಯಕ್ಕೆ ಹೋದನು. ಸಾವಿತ್ರಿಯೂ ಅವನನ್ನು ಅನುಸರಿಸಿದಳು. ಕಾಡಿನ ಮೃಗಪಕ್ಷಿಗಳನ್ನು ತೋರಿಸುತ್ತ ಅವನು ಅವಳನ್ನು ಸಂತೈಸುತ್ತಿದ್ದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ವನಪ್ರವೇಶವೆಂಬ
ಇನ್ನೂರೆಂಟನೆಯ ಅಧ್ಯಾಯವು ಮುಗಿದುದು.

## ಅಥ ನವಾಧಿಕದ್ವಿಶತತಮೋಽಧ್ಯಾಯಃ

|| ಸತ್ಯವಾನುವಾಚ ||

ವನೇಽಸ್ಮಿಞ್ಶಾದ್ವಲಾಕೀರ್ಣೇ ಸಹಕಾರಂ ಮನೋಹರಂ ।
ನೇತ್ರಘ್ರಾಣಸುಖಂ ಪಶ್ಯ ವಸಂತೇ ರತಿವರ್ಧನಂ || ೧ ||

ವನೇಽಪ್ಯಶೋಕಂ ದೃಷ್ಟ್ವೈನಂ ರಾಗವಂತಂ ಸುಪುಷ್ಪಿತಂ ।
ವಸಂತೋ ಹಸತೀವಾಯಂ ಮಾಮೇವಾಽಽಯತಲೋಚನೇ || ೨ ||

ದಕ್ಷಿಣೇ ದಕ್ಷಿಣೇನೈತಾಂ ಪಶ್ಯ ರಮ್ಯಾಂ ವನಸ್ಥಲೀಂ ।
ಪುಷ್ಪಿತೈಃ ಕಿಂಶುಕೈರ್ಯುಕ್ತಾಂ ಜ್ವಲಿತಾನಲಸಪ್ರಭೈಃ || ೩ ||

ಸುಗಂಧಿಕುಸುಮಾಮೋದೋ ವನರಾಜಿವಿನಿರ್ಗತಃ ।
ಕರೋತಿ ವಾಯುರ್ದಾಕ್ಷಿಣ್ಯಮಾವಯೋಃ ಕ್ಲಮನಾಶನಂ || ೪ ||

---

೧. ಸತ್ಯವಂತನು ಹೇಳಿದನು.—ಹಸುರು ಹುಲ್ಲಿನಿಂದ ಹಚ್ಚಗಿರುವ ಈ ಕಾಡಿನಲ್ಲಿ ಮನೋಹರವಾದ ಮಾವಿನ ಮರವನ್ನು ನೋಡು. ಇದು ಕಣ್ಣಿಗೂ ಮೂಗಿಗೂ ಸುಖವನ್ನುಂಟುಮಾಡುತ್ತಿದೆ. ಈ ವಸಂತರ್ತುವಿನಲ್ಲಿ ಪ್ರೀತಿಯನ್ನು ಹುಟ್ಟಿಸುತ್ತಿದೆ.

೨. ಎಲೌ ವಿಶಾಲಾಕ್ಷೀ, ಚೆನ್ನಾಗಿ ಹೂ ಬಿಟ್ಟು ಕೆಂಪಗೆ ಪ್ರಕಾಶಿಸುತ್ತಿರುವ ಈ ಅಶೋಕವೃಕ್ಷವನ್ನು ನೋಡಿ ವಸಂತನು ನನ್ನನ್ನೇ ಹಾಸ್ಯಮಾಡುತ್ತಿರುವನೋ ಎಂಬಂತೆ ತೋರುತ್ತಿದೆ.

೩. ಪ್ರಿಯೇ, ಬಲಗಡೆ ನೋಡು. ವನಪ್ರದೇಶವು ಎಷ್ಟು ರಮ್ಯವಾಗಿದೆ! ಮುತ್ತುಗದ ಮರಗಳು ಹೂಬಿಟ್ಟು ಉರಿಯುತ್ತಿರುವ ಬೆಂಕಿಯ ಜ್ವಾಲೆಗಳಂತೆ ಕಾಣುತ್ತಿವೆ.

೪. ಘಮಘಮಿಸುವ ಹೂಗಳ ಪರಿಮಳವನ್ನು ಹೊತ್ತುಕೊಂಡು ಕಾಡಿನ ಮರಗಳ ಮೇಲೆ ಬೀಸುತ್ತಿರುವ ವಾಯುವು ನಮ್ಮ ಆಯಾಸವನ್ನು ಪರಿಹರಿಸುತ್ತ ಸತ್ಕರಿಸುತ್ತಿದೆ.

ಪಶ್ಚಿಮೇನ ವಿಶಾಲಾಕ್ಷಿ ಕರ್ಣಿಕಾರೈಃ ಸುಪುಷ್ಪಿತೈಃ
ಕಾಂಚನೇನ ವಿಭಾತ್ಯೇಷಾ ವನರಾಜೀ ಮನೋರಮಾ || ೫ ||

ಅತಿಮುಕ್ತಲತಾಜಾಲರುದ್ಧಮಾರ್ಗಾ ವನಸ್ಥಲೀ ।
ರಮ್ಯಾ ಸಾ ಚಾರುಸರ್ವಾಂಗಿ ಕುಸುಮೋತ್ಕರಭೂಷಣಾ || ೬ ||

ಮಧುಮತ್ತಾಲಿಝುಂಕಾರವ್ಯಾಜೇನ ವರವರ್ಣಿನಿ ।
ಚಾಪಾಕೃಷ್ಟಿಂ ಕರೋತೀವ ಕಾಮಃ ಪಾಂಥಜಿಘಾಂಸಯಾ || ೭ ||

ಫಲಾಸ್ವಾದಲಸದ್ವಕ್ತ್ರಪುಂಸ್ಕೋಕಿಲವಿನಾದಿತಾ ।
ವಿಭಾತಿ ಚಾರುತಿಲಕಾ ತ್ವಮಿವೈಷಾ ವನಸ್ಥಲೀ || ೮ ||

ಕೋಕಿಲಶ್ಚೂತಶಿಖರೇ ಮಂಜರೀರೇಣುಪಿಂಜರಃ ।
ಗದಿತೈರ್ವ್ಯಕ್ತತಾಂ ಯಾತಿ ಕುಲೀನಶ್ಚೇಷ್ಟಿತೈರಿವ || ೯ ||

---

೫. ವಿಶಾಲವಾದ ಕಣ್ಣುಗಳುಳ್ಳ ಎಲೌ ಪ್ರಿಯೇ, ಪಶ್ಚಿಮದ ಕಡೆ ಸೊಗಸಾಗಿ ಹೂಬಿಟ್ಟಿರುವ ಬೆಟ್ಟದಾವರೆ ಮರಗಳಿಂದ ವನಪಙ್ಕ್ತಿಯು ಸುವರ್ಣ ಮಯವಾದಂತೆ ಕಾಣುತ್ತದೆ.

೬. ಇರುವಂತಿಗೆ ಬಳ್ಳಿಯು ದಾರಿಯನ್ನು ಮುಚ್ಚಿಕೊಂಡು ಹಬ್ಬಿದೆ. ಓ ಸುಂದರಾಂಗೀ, ಅದರ ಹೂಗಳಿಂದ ಕಾಡು ಒಡವೆಗಳನ್ನಿಟ್ಟುಕೊಂಡಂತೆ ರಮ್ಯವಾಗಿ ಪ್ರಕಾಶಿಸುತ್ತದೆ.

೭. ಎಲೌ ಕಲ್ಯಾಣೀ, ಮಕರಂದವನ್ನು ಕುಡಿದು ಝೇಂಕರಿಸುತ್ತಿರುವ ದುಂಬಿಗಳ ಮಧುರಧ್ವನಿಯು ಮನ್ಮಥನು ಪ್ರಯಾಣಸ್ಥರನ್ನು ಹೊಡೆಯಬೇಕೆಂದು ತನ್ನ ಬಿಲ್ಲನ್ನೆಳೆದು ಮಿಡಿಯುತ್ತಿರುವನೋ ಎಂಬಂತೆ ಶೋಭಿಸುತ್ತಿದೆ.

೮. ಹಣ್ಣುಗಳನ್ನು ತಿಂದು ಇಂಪಾಗಿ ಕೂಗುತ್ತಿರುವ ಗಂಡು ಕೋಗಿಲೆ ಗಳಿಂದ ರಂಜಿಸುತ್ತಿರುವ ಈ ವನ ಪ್ರದೇಶವು ಪುಷ್ಪಿತವಾದ ತಿಲಕವೃಕ್ಷಗಳಿಂದ ಕೂಡಿ, ಸುಂದರವಾದ ತಿಲಕವನ್ನು ಇಟ್ಟುಕೊಂಡಿರುವ ನಿನ್ನಹಾಗೆ ಪ್ರಕಾಶಿಸುತ್ತದೆ.

೯. ಹೂಗೊಂಚಲುಗಳ ಧೂಳಿಯಿಂದ ಮೈಯೆಲ್ಲ ಹೊಂಬಣ್ಣವಾಗಿರಲು, ಮಾವಿನಮರದ ತುದಿಯಲ್ಲಿ ಕುಳಿತಿರುವ ಕೋಗಿಲೆಯು, ಸತ್ಪುರುಷನು ತನ್ನ ಸತ್ಕಾರ್ಯಗಳಿಂದ ಎಲ್ಲರ ದೃಷ್ಟಿಗೂ ಬೀಳುವಂತೆ, ಮಧುರನಿನಾದದಿಂದ ಜನರಿಗೆ ಗೋಚರವಾಗುತ್ತಿದೆ.

ಪುಷ್ಪರೇಣುವಿಲಿಪ್ತಾಂಗೀ ಪ್ರಿಯಾಮನುಸರ್ರ ವನೇ ।
ಕುಸುಮಂ ಕುಸುಮಂ ಯಾತಿ ಕೂಜನ್ಕಾಮೀ ಶಿಲೀಮುಖಂ ॥೧೦॥

ಮಂಜರೀಂ ಸಹಕಾರಸ್ಯ ಕಾಂತಾಚಂಚ್ವಗ್ರಖಂಡಿತಾಂ ।
ಸ್ವದತೇ ಬಹುಪುಷ್ಪೇಽಪಿ ಪುಂಸ್ಕೋಕಿಲಯುವಾ ವನೇ ॥೧೧॥

ಕಾಕಂ ಪ್ರಸೂತಾಂ ವೃಕ್ಷಾಗ್ರೇ ಸ್ವಾಮೇಕಾಗ್ರೇಣ ಚಂಚುನಾ ।
ಕಾಕೀಂ ಸಂಭಾವಯತ್ಯೇಷ ಪಕ್ಷಾಚ್ಛಾದಿತಪುತ್ರಕಾಂ ॥೧೨॥

ಭೂಭಾಗಂ ನಿಮ್ನಮಾಸಾದ್ಯ ದಯಿತಾಸಹಿತೋ ಯುವಾ ।
ನಾಽಽಹಾರಮಪಿ ಚಾಽಽದತ್ತೇ ಕಾಮಾಕ್ರಾಂತಃ ಕಪಿಂಜಲಃ ॥೧೩॥

ಕಲವಿಂಕಸ್ತು ರಮರ್ಯ್ಯ ಪ್ರಿಯೋತ್ಸಂಗಂ ಸಮಾಸ್ಥಿತಃ ।
ಮುಹುರ್ಮುಹುರ್ವಿಶಾಲಾಕ್ಷಿ ಉತ್ಕಂಠಯತಿ ಕಾಮಿನಃ ॥೧೪॥

---

೧೦. ಕಾಮವಶವಾದ ಗಂಡುದುಂಬಿಯು ಮೈಗೆಲ್ಲ ಹೂಧೂಳಿ ಅಂಟಿಕೊಂಡಿರುವ ತನ್ನ ಪ್ರೀತಿಯ ಹೆಣ್ಣುದುಂಬಿಯನ್ನು ಗುರುತು ಹಿಡಿಯಲಾರದೆ ಅದನ್ನು ಕಂಡುಹಿಡಿಯಬೇಕೆಂದು ಕೂಗುತ್ತ ಹೂವಿನಿಂದ ಹೂವಿಗೆ ಹೋಗುತ್ತಿದೆ.

೧೧. ಪ್ರಾಯದ ಗಂಡುಕೋಗಿಲೆಯು ಕಾಡಿನಲ್ಲಿ ಬೇರೆಬೇರೆ ಹೂಗಳು ಬೇಕಾದಷ್ಟಿದ್ದರೂ ತನ್ನ ಕಾಂತೆಯು ಕೊಕ್ಕಿನ ತುದಿಯಿಂದ ಕಡಿದಿದ್ದ ಮಾವಿನ ಹೂಗೊಂಚಲನ್ನೇ ರುಚಿನೋಡುತ್ತದೆ.

೧೨. ಗಂಡುಕಾಗೆಯು ಹೊಸದಾಗಿ ಹಾಕಿದ ಮರಿಯನ್ನು ರೆಕ್ಕೆಯಲ್ಲಿ ಅಡಗಿಸಿಕೊಂಡು ಮರದ ತುದಿಯಲ್ಲಿ ಕುಳಿತಿರುವ ತನ್ನ ಪತ್ನಿಯನ್ನು ಕೊಕ್ಕಿನ ತುದಿಯಿಂದ ಕೆರೆಯುತ್ತ ಉಪಚರಿಸುತ್ತದೆ.

೧೩. ಕಪಿಂಜಲವು ಕಾಮನ ಬಾಣಕ್ಕೆ ತುತ್ತಾಗಿ, ತಗ್ಗಾದ ಭೂಭಾಗಕ್ಕೆ ತನ್ನ ಪ್ರಿಯಳೊಡನೆ ಹೋಗಿ, ಪ್ರೀತಿಗೆ ಮನಸ್ಸನ್ನು ತೆತ್ತು ಆಹಾರವನ್ನೂ ಕೂಡ ತೆಗೆದುಕೊಳ್ಳದೆ ಇದೆ.

೧೪. ಓ ವಿಶಾಲಾಕ್ಷೀ, ಗುಬ್ಬಚ್ಚಿಯು ತನ್ನ ಕಾಂತೆಯ ತೊಡೆಯ ಮೇಲೆ ಕುಳಿತು ವಿಹರಿಸುತ್ತ ಕಾಮಿಗಳಿಗೆ ಪದೇ ಪದೇ ಔತ್ಸುಕ್ಯವನ್ನು ಹುಟ್ಟಿಸುತ್ತಿದೆ.

ವೃಕ್ಷಶಾಖಾಂ ಸಮಾರೂಢಃ ಶುಕೋಽಯಂ ಸಹ ಭಾರ್ಯಯಾ ।
ಭರೇಣ ಲಂಬಯತ್ಯೇತಾಂ ಕರೋತಿ ಸಫಲಾಮಿವ ॥೧೫॥

ವನೇಽತ್ರ ಪಿಶಿತಾಸ್ವಾದತೃಪ್ತೋ ನಿದ್ರಾಮುಪಾಗತಃ ।
ಶೇತೇ ಸಿಂಹಯುವಾ ಕಾಂತಾ ಚರಣಾಂತರಗಾಮಿನೀ ॥೧೬॥

ವ್ಯಾಘ್ರಯೋರ್ಮಿಥುನಂ ಪಶ್ಯ ಶೈಲಕಂದರಸಂಸ್ಥಿತಂ ।
ಯಯೋರ್ನೇತ್ರಪ್ರಭಾಲೋಕೇ ಗುಹಾ ಭಿನ್ನೇವ ಲಕ್ಷ್ಯತೇ ॥೧೭॥

ಅಯಂ ದ್ವಿಪೀ ಪ್ರಿಯಾಂ ಲೇಢಿ ಜಿಹ್ವಾಗ್ರೇಣ ಪುನಃ ಪುನಃ ।
ಪ್ರೀತಿಮಾಯಾತಿ ಚ ತಯಾ ಲಿಹ್ಯಮಾನಃ ಸ್ವಕಾಂತಯಾ ॥೧೮॥

ಉತ್ಸಂಗಕೃತಮೂರ್ಧಾನಂ ನಿದ್ರಾಪಹೃತಚೇತಸಂ ।
ಜಂತೂದ್ಧರಣತಃ ಕಾಂತಂ ಸುಖಯತ್ಯೇವ ವಾನರೀ ॥೧೯॥

---

೧೫. ಈ ಗಿಳಿಯು ಪತ್ನಿಯೊಡನೆ ಮರದ ಕೊಂಬೆಯ ಮೇಲೆ ಕುಳಿತು ಭಾರದಿಂದ ಅದನ್ನು ಜೋಲಾಡಿಸುತ್ತ, ಅದರಲ್ಲಿ ಹಣ್ಣು ಬಿಟ್ಟಿದೆಯೋ ಎಂಬ ಭಾವನೆಯನ್ನು ಹುಟ್ಟಿಸುತ್ತಿದೆ.

೧೬. ಪ್ರಾಯವೊದಗಿದ ಸಿಂಹವು ಮಾಂಸವನ್ನು ತಿಂದು ತೃಪ್ತಿಯಿಂದ ಇಗೋ ಕಾಡಿನಲ್ಲಿ ಮಲಗಿದೆ. ಹೆಣ್ಣು ಸಿಂಹವು ಅದರ ಕಾಲುಗಳ ಸಂದಿನಲ್ಲಿ ಹುದುಗಿಕೊಂಡಿದೆ.

೧೭. ಬೆಟ್ಟದ ಗುಹೆಯಲ್ಲಿರುವ ಹೆಣ್ಣು ಮತ್ತು ಗಂಡು ಹುಲಿಗಳನ್ನು ನೋಡು. ಅವುಗಳ ಕಣ್ಣಿನ ಬೆಳಕಿನಿಂದ ಗುಹೆಯು ಬಿರಿಯುವಂತೆ ಕಾಣುತ್ತದೆ.

೧೮. ಈ ಗಂಡಾನೆಯು ನಾಲಗೆಯ ತುದಿಯಿಂದ ತನ್ನ ಪ್ರಿಯೆಯನ್ನು ಮತ್ತೆಮತ್ತೆ ನೆಕ್ಕುತ್ತದೆ. ಹೆಣ್ಣಾನೆಯು ಪ್ರತಿಯಾಗಿ ನೆಕ್ಕಿದಾಗ ಇದು ಬಹು ಪ್ರೀತಿಗೊಳ್ಳುತ್ತದೆ.

೧೯. ತೊಡೆಯ ಮೇಲೆ ತಲೆಯಿಟ್ಟುಕೊಂಡು ನಿದ್ರೆಯಿಂದ ಮೈಮರೆತಿರುವ ತನ್ನ ಪ್ರಿಯನ ಮೈಯಲ್ಲಿ ಹೇನುತೆಗೆಯುತ್ತ ಹೆಣ್ಣುಕೋತಿಯು ಅದಕ್ಕೆ ಸುಖ ವನ್ನುಂಟುಮಾಡುತ್ತದೆ.

ಭೂಮೌ ನಿಪತಿತಾಂ ರಾಮಾಂ ಮಾರ್ಜಾರೋ ದರ್ಶಿತೋದರೀಂ ।
ನಖೈರ್ದಂತೈರ್ದಶತ್ಯೇಷ ನ ಚ ಪೀಡಯತೇ ತಥಾ ॥೨೦॥

ಶಶಕಃ ಶಶಕೀ ಚೋಭೇ ಸಂಸುಪ್ತೇ ಪೀಡಿತೇ ಇಮೇ ।
ಸಂಲೀನಗಾತ್ರಚರಣೇ ಕರ್ಣೈರ್ವ್ಯಕ್ತಿಮುಪಾಗತೇ ॥೨೧॥

ಸ್ನಾತ್ವಾ ಸರಸಿ ಪದ್ಮಾಢ್ಯೇ ನಾಗಸ್ತು ಮದನಪ್ರಿಯಃ ।
ಸಂಭಾವಯತಿ ತನ್ವಂಗಿ ಮೃಣಾಲಕವಲೈಃ ಪ್ರಿಯಾಂ ॥೨೨॥

ಕಾಂತಪ್ರೋಥಸಮುತ್ಥಾನ್ಯೈಃ ಕಾಂತಮಾರ್ಗಾನುಗಾಮಿನೀ ।
ಕರೋತಿ ಕಬಳಂ ಮುಸ್ತೈರ್ವಾರಾಹೀ ಪೋತಕಾನುಗಾ ॥೨೩॥

ದೃಢಾಂಗಸಂಧಿರ್ಮಹಿಷಃ ಕರ್ದಮಾಕ್ತತನುರ್ವನೇ ।
ಅನುವ್ರಜತಿ ಧಾವಂತೀಂ ಪ್ರಿಯಾಮುದ್ಧತಮುತ್ಸುಕಃ ॥೨೪॥

---

೨೦. ಹೆಣ್ಣುಬೆಕ್ಕು ಹೊಟ್ಟೆಯನ್ನು ತೋರಿಸಿಕೊಂಡು ನೆಲದಲ್ಲಿ ಮಲಗಿದ್ದರೆ ಗಂಡುಬೆಕ್ಕು ಅದಕ್ಕೆ ನೋವಾಗದಂತೆ ಉಗುರುಗಳಿಂದ ಕೆರೆಯುತ್ತದೆ. ಮತ್ತು ಹಲ್ಲುಗಳಿಂದ ಕಚ್ಚುತ್ತದೆ.

೨೧. ಇಗೋ ! ಈ ಹೆಣ್ಣು ಮತ್ತು ಗಂಡುಮೊಲಗಳೆರಡೂ ಒಂದನ್ನೊಂದು ಒತ್ತರಿಸುತ್ತ ಮೈಯನ್ನೂ ಕಾಲುಗಳನ್ನೂ ಕೊಕ್ಕರಿಸಿಕೊಂಡು ನಿದ್ದೆ ಹೋಗುತ್ತಿವೆ. ಮೇಲಕ್ಕೆದ್ದು ನಿಂತಿರುವ ಕಿವಿಗಳಿಂದ ಮಾತ್ರವೇ ಅವುಗಳ ಗುರುತು ಸಿಕ್ಕುವುದು.

೨೨. ಎಲೌ ಕೃಶಾಂಗೀ, ಕಾಮೋದ್ದೀಪ್ತವಾದ ಗಂಡಾನೆಯು ತಾವರೆಗಳಿಂದ ತುಂಬಿದ ಸರೋವರದಲ್ಲಿ ಸ್ನಾನಮಾಡಿ, ತಾವರೆ ದಂಟುಗಳನ್ನು ತಿನ್ನುವುದಕ್ಕೆ ಕೊಡುತ್ತ ತನ್ನ ಪ್ರಿಯೆಯನ್ನು ಆದರಿಸುತ್ತದೆ.

೨೩. ಪತಿಯ ಹಾದಿಯಲ್ಲೇ ನಡೆಯುತ್ತ, ಹಿಂದೆ ಮರಿಗಳು ಅನುಸರಿಸಿ ಬರುತ್ತಿರಲು, ಹೆಣ್ಣು ಹಂದಿಯು ತನ್ನ ಕಾಂತನು ಮೂತಿಯಿಂದ ಅಗೆದು ಎಬ್ಬಿಸಿದ ಕೊನ್ನಾರೆಗೆಡ್ಡೆಗಳನ್ನು ತಿನ್ನುತ್ತದೆ.

೨೪. ಮೈಗಟ್ಟು ಬಿಗಿಯಾಗಿರುವ ಕಾಡುಕೋಣನು ಕೆಸರು ಮೈಮೇಲೆ ಹತ್ತಿಕೊಂಡಿರಲು, ಮುಂದೆ ಓಡುತ್ತಿರುವ ಕಾಡೆಮ್ಮೆಯ ಹಿಂದೆ ಪ್ರೀತಿಯಿಂದ ವೇಗವಾಗಿ ಓಡುತ್ತಿದೆ.

ಪಶ್ಯ ಚಾರ್ವಂಗಿ ಸಾರಂಗಂ ತ್ವಂ ಕಟಾಕ್ಷವಿಭಾವನೈಃ ।
ಸಭಾರ್ಯಂ ಮಾಂ ಹಿ ಪಶ್ಯಂತಂ ಕೌತೂಹಲಸಮನ್ವಿತಂ ॥೨೫॥

ಪಶ್ಯ ಪಶ್ಚಿಮಪಾದೇನ ರೋಹೀ ಕಂಡೂಯತೇ ಮುಖಂ ।
ಸ್ನೇಹಾದ್ರ್ರಭಾವಾತ್ಕರ್ಷಂತೀ ಭರ್ತಾರಂ ಶೃಂಗಕೋಟಿನಾ ॥೨೬॥

ದ್ರಾಗಿಮಾಂ ಚಮರೀಂ ಪಶ್ಯ ಸಿತವಾಲಾಮನುಗಚ್ಛತೀಂ ।
ಅನ್ವಾಸ್ತೇ ಚಮರಃ ಕಾಮೀ ಮಾಂ ಚ ಪಶ್ಯತಿ ಗರ್ವಿತಃ ॥೨೭॥

ಆತಪೇ ಗವಯಂ ಪಶ್ಯ ಪ್ರಹೃಷ್ಟಂ ಭಾರ್ಯಯಾ ಸಹ ।
ರೋಮಂಥನಂ ಪ್ರಕುರ್ವಾಣಂ ಕಾಕಂ ಕಕುದಿ ವಾರಯನ್ ॥೨೮॥

ಪಶ್ಯಾಜಂ ಭಾರ್ಯಯಾ ಸಾರ್ಧಂ ನ್ಯಸ್ತಾಗ್ರಚರಣದ್ವಯಂ ।
ವಿಪುಲೇ ಬದರೀಸ್ಕಂಧೇ ಬದರಾಶನಕಾಮ್ಯಯಾ ॥೨೯॥

---

೨೫. ಎಲೌ ಸುಂದರಾಂಗೀ, ನಿನ್ನ ಕಡೆಗಣ್ಣಿನ ನೋಟದಿಂದ ಈ ಗಂಡು ಜಿಂಕೆಯನ್ನು ಗೌರವಿಸು. ಅದು ಪತ್ನೀಸಹಿತನಾದ ನನ್ನನ್ನು ಕುತೂಹಲದಿಂದ ನೋಡುತ್ತಿದೆ.

೨೬. ಇತ್ತ ನೋಡು. ಹುಲ್ಲೆಯು ಹಿಂಗಾಲಿನಿಂದ ಮುಖವನ್ನು ಕೆರೆದು ಕೊಳ್ಳುತ್ತಿದೆ. ಸ್ನೇಹಭಾವದಿಂದ ಅದು ಕೊಂಬಿನ ತುದಿಯಲ್ಲಿ ತನ್ನ ಕಾಂತನನ್ನು ನೂಕುತ್ತಿದೆ.

೨೭. ಬಾಲದ ಕೂದಲು ಬೆಳ್ಳಗಿರುವ ಈ ಹೆಣ್ಣು ಚಮರೀಮೃಗವನ್ನು ನೋಡು. ಅದು ಚಲಿಸದೆ ಕುಳಿತಿದೆ. ಕಾಮವಿಕಾರವುಳ್ಳ ಚಮರಮೃಗವು ಅದನ್ನು ಉಪಚರಿಸುತ್ತಿದೆ; ಮತ್ತು ಗರ್ವದಿಂದ ನನ್ನನ್ನು ನೋಡುತ್ತಿದೆ.

೨೮. ತನ್ನ ಪತ್ನಿಯೊಡನೆ ಸಂತೋಷದಿಂದ ಬಿಸಿಲಿನಲ್ಲಿ ಮೆಲಕು ಹಾಕುತ್ತಿರುವ ಕಡವೆ ಮೃಗವನ್ನು ನೋಡು. ಹಿಣಿಲಮೇಲೆ ಕುಳಿತುಕೊಳ್ಳಲು ಬರುತ್ತಿರುವ ಕಾಗೆಯನ್ನು ಅದು ಓಡಿಸುತ್ತಿದೆ.

೨೯. ಎತ್ತರವಾಗಿ ಬೆಳದಿರುವ ಎಲಚಿಮರದ ಎಲೆಯನ್ನು ತಿನ್ನಬೇಕೆಂಬ ಆಸೆಯಿಂದ ಅದರ ಬೊಡ್ಡೆಯಮೇಲೆ ಮುಂಗಾಲುಗಳೆರಡನ್ನೂ ಎತ್ತಿ ಇರಿಸಿರುವ ಆಡನ್ನೂ ಅದರ ಭಾರ್ಯೆಯನ್ನೂ ನೋಡು.

ಹಂಸಂ ಸಭಾರ್ಯಂ ಸರಸಿ ವಿಚರಂತಂ ಸುನಿರ್ಮಲಂ ।
ಸಮುಕ್ತಸ್ಯೇಂದುಬಿಂಬಸ್ಯ ಪಶ್ಯ ವೈ ಶ್ರಿಯಮುದ್ವಹ ॥೩೦॥

ಸಭಾರ್ಯಶ್ಚಕ್ರವಾಕೋಽಯಂ ಕಮಲಾಕರಮಧ್ಯಗಃ ।
ಕರೋತಿ ಪದ್ಮಿನೀಂ ಕಾಂತಾಂ ಸುಪುಷ್ಪಾಮಿವ ಸುಂದರಿ ॥೩೧॥

ಮಯಾ ಫಲೋಚ್ಚಯಃ ಸುಭ್ರು ತ್ವಯಾ ಪುಷ್ಪೋಚ್ಚಯಃ ಕೃತಃ ।
ಇಂಧನಂ ನ ಕೃತಂ ಸುಭ್ರು ತತ್ಕರಿಷ್ಯಾಮಿ ಸಾಂಪ್ರತಂ ॥೩೨॥

ತ್ವಮಸ್ಯ ಸರಸಸ್ತೀರೇ ದ್ರುಮಚ್ಛಾಯಾಂ ಸಮಾಶ್ರಿತಾ ।
ಕ್ಷಣಮಾತ್ರಂ ಪ್ರತೀಕ್ಷಸ್ವ ವಿಶ್ರಮಸ್ವ ಚ ಭಾಮಿನಿ ॥೩೩॥

॥ ಸಾವಿತ್ರ್ಯುವಾಚ ॥

ಏವಮೇತತ್ಕರಿಷ್ಯಾಮಿ ಮಮ ದೃಷ್ಟಿಪಥಸ್ತ್ವಯಾ ।
ದೂರಂ ಕಾಂತ ನ ಕರ್ತವ್ಯೋ ಬಿಭೇಮಿ ಗಹನೇ ವನೇ ॥೩೪॥

---

೩೦. ಮುತ್ತುಗಳಿಂದ ಅಲಂಕೃತವಾದ ಚಂದ್ರಬಿಂಬದ ಕಾಂತಿಯನ್ನು ಅನುಕರಿಸುತ್ತ ಅಚ್ಚಬೆಳ್ಳಗಿರುವ ಹಂಸಪಕ್ಷಿಯು ಕಾಂತೆಯೊಡನೆ ಸರೋವರದಲ್ಲಿ ಸಂಚರಿಸುವುದು ನೋಡು.

೩೧. ತಾವರೆಗೊಳದ ನಡುವೆ ಈ ಚಕ್ರವಾಕಪಕ್ಷಿಯು ಪ್ರಿಯಳೊಡನೆ ವಿಹರಿಸುತ್ತಿದ್ದರೆ ತಾವರೆಬಳ್ಳಿಯು ಸೊಗಸಾಗಿ ಹೂಮುಡಿದ ಸುಂದರಿಯಂತೆ ಶೋಭಿಸುತ್ತಿರುವುದು.

೩೨. ರಮಣೀ, ನಾನು ಹಣ್ಣುಗಳನ್ನು ಕಿತ್ತು ತಂದೆನು. ನೀನು ಹೂಗಳನ್ನು ಆರಿಸಿದೆ. ಸೌದೆಯನ್ನು ಮಾತ್ರ ಇನ್ನೂ ತರಲಿಲ್ಲ. ಅದನ್ನೀಗ ಸಂಗ್ರಹಿಸುವೆನು.

೩೩. ಪ್ರಿಯೇ, ನೀನು ಈ ಸರೋವರದ ತೀರದ ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತ ನನಗಾಗಿ ಸ್ವಲ್ಪ ಹೊತ್ತು ಕಾದಿರು.

೩೪. ಸಾವಿತ್ರಿ ಹೇಳಿದಳು.—ಕಾಂತಾ, ಆಗಲಿ; ಹಾಗೆಯೇ ಮಾಡುತ್ತೇನೆ. ಆದರೆ ನೀನು ನನ್ನಕಣ್ಣಿಗೆ ಕಾಣಿಸದಷ್ಟು ದೂರಕ್ಕೆ ಮಾತ್ರ ಹೋಗಕೂಡದು. ಏಕೆಂದರೆ ಈ ದಟ್ಟವಾದ ಕಾಡಿನಲ್ಲಿ ನನಗೆ ಹೆದರಿಕೆಯಾಗುತ್ತಿದೆ.

## ಅಧ್ಯಾಯ ೨೦೯

## ॥ ಮತ್ಸ್ಯ ಉವಾಚ ॥

ತತಃ ಸ ಕಾಷ್ಠಾನಿ ಚಕಾರ ತಸ್ಮಿನ್
 ವನೇ ತದಾ ರಾಜಸುತಾಸಮಕ್ಷಂ ।
ತಸ್ಯಾ ಹ್ಯದೂರೇ ಸರಸಸ್ತದಾನೀಂ
 ಮೇನೇ ಚ ಸಾ ತಂ ಮೃತಮೇವ ರಾಜನ್ ॥೩೫॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ ವನದರ್ಶನಂ ನಾಮ ನವಾಧಿಕದ್ವಿಶತತಮೋಽಧ್ಯಾಯಃ**

---

೩೫. ಮತ್ಸ್ಯರೂಪನಾದ ಭಗವಂತನು ಹೇಳಿದನು—ರಾಜಾ, ಬಳಿಕ ಅವನು ಸಾವಿತ್ರಿಯ ಕಣ್ಣಿಗೆ ಕಾಣಿಸುವಂತೆ ಆ ಸರೋವರದ ಸಮೀಪದಲ್ಲೇ ಸೌದೆಯನ್ನು ಒಡೆಯುತ್ತಿದ್ದನು. "ಇನ್ನೇನು ನನ್ನ ಪತಿ ಸತ್ತಂತೆಯೇ ಸರಿ" ಎಂದು ಆಕೆ ಮನಸ್ಸಿನಲ್ಲಿ ತಿಳಿದಳು.

### ಅಧ್ಯಾಯದ ಸಾರಾಂಶ

ಸತ್ಯವಂತನು ಸಾವಿತ್ರಿಗೆ ವನದ ಸೌಂದರ್ಯವನ್ನು ತೋರಿಸಿ, ಅಲ್ಲಿದ್ದ ಮೃಗ ಪಕ್ಷಿಗಳು ತಮ್ಮತಮ್ಮ ಕಾಂತೆಯರೊಡನೆ ಹೇಗೆ ಆನಂದದಿಂದ ವಿಹರಿಸುತ್ತಿದ್ದುವೆಂಬುದನ್ನು ವಿವರಿಸಿದನು. ಹೂಹಣ್ಣುಗಳನ್ನು ಶೇಖರಿಸಿದ ಬಳಿಕ ಅವನು ಸೌದೆಯನ್ನು ಒಡೆಯುವುದಕ್ಕೆ ಹೋದನು. ಸಾವಿತ್ರಿಯು ಅವನಿಗೆ ಸಮೀಪವಾಗಿ ಬಂದು ಸರೋವರದ ತೀರದಲ್ಲಿ ಕುಳಿತಿದ್ದಳು. "ಇನ್ನೇನು, ನನ್ನ ಪತಿಗೆ ಕೊನೆಗಾಲವು ಬಂದಿತು'' ಎಂದು ಆಕೆ ಯೋಚಿಸುತ್ತಿದ್ದಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ವನದರ್ಶನವೆಂಬ ಇನ್ನೂರೊಂಬತ್ತನೆಯ ಅಧ್ಯಾಯವು ಮುಗಿದುದು

## ಅಥ ದಶಾಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ತಸ್ಯ ಪಾಟಯತಃ ಕಾಷ್ಠಂ ಜಜ್ಞೇ ಶಿರಸಿ ವೇದನಾ ।
ಸ ವೇದನಾರ್ತಃ ಸಂಗಮ್ಯ ಭಾರ್ಯಾಂ ವಚನಮಬ್ರವೀತ್ ॥ ೧ ॥

ಆಯಾಸೇನ ಮಮಾನೇನ ಜಾತಾ ಶಿರಸಿ ವೇದನಾ ।
ತಮಶ್ಚ ಪ್ರವಿಶಾಮೀವ ನ ಚ ಜಾನಾಮಿ ಕಿಂಚನ ॥ ೨ ॥

ತ್ವದುತ್ಸಂಗೇ ಶಿರಃ ಕೃತ್ವಾ ಸ್ವಪ್ತುಮಿಚ್ಛಾಮಿ ಸಾಂಪ್ರತಂ ।
ರಾಜಪುತ್ರೀಮೇವಮುಕ್ತ್ವಾ ತದಾ ಸುಷ್ವಾಪ ಪಾರ್ಥಿವಃ ॥ ೩ ॥

ತದುತ್ಸಂಗೇ ಶಿರಃ ಕೃತ್ವಾ ನಿದ್ರಯಾವಿಲಲೋಚನಃ ।
ಪತಿವ್ರತಾ ಮಹಾಭಾಗಾ ತತಃ ಸಾ ರಾಜಕನ್ಯಕಾ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸೌದೆಯನ್ನೊಡೆಯುತ್ತಿರಲು ಸತ್ಯವಂತನಿಗೆ ತಲೆನೋವು ಕಾಣಿಸಿಕೊಂಡಿತು. ಅವನು ಬಾಧೆಯಿಂದ ಬಳಲಿ ಪತ್ನಿಯ ಬಳಿಗೆ ಬಂದು ಇಂತೆಂದನು.

೨. "ಈ ಆಯಾಸದಿಂದ ನನಗೆ ತಲೆನೋವು ಬಂದಿದೆ. ಕಣ್ಣಿಗೆ ಕತ್ತಲೆ ಕವಿಯುತ್ತಿದೆ. ಏನೂ ತೋರುವುದಿಲ್ಲ. ನಿನ್ನ ತೊಡೆಯಮೇಲೆ ತಲೆಯಿಟ್ಟುಕೊಂಡು ಈಗ ಮಲಗಬೇಕೆಂದಿದ್ದೇನೆ."

೩. ಸಾವಿತ್ರಿಗೆ ಹೀಗೆ ಹೇಳಿ ಸತ್ಯವಂತನು ಅವಳ ತೊಡೆಯ ಮೇಲೆ ತಲೆಯಿಟ್ಟು ಮಲಗಿದನು. ಅವನ ಕಣ್ಣುಗಳು ನಿದ್ರೆಯಿಂದ ಮುಚ್ಚಿಕೊಂಡುವು.

೪-೭. ಪತಿವ್ರತೆಯೂ ಮಹಾಮಹಿಮಳೂ ಆದ ಸಾವಿತ್ರಿಯು ಯಮಧರ್ಮರಾಜನೇ ಸಾಕ್ಷಾತ್ತಾಗಿ ಆಸ್ಥಳದಲ್ಲಿ ಬಂದು ನಿಂತಿದ್ದುದನ್ನು ಕಂಡಳು. ಅವನು

ದದರ್ಶ ಧರ್ಮರಾಜಂ ತು ಸ್ವಯಂ ತಂ ದೇಶಮಾಗತಂ ।
ನೀಲೋತ್ಪಲದಲಶ್ಯಾಮಂ ಪೀತಾಂಬರಧರಂ ಪ್ರಭುಂ ॥ ೫ ॥

ವಿದ್ಯುಲ್ಲತಾನಿಬದ್ಧಾಂಗಂ ಸತೋಯಮಿವ ತೋಯದಂ ।
ಕಿರೀಟೇನಾರ್ಕವರ್ಣೇನ ಕುಂಡಲಾಭ್ಯಾಂ ವಿರಾಜಿತಂ ॥ ೬ ॥

ಹಾರಭಾರಾರ್ಪಿತೋರಸ್ಕಂ ತಥಾಂಗದವಿಭೂಷಿತಂ ।
ತಥಾನುಗಮ್ಯಮಾನಂ ಚ ಕಾಲೇನ ಸಹ ಮೃತ್ಯುನಾ ॥ ೭ ॥

ಸ ತು ಸಂಪ್ರಾಪ್ಯ ತಂ ದೇಶಂ ದೇಹಾತ್ಸತ್ಯವತಸ್ತದಾ ।
ಅಂಗುಷ್ಠಮಾತ್ರಂ ಪುರುಷಂ ಪಾಶಬದ್ಧಂ ವಶಂ ಗತಂ ॥ ೮ ॥

ಆಕೃಷ್ಯ ದಕ್ಷಿಣಾಮಾಶಾಂ ಪ್ರಯಯೌ ಸತ್ವರಂ ತದಾ ।
ಸಾವಿತ್ರ್ಯಪಿ ವರಾರೋಹಾ ದೃಷ್ಟ್ವಾ ತಂ ಗತಜೀವಿತಂ ॥ ೯ ॥

ಅನುವವ್ರಾಜ ಗಚ್ಛಂತಂ ಧರ್ಮರಾಜಮತಂದ್ರಿತಾ ।
ಕೃತಾಂಜಲಿರುವಾಚಾಥ ಹೃದಯೇನ ಪ್ರವೇಪತಾ ॥೧೦॥

---

ಕನ್ನೈದಿಲೆಯ ಎಸಳಂತೆ ಶ್ಯಾಮವರ್ಣದವನಾಗಿದ್ದನು. ಪೀತಾಂಬರವನ್ನುಟ್ಟು ಮಿಂಚಿನ ಬಳ್ಳಿಯಿಂದ ಕೂಡಿದ ಕರಿಯ ಮೋಡದಂತೆ ಕಂಗೊಳಿಸುತ್ತಿದ್ದನು. ಸೂರ್ಯನಂತೆ ಹೊಳೆವ ಕಿರೀಟವನ್ನೂ ಕುಂಡಲಗಳನ್ನೂ ಧರಿಸಿದ್ದನು. ಅವನ ಎದೆಯಮೇಲೆ ಮುತ್ತಿನ ಹಾರಗಳೂ ತೋಳಿನಲ್ಲಿ ತೋಳುಬಳೆಯೂ ವಿರಾಜಿಸುತ್ತಿದ್ದುವು. ಕಾಲವೂ ಮೃತ್ಯುವೂ ಆತನನ್ನು ಅನುಸರಿಸಿ ಬರುತ್ತಿದ್ದುವು.

೮. ಅವನು ಅಲ್ಲಿಗೆ ಬಂದು, ಸತ್ಯವಂತನ ದೇಹದಿಂದ ಅಂಗುಷ್ಠಪ್ರಮಾಣದ ಪುರುಷನನ್ನು ಎಳೆದು, ಪಾಶದಿಂದ ಬಿಗಿದು ಕಟ್ಟಿ ಸ್ವಾಧೀನಪಡಿಸಿಕೊಂಡು ದಕ್ಷಿಣ ದಿಕ್ಕಿಗೆ ಬೇಗನೆ ಹೋದನು.

೯-೧೦. ಶುಭಾಂಗಿಯಾದ ಸಾವಿತ್ರಿಯೂ ಕೂಡ ಪತಿಯು ಮೃತನಾದುದನ್ನು ಕಂಡು, ಮೋಹಕ್ಕೊಳಗಾಗದೆ ಯಮಧರ್ಮರಾಜನ ಹಿಂದೆಯೇ ನಡೆದಳು.

ಇಮಂ ಲೋಕಂ ಮಾತೃಭಕ್ತ್ಯಾ ಪಿತೃಭಕ್ತ್ಯಾ ತು ಮಧ್ಯಮಂ ।
ಗುರುಶುಶ್ರೂಷಯಾ ಚೈವ ಬ್ರಹ್ಮಲೋಕಂ ಸಮಶ್ನುತೇ ॥೧೧॥

ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ ।
ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ॥೧೨॥

ಯಾವತ್ತ್ರಯಸ್ತೇ ಜೀವೇಯುಸ್ತಾವನ್ನಾನ್ಯಂ ಸಮಾಚರೇತ್
ತೇಷಾಂ ಚ ನಿತ್ಯಂ ಶುಶ್ರೂಷಾಂ ಕುರ್ಯಾತ್ಪ್ರಿಯಹಿತೇ ರತಃ ॥೧೩॥

ತೇಷಾಮನುಪರೋಧೇನ ಪಾರತಂತ್ರ್ಯಂ ಯದಾ ಚರೇತ್ ।
ತತ್ತನ್ನಿವೇದಯತ್ತೇಭ್ಯೋ ಮನೋವಚನಕರ್ಮಭಿಃ ।
ತ್ರಿಷ್ವೇತೇಷು ಕೃತ್ಯಂ ಹಿ ಪುರುಷಸ್ಯ ಸಮಾಪ್ಯತೇ ॥೧೪॥

---

೧೧. ತಾಯಿಯಲ್ಲಿ ಭಕ್ತಿಯಿಂದ ಇಹಲೋಕದ ಸುಖವೂ, ತಂದೆಯಲ್ಲಿ ಭಕ್ತಿಯಿಂದ ಸ್ವರ್ಗಲೋಕದ ಸುಖವೂ, ಗುರುಶುಶ್ರೂಷೆಯಿಂದ ಬ್ರಹ್ಮಲೋಕದ ಸುಖವೂ ಪ್ರಾಪ್ತವಾಗುವುವು.

೧೨. ಈ ಮೂರು ಧರ್ಮಕಾರ್ಯಗಳನ್ನೂ ಯಾವನು ಮಾಡುತ್ತಾನೋ ಅವನು ಧರ್ಮಗಳನ್ನೆಲ್ಲ ಮಾಡಿದಂತೆಯೇ ಸರಿ. ಇವನ್ನು ತಿರಸ್ಕರಿಸಿದನೆಂದರೆ ಮಿಕ್ಕ ಸತ್ಕಾರ್ಯಗಳೆಲ್ಲವೂ ನಿಷ್ಫಲವಾಗುವುವು.

೧೩. ಆ ಮೂವರು ಬದುಕಿರುವವರೆಗೂ ಬೇರೆ ಧರ್ಮಕಾರ್ಯವನ್ನೇನೂ ಮಾಡಬೇಕಾಗಿಲ್ಲ. ತನ್ನ ಸುಖದಲ್ಲೂ ಶ್ರೇಯಸ್ಸಿನಲ್ಲೂ ಆಸಕ್ತನಾದವನು ಅವರ ಶುಶ್ರೂಷೆಯನ್ನು ಅನುದಿನವೂ ಮಾಡಬೇಕು.

೧೪. ಅವರ ಇಷ್ಟಕ್ಕೆ ಅನುಗುಣವಾಗಿ ಮನಸ್ಸು, ಮಾತು ಮತ್ತು ಕೆಲಸ ಗಳೆಂಬ ತ್ರಿಕರಣಗಳಿಂದ ಯಾವಯಾವ ಸೇವೆಯನ್ನು ಮಾಡಬಹುದೋ ಅದೆಲ್ಲ ವನ್ನೂ ಅವರಿಗೆ ಸಲ್ಲಿಸಬೇಕು. ಮನುಷ್ಯನು ಆ ಮೂವರಲ್ಲೂ ತನ್ನ ಕರ್ತವ್ಯವನ್ನು ಎಡೆಬಿಡದೆ ನಡೆಸಬೇಕು.

॥ ಯಮ ಉವಾಚ ॥

ಕೃತೇನ ಕಾರ್ಮೇಣ ನಿವರ್ತಯಾಶು
ಧರ್ಮೋ ನ ತೇಭ್ಯೋಽಪಿ ಹಿ ಉಚ್ಯತೇ ಚ ।
ಮಮೋಪರೋಧಸ್ತವ ಚ ಕ್ಲಮಃ ಸ್ಯಾತ್
ತಥಾಧುನಾ ತೇನ ತವ ಬ್ರವೀಮಿ ॥೧೫॥

ಗುರುಪೂಜಾರತಿರ್ಭರ್ತಾ ತ್ವಂ ಚ ಸಾಧ್ವೀ ಪತಿವ್ರತಾ ।
ವಿನಿವರ್ತಸ್ವ ಧರ್ಮಜ್ಞೇ ಗ್ಲಾನಿರ್ಭವತಿ ತೇಽಧುನಾ ॥೧೬॥

॥ ಸಾವಿತ್ರ್ಯುವಾಚ ॥

ಪತಿರ್ಹಿ ದೈವತಂ ಸ್ತ್ರೀಣಾಂ ಪತಿರೇವ ಪರಾಯಣಂ ।
ಅನುಗಮ್ಯಃ ಸ್ತ್ರಿಯಾ ಸಾಧ್ವ್ಯಾ ಪತಿಃ ಪ್ರಾಣಧನೇಶ್ವರಃ ॥೧೭॥

---

೧೫. ಯಮನು ಹೇಳಿದನು.—ಎಲೌ ಸಾವಿತ್ರೀ, ನೀನು ಕೋರಿದ ಬಯಕೆ ನೆರವೇರಿತು. ಎಂದರೆ ನೀನು ನಿನ್ನ ಹಿರಿಯರಿಗೆ ಬೇಕಾದಷ್ಟು ಸೇವೆಯನ್ನು ಮಾಡಿರುವೆ. ಇನ್ನು ಬೇಗನೆ ಹಿಂದಿರುಗು. ಮೃತರನ್ನು ಅನುಸರಿಸಿ ಹೋಗುವುದು ಧರ್ಮವಲ್ಲ. ಭೂಮಿಯಲ್ಲಿಯೇ ಇದ್ದುಕೊಂಡು ಅವರಿಗಾಗಿ ನಡೆಸಬೇಕಾದ ಎಷ್ಟೋ ಧರ್ಮಕಾರ್ಯವುಂಟೆಂದು ಶಾಸ್ತ್ರದಲ್ಲಿ ಹೇಳಿದೆ. ನನಗೂ ಅಡ್ಡಿ; ನಿನಗೂ ಆಯಾಸ. ಅದುದರಿಂದ ನಿನಗೆ ನಾನು ಹೀಗೆ ಹೇಳುತ್ತೇನೆ.

೧೬. ನಿನ್ನ ಪತಿಯು ಗುರುಗಳ ಸೇವೆಯಲ್ಲಿ ಆಸಕ್ತನಾಗಿದ್ದವನು. ನೀನೂ ಸಹ ಸದ್ಧರ್ಮನಿಷ್ಠೆ, ಪ್ರತಿವ್ರತೆ. ಎಲೌ ಧರ್ಮಜ್ಞಳೇ, ಇನ್ನು ಹಿಂದಿರುಗು. ನಿನಗೆ ಆಯಾಸವಾಗುವುದು.

೧೭. ಸಾವಿತ್ರಿ ಹೇಳಿದಳು.—ಸ್ತ್ರೀಯರಿಗೆ ಪತಿಯೇ ದೇವರು. ಪತಿಯೇ ಗತಿ. ಅವಳ ಪ್ರಾಣ, ಧನ ಇವುಗಳಿಗೆಲ್ಲ ಅವನೇ ಒಡೆಯ. ಆದುದರಿಂದ ಪತಿವ್ರತೆಯು ತನ್ನ ಪತಿಯನ್ನು ಅನುಸರಿಸಿ ಹೋಗಬೇಕು.

ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।
ಅಮಿತಸ್ಯ ಚ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥೧೮॥

ನೀಯತೇ ಯತ್ರ ಭರ್ತಾ ಮೇ ಸ್ವಯಂ ವಾ ಯತ್ರ ಗಚ್ಛತಿ ।
ಮಯಾಪಿ ತತ್ರ ಗಂತವ್ಯಂ ಯಥಾಶಕ್ತಿ ಸುರೋತ್ತಮ ॥೧೯॥

ಪತಿಮಾದಾಯ ಗಚ್ಛಂತಮನುಗಂತುಮಹಂ ಯದಾ ।
ತ್ವಾಂ ದೇವ ನ ಹಿ ಶಕ್ಷ್ಯಾಮಿ ತದಾ ತ್ಯಕ್ಷ್ಯಾಮಿ ಜೀವಿತಂ ॥೨೦॥

ಮನಸ್ವಿನೀ ತು ಯಾ ಕಾಚಿದ್ವೈಧವ್ಯಾಕ್ಷರದೂಷಿತಾ ।
ಮುಹೂರ್ತಮಪಿ ಜೀವೇತ ಮಂಡನಾರ್ಹಾ ಹ್ಯಮಂಡಿತಾ ॥೨೧॥

---

೧೮. ತಂದೆ, ಸಹೋದರ, ಮಗ ಇವರು ಕೊಡುವುದೆಲ್ಲವೂ ಮಿತವಾಗಿಯೇ ಇರುತ್ತದೆ. ಪತಿಯು ಮಾತ್ರ ಅಪರಿಮಿತವಾಗಿ ಕೊಡುತ್ತಾನೆ. ಅಂತಹವನನ್ನು ಯಾವಸ್ತ್ರೀಯು ತಾನೆ ಪೂಜಿಸದಿದ್ದಾಳು ?

೧೯. ದೇವತೆಗಳಲ್ಲಿ ಶ್ರೇಷ್ಠನಾದ ಎಲೈ ಯಮರಾಜಾ, ನನ್ನ ಪತಿಯನ್ನು ಯಾರಾದರೂ ಕರೆದೊಯ್ಯಲಿ, ಅಥವಾ ಅವನಾಗಿಯೇ ಎಲ್ಲಿಗಾದರೂ ಹೋಗಲಿ ; ನನ್ನ ಕೈಲಾದಷ್ಟುಮಟ್ಟಿಗೆ ಅವನನ್ನು ಹಿಂಬಾಲಿಸುವುದು ನನ್ನ ಧರ್ಮ.

೨೦. ದೇವಾ, ನನ್ನ ಪತಿಯ ಪ್ರಾಣವನ್ನು ತೆಗೆದುಕೊಂಡು ಹೋಗುತ್ತಿರುವ ನಿನ್ನನ್ನು ಅನುಸರಿಸುವುದು ನನ್ನ ಕರ್ತವ್ಯ. ಯಾವಾಗ ನನಗೆ ಅದು ಸಾಧ್ಯವಿಲ್ಲವೆಂದು ತೋರುತ್ತದೆಯೋ ಆಗ ನಾನು ಪ್ರಾಣವನ್ನು ಬಿಡುವೆನು.

೨೧. ಮಾನಿಷ್ಠಳಾದ ಹೆಂಗಸು ಯಾವಳೇ ಆಗಲಿ ವಿಧವೆಯೆಂಬ ಹೆಸರಿನಿಂದ ನಿಂದೆಗೆ ಗುರಿಯಾಗಿ ಮುಹೂರ್ತಕಾಲ ಬದುಕಿದ್ದರೂ ಸಾಕು; ಅವಳು ಎಷ್ಟೇ ಅಲಂಕರಿಸಿಕೊಂಡಿದ್ದರೂ ಅಲಂಕಾರರಹಿತಳೇ ಸರಿ.

॥ ಯಮ ಉವಾಚ ॥

ಪತಿವ್ರತೇ ಮಹಾಭಾಗೇ ಪರಿತುಷ್ಟೋಽಸ್ಮಿ ತೇ ಶುಭೇ ।
ವಿನಾ ಸತ್ಯವತಃ ಪ್ರಾಣೈರ್ವರಂ ವರಯ ಮಾ ಚಿರಂ ॥೨೨॥

॥ ಸಾವಿತ್ರ್ಯುವಾಚ ॥

ವಿನಷ್ಟಚಕ್ಷುಷೋ ರಾಜ್ಯಂ ಚಕ್ಷುಷಾ ಸಹ ಕಾರಯ ।
ಚ್ಯುತರಾಷ್ಟ್ರಸ್ಯ ಧರ್ಮಜ್ಞ ಶ್ವಶುರಸ್ಯ ಮಹಾತ್ಮನಃ ॥೨೩॥

॥ ಯಮ ಉವಾಚ ॥

ದೂರೇ ಪಥೇ ಗಚ್ಛ ನಿವರ್ತ ಭದ್ರೇ
ಭವಿಷ್ಯತೀದಂ ಸಕಲಂ ತ್ವಯೋಕ್ತಂ ।
ಮಮೋಪರೋಧಸ್ತವ ಚ ಕ್ಲಮಃ ಸ್ಯಾತ್
ತಥಾಧುನಾ ತೇನ ತವ ಬ್ರವೀಮಿ ॥೨೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ
ಪ್ರಥಮವರಲಾಭೋ ನಾಮ ದಶಾಧಿಕದ್ವಿಶತತಮೋಽಧ್ಯಾಯಃ

---

೨೨. ಯಮನು ಹೇಳಿದನು.—ಎಲೌ ಪತಿವ್ರತೇ, ಮಹಾಮಹಿಮಳೇ, ಕಲ್ಯಾಣೀ, ನಾನು ಮೆಚ್ಚಿದ್ದೇನೆ. ಸತ್ಯವಂತನ ಪ್ರಾಣಗಳನ್ನು ಬಿಟ್ಟು ಬೇರೆ ಯಾವ ವರವನ್ನಾದರೂ ಕೇಳು; ತಡಮಾಡಬೇಡ.

೨೩. ಸಾವಿತ್ರಿ ಹೇಳಿದಳು.—ನನ್ನ ಮಾವನು ರಾಜ್ಯವನ್ನೂ ಕಣ್ಣುಗಳನ್ನೂ ಕಳೆದು ಕೊಂಡಿರುವನು. ಓ ಧರ್ಮರಾಜಾ, ಆತನಿಗೆ ಈ ಎರಡನ್ನೂ ಮತ್ತೆ ಕರುಣಿಸು.

೨೪. ಯಮನು ಹೇಳಿದನು.—ಕಲ್ಯಾಣೀ, ಬಹುದೂರ ನಡೆದು ಬಂದಿರುವೆ. ಇನ್ನು ಹೋಗು; ಹಿಂದಿರುಗು. ನೀನು ಹೇಳಿದುದೆಲ್ಲವೂ ನೆರವೇರುವುದು. ನನಗೂ ಅಡ್ಡಿ; ನಿನಗೂ ಶ್ರಮ. ಆದುದರಿಂದ ಈಗ ನಿನಗೆ ಹೀಗೆ ಹೇಳುತ್ತಿದ್ದೇನೆ.

# ಅಧ್ಯಾಯ ೨೧೦

## ಅಧ್ಯಾಯದ ಸಾರಾಂಶ

ಸಾವಿತ್ರಿಗೂ ಯಮದೇವನಿಗೂ ನಡೆದ ಸಂವಾದವನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಸೌದೆಯನ್ನು ಸೀಳುತ್ತಿದ್ದ ಸತ್ಯವಂತನಿಗೆ ತಲೆ ನೋವಾಯಿತು. ಅವನು ಸಾವಿತ್ರಿಯ ತೊಡೆಯಮೇಲೆ ತಲೆಯಿಟ್ಟುಕೊಂಡು ಮಲಗಿದನು. ಯಮಧರ್ಮರಾಜನು ಬಂದು ಅವನ ಪ್ರಾಣಗಳನ್ನು ತೆಗೆದುಕೊಂಡು ಹೊರಟನು. ಸಾವಿತ್ರಿ ಅವನನ್ನು ನೋಡಿ ತಾನೂ ಹಿಂದೆ ಹೋದಳು. ಹಿಂದಿರುಗುವಂತೆ ಯಮನು ಅವಳಿಗೆ ಹೇಳಿದನು. ಪತಿಯನ್ನು ಅನುಸರಿಸುವುದೇ ಪತಿವ್ರತೆಯ ಧರ್ಮವೆಂದೂ ಆದಕಾರಣ ತಾನು ಹಿಂದಿರುಗುವುದಿಲ್ಲವೆಂದೂ ಅವಳು ಉತ್ತರವಿತ್ತಳು. ಅವಳ ಪತಿಭಕ್ತಿಗೆ ಯಮನು ಮೆಚ್ಚಿ ಅವಳ ಮಾವನಿಗೆ ನಷ್ಟವಾಗಿದ್ದ ರಾಜ್ಯವೂ ಕಣ್ಣೂ ಮತ್ತೆ ಬರುವುವೆಂದು ವರವನ್ನು ಕರುಣಿಸಿದನು. ಅವಳಿಗೆ ಹಿಂದಕ್ಕೆ ಹೋಗುವಂತೆ ಹೇಳಿ ತಾನು ಮುಂದೆ ನಡೆದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಪ್ರಥಮವರಲಾಭವೆಂಬ ಇನ್ನೂರಹತ್ತನೆಯ ಅಧ್ಯಾಯವು ಮುಗಿದುದು.

## ಅಥೈಕಾದಶಾಧಿಕದ್ವಿಶತತಮೋಽಧ್ಯಾಯಃ

|| ಸಾವಿತ್ರ್ಯುವಾಚ ||

ಕುತಃ ಕ್ಲಮಃ ಕುತೋ ದುಃಖಂ ಸದ್ಭಿಃ ಸಹ ಸಮಾಗಮೇ ।
ಸತಾಂ ತಸ್ಮಾನ್ನ ಮೇ ಗ್ಲಾನಿಸ್ತ್ವತ್ಸಮೀಪೇ ಸುರೋತ್ತಮ || ೧ ||

ಸಾಧೂನಾಂ ವಾಪ್ಯಸಾಧೂನಾಂ ಸಂತ ಏವ ಸದಾ ಗತಿಃ ।
ನೈವಾಸತಾಂ ನೈವಸತಾಮಸಂತೋ ನೈವಮಾತ್ಮನಃ || ೨ ||

ವಿಷಾಗ್ನಿಸರ್ಪಶಸ್ತ್ರೇಭ್ಯೋ ನ ತಥಾ ಜಾಯತೇ ಭಯಂ
ಅಕಾರಣಜಗದ್ವೈರಿಖಲೇಭ್ಯೋ ಜಾಯತೇ ಯಥಾ || ೩ ||

ಸಂತಃ ಪ್ರಾಣಾನಪಿ ತ್ಯಕ್ತ್ವಾ ಪರಾರ್ಥಂ ಕುರ್ವತೇ ಯಥಾ ।
ತಥಾಽಸಂತೋಽಪಿ ಸಂತ್ಯಜ್ಯ ಪರಪೀಡಾಸು ತತ್ಪರಾಃ || ೪ ||

---

೧. ಸಾವಿತ್ರಿ ಹೇಳಿದಳು.—ಸುರೋತ್ತಮಾ, ಸತ್ಪುರುಷರ ಸಹವಾಸದಲ್ಲಿದ್ದಾಗ ಸಾಧುಗಳಿಗೆ ಆಯಾಸವೆಲ್ಲಿಯದು? ದುಃಖವೆಲ್ಲಿಯದು? ಆದುದರಿಂದ ನನಗೆ ನಿನ್ನ ಸಮೀಪದಲ್ಲಿ ಶ್ರಮವಾಗುವುದಿಲ್ಲ.

೨. ಸಾಧುಗಳಿಗೂ ಅಸಾಧುಗಳಿಗೂ ಯಾವಾಗಲೂ ಸತ್ಪುರುಷರೇ ಹಿತೈಷಿಗಳು. ದುರ್ಜನರು ದುರ್ಜನರಿಗಾಗಲಿ, ಸಜ್ಜನರಿಗಾಗಲಿ, ಕೊನೆಗೆ ತಮಗೇ ಆಗಲಿ ಹಿತವನ್ನು ಸಾಧಿಸಲಾರರು.

೩. ನಿಷ್ಕಾರಣವಾಗಿ ಜಗತ್ತಿಗೆ ದ್ವೇಷಿಗಳಾಗಿರುವ ದುರ್ಜನರಿಂದ ಆಗುವಷ್ಟು ಭಯವು ವಿಷ, ಅಗ್ನಿ, ಸರ್ಪ, ಶಸ್ತ್ರ ಇವುಗಳಿಂದಾಗದು.

೪. ಸಜ್ಜನರು ತಮ್ಮ ಪ್ರಾಣಗಳನ್ನಾದರೂ ತೊರೆದು ಇತರರಿಗೆ ಉಪಕಾರ ಮಾಡಲು ತೊಡಗುವರು. ಹಾಗೆಯೇ ದುರ್ಜನರೂ ಸಹ ತಮ್ಮ ಪ್ರಾಣಗಳನ್ನಾದರೂ ಬಿಟ್ಟು ಪರರಿಗೆ ಪೀಡೆಯನ್ನು ಉಂಟುಮಾಡುವುದರಲ್ಲಿ ಆಸಕ್ತಿ ವಹಿಸುವರು.

ತ್ಯಜತ್ಯಸೂನಯಂ ಲೋಕಸ್ತೃಣವದ್ಯಸ್ಯ ಕಾರಣಾತ್ ।
ಪರೋಪಘಾತಶಕ್ತಾಸ್ತಂ ಪರಲೋಕಂ ತಥಾಽಸತಃ ॥ ೫ ॥

ನಿಕಾಯೇಷು ನಿಕಾಯೇಷು ತಥಾ ಬ್ರಹ್ಮಾ ಜಗದ್ಗುರುಃ ।
ಅಸತಾಮುಪಘಾತಾಯ ರಾಜಾನಂ ಕೃತವಾನ್ ಸ್ವಯಂ ॥ ೬ ॥

ನರಾನ್ ಪರೀಕ್ಷಯೇದ್ರಾಜಾ ಸಾಧೂನ್ ಸಂಮಾನಯೇತ್ಸದಾ ।
ನಿಗ್ರಹಂ ಚಾಸತಾಂ ಕುರ್ಯಾತ್ಸ ಲೋಕೇ ಲೋಕವಿತ್ತಮಃ ॥ ೭ ॥

ನಿಗ್ರಹೇಣಾಸತಾಂ ರಾಜಾ ಸತಾಂ ಚ ಪರಿಪಾಲನಾತ್ ।
ಏತಾವದೇವ ಕರ್ತವ್ಯಂ ರಾಜ್ಞಾ ಸ್ವರ್ಗಮಭೀಪ್ಸುನಾ ॥ ೮ ॥

ರಾಜಕೃತ್ಯಂ ಹಿ ಲೋಕೇಷು ನಾಸ್ತ್ಯನ್ಯಜ್ಜಗತೀಪತೇ ।
ಅಸತಾಂ ನಿಗ್ರಹಾದೇವ ಸತಾಂ ಚ ಪರಿಪಾಲನಾತ್ ॥ ೯ ॥

---

೫. ಈ ಲೋಕದಲ್ಲಿರುವ ಸತ್ಪುರುಷರು ಪರಲೋಕದ ಸಾಧನೆಗಾಗಿ ತಮ್ಮ ಪ್ರಾಣವನ್ನು ಹುಲ್ಲಿನಂತೆ ಅಲಕ್ಷ್ಯವಾಗಿ ಕಂಡು ಅದನ್ನು ಬಿಡುವದಕ್ಕೆ ಕೂಡ ಸಿದ್ಧರಾಗಿದ್ದಾರೆ. ದುರ್ಜನರಾದರೋ ಇತರರಿಗೆ ತೊಂದರೆಯನ್ನು ಕೊಡುವದರಲ್ಲೇ ತಮ್ಮ ಸಾಮರ್ಥ್ಯವನ್ನು ತೋರಿಸುತ್ತ ಅದೇ ಪರಲೋಕವನ್ನು ಹುಲ್ಲಿನಂತೆ ಕೀಳಾಗಿ ಎಣಿಸಿ ಅದರ ಕಡೆಗೆ ಮನಸ್ಸನ್ನೇ ಕೊಡುವುದಿಲ್ಲ.

೬. ಆಯಾ ಪಂಗಡಗಳಲ್ಲಿರುವ ದುರ್ಜನರನ್ನು ಶಿಕ್ಷಿಸುವುದಕ್ಕಾಗಿ ಜಗದ್ಗುರುವಾದ ಬ್ರಹ್ಮನೇ ರಾಜನನ್ನು ಕಲ್ಪಿಸಿರುವನು.

೭. ರಾಜನಾದವನು ಮನುಷ್ಯರನ್ನು ಪರೀಕ್ಷಿಸಬೇಕು. ಸಜ್ಜನರನ್ನು ಯಾವಾಗಲೂ ಗೌರವಿಸಬೇಕು. ಅಂತಹವನೇ ಪ್ರಪಂಚವನ್ನು ಚೆನ್ನಾಗಿ ಬಲ್ಲವನು.

೮. ಸ್ವರ್ಗವನ್ನು ಬಯಸುವ ರಾಜನು ದುರ್ಜನರನ್ನು ಶಿಕ್ಷಿಸಿ ಸಜ್ಜನರನ್ನು ರಕ್ಷಿಸಬೇಕು. ಇದೇ ಅವನ ಕರ್ತವ್ಯ.

೯. ಎಲೈ ಜಗತ್ಪ್ರಭೂ, ಲೋಕದಲ್ಲಿ ದುಷ್ಟರನ್ನು ದಂಡಿಸಿ ಸತ್ಪುರುಷರನ್ನು ಪಾಲಿಸುವುದೇ ರಾಜನ ಕೆಲಸ. ಬೇರೆ ಯಾವುದೂ ಅಲ್ಲ.

ರಾಜಭಿಶ್ಶಾಸ್ಯಶಾಸ್ತ್ರಾನಾಮಸತಾಂ ಶಾಸಿತಾ ಭವಾನ್ ।
ತೇನ ತ್ವಮಧಿಕೋ ದೇವೋ ದೇವೇಭ್ಯಃ ಪ್ರತಿಭಾಸಿ ಮೇ ॥೧೦॥

ಜಗತ್ತು ಧಾರ್ಯತೇ ಸದ್ಭಿಃ ಸತಾಮಗ್ರ್ಯಸ್ತಥಾ ಭವಾನ್ ।
ತೇನ ತ್ವಾಮನುಯಾಂತ್ಯಾ ಮೇ ಕ್ಲಮೋ ದೇವ ನ ವಿದ್ಯತೇ ॥೧೧॥

॥ ಯಮ ಉವಾಚ ॥

ತುಷ್ಟೋಽಸ್ಮಿ ತೇ ವಿಶಾಲಾಕ್ಷಿ ವಚನೈರ್ಧರ್ಮಸಂಗತೈಃ ।
ವಿನಾ ಸತ್ಯವತಃ ಪ್ರಾಣಾದ್ವರಂ ವರಯ ಮಾ ಚಿರಂ ॥೧೨॥

॥ ಸಾವಿತ್ರ್ಯುವಾಚ ॥

ಸಹೋದರಾಣಾಂ ಭ್ರಾತೄಣಾಂ ಕಾಮಯಾಮಿ ಶತಂ ವಿಭೋ ।
ಅನಪತ್ಯಃ ಪಿತಾ ಪ್ರೀತಿಂ ಪುತ್ರಲಾಭಾತ್ಪ್ರಯಾತು ಮೇ ॥೧೩॥

---

೧೦. ರಾಜರ ಶಿಕ್ಷೆಗೂ ಕೂಡ ಸಿಕ್ಕದಿರುವ ದುಷ್ಟರನ್ನು ದಂಡಿಸುವವನು ನೀನು. ಆದುದರಿಂದ ನೀನು ದೇವತೆಗಳಲ್ಲೆಲ್ಲ ಅಧಿಕನೆಂದು ಭಾವಿಸುತ್ತೇನೆ.

೧೧. ದೇವಾ, ಲೋಕವು ನಿಂತಿರುವುದು ಸತ್ಪುರುಷರಿಂದ. ಸಜ್ಜನರಲ್ಲೆಲ್ಲ ಮೇಲಾದವನು ನೀನು. ಆದುದರಿಂದ ನಿನ್ನ ಹಿಂದೆ ಬರುತ್ತಿರುವ ನನಗೆ ಬಳಲಿಕೆಯಿಲ್ಲ.

೧೨. ಯಮನು ಹೇಳಿದನು.—ಕಣ್ಣುಗಳು ವಿಶಾಲವಾಗಿರುವ ಎಲೌ ಸಾವಿತ್ರೀ, ಧರ್ಮಯುಕ್ತವಾದ ನಿನ್ನ ಮಾತುಗಳಿಂದ ಸಂತುಷ್ಟನಾಗಿದ್ದೇನೆ. ಸತ್ಯವಂತನ ಪ್ರಾಣಹೊರತು ಬೇರೆ ಯಾವುದಾದರೂ ವರವನ್ನು ಕೇಳಿಕೋ. ತಡಮಾಡಬೇಡ.

೧೩. ಸಾವಿತ್ರಿ ಹೇಳಿದಳು.—ದೇವಾ, ನನಗೆ ಒಡಹುಟ್ಟಿದ ನೂರುಜನ ತಮ್ಮಂದಿರು ಆಗಬೇಕೆಂದು ಬಯಸುತ್ತೇನೆ. ಸಂತಾನರಹಿತನಾದ ನನ್ನ ತಂದೆಯು ಪುತ್ರಲಾಭದಿಂದ ಸಂತೋಷಪಡಲಿ.

ತಾನುವಾಚ ಯಮೋ ಗಚ್ಛ ಯಥಾಗತಮನಿಂದಿತೇ ।
ಔರ್ಧ್ವದೈಹಿಕಕಾರ್ಯೇಷು ಯತ್ನಂ ಭರ್ತುಃ ಸಮಾಚರ ॥೧೪॥

ನಾನುಗಂತುಮಯಂ ಶಕ್ಯಸ್ತ್ವಯಾ ಲೋಕಾಂತರಂ ಗತಃ ।
ಪತಿವ್ರತಾಸಿ ತೇನ ತ್ವಂ ಮುಹೂರ್ತಂ ಮಮ ಯಾಸ್ಯಸಿ ॥೧೫॥

ಗುರುಶುಶ್ರೂಷಣಾದ್ಭದ್ರೇ ತಥಾ ಸತ್ಯವತೋ ಮಹತ್ ।
ಪುಣ್ಯಂ ಸಮಾರ್ಜಿತಂ ಯೇನ ನಯಾಮ್ಯೇನಮಹಂ ಸ್ವಯಂ ॥೧೬॥

ಏತಾವದೇವ ಕರ್ತವ್ಯಂ ಪುರುಷೇಣ ವಿಜಾನತಾ ।
ಮಾತುಃ ಪಿತುಶ್ಚ ಶುಶ್ರೂಷಾ ಗುರೋಶ್ಚ ವರವರ್ಣಿನಿ ॥೧೭॥

ತೋಷಿತಂ ತ್ರಯಮೇತಚ್ಚ ಸದಾ ಸತ್ಯವತಾ ವನೇ ।
ಪೂಜಿತಂ ವಿಜಿತಃ ಸ್ವರ್ಗಸ್ತ್ವಯಾನೇನ ಚಿರಂ ಶುಭೇ ॥೧೮॥

---

೧೪. ಯಮನು ಅವಳಿಗೆ ಹೇಳಿದನು. ಎಲೌ ಕೀರ್ತಿಶಾಲಿನೀ, ನೀನು ಬಂದದಾರಿಯಲ್ಲಿ ಹಿಂದಿರುಗು. ನಿನ್ನ ಪತಿಯ ಉತ್ತರಕ್ರಿಯಾದಿಗಳನ್ನು ನಡೆಸು.

೧೫. ಲೋಕಾಂತರಗತನಾದ ನಿನ್ನ ಪತಿಯನ್ನು ಅನುಸರಿಸುವುದು ಸಾಧ್ಯವಿಲ್ಲ. ನೀನು ಪತಿವ್ರತೆಯಾಗಿರುವ ಕಾರಣ ಮುಹೂರ್ತಕಾಲವಾದರೂ ನನ್ನ ಹಿಂದೆ ಬರುವವಳಾದೆ.

೧೬. ಓ ಕಲ್ಯಾಣೀ, ಗುರುಸೇವೆಯನ್ನು ಮಾಡಿ ನಿನ್ನ ಪತಿಯಾದ ಸತ್ಯವಂತನು ಬಹಳ ಪುಣ್ಯವನ್ನು ಸಂಪಾದಿಸಿದನು. ಆದಕಾರಣ ನಾನೇ ಬಂದು ಅವನನ್ನು ಒಯ್ಯುತ್ತಿರುವೆನು.

೧೭. ತಾಯಿ, ತಂದೆ, ಗುರು ಇವರ ಶುಶ್ರೂಷೆಯನ್ನು ನಡೆಸಬೇಕು. ವಿವೇಕಿಯಾದ ಮನುಷ್ಯನ ಕರ್ತವ್ಯವೇ ಇದು.

೧೮. ಓ ಮಂಗಳಾಂಗೀ, ಸತ್ಯವಂತನೂ ನೀನೂ ಅರಣ್ಯದಲ್ಲಿ ಬಹುಕಾಲದಿಂದ ಈ ಮೂವರನ್ನೂ ಎಡೆಬಿಡದೆ ಸಂತೋಷಪಡಿಸಿ ಪೂಜಿಸಿದಿರಿ. ಸ್ವರ್ಗವನ್ನು ವಶಪಡಿಸಿಕೊಂಡಿರಿ.

ತಪಸಾ ಬ್ರಹ್ಮಚರ್ಯೇಣ ಅಗ್ನಿಶುಶ್ರೂಷಯಾ ಶುಭೇ ।
ಪುರುಷಾಃ ಸ್ವರ್ಗಮಾಯಾಂತಿ ಗುರುಶುಶ್ರೂಷಯಾ ತಥಾ ||೧೯||

ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ ।
ನ ಚೈತೇऽಪ್ಯವಮಂತವ್ಯಾ ಬ್ರಾಹ್ಮಣೇನ ವಿಶೇಷತಃ ||೨೦||

ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।
ಮಾತಾ ಪೃಥಿವ್ಯಾ ಮೂರ್ತಿಸ್ತು ಭ್ರಾತಾ ವೈ ಮೂರ್ತಿರಾತ್ಮನಃ ||೨೧||

ಜನ್ಮನಾ ಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ ।
ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ||೨೨||

ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ತು ಸರ್ವದಾ ।
ತೇಷ್ವೇವ ತ್ರಿಷು ತುಷ್ಟೇಷು ತಪಃ ಸರ್ವಂ ಸಮಾಪ್ಯತೇ ||೨೩||

ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ।
ನ ಚ ತೈರನನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ||೨೪||

---

೧೯. ತಪಸ್ಸು, ಬ್ರಹ್ಮಚರ್ಯ, ಅಗ್ನಿಸೇವೆ, ಗುರುಶುಶ್ರೂಷೆ ಇವುಗಳಿಂದ ಮನುಷ್ಯರು ಸ್ವರ್ಗವನ್ನು ಪಡೆಯುತ್ತಾರೆ.

೨೦. ಮನುಷ್ಯನು ಅದರಲ್ಲೂ ಮುಖ್ಯವಾಗಿ ಬ್ರಾಹ್ಮಣನು ಆಚಾರ್ಯ, ತಂದೆ, ತಾಯಿ, ಅಣ್ಣ ಇವರನ್ನು ಎಂದಿಗೂ ಅವಮಾನಪಡಿಸಬಾರದು.

೨೧. ಆಚಾರ್ಯನು ಬ್ರಹ್ಮನ ಸ್ವರೂಪ; ತಂದೆ ಪ್ರಜಾಪತಿಯ ಸ್ವರೂಪ; ತಾಯಿ ಭೂದೇವಿಯ ಸ್ವರೂಪ; ಒಡಹುಟ್ಟಿದವನಾದರೋ ತನ್ನ ಸ್ವರೂಪ.

೨೨. ಲೋಕದಲ್ಲಿ ಮನುಷ್ಯರು ಜನಿಸಿದರೆಂದರೆ ಅವರ ತಾಯಿತಂದೆಗಳು ಪಡುವ ಕ್ಲೇಶವೆಷ್ಟು! ನೂರುವರ್ಷಗಳಾದರೂ ಅದನ್ನು ತೀರಿಸುವುದು ಸಾಧ್ಯವಿಲ್ಲ.

೨೩. ಅವರಿಬ್ಬರಿಗೂ ಮತ್ತು ಆಚಾರ್ಯನಿಗೂ ಇಷ್ಟವಾದುದನ್ನು ಯಾವಾಗಲೂ ಮಾಡಬೇಕು. ಈ ಮೂವರು ಸಂತುಷ್ಟರಾದರೆ ಎಲ್ಲಬಗೆಯ ತಪಸ್ಸೂ ಪೂರ್ಣವಾದಂತೆಯೇ ಸರಿ.

೨೪. ಆ ಮೂವರ ಸೇವೆಯೇ ಶ್ರೇಷ್ಠವಾದ ತಪಸ್ಸೆನಿಸುವುದು. ಅವರ ಅಪ್ಪಣೆಯಿಲ್ಲದೆ ಬೇರೆ ಧರ್ಮವಾವುದನ್ನೂ ಮಾಡಬಾರದು.

ತ ಏವ ಹಿ ತ್ರಯೋ ಲೋಕಾಸ್ತ ಏವ ತ್ರಯ ಆಶ್ರಮಾಃ ।
ತ ಏವ ಚ ತ್ರಯೋ ವೇದಾಸ್ತ್ರ್ಯೈವೋಕ್ತಾಸ್ತ್ರಯೋಽಗ್ನಯಃ ॥೨೫॥

ಪಿತಾ ವೈ ಗಾರ್ಹ್ಯಪತ್ಯೋಽಗ್ನಿರ್ಮಾತಾ ದಕ್ಷಿಣತಃ ಸ್ಮೃತಃ ।
ಗುರುರಾಹವನೀಯಶ್ಚ ಸಾಗ್ನಿತ್ರೇತಾ ಗರೀಯಸೀ ॥೨೬॥

ತ್ರಿಷು ಪ್ರಮಾದ್ಯತೇ ನೈಷು ತ್ರೀಂಲ್ಲೋಕಾಞ್ಜಯತೇ ಗೃಹೀ
ದೀಪ್ಯಮಾನಃ ಸ್ವವಪುಷಾ ದೇವವದ್ದಿವಿ ಮೋದತೇ ॥೨೭॥

ಕೃತೇನ ಕಾಮೇನ ನಿವರ್ತ ಭದ್ರೇ ।
ಭವಿಷ್ಯತೀದಂ ಸಕಲಂ ತ್ವಯೋಕ್ತಂ
ಮಮೋಪರೋಧಸ್ತವ ಚ ಕ್ಲಮಃ ಸ್ಯಾತ್
ತಥಾಧುನಾ ತೇನ ತವ ಬ್ರವೀಮಿ ॥೨೮॥

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ ದ್ವಿತೀಯ ವರಲಾಭೋ ನಾಮೈಕಾದಶಾಧಿಕದ್ವಿಶತತಮೋಽಧ್ಯಾಯಃ**

---

೨೫. ಆ ಮೂವರೇ ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳು. ಅವರೇ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥಗಳೆಂಬ ಮೂರು ಆಶ್ರಮಗಳು. ಅವರೇ ಋಗ್ಯಜುಸ್ಸಾಮಗಳೆಂಬ ಮೂರು ವೇದಗಳು. ಅವರೇ ದಕ್ಷಿಣಾ, ಗಾರ್ಹಪತ್ಯ, ಮತ್ತು ಆಹವನೀಯಗಳೆಂಬ ಮೂರು ಅಗ್ನಿಗಳು.

೨೬. ತಂದೆ ಗಾರ್ಹಪತ್ಯಾಗ್ನಿ; ತಾಯಿ ದಕ್ಷಿಣಾಗ್ನಿ; ಗುರು ಆಹವನೀಯಾಗ್ನಿ; ಈ ಮೂರುಬಗೆಯ ಅಗ್ನಿಗಳೇ ಶ್ರೇಷ್ಠವಾದುವು.

೨೭. ಈ ಮೂವರ ಸೇವೆಯಲ್ಲಿ ಆಲಸ್ಯಪಡದಿರುವ ಗೃಹಸ್ಥನಿಗೆ ಮೂರು ಲೋಕಗಳೂ ಸ್ವಾಧೀನವಾಗುವುವು. ಅವನು ಹೊಳೆಹೊಳೆವ ದಿವ್ಯದೇಹದಿಂದ ಸ್ವರ್ಗದಲ್ಲಿ ದೇವತೆಯಂತೆ ಸಂತೋಷಪಡುವನು.

೨೮ ಕಲ್ಯಾಣೀ, ನಿನ್ನ ಬಯಕೆ ನೆರವೇರಿತು. ನೀನು ಹೇಳಿದುದೆಲ್ಲವೂ ನಡೆಯುವುದು. ನನಗೂ ಅಡ್ಡಿ; ನಿನಗೂ ಶ್ರಮ. ಆದುದರಿಂದ ನಿನಗೆ ಹೀಗೆ ಹೇಳುತ್ತಿದ್ದೇನೆ.

## ಅಧ್ಯಾಯದ ಸಾರಾಂಶ

ಸಾವಿತ್ರಿಯು ಎರಡನೆಯ ವರವನ್ನು ಪಡೆದ ರೀತಿಯನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಸತ್ಪುರುಷರ ಸಹವಾಸದಿಂದ ಶಾಂತಿಯೂ ಸುಖವೂ ಲಭಿಸುವುವೆಂದೂ ಕಷ್ಟವು ತೋರುವುದಿಲ್ಲವೆಂದೂ, ಆದಕಾರಣ ತನಗೆ ಹಿಂದಿರಗಲು ಇಷ್ಟವಿಲ್ಲವೆಂದೂ ಸಾವಿತ್ರಿ ಹೇಳಿದಳು. ಯಮನು ತುಷ್ಟನಾಗಿ ಅವಳ ಬೇಡಿಕೆಯಂತೆ ಅವಳಿಗೆ ನೂರ್ವರು ತಮ್ಮಂದಿರು ಹುಟ್ಟುವಂತೆ ವರವನ್ನಿತ್ತನು. “ತಂದೆ, ತಾಯಿ, ಗುರು ಇವರ ಸೇವೆಯೇ ದೊಡ್ಡ ತಪಸ್ಸು. ಇದಕ್ಕಿಂತ ಬೇರೆ ಕರ್ತವ್ಯವಿಲ್ಲ. ಏಕನಿಷ್ಠೆಯಿಂದ ಈ ಧರ್ಮವನ್ನು ನಡೆಸುವಾತನು ಸಕಲಮನೋರಥಗಳನ್ನೂ ಪಡೆದು ಸ್ವರ್ಗದಲ್ಲಿ ವಿಹರಿಸುವನು.” ಎಂದು ಧರ್ಮೋಪದೇಶವನ್ನು ಮಾಡಿ ಹಿಂದಿರುಗಿ ಹೋಗುವಂತೆ ಅವಳಿಗೆ ಹೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ದ್ವಿತೀಯ ವರಲಾಭವೆಂಬ ಇನ್ನೂರಹನ್ನೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಾದಶಾಧಿಕದ್ವಿಶತತಮೋಽಧ್ಯಾಯಃ

|| ಸಾವಿತ್ರ್ಯುವಾಚ ||

ಧರ್ಮಾರ್ಜನೇ ಸುರಶ್ರೇಷ್ಠ ಕುತೋ ಗ್ಲಾನಿಃ ಶ್ರಮಸ್ತಥಾ ।
ತ್ವತ್ಪಾದಮೂಲಸೇವಾ ಚ ಪರಮಂ ಧರ್ಮಕಾರಣಂ || ೧ ||

ಧರ್ಮಾರ್ಜನಂ ತಥಾ ಕಾರ್ಯಂ ಪುರುಷೇಣ ವಿಜಾನತಾ ।
ತಲ್ಲಾಭಃ ಸರ್ವಲಾಭೇಭ್ಯೋ ನಿತ್ಯಮೇವ ವಿಶಿಷ್ಯತೇ || ೨ ||

ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗೋ ಜನ್ಮನಃ ಫಲಂ ।
ಧರ್ಮಹೀನಸ್ಯ ಕಾಮಾರ್ಥೌ ವಂಧ್ಯಾಸುತಸಮೌ ಪ್ರಭೋ || ೩ ||

ಧರ್ಮಾದರ್ಥಸ್ತಥಾ ಕಾಮೋ ಧರ್ಮಾಲ್ಲೋಕದ್ವಯಂ ತಥಾ ।
ಧರ್ಮ ಏಕೋಽನುಯಾತ್ಯೇನಂ ಯತ್ರ ಕ್ವಚನ ಗಾಮಿನಂ || ೪ ||

---

೧. ಸಾವಿತ್ರಿ ಹೇಳಿದಳು.—ಎಲೈ ದೇವೋತ್ತಮಾ, ಧರ್ಮವನ್ನು ಆರ್ಜಿಸುವಾಗ ಶ್ರಮವೆಂದರೇನು ? ಬಳಲಿಕೆಯೆಲ್ಲಿಯದು ? ನಿನ್ನ ಪಾದಗಳ ಸೇವೆಯೇ ಧರ್ಮಸಂಪಾದನೆಗೆ ಶ್ರೇಷ್ಠವಾದ ಸಾಧನ.

೨. ವಿವೇಕಶಾಲಿಯು ಧರ್ಮವನ್ನು ಸಂಪಾದಿಸಬೇಕು. ಎಲ್ಲ ಲಾಭಗಳಿಗಿಂತ ಧರ್ಮಲಾಭವು ಯಾವಾಗಲೂ ಉತ್ತಮವಾದುದು.

೩. ಧರ್ಮ, ಅರ್ಥ, ಕಾಮ ಈ ಮೂರು ಪುರುಷಾರ್ಥಗಳೂ ತ್ರಿವರ್ಗವೆನಿಸುವುವು. ಇವೇ ಜೀವನದ ಫಲ. ದೇವಾ, ಬಂಜೆಗೆ ಹೇಗೆ ಮಕ್ಕಳಾಗುವುದಿಲ್ಲವೋ ಹಾಗೆ ಧರ್ಮಹೀನನಿಗೆ ಅರ್ಥಕಾಮಗಳು ಎಂದಿಗೂ ಸಿದ್ಧಿಸುವುದಿಲ್ಲ.

೪. ಧರ್ಮದಿಂದ ಅರ್ಥವೂ ಕಾಮವೂ ಲಭಿಸುವುವು. ಧರ್ಮದಿಂದ ಇಹಲೋಕ ಪರಲೋಕಗಳಲ್ಲಿ ಸುಖವುಂಟಾಗುವುದು. ಮಾನವನು ಎಲ್ಲಿ ಹೋಗಲಿ ಅವನನ್ನು ಅನುಸರಿಸಿ ಬರತಕ್ಕುದು ಧರ್ಮವೊಂದೇ.

ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ।
ಏಕೋ ಹಿ ಜಾಯತೇ ಜಂತುರೇಕ ಏವ ವಿಪದ್ಯತೇ ॥ ೫ ॥

ಧರ್ಮಸ್ತಮನು ಯಾತ್ಯೇಕೋ ನ ಸುಹೃನ್ನ ಚ ಬಾಂಧವಾಃ ।
ಕ್ರಿಯಾ ಸೌಭಾಗ್ಯಲಾವಣ್ಯಂ ಸರ್ವಂ ಧರ್ಮೇಣ ಲಭ್ಯತೇ ॥ ೬ ॥

ಬ್ರಹ್ಮೇಂದ್ರೋಪೇಂದ್ರಶರ್ವೇಂದುಯಮಾರ್ಕಾಗ್ನ್ಯನಿಲಾಂಭಸಾಂ ।
ವಸ್ವಶ್ವಿಧನದಾದ್ಯಾನಾಂ ಯೇ ಲೋಕಾಃ ಸರ್ವಕಾಮದಾಃ ॥ ೭ ॥

ಧರ್ಮೇಣ ತಾನವಾಪ್ನೋತಿ ಪುರುಷಃ ಪುರುಷಾಂತಕ ।
ಮನೋಹರಾಣಿ ದ್ವೀಪಾನಿ ವರ್ಷಾಣಿ ಸುಸುಖಾನಿ ಚ ॥ ೮ ॥

ಪ್ರಯಾಂತಿ ಧರ್ಮೇಣ ನರಾಸ್ತಥೈವಾಮರಚಂದನಾಃ ।
ನಂದನಾದೀನಿ ಮುಖ್ಯಾನಿ ದೇವೋದ್ಯಾನಾನಿ ಯಾನಿ ಚ ॥ ೯ ॥

---

೫. ಉಳಿದುದೆಲ್ಲ ಶರೀರದೊಡನೆ ಹಾಳಾಗುತ್ತದೆ. ಪ್ರಾಣಿಯು ಒಂಟಿಯಾಗಿಯೇ ಹುಟ್ಟುತ್ತದೆ ; ಒಂಟಿಯಾಗಿಯೇ ಸಾಯುತ್ತದೆ

೬. ಧರ್ಮವೊಂದೇ ಮಾನವನ ಜೊತೆಯಲ್ಲಿ ಹೋಗುತ್ತದೆ. ಸ್ನೇಹಿತನಾಗಲಿ ಬಂಧುಬಳಗದವರಾಗಲಿ ಹೋಗುವುದಿಲ್ಲ. ಸತ್ಕರ್ಮ, ಸೌಭಾಗ್ಯ, ಲಾವಣ್ಯ ಇವೆಲ್ಲವೂ ಧರ್ಮದಿಂದ ಉಂಟಾಗುತ್ತವೆ.

೭. ಯಮರಾಜಾ, ಬ್ರಹ್ಮ, ಇಂದ್ರ, ಉಪೇಂದ್ರ, ಈಶ್ವರ, ಚಂದ್ರ, ಯಮ, ಸೂರ್ಯ, ಅಗ್ನಿ, ವಾಯು, ಜಲ, ವಸುಗಳು, ಅಶ್ವಿನೀದೇವತೆಗಳು, ಕುಬೇರ ಮುಂತಾದವರ ಇಷ್ಟಾರ್ಥದಪ್ರದಗಳಾದ ಲೋಕಗಳನ್ನು ಮನುಷ್ಯನು ಧರ್ಮದಿಂದ ಸಾಧಿಸುವನು.

೮-೧೦. ಧರ್ಮದಿಂದ ಜನರು ಮನೋಹರವಾದ ದ್ವೀಪಗಳಿಗೂ ಬಹು ಸುಖಮಯವಾದ ಕಿಂಪುರುಷಾದಿವರ್ಷಗಳಿಗೂ ಹೋಗುತ್ತಾರೆ. ದೇವಯೋಗ್ಯವಾದ ಚಂದನವೃಕ್ಷಗಳಿಂದ ತುಂಬಿದ ವನಗಳಲ್ಲಿ ವಿಹರಿಸುತ್ತಾರೆ. ನಂದನ

ತಾನಿ ಪುಣ್ಯೇನ ಲಭ್ಯಂತೇ ನಾಕಪೃಷ್ಠಂ ತಥಾ ನರೈಃ ।
ವಿಮಾನಾನಿ ವಿಚಿತ್ರಾಣಿ ತಥೈವಾಪ್ಸರಸಃ ಶುಭಾಃ ॥೧೦॥

ತೈಜಸಾನಿ ಶರೀರಾಣಿ ಸದಾ ಪುಣ್ಯವತಾಂ ಫಲಂ ।
ರಾಜ್ಯಂ ನೃಪತಿಪೂಜಾ ಚ ಕಾಮಸಿದ್ಧಿಸ್ತಥೇಪ್ಸಿತಾ ॥೧೧॥

ಸಂಸ್ಕಾರಾಣಿ ಚ ಮುಖ್ಯಾನಿ ಫಲಂ ಪುಣ್ಯಸ್ಯ ದೃಶ್ಯತೇ ।
ರುಕ್ಮವೈಡೂರ್ಯದಂಡಾನಿ ಚಂದ್ರಾಂಶುಸದೃಶಾನಿ ಚ ॥೧೨॥

ಚಾಮರಾಣಿ ಸುರಾಧ್ಯಕ್ಷ ಭವಂತಿ ಶುಭಕರ್ಮಣಾಂ ।
ಪೂರ್ಣೇಂದುಮಂಡಲಾಭೇನ ರತ್ನಾಂಶುಕವಿಕಾಶಿನಾ ॥೧೩॥

ಧಾರ್ಯತಾಂ ಯಾತಿ ಛತ್ರೇಣ ನರಃ ಪುಣ್ಯೇನ ಕರ್ಮಣಾ ।
ಜಯಶಂಖಸ್ವರೌಘೇಣ ಸೂತಮಾಗಧನಿಸ್ವನೈಃ ॥೧೪॥

---

ಮೊದಲಾದ ದೇವೋದ್ಯಾನಗಳೂ, ಸ್ವರ್ಗಾದಿ ಲೋಕಗಳೂ ಚಿತ್ರವಿಚಿತ್ರವಾದ ವಿಮಾನಗಳೂ, ಸುಂದರಿಯರಾದ ಅಪ್ಸರಸ್ತ್ರೀಯರೂ ಪುಣ್ಯದಿಂದ ಲಭ್ಯರಾಗುತ್ತಾರೆ.

೧೧. ತೇಜೋಮಯವಾದ ಶರೀರಗಳು ಪುಣ್ಯವಂತರಿಗೆ ದೊರೆಯುವ ಫಲ. ರಾಜ್ಯ, ರಾಜಗೌರವ, ಮನೋರಥಸಿದ್ಧಿ, ಮುಖ್ಯವಾದ ಸಂಸ್ಕಾರಗಳು ಇವೆಲ್ಲ ಪುಣ್ಯದಿಂದ ಲಭಿಸುವುವು.

೧೨. ದೇವತೆಗಳಲ್ಲಿ ಮುಖ್ಯನೆನಿಸಿದ ಓ ಯಮರಾಜಾ, ಚಿನ್ನ, ವೈಡೂರ್ಯ ಇವುಗಳಿಂದ ಅಲಂಕೃತವಾದ ದಂಡದಿಂದಲೂ ಸೂರ್ಯಸದೃಶ್ಯವಾದ ಕಾಂತಿಯಿಂದಲೂ ಹೊಳೆಯುವ ಚಾಮರಗಳು ಪುಣ್ಯಮಾಡಿದವರಿಗೆ ದೊರೆಯುವುವು.

೧೩. ರತ್ನದ ಕಿರಣಗಳಿಂದ ಬೆಳಗುವ, ಪೂರ್ಣಚಂದ್ರಮಂಡಲದ ಆಕಾರದ ಕೊಡೆಯನ್ನು ಹಿಡಿಸಿಕೊಳ್ಳುವ ಭಾಗ್ಯವು ಪುಣ್ಯಕರ್ಮದಿಂದ ಬರುತ್ತದೆ.

೧೪. ಜಯಘೋಷವೂ ಶಂಖಧ್ವನಿಯೂ ಆಗುತ್ತಿರಲು, ಹೊಗಳುಭಟ್ಟರು ಹೊಗಳುತ್ತಿರಲು, ದಿವ್ಯವಾದ ಆಸನದ ಮೇಲೆ ಕುಳಿತು ಸುವರ್ಣ ಪಾತ್ರೆಗಳಿಂದ ಅಭಿಷೇಕಮಾಡಿಸಿಕೊಳ್ಳುವ ಅದೃಷ್ಟವು ಪುಣ್ಯಕರ್ಮದಿಂದ ಉಂಟಾಗುತ್ತದೆ.

**ವರಾಸನಂ ಸಭೃಂಗಾರಂ ಫಲಂ ಪುಣ್ಯಸ್ಯ ಕರ್ಮಣಃ ।**
**ವರಾನ್ನಪಾನಂ ಗೀತಂ ಚ ಭೃತ್ಯಮಾಲ್ಯಾನುಲೇಪನಂ ॥೧೫॥**

**ರತ್ನವಸ್ತ್ರಾಣಿ ಮುಖ್ಯಾನಿ ಫಲಂ ಪುಣ್ಯಸ್ಯ ಕರ್ಮಣಃ ।**
**ರೂಪೌದಾರ್ಯಗುಣೋಪೇತಾಃ ಸ್ತ್ರಿಯಶ್ಚಾಪಿ ಮನೋಹರಾಃ ॥೧೬॥**

**ವಾಸಃ ಪ್ರಾಸಾದಪೃಷ್ಠೇಷು ಭವಂತಿ ಶುಭಕರ್ಮಣಃ ।**
**ಸುವರ್ಣಕಿಂಕಿಣೀಮಿಶ್ರಚಾಮರಾಪೀಡಧಾರಿಣಃ ॥೧೭॥**

**ವಹಂತಿ ತುರಗಾ ದೇವ ನರಂ ಪುಣ್ಯೇನ ಕರ್ಮಣಾ ।**
**ಹೇಮಕಕ್ಷ್ಯೈಶ್ಚ ಮಾತಂಗೈಶ್ಚಲತ್ಪರ್ವತಸಂನಿಭೈಃ ॥೧೮॥**

**ಕ್ಷೀಲದ್ಭಿಃ ಪಾದವಿನ್ಯಾಸೈರ್ಯಾಂತಿ ಪುಣ್ಯೇನ ಕರ್ಮಣಾ ।**
**ಸರ್ವಕಾಮಪ್ರದೇ ದೇವ ಸರ್ವಾಘದುರಿತಾಪಹೇ ॥೧೯॥**

---

೧೫. ದಿವ್ಯಭೋಜನ, ಪಾನ, ಗೀತ, ಗಂಧಪುಷ್ಪಗಳು, ರತ್ನಗಳು, ದಿವ್ಯ ವಸ್ತ್ರಗಳು, ಭೃತ್ಯವರ್ಗ ಇವೆಲ್ಲವೂ ಪುಣ್ಯಕರ್ಮದ ಫಲಗಳು.

೧೬. ರೂಪದಿಂದಲೂ ಔದಾರ್ಯದಿಂದಲೂ ಪೂರ್ಣರಾಗಿ ಮನಸ್ಸನ್ನು ಆಕರ್ಷಿಸುವ ಸ್ತ್ರೀಯರೂ, ಉಪ್ಪರಿಗೆ ಮನೆಗಳಲ್ಲಿ ವಾಸವೂ ಪುಣ್ಯಕರ್ಮದಿಂದ ಪ್ರಾಪ್ತವಾಗುವುವು.

೧೭. ದೇವಾ, ಚಿನ್ನದ ಕಿರುಗೆಜ್ಜೆಗಳಿಂದ ಅಲಂಕೃತವಾದ, ತಲೆಯ ಮೇಲೆ ಚಾಮರಗಳನ್ನೆತ್ತಿಕಟ್ಟಿ ಸಿಂಗರಿಸಿದ ಕುದುರೆಗಳು ಪುಣ್ಯಕರ್ಮವನ್ನು ಮಾಡಿದ ಪುರುಷನ ತೇರನ್ನೆಳೆಯುತ್ತವೆ.

೧೮. ನಡೆದಾಡುವ ಪರ್ವತಗಳಂತೆ ಕಾಣುವ, ಚಿನ್ನದ ತಡಿಗಳನ್ನು ಹೊದೆಸಿದ, ಗಂಭೀರವಾಗಿ ಹೆಜ್ಜೆಯಿಕ್ಕುತ್ತ ನಲಿದಾಡುವ ಆನೆಗಳ ಮೇಲೆ ಕುಳಿತು ಹೋಗಬೇಕಾದರೆ ಪುಣ್ಯಮಾಡಿರಬೇಕು.

೧೯. ಧರ್ಮರಾಜಾ, ಸಕಲಮನೋರಥಗಳನ್ನೂ ಈಡೇರಿಸಿ, ಎಲ್ಲಬಗೆಯ ಪಾಪಗಳನ್ನೂ ಪರಿಹರಿಸಬಲ್ಲ ಭಗವಂತನಲ್ಲಿ ನಿಶ್ಚಲವಾದ ಭಕ್ತಿ ಹುಟ್ಟಬೇಕಾದರೂ ಮನುಜರಿಗೆ ಸುಕೃತವಿರಬೇಕು.

ವಹಂತಿ ಭಕ್ತಿಂ ಪುರುಷಾಃ ಸದಾ ಪುಣ್ಯೇನ ಕರ್ಮಣಾ ।
ತಸ್ಯ ದ್ವಾರಾಣಿ ಯಜನಂ ತಪೋ ದಾನಂ ದಮಃ ಕ್ಷಮಾ ॥೨೦॥

ಬ್ರಹ್ಮಚರ್ಯಂ ತಥಾ ಸತ್ಯಂ ತೀರ್ಥಾನುಸರಣಂ ಶುಭಂ ।
ಸ್ವಾಧ್ಯಾಯಸೇವಾ ಸಾಧೂನಾಂ ಸಹವಾಸಃ ಸುರಾರ್ಚನಂ ॥೨೧॥

ಗುರೂಣಾಂ ಚೈವ ಶುಶ್ರೂಷಾ ಬ್ರಾಹ್ಮಣಾನಾಂ ಚ ಪೂಜನಂ ।
ಇಂದ್ರಿಯಾಣಾಂ ಜಯಶ್ಚೈವ ಬ್ರಹ್ಮಚರ್ಯಮಮತ್ಸರಂ ॥೨೨॥

ತಸ್ಮಾದ್ಧರ್ಮಃ ಸದಾ ಕಾರ್ಯೋ ನಿತ್ಯಮೇವ ವಿಜಾನತಾ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾಕೃತಂ ॥೨೩॥

ಬಾಲ ಏವ ಚರೇದ್ಧರ್ಮಮನಿತ್ಯಂ ದೇವ ಜೀವಿತಂ ।
ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯುರೇವಾಪತಿಷ್ಯತಿ ॥೨೪॥

ಪಶ್ಯತೋಽಪ್ಯಸ್ಯ ಲೋಕಸ್ಯ ಮರಣಂ ಪುರತಃ ಸ್ಥಿತಂ ।
ಅಮರಸ್ಯೇವ ಚರಿತಮತ್ಯಾಶ್ಚರ್ಯಂ ಸುರೋತ್ತಮ ॥೨೫॥

---

೨೦-೨೨. ಯಜ್ಞ, ತಪಸ್ಸು, ದಾನ, ಬಹಿರಿಂದ್ರಿಯನಿಗ್ರಹ, ಕ್ಷಮೆ, ಬಹ್ಮಚರ್ಯ, ಸತ್ಯ, ತೀರ್ಥಯಾತ್ರೆ, ವೇದಾಧ್ಯಯನ, ಸಾಧುಸಹವಾಸ, ದೇವತಾ ಪೂಜೆ, ಗುರುಶುಶ್ರೂಷೆ, ಬ್ರಾಹ್ಮಣಸತ್ಕಾರ, ಇಂದ್ರಿಯಜಯ, ದ್ವೇಷರಾಹಿತ್ಯ ಇವು ಧರ್ಮಸಂಪಾದನೆಯ ಸಾಧನಗಳು.

೨೩. ಆದುದರಿಂದ ಪ್ರಾಜ್ಞನಾದವನು ಯಾವಾಗಲೂ ಧರ್ಮವನ್ನು ಆಚರಿಸ ಬೇಕು. ಇವನು ಪುಣ್ಯಕರ್ಮವನ್ನು ಮುಗಿಸಿದನೇ ಇಲ್ಲವೇ ಎಂದು ಮೃತ್ಯು ಕಾಯುವುದಿಲ್ಲವಷ್ಟೆ!

೨೪. ಹುಡುಗನಾಗಿದ್ದಾಗಲೇ ಧರ್ಮವನ್ನಾಚರಿಸಲು ತೊಡಗಬೇಕು. ಏಕೆಂದರೆ ದೇವಾ, ಪ್ರಾಣವು ಸ್ಥಿರವಲ್ಲ; ಯಾವಗಳಿಗೆಯಲ್ಲಿ ಯಾವನಿಗೆ ಮೃತ್ಯುವು ಒದಗುತ್ತದೆಯೋ ಯಾರು ಬಲ್ಲರು?

೨೫. ದೇವೋತ್ತಮಾ, ಲೋಕವು ಕಣ್ಣುಬಿಟ್ಟುಕೊಂಡು ಎಚ್ಚರಿಕೆಯಿಂದ ನೋಡುತ್ತಲೇ ಇರಲಿ, ಮೃತ್ಯುವು ಎದುರಿಗೇ ನಿಂತಿರುವುದು. ದೇವತೆಗಳ ವೃತ್ತಾಂತ ದಂತೆ ಅದರ ಚರಿತ್ರೆಯೂ ಕೂಡ ಅತ್ಯಾಶ್ಚರ್ಯಕರವಾಗಿದೆ.

**ಯುವತ್ವಾಪೇಕ್ಷಯಾ ಬಾಲೋ ವೃದ್ಧತ್ವಾಪೇಕ್ಷಯಾ ಯುವಾ ।**
**ಮೃತ್ಯೋರುತ್ಸಂಗಮಾರೂಢಃ ಸ್ಥವಿರಃ ಕಿಮಪೇಕ್ಷತೇ ॥೨೬॥**

**ತತ್ರಾಪಿ ವಿಂದತಸ್ತ್ರಾಣಂ ಮೃತ್ಯುನಾ ತಸ್ಯ ಕಾ ಗತಿಃ**
**ನ ಭಯಂ ಮರಣಂ ಚೈವ ಪ್ರಾಣಿನಾಮಭಯಂ ಕ್ವಚಿತ್ ।**
**ತತ್ರಾಪಿ ನಿರ್ಭಯಾಃ ಸಂತಃ ಸದಾ ಸುಕೃತಕಾರಿಣಃ ॥೨೭॥**

**॥ ಯಮ ಉವಾಚ ॥**

**ತುಷ್ಟೋಽಸ್ಮಿ ತೇ ವಿಶಾಲಾಕ್ಷಿ ವಚನೈರ್ಧರ್ಮಸಂಗತೈಃ ।**
**ವಿನಾ ಸತ್ಯವತಃ ಪ್ರಾಣಾನ್ವರಂ ವರಯ ಮಾ ಚಿರಂ ॥೨೮॥**

**॥ ಸಾವಿತ್ರ್ಯುವಾಚ ॥**

**ವರಯಾಮಿ ತ್ವಯಾ ದತ್ತಂ ಪುತ್ರಾಣಾಂ ಶತಮೌರಸಂ ।**
**ಅನಪತ್ಯಸ್ಯ ಲೋಕೇಷು ಗತಿಃ ಕಿಲ ನ ವಿದ್ಯತೇ ॥೨೯॥**

---

೨೬-೨೭. ಪ್ರತಿಯೊಬ್ಬನೂ ಮೃತ್ಯುವಿನ ತೊಡೆಯಮೇಲೆಯೇ ಕುಳಿತಿರುವನು. ಆದರೂ ಹುಡುಗನು "ಯೌವನವು ಬಂದಾದಮೇಲೆ ತಾನೆ ನನಗೆ ಮರಣದ ಯೋಚನೆ" ಎನ್ನುವನು. ಯುವಕನು "ಮುಪ್ಪುಬರಲಿ; ಆ ಬಳಿಕ ಸಾವಿನ ಚಿಂತೆ" ಎಂದು ಭಾವಿಸುವನು. ಮುದುಕನಿಗೆ ಮತ್ತೆಯಾವ ಅವಸ್ಥೆಯ ನಿರೀಕ್ಷಣೆಯಿದೆ? ಒಂದು ವೇಳೆ ಅವನು ಕೆಲಕಾಲ ಸಾಯದೆ ಬದುಕಿದನೆಂದು ತಿಳಿಯೋಣ. ಆದರೂ ಮುಂದೆ ಅವನ ಗತಿಯೇನು? ಆದುದರಿಂದ ಹೆದರಿಕೆಯಾಗಲಿ, ಮರಣವಾಗಲಿ ಪ್ರಾಣಿಗಳಿಗೆ ಎಂದಿಗೂ ಅಭಯವನ್ನು ಕೊಡಲಾರವು. ಪುಣ್ಯವಂತರಾದ ಸತ್ಪುರುಷರು ಮಾತ್ರ ಯಾವಾಗಲೂ ನಿರ್ಭೀತರಾಗಿಯೇ ಇರುವರು.

೨೮. ಯಮನು ಹೇಳಿದನು.—ವಿಸ್ತಾರವಾದ ಕಣ್ಣುಗಳುಳ್ಳ ಎಲೌ ಸಾವಿತ್ರೀ, ಧರ್ಮಯುಕ್ತವಾದ ಈ ನಿನ್ನ ಮಾತುಗಳಿಂದ ಸಂತುಷ್ಟನಾಗಿದ್ದೇನೆ· ಸತ್ಯವಂತನ ಪ್ರಾಣಗಳನ್ನು ಬಿಟ್ಟು ಬೇರೆ ವರವನ್ನು ಕೇಳು. ಸಾವಕಾಶ ಮಾಡಬೇಡ.

೨೯. ಸಾವಿತ್ರಿ ಹೇಳಿದಳು.—ನನ್ನ ಹೊಟ್ಟೆಯಲ್ಲಿ ನೂರುಜನ ಪುತ್ರರು ಹುಟ್ಟುವಂತೆ ನೀನು ಕರುಣಿಸಬೇಕೆಂದು ಬೇಡುತ್ತೇನೆ· ಲೋಕದಲ್ಲಿ ಸಂತಾನವಿಲ್ಲದವನಿಗೆ ಸದ್ಗತಿಯಿಲ್ಲವಷ್ಟೆ.

॥ ಯಮ ಉವಾಚ ॥

ಕೃತೇನ ಕಾಮೇನ ನಿವರ್ತ ಭದ್ರೇ
ಭವಿಷ್ಯತೀದಂ ಸಫಲಂ ಯಥೋಕ್ತಂ ।
ಮಮೋಪರೋಧಸ್ತವ ಚ ಕ್ಲಮಃ ಸ್ಯಾತ್
ತಥಾಧುನಾ ತೇನ ತವ ಬ್ರವೀಮಿ ॥೩೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ
ತೃತೀಯವರಲಾಭೋ ನಾಮ ದ್ವಾದಶಾಧಿಕದ್ವಿಶತತಮೋಽಧ್ಯಾಯಃ

---

೩೦. ಯಮನು ಹೇಳಿದನು.—ಎಲೌ ಮಂಗಳಾಂಗೀ, ನಿನ್ನ ಕೋರಿಕೆ ನೆರವೇರಿತು. ಇನ್ನು ಹಿಂದಿರುಗು. ನೀನು ಹೇಳಿದುದೆಲ್ಲವೂ ಈಡೇರುವುದು. ಇನ್ನು ನನಗೆ ಅಡ್ಡಿಯೂ ನಿನಗೆ ಶ್ರಮವೂ ಆಗುವುವು. ಆದುದರಿಂದ ಹೀಗೆ ಹೇಳಿದ್ದೇನೆ.

## ಅಧಾಯದ ಸಾರಾಂಶ

ಸಾವಿತ್ರಿಯು ಮೂರನೆಯ ವರವನ್ನು ಪಡೆದ ಬಗೆಯನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಧರ್ಮದ ಮಹಿಮೆಯನ್ನೂ ಅದನ್ನು ಸಾಧಿಸುವ ವಿಧಾನವನ್ನೂ ಸಾವಿತ್ರಿ ವಿವರಿಸಿ ಹೇಳಿದಳು. ಯಮಧರ್ಮರಾಜನಿಗೆ ಬಹು ಸಂತೋಷವಾಯಿತು. ಅವಳ ಪತಿಯ ಪ್ರಾಣಗಳನ್ನು ಹೊರತು ಮತ್ತಾವ ವರವನ್ನಾದರೂ ಕೊಡುವುದಾಗಿ ಅವನು ಹೇಳಿದನು. ತನ್ನ ಹೊಟ್ಟೆಯಲ್ಲಿ ನೂರುಜನ ಗಂಡುಮಕ್ಕಳಾಗಬೇಕೆಂದು ಆಕೆ ಬೇಡಿದಳು. ಯಮನು ಹಾಗೆಯೇ ಆಗಲೆಂದು ಅನುಗ್ರಹಿಸಿ ಅವಳಿಗೆ ಹಿಂದಕ್ಕೆ ಹೋಗುವಂತೆ ಹೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ತೃತೀಯವರಲಾಭವೆಂಬ ಇನ್ನೂರಹನ್ನೆರಡನೆಯ ಅಧ್ಯಾಯವು ಮುಗಿದುದು.

## ಅಥ ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ

|| ಸಾವಿತ್ರ್ಯುವಾಚ ||

ಧರ್ಮಾಧರ್ಮವಿಧಾನಜ್ಞ ಸರ್ವಧರ್ಮಪ್ರವರ್ತಕ ।
ತ್ವಮೇವ ಜಗತೋ ನಾಥಃ ಪ್ರಜಾಸಂಯಮನೋ ಯಮಃ || ೧ ||

ಕರ್ಮಣಾಮನುರೂಪೇಣ ಯಸ್ಮಾದ್ಯಮಯಸೇ ಪ್ರಜಾಃ ।
ತಸ್ಮಾದ್ವೈ ಪ್ರೋಚ್ಯಸೇ ದೇವ ಯಮ ಇತ್ಯೇವ ನಾಮತಃ || ೨ ||

ಧರ್ಮೇಣೇಮಾಃ ಪ್ರಜಾಃ ಸರ್ವಾ ಯಸ್ಮಾದ್ರಂಜಯಸೇ ವಿಭೋ ।
ತಸ್ಮಾತ್ತೇ ಧರ್ಮರಾಜೇತಿ ನಾಮ ಸದ್ಭಿರ್ನಿಗದ್ಯತೇ || ೩ ||

ಸುಕೃತಂ ದುಷ್ಕೃತಂ ಚೋಭೇ ಪುರೋಧಾಯ ಯದಾ ಜನಾಃ ।
ತ್ವತ್ಸಕಾಶಂ ಮೃತಾ ಯಾಂತಿ ತಸ್ಮಾತ್ತ್ವಂ ಮೃತ್ಯುರುಚ್ಯತೇ || ೪ ||

---

೧. ಸಾವಿತ್ರಿ ಹೇಳಿದಳು.—ಧರ್ಮಾಧರ್ಮಗಳ ವಿಧಾನವನ್ನು ಅರಿತವನೂ ಸರ್ವಧರ್ಮಗಳ ಪ್ರವರ್ತಕನೂ ಆದ ಓ ದೇವಾ, ನೀನೇ ಜಗತ್ತಿನ ಅಧಿಪತಿ; ಪ್ರಜೆಗಳನ್ನು ನಿಗ್ರಹಿಸುವವನು. ಆದುದರಿಂದ ಯಮನೆನಿಸಿಕೊಂಡಿರುವೆ.

೨. ದೇವಾ, ಅವರವರ ಕರ್ಮಗಳಿಗೆ ಅನುರೂಪವಾಗಿ ಪ್ರಜೆಗಳನ್ನು ನಿಗ್ರಹಿಸುವೆಯಾದಕಾರಣ ಯಮನೆಂಬ ಹೆಸರಿನಿಂದಲೇ ನಿನ್ನನ್ನು ಕರೆಯುತ್ತಾರೆ.

೩. ಧರ್ಮದಿಂದ ಈ ಪ್ರಜೆಗಳೆಲ್ಲರನ್ನೂ ನೀನು ಸಂತೋಷಪಡಿಸುವೆ. ಆದಕಾರಣ ಪ್ರಭೋ, ನಿನ್ನನ್ನು ಸಾಧುಗಳು ಧರ್ಮರಾಜನೆಂದು ಹೇಳುತ್ತಾರೆ.

೪. ಜನರು ಮರಣಾನಂತರ ತಮ್ಮ ಪುಣ್ಯಪಾಪಗಳೆರಡನ್ನೂ ಮುಂದೆ ಬಿಟ್ಟುಕೊಂಡು ನಿನ್ನ ಬಳಿಗೆ ಬರುತ್ತಾರೆ. ಆದುದರಿಂದ ನೀನು ಮೃತ್ಯುವೆನಿಸಿ ಕೊಂಡಿರುವೆ.

ಕಾಲಂ ಕಲಾರ್ಧಂ ಕಲಯರ್ಸ ಸರ್ವೇಷಾಂ ತ್ವಂ ಹಿ ತಿಷ್ಠಸಿ ।
ತಸ್ಮಾತ್ಕಾಲೇತಿ ತೇ ನಾಮ ಪ್ರೋಚ್ಯತೇ ತತ್ವದರ್ಶಿಭಿಃ || ೫ ||

ಸರ್ವೇಷಾಮೇವ ಭೂತಾನಾಂ ಯಸ್ಮಾದಂತಕರೋ ಮಹಾನ್ ।
ತಸ್ಮಾತ್ತ್ವಮಂತಕಃ ಪ್ರೋಕ್ತಃ ಸರ್ವದೇವೈರ್ಮಹಾದ್ಯುತೇ || ೬ ||

ವಿವಸ್ವತಸ್ತ್ವಂ ತನಯಃ ಪ್ರಥಮಃ ಪರಿಕೀರ್ತಿತಃ ।
ತಸ್ಮಾದ್ವೈವಸ್ವತೋ ನಾಮ್ನಾ ಸರ್ವಲೋಕೇಷು ಕಥ್ಯಸೇ || ೭ ||

ಆಯುಷ್ಯೇ ಕರ್ಮಣಿ ಕ್ಷೀಣೇ ಗೃಹ್ಣಾಸಿ ಪ್ರಸಭಂ ಜನಂ ।
ತದಾ ತ್ವಂ ಕಥ್ಯಸೇ ಲೋಕೇ ಸರ್ವಪ್ರಾಣಿಹರೇತಿ ವೈ || ೮ ||

ತವ ಪ್ರಸಾದಾದ್ದೇವೇಶ ತ್ರಯೀಧರ್ಮೋ ನ ನಶ್ಯತಿ ।
ತವ ಪ್ರಸಾದಾದ್ದೇವೇಶ ಧರ್ಮೇ ತಿಷ್ಠಂತಿ ಜಂತವಃ ।
ತವ ಪ್ರಸಾದಾದ್ದೇವೇಶ ಸಂಕರೋ ನ ಪ್ರಜಾಯತೇ || ೯ ||

---

೫. ನೀನು ಎಲ್ಲ ಜಂತುಗಳ ಆಯುಷ್ಕಾಲವನ್ನು ಅರ್ಧಕಲಾಪ್ರಮಾಣವೂ ವ್ಯತ್ಯಾಸವಾಗದಂತೆ ಲೆಕ್ಕ ಹಾಕುತ್ತಿರುವೆ. ಆದುದರಿಂದ ತತ್ವಜ್ಞಾನಿಗಳು ನಿನ್ನನ್ನು ಕಾಲನೆಂದು ಕರೆಯುತ್ತಾರೆ.

೬. ಬಹುತೇಜಸ್ವಿಯಾದ ಎಲೈ ಯಮರಾಜಾ, ನೀನು ಎಲ್ಲ ಪ್ರಾಣಿಗಳಿಗೂ ಅಂತವನ್ನು ಎಂದರೆ ನಾಶವನ್ನು ಉಂಟುಮಾಡುವವನಾದ ಕಾರಣ ಸಕಲ ದೇವತೆಗಳೂ ನಿನ್ನನ್ನು ಅಂತಕನೆಂದು ಹೇಳುತ್ತಾರೆ.

೭. ನೀನು ವಿವಸ್ವಂತನ ಎಂದರೆ ಸೂರ್ಯನ ಹಿರಿಯಮಗ. ಆದುದರಿಂದ ಲೋಕದಲ್ಲಿ ನೀನು ವೈವಸ್ವತನೆಂಬ ಹೆಸರಿನಿಂದ ಪ್ರಖ್ಯಾತನಾಗಿರುವೆ.

೮. ಆಯುಸ್ಸಿಗೆ ಕಾರಣವಾದ ಕರ್ಮವು ಕ್ಷಯಿಸಿದ ಕೂಡಲೆ ಮನುಷ್ಯರನ್ನು ನೀನು ಕರೆದೊಯ್ಯುವೆ. ಅದರಿಂದ ನಿನ್ನನ್ನು ಸರ್ವಪ್ರಾಣಿಹರನೆಂದು ಕರೆಯುತ್ತಾರೆ.

೯. ಓ ದೇವೇಶ್ವರಾ, ನಿನ್ನ ಅನುಗ್ರಹದಿಂದ ಪ್ರಾಣಿಗಳು ಧರ್ಮಮಾರ್ಗದಲ್ಲಿ ನಡೆಯುತ್ತಿವೆ. ಧರ್ಮರಾಜಾ, ನಿನ್ನ ಕೃಪೆಯಿಂದ ವರ್ಣಸಾಂಕರ್ಯವಾಗದೆ ನಿಂತಿದೆ.

ಸತಾಂ ಸದಾ ಗತಿರ್ದೇವ ತ್ವಮೇವ ಪರಿಕೀರ್ತಿತಃ ।
ಜಗತೋಽಸ್ಯ ಜಗನ್ನಾಥ ಮರ್ಯಾದಾಪರಿಪಾಲಕಃ ॥೧೦॥

ಪಾಹಿ ಮಾಂ ತ್ರಿದಶಶ್ರೇಷ್ಠ ದುಃಖಿತಾಂ ಶರಣಾಗತಾಂ ।
ಪಿತರೌ ಚ ತಥೈವಾಸ್ಯ ರಾಜಪುತ್ರಸ್ಯ ದುಃಖಿತೌ ॥೧೧॥

॥ ಯಮ ಉವಾಚ ॥

ಸ್ತವೇನ ಭಕ್ತ್ಯಾ ಧರ್ಮಜ್ಞೇ ಮಯಾ ತುಷ್ಟೇನ ಸತ್ಯವಾನ್ ।
ತವ ಭರ್ತಾ ವಿಮುಕ್ತೋಽಯಂ ಲಬ್ಧಕಾಮಾ ವ್ರಜಾಬಲೇ ॥೧೨॥

ರಾಜ್ಯಂ ಕೃತ್ವಾ ತ್ವಯಾ ಸಾರ್ಧಂ ವರ್ಷಾಣಾಂ ಶತಪಂಚಕಂ ।
ನಾಕಪೃಷ್ಠಮಥಾರುಹ್ಯ ತ್ರಿದಶೈಃ ಸಹ ರಂಸ್ಯತೇ ॥೧೩॥

ತ್ವಯಿ ಪುತ್ರಶತಂ ಚಾಪಿ ಸತ್ಯವಾಞ್ಜನಯಿಷ್ಯತಿ ।
ತೇ ಚಾಪಿ ಸರ್ವೇ ರಾಜಾನಃ ಕ್ಷತ್ರಿಯಾಸ್ತ್ರಿದಶೋಪಮಾಃ ॥೧೪॥

---

೧೦. ದೇವಾ, ಸತ್ಪುರುಷರಿಗೆ ಯಾವಾಗಲೂ ನೀನೇ ಗತಿಯೆಂದೆನಿಸಿರುವೆ. ಜಗನ್ನಾಥಾ, ಈ ಲೋಕದ ಮರ್ಯಾದೆಯನ್ನು ಕಾಪಾಡತಕ್ಕವನು ನೀನೇ.

೧೧. ಎಲೈ ದೇವಶ್ರೇಷ್ಠನೇ, ದುಃಖಕ್ಕೆ ಗುರಿಯಾಗಿ ನಿನ್ನನ್ನು ಮರೆ ಹೊಕ್ಕಿರುವ ನನ್ನನ್ನು ಕಾಪಾಡು. ಈ ರಾಜಪುತ್ರನ ತಾಯಿತಂದೆಗಳೂ ಹಾಗೆಯೇ ದುಃಖಿತರಾಗಿರುವರು. ಅವರನ್ನೂ ಸಲಹು.

೧೨. ಯಮನು ಹೇಳಿದನು.—ಧರ್ಮವನ್ನರಿತ ಎಲೌ ಸಾವಿತ್ರೀ, ನಿನ್ನ ಭಕ್ತಿಪೂರ್ವಕವಾದ ಸ್ತೋತ್ರದಿಂದ ಸಂತೋಷಗೊಂಡೆನು. ನಿನ್ನ ಪತಿಯನ್ನು ಬಿಡುಗಡೆಮಾಡಿದ್ದೇನೆ. ಓ ನಾರೀಮಣೀ, ನಿನ್ನ ಇಷ್ಟಾರ್ಥವು ನೆರವೇರಿತು. ಇನ್ನು ಹೋಗು.

೧೩. ನಿನ್ನ ಪತಿಯು ನಿನ್ನೊಡಗೂಡಿ ಐನೂರು ವರ್ಷಗಳ ಕಾಲ ರಾಜ್ಯ ಭಾರಮಾಡಿ, ತರುವಾಯ ಸ್ವರ್ಗವನ್ನೇರಿ ದೇವತೆಗಳೊಡನೆ ವಿಹರಿಸುವನು.

೧೪. ಸತ್ಯವಂತನಿಗೆ ನಿನ್ನಲ್ಲಿ ನೂರುಜನ ಮಕ್ಕಳು ಹುಟ್ಟುವರು. ಅವರೆಲ್ಲರೂ ದೇವತೆಗಳಿಗೆ ಸಮಾನರಾದ ಕ್ಷತ್ರಿಯಮುಖ್ಯರಾಗಿ ರಾಜ್ಯಭಾರ ಮಾಡುವರು. ಅವರು ಸಾವಿತ್ರೀಯರೆಂದು ನಿನ್ನ ಹೆಸರಿನಿಂದ ಪ್ರಖ್ಯಾತಿಪಡೆದು ಶಾಶ್ವತವಾಗಿರುವರು.

ಮುಖ್ಯಾಸ್ತ್ವನ್ನಾಮಪುತ್ರಾಸ್ತೇ ಭವಿಷ್ಯಂತಿ ಹಿ ಶಾಶ್ವತಾಃ ।
ಪಿತುಶ್ಚ ತೇ ಪುತ್ರಶತಂ ಭವಿತಾ ತವ ಮಾತರಿ ॥೧೫॥

ಮಾಲತ್ಯಾಂ ಮಾಲವಾ ನಾಮ ಶಾಶ್ವತಾಃ ಪುತ್ರಪೌತ್ರಿಣಃ ।
ಭ್ರಾತರಸ್ತೇ ಭವಿಷ್ಯಂತಿ ಕ್ಷತ್ರಿಯಾಸ್ತ್ರಿದಶೋಪಮಾಃ ॥೧೬॥

ಸ್ತೋತ್ರೇಣಾನೇನ ಧರ್ಮಜ್ಞೇ ಕಲ್ಯಮುತ್ಥಾಯ ಯಸ್ತು ಮಾಂ ।
ಕೀರ್ತಯಿಷ್ಯತಿ ತಸ್ಯಾಪಿ ದೀರ್ಘಮಾಯುರ್ಭವಿಷ್ಯತಿ ॥೧೭॥

॥ ಮತ್ಸ್ಯ ಉವಾಚ ॥

ಏತಾವದುಕ್ತ್ವಾ ಭಗವಾನ್ಯಮಸ್ತು
ಪ್ರಮುಚ್ಯ ತಂ ರಾಜಸುತಂ ಮಹಾತ್ಮಾ ।
ಅದರ್ಶನಂ ತತ್ರ ಯಮೋ ಜಗಾಮ
ಕಾಲೇನ ಸಾರ್ಧಂ ಸಹ ಮೃತ್ಯುನಾ ಚ ॥೧೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನೇ ಸತ್ಯವಜ್ಜೀವಿತ
ಲಾಭೋ ನಾಮ ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ

---

೧೫-೧೬. ನಿನ್ನ ತಂದೆಗೂ ಸಹ ನಿನ್ನ ತಾಯಿಯಾದ ಮಾಲವಿಯಲ್ಲಿ ನೂರ್ವರು ಪುತ್ರರು ಉದಿಸುವರು. ಆ ನಿನ್ನ ಸೋದರರು ಮಾಲವರೆಂಬ ಹೆಸರಿನಿಂದ ಪ್ರಸಿದ್ಧರಾಗಿ ಪುತ್ರಪೌತ್ರರನ್ನು ಪಡೆದು, ಕ್ಷತಿಯವೀರರಾಗಿ, ದೇವತೆಗಳಂತೆ ಪ್ರಕಾಶಿಸುವರು.

೧೭. ಎಲೌ ಧರ್ಮಜ್ಞಳೇ, ಪ್ರಾತಃಕಾಲದಲ್ಲೆದ್ದು ನನ್ನ ಈ ಸ್ತೋತ್ರವನ್ನು ಕೀರ್ತನಮಾಡುವಾತನು ದೀರ್ಘಾಯುವಾಗುವನು.

೧೮. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಮಹಾತ್ಮನೂ, ಪೂಜ್ಯನೂ ಆದ ಯಮನು ಇಷ್ಟೊಂದು ಹೇಳಿ, ಆ ರಾಜಪುತ್ರನನ್ನು ಬಿಟ್ಟು, ಕಾಲನೊಡನೆಯೂ ಮೃತ್ಯುವಿನೊಡನೆಯೂ ಅಲ್ಲೇ ಅದೃಶ್ಯನಾದನು.

## ಅಧ್ಯಾಯದ ಸಾರಾಂಶ

ಯಮನು ಸತ್ಯವಂತನ ಪ್ರಾಣವನ್ನು ಮರಳಿಕೊಟ್ಟ ವೃತ್ತಾಂತವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

ಸಾವಿತ್ರಿಯು ಯಮಧರ್ಮರಾಜನನ್ನು ಬಹುವಿಧವಾಗಿ ಹೊಗಳಿದಳು. ಯಮ, ಕಾಲ, ಅಂತಕ ಮುಂತಾದ ಹೆಸರುಗಳು ಬರಲು ಕಾರಣಗಳನ್ನು ತಿಳಿಸಿದಳು. ಆತನು ಆಕೆಯ ಧರ್ಮಜ್ಞತೆಗೆ ಬಹು ಸಂತೋಷಪಟ್ಟು ಸತ್ಯವಂತನನ್ನು ಬಿಡುಗಡೆ ಮಾಡಿದನು. ಸಾವಿತ್ರಿಗೂ ಅವಳ ತಾಯಿಗೂ ಶೂರರಾದ ನೂರು ಮಂದಿ ಮಕ್ಕಳು ಹುಟ್ಟಿ ಪ್ರಖ್ಯಾತರಾಗುವರೆಂದು ವರವಿತ್ತು ಅಲ್ಲೇ ಅದೃಶ್ಯನಾದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸತ್ಯವಂತನ ಜೀವಿತಲಾಭವೆಂಬ
ಇನ್ನೂರಹದಿಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುರ್ದಶಾಧಿಕದ್ವಿಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಸಾವಿತ್ರೀ ತು ತತಃ ಸಾಧ್ವೀ ಜಗಾಮ ವರವರ್ಣಿನೀ ।
ಪಥಾ ಯಥಾಗತೇನೈವ ಯತ್ರಾಸೀತ್ಸತ್ಯವಾನ್ಮೃತಃ ॥ ೧ ॥

ಸಾ ಸಮಾಸಾದ್ಯ ಭರ್ತಾರಂ ತಸ್ಯೋತ್ಸಂಗಗತಂ ಶಿರಃ ।
ಕೃತ್ವಾ ವಿವೇಶ ತನ್ವಂಗೀ ಲಂಬಮಾನೇ ದಿವಾಕರೇ ॥ ೨ ॥

ಸತ್ಯವಾನಪಿ ನಿರ್ಮುಕ್ತೋ ಧರ್ಮರಾಜಾಚ್ಛನೈಃ ಶನೈಃ ।
ಉನ್ಮೀಲಯತ ನೇತ್ರಾಭ್ಯಾಂ ಪ್ರಾಸ್ಫುರಚ್ಚ ನರಾಧಿಪ ॥ ೩ ॥

ತತಃ ಪ್ರತ್ಯಾಗತಪ್ರಾಣಃ ಪ್ರಿಯಾಂ ವಚನಮಬ್ರವೀತ್ ।
ಕ್ವಾಸೌ ಪ್ರಯಾತಃ ಪುರುಷೋ ಯೋ ಮಾಮಪ್ಯಪಕರ್ಷತಿ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬಳಿಕ ಪತಿವ್ರತೆಯೂ ಸೌಂದರ್ಯಶಾಲಿನಿಯೂ ಆದ ಸಾವಿತ್ರಿಯು ಬಂದ ದಾರಿಯನ್ನೇ ಹಿಡಿದು ಸತ್ಯವಂತನು ಮೃತನಾಗಿದ್ದೆಡೆಗೆ ಬಂದು ಸೇರಿದಳು.

೨. ಸೂರ್ಯನು ಮುಳುಗುವ ಹೊತ್ತಾಗಿತ್ತು. ಸಾವಿತ್ರಿಯು ಪತಿಯ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕುಳಿತಳು.

೩. ಓ ಭೂಪಾಲಕಾ, ಯಮರಾಜನಿಂದ ಬಿಡುಗಡೆ ಹೊಂದಿದ ಸತ್ಯವಂತನು ಮೆಲ್ಲಮೆಲ್ಲಗೆ ಕಣ್ಣು ತೆರೆದು ಎಚ್ಚೆತ್ತನು ; ಅಲುಗಾಡಿದನು.

೪ ಪ್ರಾಣಗಳು ಮರಳಿ ಬಂದ ಬಳಿಕ ಅವನು ಪ್ರಿಯಳಿಗಿಂತೆಂದನು. " ನನ್ನನ್ನು ಸೆಳೆದೊಯ್ದ ಆ ಮನುಷ್ಯನು ಎಲ್ಲಿಗೆ ಹೋದನು ?

ನ ಜಾನಾಮಿ ವರಾರೋಹೇ ಕಶ್ಚಾಸೌ ಪುರುಷಃ ಶುಭೇ ।
ವನೇಽಸ್ಮಿಞ್ಚಾರುಸರ್ವಾಂಗಿ ಸುಪ್ತಸ್ಯ ಚ ದಿನಂ ಗತಂ ॥ ೫ ॥

ಉಪವಾಸಪರಿಶ್ರಾಂತಾ ದುಃಖಿತಾ ಭವತೀ ಮಯಾ ।
ಅಸ್ಮದ್ದುರ್ಹೃದಯೇನಾದ್ಯ ಪಿತರೌ ದುಃಖಿತೌ ತಥಾ ।
ದ್ರಷ್ಟುಮಿಚ್ಛಾಮ್ಯಹಂ ಸುಭ್ರು ಗಮನೇ ತ್ವರಿತಾ ಭವ ॥ ೬ ॥

॥ ಸಾವಿತ್ರ್ಯುವಾಚ ॥

ಆದಿತ್ಯೋಽಸ್ತಮನುಪ್ರಾಪ್ತೋ ಯದಿ ತೇ ರುಚಿತಂ ಪ್ರಭೋ ।
ಆಶ್ರಮಂ ತು ಪ್ರಯಾಸ್ಯಾವಃ ಶ್ವಶುರೌ ಹೀನಚಕ್ಷುಷೌ ॥ ೭ ॥

ಯಥಾವೃತ್ತಂ ಚ ತತ್ರೈವ ತವ ವಕ್ಷ್ಯೇ ಯಥಾಶ್ರಮೇ ।
ಏತಾವದುಕ್ತ್ವಾ ಭರ್ತಾರಂ ಸಹ ಭರ್ತ್ರಾ ತದಾ ಯಯೌ ॥ ೮ ॥

ಆಸಸಾದಾಶ್ರಮಂ ಚೈವ ಸಹ ಭರ್ತ್ರಾ ನೃಪಾತ್ಮಜಾ ।
ಏತಸ್ಮಿನ್ನೇವ ಕಾಲೇ ತು ಲಬ್ಧಚಕ್ಷುರ್ಮಹೀಪತಿಃ ॥ ೯ ॥

---

೫. ಮಂಗಳಾಂಗೀ, ಎಲೌ ಸುಂದರೀ, ಆ ಪುರುಷನಾರೆಂಬುದೇ ನನಗೆ ತಿಳಿಯದು. ಈ ಕಾಡಿನಲ್ಲಿ ನಾನು ಹಗಲೆಲ್ಲ ಮಲಗಿ ನಿದ್ದೆಹೋದೆ.

೬. ನೀನು ನನಗೋಸ್ಕರವಾಗಿ ಉಪವಾಸವಿದ್ದು ಬಳಲಿದೆ. ದುಃಖಪಟ್ಟೆ. ಮತ್ತು ನನ್ನ ಈ ದುಷ್ಟಹೃದಯದಿಂದ ತಾಯಿತಂದೆಗಳೂ ದುಃಖಕ್ಕೊಳಗಾದರು. ಸುಂದರೀ, ಅವರನ್ನು ನೋಡಬಯಸುತ್ತೇನೆ. ಬೇಗನೆ ಹೊರಡು ಏಳು."

೭-೮. ಸಾವಿತ್ರಿ ಹೇಳಿದಳು.—ದೇವಾ, ಸೂರ್ಯನು ಮುಳುಗಿದನು. ನಿನಗೆ ಇಷ್ಟವಿದ್ದಲ್ಲಿ ಆಶ್ರಮಕ್ಕೆ ಹೋಗೋಣ. ಅತ್ತೆಮಾವಂದಿರಿಗೂ ಕಣ್ಣು ಕಾಣಿಸದು. ನಡೆದ ವಿಷಯವನ್ನೆಲ್ಲ ಅಲ್ಲಿಯೇ ಹೇಳುವೆನು. ಎಂದು ಹೇಳಿ ಅವಳು ಪತಿಯೊಡನೆ ಹೊರಟಳು.

೯-೧೦. ರಾಜಪುತ್ರಿಯಾದ ಸಾವಿತ್ರಿಯು ಪತಿಸಹಿತಳಾಗಿ ಆಶ್ರಮವನ್ನು ಸೇರಿದಳು. ಈ ನಡುವೆ ದ್ಯುಮತ್ಸೇನ ಮಹಾರಾಜನಿಗೆ ಕಣ್ಣುಬಂದಿತು. ಅವನೂ

ದ್ಯುಮತ್ಸೇನಃ ಸಭಾರ್ಯಸ್ತು ಪರ್ಯತಪ್ಯತ ಭಾರ್ಗವ ।
ಪ್ರಿಯಪುತ್ರಮಪಶ್ಯನ್ವೈ ಸ್ನುಷಾಂ ಚೈವಾಥ ಕರ್ಶಿತಾಂ ॥೧೦॥

ಆಶ್ವಾಸ್ಯಮಾನಸ್ತು ತಥಾ ಸ ತು ರಾಜಾ ತಪೋಧನೈಃ ।
ದದರ್ಶ ಪುತ್ರಮಾಯಾಂತಂ ಸ್ನುಷಯಾ ಸಹ ಕಾನನೇ ॥೧೧॥

ಸಾವಿತ್ರೀ ತು ವರಾರೋಹಾ ಸಹ ಸತ್ಯವತಾ ತದಾ ।
ವವಂದೇ ತತ್ರ ರಾಜಾನಂ ಸಭಾರ್ಯಂ ಕ್ಷತ್ರಪುಂಗವಂ ॥೧೨॥

ಪರಿಷ್ವಕ್ತಸ್ತಥಾ ಪಿತ್ರಾ ಸತ್ಯವಾನ್ರಾಜನಂದನಃ ।
ಅಭಿವಾದ್ಯ ತತಃ ಸರ್ವಾನ್ವನೇ ತಸ್ಮಿಂಸ್ತಪೋಧನಾನ್ ॥೧೩॥

ಉವಾಸ ತತ್ರ ತಾಂ ರಾತ್ರಿಮೃಷಿಭಿಃ ಸರ್ವಧರ್ಮವಿತ್ ।
ಸಾವಿತ್ರ್ಯಪಿ ಜಗಾದಾಥ ಯಥಾವೃತ್ತಮನಿಂದಿತಾ ॥೧೪॥

ವ್ರತಂ ಸಮಾಪಯಾಮಾಸ ತಸ್ಯಾಮೇವ ತದಾ ನಿಶಿ ।
ತತಸ್ತೂರ್ಯೈಸ್ತ್ರಿಯಾಮಾಂತೇ ಸಸೈನ್ಯಸ್ತಸ್ಯ ಭೂಪತೇಃ ॥೧೫॥

---

ಅವನ ಪತ್ನಿಯೂ ತಮ್ಮ ಪ್ರೀತಿಯ ಮಗನನ್ನೂ, ಆಯಾಸಗೊಂಡಿದ್ದ ಸೊಸೆಯನ್ನೂ ಕಾಣದೆ ಪರಿತಪಿಸಿದರು.

೧೧. ಋಷಿಗಳು ಆ ರಾಜನನ್ನು ಸಮಾಧಾನಪಡಿಸಿದರು. ಮಗನೂ ಸೊಸೆಯೂ ಕಾಡಿನಲ್ಲಿ ಬರುತ್ತಿರುವುದನ್ನು ಅವನು ಕಂಡನು.

೧೨. ನಾರೀಮಣಿಯಾದ ಸಾವಿತ್ರಿಯು ಸತ್ಯವಂತನೊಡಗೂಡಿ ಕ್ಷತ್ರಿಯೋತ್ತಮನಾದ ದ್ಯುಮತ್ಸೇನ ರಾಜನಿಗೂ ಆತನ ಪತ್ನಿಗೂ ನಮಸ್ಕರಿಸಿದಳು.

೧೩-೧೪. ತಂದೆಯು ಮಗನನ್ನು ಆಲಂಗಿಸಿಕೊಂಡನು. ಸಕಲಧರ್ಮಗಳನ್ನೂ ಬಲ್ಲ ಸತ್ಯವಂತನು ಆ ವನದಲ್ಲಿದ್ದ ತಪಸ್ವಿಗಳಿಗೆಲ್ಲ ನಮಸ್ಕರಿಸಿ ಅವರೊಡನೆ ಆ ರಾತ್ರಿ ಅಲ್ಲೇ ಇದ್ದನು. ಬಳಿಕ ಸದ್ಗುಣಶಾಲಿನಿಯಾದ ಸಾವಿತ್ರಿಯೂ ಸಹ ನಡೆದ ವೃತ್ತಾಂತವನ್ನು ಹೇಳಿದಳು.

೧೫-೧೬. ಆ ರಾತ್ರಿಯಲ್ಲೇ ಅವಳು ಸಾಂಗವಾಗಿ ತನ್ನ ವ್ರತವನ್ನು ಮುಗಿಸಿದಳು. ಬಳಿಕ ಪ್ರಾತಃಕಾಲದಲ್ಲಿ ಮಂಗಳವಾದ್ಯಗಳಾಗುತ್ತಿರಲು, ಸೈನ್ಯ

ಆಜಗಾಮ ಜನಃ ಸರ್ವೋ ರಾಜ್ಯಾರ್ಥಾಯ ನಿಮಂತ್ರಣೇ ।
ವಿಜ್ಞಾಪಯಾಮಾಸ ತದಾ ತತ್ರ ಪ್ರಕೃತಿಶಾಸನಂ ॥೧೬॥

ವಿಚಕ್ಷುಷಸ್ತೇ ನೃಪತೇ ಯೇನ ರಾಜ್ಯಂ ಪುರಾ ಹೃತಂ ।
ಅಮಾತ್ಯೈಃ ಸ ಹತೋ ರಾಜಾ ಭವಾಂಸ್ತಸ್ಮಿನ್ ಪುರೇ ನೃಪಃ ॥೧೭॥

ಏತಚ್ಛ್ರುತ್ವಾ ಯಯೌ ರಾಜಾ ಬಲೇನ ಚತುರಂಗಿಣಾ ।
ಲೇಭೇ ಚ ಸಕಲಂ ರಾಜ್ಯಂ ಧರ್ಮರಾಜಾನ್ಮಹಾತ್ಮನಃ ॥೧೮॥

ಭ್ರಾತೄಣಾಂ ತು ಶತಂ ಲೇಭೇ ಸಾವಿತ್ರ್ಯಪಿ ವರಾಂಗನಾ ।
ಏವಂ ಪತಿವ್ರತಾ ಸಾಧ್ವೀ ಪಿತೃಪಕ್ಷಂ ನೃಪಾತ್ಮಜಾ ॥೧೯॥

ಉಜ್ಜಹಾರ ವರಾರೋಹಾ ಭರ್ತೃಪಕ್ಷಂ ತಥೈವ ಚ ।
ಮೋಕ್ಷಯಾಮಾಸ ಭರ್ತಾರಂ ಮೃತ್ಯುಪಾಶಗತಂ ತದಾ ॥೨೦॥

---

ಸಮೇತರಾಗಿ ಆ ರಾಜನ ಪ್ರಜೆಗಳೆಲ್ಲರೂ ಬಂದು, ರಾಜ್ಯವನ್ನು ಸ್ವೀಕರಿಸುವಂತೆ ಅವನನ್ನು ಪ್ರಾರ್ಥಿಸಿ ತಮ್ಮನ್ನು ಆಳಬೇಕೆಂದು ಬೇಡಿದರು.

೧೭. "ರಾಜಾ, ನಿನ್ನ ಕಣ್ಣು ಹೋಗಲು ನಿನ್ನ ರಾಜ್ಯವನ್ನು ಶತ್ರುಗಳು ಅಪಹರಿಸಿದರಷ್ಟೆ! ಮಂತ್ರಿಗಳು ಅವರನ್ನು ಸಂಹರಿಸಿದರು. ಈಗ ನೀನು ಆ ಪಟ್ಟಣದ ರಾಜನಾಗಿರುವೆ."

೧೮. ಈ ಮಾತನ್ನು ಕೇಳಿ ದ್ಯುಮತ್ಸೇನರಾಜನು ಚತುರಂಗ ಬಲದೊಡನೆ ನಗರಿಗೆ ಹೋದನು. ಮಹಾತ್ಮನಾದ ಯಮಧರ್ಮರಾಜನ ಅನುಗ್ರಹದಿಂದ ಸಕಲ ರಾಜ್ಯವನ್ನೂ ಪಡೆದನು.

೧೯-೨೦. ನಾರೀರತ್ನವೆನಿಸಿದ ಸಾವಿತ್ರಿಗೆ ನೂರ್ವರು ಸೋದರರು ಹುಟ್ಟಿದರು. ಹೀಗೆ ಪತಿವ್ರತೆಯೂ ಸುಗುಣಶಾಲಿನಿಯೂ ಆದ ಆ ರಾಜಪುತ್ರಿಯು ತಂದೆಯ ವಂಶವನ್ನೂ ಪತಿಯ ವಂಶವನ್ನೂ ಉದ್ಧಾರಮಾಡಿದಳು. ಮೃತ್ಯುವಿನ ಪಾಶಕ್ಕೆ ಸಿಕ್ಕಿದ ಪತಿಯನ್ನು ಬಿಡಿಸಿದಳು.

ತಸ್ಮಾತ್ಸಾಧ್ವ್ಯಃ ಸ್ತ್ರಿಯಃ ಪೂಜ್ಯಾಃ ಸತತಂ ದೇವವನ್ನರೈಃ ।
ತಾಸಾಂ ರಾಜನ್ ಪ್ರಸಾದೇನ ಧಾರ್ಯತೇ ವೈ ಜಗತ್ತ್ರಯಂ ॥೨೧॥

ತಾಸಾಂ ತು ವಾಕ್ಯಂ ಭವತೀಹ ಮಿಥ್ಯಾ ।
ನ ಜಾತು ಲೋಕೇಷು ಚರಾಚರೇಷು ।
ತಸ್ಮಾತ್ಸದಾ ತಾಃ ಪರಿಪೂಜನೀಯಾಃ
ಕಾಮಾನ್ಸಮಗ್ರಾನಭಿಕಾಮಯಾನೈಃ ॥೨೨॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಸಾವಿತ್ರ್ಯುಪಾಖ್ಯಾನಸಮಾಪ್ತಿರ್ನಾಮ
ಚತುರ್ದಶಾಧಿಕಶತತಮೋಽಧ್ಯಾಯಃ

---

೨೧. ಆದುದರಿಂದ ಪತಿವ್ರತೆಯರಾದ ಸ್ತ್ರೀಯರನ್ನು ಮನುಷ್ಯರು ದೇವತೆಗಳಂತೆ ಪೂಜಿಸಬೇಕು. ಓ ರಾಜಾ, ಅವರ ಅನುಗ್ರಹದಿಂದಲೇ ಮೂರು ಲೋಕವೂ ನಿಂತಿದೆ.

೨೨. ಸ್ಥಾವರಜಂಗಮರೂಪವಾದ ಲೋಕಗಳಲ್ಲಿ ಅವರ ಮಾತು ಎಂದಿಗೂ [illegible] ಸಕಲ ಇಷ್ಟಾರ್ಥಗಳೂ ಕೈಗೂಡಬೇಕೆಂದು ಬಯಸುವವರು ಅವರನ್ನು [illegible] ಗೌರವಿಸಬೇಕು.

## ಅಧ್ಯಾಯದ ಸಾರಾಂಶ

ಸಾವಿತ್ರಿಯು ತನ್ನ ಪತಿಯೊಡನೆ ಆಶ್ರಮಕ್ಕೆ ಹಿಂದಿರುಗಿದ ವೃತ್ತಾಂತವು ಈ ಅಧ್ಯಾಯದಲ್ಲಿ ಉಕ್ತವಾಗಿದೆ.

ಯಮಧರ್ಮರಾಜನ ಪರಮಾನುಗ್ರಹವನ್ನು ಪಡೆದು ಸಾವಿತ್ರಿ ಪತಿಯ ಬಳಿಗೆ ಬಂದಳು. ಅವನು ಕಣ್ತೆರೆದು ನಿಧಾನವಾಗಿ ಚೇತರಿಸಿಕೊಂಡನು. ಇಬ್ಬರೂ ಆಶ್ರಮಾಭಿಮುಖವಾಗಿ ಬಂದು ತಮ್ಮನ್ನು ಕಾಣದೆ ಪರಿತಪಿಸಿದ್ದ ದ್ಯುಮತ್ಸೇನ

ಮಹಾರಾಜನಿಗೂ ಅವನ ಪತ್ನಿಗೂ ನಮಸ್ಕರಿಸಿದರು. ಸಾವಿತ್ರಿ ನಡೆದ ವೃತ್ತಾಂತ ವನ್ನು ವಿವರಿಸಿದಳು. ರಾಜನಿಗೆ ಹೋಗಿದ್ದ ಕಣ್ಣು ಮರಳಿ ಬಂದಿತು. ರಾತ್ರಿ ಕಳೆದು ಬೆಳಗಾದ ಕೂಡಲೆ ಪ್ರಜೆಗಳು ಬಂದು "ಮಂತ್ರಿಗಳು ನಿಮ್ಮ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಮತ್ತೆ ಸಂಪಾದಿಸಿದರು. ಎಂದಿನಂತೆ ರಾಜ್ಯಭಾರವನ್ನು ಕೈಗೊಂಡು ನಮ್ಮನ್ನು ರಕ್ಷಿಸಬೇಕು" ಎಂದು ದ್ಯುಮತ್ಸೇನ ರಾಜನನ್ನು ಬೇಡಿದರು. ಅವನು ಒಪ್ಪಿ ಸಕಲ ಪರಿವಾರದೊಡನೆ ಪಟ್ಟಣಕ್ಕೆ ತೆರಳಿ ರಾಜ್ಯಾಭಿ ಷೇಕಮಾಡಿಸಿಕೊಂಡನು. ಸಾವಿತ್ರಿ ಹೀಗೆ ತನ್ನ ಪಾತಿವ್ರತ್ಯದ ಬಲದಿಂದ ಹುಟ್ಟಿದ ಮತ್ತು ಹೊಕ್ಕ ಕುಲಗಳೆರಡನ್ನೂ ಬೆಳಸಿ ಮೃತ್ಯುಪಾಶಕ್ಕೆ ಸಿಕ್ಕಿ ಬಿದ್ದಿದ್ದ ಪತಿಯನ್ನು ಬಿಡಿಸಿದಳು. ಆದುದರಿಂದ ಸಾಧ್ವಿಯರು ದೇವತೆಗಳಂತೆ ಪೂಜಾರ್ಹರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಸಾವಿತ್ರ್ಯುಪಾಖ್ಯಾನ ಪರಿಸಮಾಪ್ತಿಯೆಂಬ
ಇನ್ನೂರ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

---

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.